ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ

ಸಂಖ್ಯಾ—೨೯

# ಶ್ರೀ ಹಾಲಾಸ್ಯಮಾಹಾತ್ಮ್ಯಂ

(ಸಂಸ್ಕೃತ ಮೂಲ, ಕನ್ನಡ ಅರ್ಥಾನುವಾದ ಸಹಿತ)

ಸಂಪುಟ ೩

ಅಧ್ಯಾಯಗಳು ೫೫—೭೮

ಅನುವಾದಕ

ಎಸ್. ಸೀತಾರಾಮಶಾಸ್ತ್ರೀ

[illegible] ಪ್ರಾಕ್ತನ [illegible] ಮೈಸೂರು



ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು

೧೯೬೩

ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ

ಸಂಖ್ಯಾ—೨೯

# ಶ್ರೀ ಹಾಲಾಸ್ಯ ಮಾಹಾತ್ಮ್ಯಂ

(ಸಂಸ್ಕೃತ ಮೂಲ, ಕನ್ನಡ ಅರ್ಥಾನುವಾದ ಸಹಿತ)

## ಸಂಪುಟ ೩

ಅಧ್ಯಾಯಗಳು ೫೫—೭೧



ಅನುವಾದಕ

ಎಸ್. ಸೀತಾರಾಮಶಾಸ್ತ್ರೀ

ಸಾಹಿತ್ಯವಿದ್ವಾನ್ ಮತ್ತು ಪ್ರಾಕ್ತನ ಪುಸ್ತಕಶಾಲಾ ಪಂಡಿತ, ಮೈಸೂರು.



ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೬

# ಮುನ್ನುಡಿ.

ಅನಾದಿಯಿಂದಲೂ ಪ್ರಬಲವಾಗಿರುವ ಆಸ್ತಿಕಮತಗಳಲ್ಲಿ ಶೈವಮತವೂ ಒಂದಾಗಿರುವುದು. ಈ ಮತವು ಶಿವ ಮತ್ತು ಶಕ್ತಿ ಇವರುಗಳ, ನಿರತಿಶಯವಾದ ಮಹಿಮೆ ಮತ್ತು ಕರುಣೆಗಳಿಂದ ಉತ್ತೇಜಿತವಾಗಿರುವುದು. ಶಿವಶಕ್ತಿಗಳಿಗೆ ಇರುವ ಸಂಬಂಧವು ತಾದಾತ್ಮ್ಯರೂಪವೆಂದು ತಿಳಿಯತಕ್ಕದ್ದಾಗಿರುವುದು.

ಕೆಲವೆಡೆಗಳಲ್ಲಿ ಇವರಿಬ್ಬರಿಗೂ ಸಮಭಾವವನ್ನೂ, ಇನ್ನೂ ಕೆಲವೆಡೆಗಳಲ್ಲಿ ನ್ಯೂನಾಧಿಕಭಾವವನ್ನೂ ಹೇಳುವ ಪ್ರಾಚೀನರು ನ್ಯೂನಾಧಿಕ ಭಾವವನ್ನು ಎರಡು ವಿಧವೆಂದು ಹೇಳುತ್ತಾರೆ. ನ್ಯೂನಾಧಿಕ ಭಾವದಲ್ಲಿ ಶಿವಾಧಿಕ್ಯವಾಗಲಿ, ಇಲ್ಲವೇ ಶಿವನ ಸಂಕಲ್ಪಾನುಸಾರವಾದ ಶಕ್ತಿಯ ಆಧಿಕ್ಯವಾಗಲಿ ಕಂಡುಬರುವುದು. ಆದರೆ ಪ್ರಾಪಂಚಿಕ ಕಾರ್ಯ ನಿರ್ವಾಹದ ವಿಷಯದಲ್ಲಿ ಸೃಷ್ಟಿ, ಸ್ಥಿತಿ, ಸಂಹಾರ, ಅನುಗ್ರಹ ತಿರೋಧಾನಗಳೆಂಬ ಪಂಚಕೃತ್ಯಗಳು ಇಬ್ಬರಿಗೂ ಸಮನಾಗಿರುವುವು ಎಂದು ತಿಳಿದು ಬರುವುದು.

ಹೀಗಿದ್ದರೂ ಶಿವನ ಸ್ವರೂಪವು ಎಲ್ಲರಿಗೂ ಒಂದೆ ಪ್ರಕಾರದಿಂದ ಗೋಚರ ವಾಗುವುದಿಲ್ಲ. ಉಪಾಸಕರು ತಮ್ಮ ಉಪಾಸನಾಬಲದಿಂದ ಪ್ರೇರಿತವಾದ ಬುದ್ಧಿಗೆ ಅನುಸಾರವಾಗಿ ವ್ಯವಹಾರಮಾಡುತ್ತಾ ಇರುವರು. ಆದರೆ ಎಲ್ಲಾ ಉಪಾಸಕರಿಗೂ, ಒಂದೇವಿಧವಾದ ಬುದ್ಧಿಯ ಸಮಭಾವವು ಹುಟ್ಟುವುದಿಲ್ಲ. ಇದರಿಂದಲೇ ಅವರ ಉಪಾಸ್ಯದೇವತಾ ವಿಷಯವಾದ ಅನುಭವವು ಬೇರೆ ಬೇರೆಯಾಗಿ ಒಂದೇ ದೇವತೆಯ ವಿಷಯವಾದ ಮತಭೇದವು ಉಂಟಾಗಲು ಅವಕಾಶವು ಉಂಟಾಗಿರುವುದು.

ಇದರಿಂದಲೇ ಈ ಶೈವಮತದಲ್ಲಿಯೂ, ಆದಿಶೈವ, ವೀರಶೈವ ಮಿಶ್ರಶೈವ ಇತ್ಯಾದಿ ಮತಭೇದಗಳು ಉಂಟಾದವು. ಆದರೂ ಈ ಮತಗಳೆಲ್ಲಕ್ಕೂ ಶಿವನು ಒಬ್ಬನೇ ಉಪಾಸ್ಯ ದೇವತೆಯಾಗಿರುವನು. ಈ ಗ್ರಂಥದ ಮೂರು ಸಂಪುಟ ಗಳಲ್ಲಿಯೂ, ಈ ಶೈವಮತಗಳೆಲ್ಲಕ್ಕೂ ಉಪಾಸ್ಯದೇವನಾದ ಶಿವನ ಲೀಲೆಗಳೂ, ಶಿವನ ಮಹಿಮೆಯೂ ತಿಳಿಸಲ್ಪಟ್ಟಿರುತ್ತವೆ. ಈ ಮೂರನೆಯ ಸಂಪುಟದಲ್ಲಿ ಶಿವನ ೪೯ ನೇ ಲೀಲೆಯಿಂದ ಪ್ರಾರಂಭವಾಗಿರುವ ೫೫ ನೇ ಅಧ್ಯಾಯದಿಂದ, ಮೊದಲುಗೊಂಡು ೭೦ ನೇ ಅಧ್ಯಾಯ ಪೂರ್ತಿಯಾಗಿರುವ ಅಧ್ಯಾಯಗಳಲ್ಲಿ ಉಳಿದಿರುವ ಶಿವನ ಲೀಲೆಗಳೆಲ್ಲವನ್ನೂ ಚೆನ್ನಾಗಿ ತಿಳಿಯಬಹುದು.

ಈ ಸಂಪುಟದಲ್ಲಿ ಶಿವಮಂತ್ರೋಪಾಸನೆ, ಶಿವಧರ್ಮಗಳ ಆಚರಣೆ, ಮತ್ತು ಶಿವಭಕ್ತರಮಹಿಮೆ ಇವುಗಳು ಹಿಂದಿನ ಸಂಪುಟಗಳಂತೆ ಹೇಳಿರುವುದಾದರೂ, ಭಸ್ಮಮಹಿಮೆಯು ಕೆಲವು ಅಧ್ಯಾಯಗಳಲ್ಲಿ ಬಹಳಮಟ್ಟಿಗೆ ಹೇಳಿರುವುದು.

ವೈದಿಕಮತದ ನಿರೂಪಣೆಯು ಒಂದೇ ಈ ಗ್ರಂಥದ ಮುಖ್ಯ ಉದ್ದೇಶವಾಗಿರುವುದಿಲ್ಲ. ವೈದಿಕಮತಕ್ಕೂ, ವೇದಬಾಹ್ಯಮತಕ್ಕೂ, ಇರುವ ವ್ಯತ್ಯಾಸವನ್ನು ಚೆನ್ನಾಗಿ ತಿಳಿಯಪಡಿಸಿ ಹೇಳುವ ವಿಷಯಗಳು ಅಲ್ಲಲ್ಲಿ ಕಂಡು ಬರುವುವು. ಆಸ್ತಿಕ ಮತದ ಕರ್ಮಾಚರಣೆಯೂ ಮತ್ತು ಅವುಗಳ ಫಲವೂ ಇವುಗಳನ್ನು ಹೇಳಿರುವಂತೆ ನಾಸ್ತಿಕಮತದ, ಕರ್ಮಾಚರಣೆಯೂ ಅದರ ಫಲವೂ ಹೇಳಿರುವುದು. ಆಸ್ತಿಕರೂ ಮತ್ತು ನಾಸ್ತಿಕರೂ, ತಮ್ಮ ತಮ್ಮ ಮತಾಚಾರಣೆಗಳನ್ನು ಬಹಳಮಟ್ಟಿಗೆ ಪ್ರಚಾರಕ್ಕೆ ತಂದಿರುವ ಕ್ರಮವೂ ಸೂಚಿತವಾಗಿರುವುದು. ಅಲ್ಲದೆ, ಇವೆರಡು ಮತಗಳೂ, ಜನಸಾಮಾನ್ಯದ ಮೇಲೆ ಬೀರಿದ ಪ್ರಭಾವದ ಕ್ರಮವೂ ವಿವರವಾಗಿ ತಿಳಿದು ಬರುವುದು.

ನಾಸ್ತಿಕಮತವು ಜನಸಾಮಾನ್ಯದ ಹಿತವನ್ನು ದುರ್ಲಕ್ಷಿಸಿರುವ ಕ್ರಮವು ವಿಶದವಾಗಿ ಈ ಗ್ರಂಥದಲ್ಲಿ ಕಂಡುಬರುವುದು. ವ್ಯವಹಾರಗತವಾದ ಪೂಜ್ಯ ಪೂಜಕಭಾವ, "ನಾಸ್ತಿ, ಶೂನ್ಯ" ಎಂಬ ಪದವೇದ್ಯವಾದ ದೇವತಾ ಸ್ವರೂಪವೇ ಆದಿಯಾಗಿ ಜನಸಾಮಾನ್ಯಕ್ಕೆ ವೇದ್ಯವಾಗದಿರುವ, ನಂಬಿಕೆ ಹುಟ್ಟಲಶಕ್ಯವಾದ ಅನೇಕ ಭಾವನೆಗಳೂ, ಅವುಗಳ ಪರಿಣಾಮಗಳೂ, ಬೌದ್ಧಮತದ ಮೂಲ ತತ್ತ್ವಗಳಾಗಿರುವುವು.

ಈ ಕಾರಣದಿಂದಲೇ ಆಸ್ತಿಕ, ನಾಸ್ತಿಕ ಮತಗಳೆರಡಕ್ಕೂ ಆಗಾಗ್ಗೆ ಘರ್ಷಣೆಗಳು ಉಂಟಾಗುವುದು ಸಹಜವಾಗಿರುತ್ತದೆ. ಈ ಪ್ರಕಾರವಾದ ಸನ್ನಿವೇಶಗಳಲ್ಲಿ ನಡೆದುದನ್ನು ಮಂದಾಧಿಕಾರಿಗಳಿಗೂ, ಚನ್ನಾಗಿ ತಿಳಿಯುವಹಾಗೆ ವಿವರಿಸಿ, ಆಸ್ತಿಕ ಮತದ ಜಯಕ್ಕೆ ಕಾರಣವಾದ ಸೂಕ್ಷ್ಮವಿಷಯಗಳನ್ನು ಪ್ರತಿಪಾದನೆಮಾಡುವುದು ಈ ಗ್ರಂಥದ ತತ್ತ್ವಾಂಶವಾಗಿರುವುದು. ಜನಸಾಮಾನ್ಯಕ್ಕೆ ಹಿಂಸಾಕರವಾದ ಮತ ನೀತಿಗಳ ವಿಷಯದಲ್ಲಿ ಶಿವನ ಉದಾಸೀನತೆಯನ್ನೂ ಸನ್ಮಾರ್ಗದರ್ಶಕರಾದ ತನ್ನ ಭಕ್ತರ ಆಚಾರವ್ಯವಹಾರಗಳಲ್ಲಿ ಶಿವನು ತೋರಿಸಿದ ಅಪಾರವಾದ ಕರುಣೆಯನ್ನೂ, ಈ ಗ್ರಂಥದಲ್ಲಿ ಚೆನ್ನಾಗಿ ಹೇಳಿರುವುದು.

ಶ್ರೀಮನ್ಮಹೀಶೂರಪುರವರಾಧೀಶ್ವರರಾದ, ಕರ್ಣಾಟಕ ಸಿಂಹಾಸನಾಧೀಶ್ವರರಾದ **ಶ್ರೀ ಜಯಚಾಮರಾಜೇಂದ್ರ ವಡೆಯರ್, ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಯವರು, ಬಹಳ ಗಹನವಾದ, ಮತ್ತು ಸೂಕ್ಷ್ಮವಾದ

ತಿಳಿಯಲಶಕ್ಯವಾದ, ಶಿವಲೀಲಾರಹಸ್ಯ ತತ್ತ್ವಗಳನ್ನು ಸರ್ವರೂ ತಿಳಿಯಲನುಕೂಲ ವಾಗುವಂತೆ, ಕನ್ನಡಭಾಷೆಯಲ್ಲಿ ಪರಿವರ್ತನೆಮಾಡಲು ಅವಕಾಶವನ್ನು ಕಲ್ಪಿಸಿ ಕೊಟ್ಟು ಬಹಳ ಮಟ್ಟಿನ ಜ್ಞಾನಾಭಿವೃದ್ಧಿಗೆ ಮಾರ್ಗದರ್ಶಕರಾಗಿರುವರು. ಮೀನಾಕ್ಷೀ ದೇವಿಯೊಡನೆ ವಿಹರಿಸುತ್ತಿರುವ ಹಾಲಾಸ್ಯಪ್ರಭುವಾದ ಸುಂದರೇಶ್ವರನು ನಿರಪೇಕ್ಷರಾಗಿ ಜ್ಞಾನಾಭಿವೃದ್ಧಿಗೆ ಅವಕಾಶವನ್ನು ಕಲ್ಪಸಿರುವ ಇವರಿಗೆ ಅನೇಕ ವಿಧವಾದ ಶ್ರೇಯಸ್ಸು ಗಳನ್ನೂ, ಆಯುರಾರೋಗ್ಯೈಶ್ವರ್ಯಾಭಿವೃದ್ಧಿಯನ್ನೂ ನಿರಂತರವಾಗಿ ಉಂಟು ಮಾಡುತ್ತಿರಲೆಂಬುದಾಗಿ ನಾನು ಪ್ರಾರ್ಥಿಸುತ್ತೇನೆ.

ಈ ಗ್ರಂಥವನ್ನು ಭಾಷಾಂತರಮಾಡುವಾಗ ಮದರಾಸಿನಲ್ಲಿ ಮುದ್ರಿತವಾಗಿರುವ ಒಂದು ಪ್ರತಿಯು ಮಾತ್ರ ದೊರೆತಕಾರಣ ಅಲ್ಲಲ್ಲಿರುವ ಗ್ರಂಥಗತವಾದ ಅಶುದ್ಧಗಳೂ, ಪಾಠಭೇದಗಳೂ, ಇವುಗಳನ್ನು ತಕ್ಕಮಟ್ಟಿಗೆ, ಸರಿಪಡಿಸಲು ಅವಕಾಶವು ದೊರೆಯ ಲಿಲ್ಲ. ಆದರೂ ಮುದ್ರಣಕಾಲದಲ್ಲಿ ಪ್ರಮಾದದಿಂದ ಸಂಭವಿಸಿರುವ ಗ್ರಂಥಗತವಾದ ಪರಿವರ್ತನೆಯ ನ್ಯೂನಾತಿರೇಕಗಳನ್ನು ಮಹನೀಯರಾದ ವಾಚಕರ ಸಹನೆಯು ರಕ್ಷಿಸುವುದೆಂದು ನಂಬಿರುತ್ತೇನೆ.

ಮೈಸೂರು,<br>
ತಾ॥ 8-6-1946.

ತಮ್ಮ ವಿಧೇಯ,<br>
**ಎಸ್. ಸೀತಾರಾಮಶಾಸ್ತ್ರೀ.**



# ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಗಳು

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಪಂಚಪಂಚಾಶೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

ಭೂಷಾ ಭುಜಂಗಭೋಗೇನ ಪುರಸೀಮಾವಸಾನಕಂ ।
ಯಯಾ ವ್ಯಕ್ತೀಕರೋತೀಶ ಸ್ಸಾಲೀಲಾಥ ಮಯೋಚ್ಯತೇ ॥ ೧ ॥

ರಾಜರಾಜಾಖ್ಯಪಾಂಡ್ಯಸ್ಯ ತನಯೋ ವಿನಯಾನ್ವಿತಃ ।
ಸುಗುಣಾಖ್ಯಶ್ಚಿರಂ ಪೃಥ್ವೀಂ ಪರಿಪಾಲ್ಯ ದಿವಂ ಯಯೌ ॥ ೨ ॥

ತದಾತ್ಮಜ ಶ್ಚಿತ್ರರಥ ಸ್ತತ್ಪುತ್ರ ಶ್ಚಿತ್ರಭೂಷಣಃ ।
ಚಿತ್ರಧ್ವಜ ಸ್ತಸ್ಯ ಸುತ ಶ್ಚಿತ್ರವರ್ಮಾ ತದಾತ್ಮಜಃ ॥ ೩ ॥

---

### ಐವತ್ತೈದನೆಯ ಅಧ್ಯಾಯವು

೧-೪. ಅಗಸ್ತ್ಯಋಷಿಯು ಹೇಳಿದನು :—ಸುಂದರೇಶ್ವರನಾದ ಶಿವನು ತನಗೆ ಆಭರಣವಾಗಿರುವ ಸರ್ಪದ ಶರೀರದಿಂದ ಮಧುರಾನಗರದ ಎಲ್ಲೆಯನ್ನು ತೋರಿಸಿದ ಲೀಲೆಯನ್ನು ನಾನು ವರ್ಣಿಸಿ ಹೇಳುವೆನು. ರಾಜರಾಜಪಾಂಡ್ಯನ ಮಗನಾದ ಸುಗುಣಪಾಂಡ್ಯನು ಬಹಳಕಾಲ ರಾಜ್ಯವನ್ನು ಆಳಿ, ಸ್ವರ್ಗಕ್ಕೆಹೋದನು. ಅವನ ಮಗನು ಚಿತ್ರರಥನು, ಅವನ ಮಗನು ಚಿತ್ರಭೂಷಣನು, ಚಿತ್ರಭೂಷಣನ ಮಗನು ಚಿತ್ರಧ್ವಜನು, ಚಿತ್ರಧ್ವಜನ ಮಗನು ಚಿತ್ರವರ್ಮನು, ಚಿತ್ರವರ್ಮನ

ತಸ್ಮಾಜ್ಜಾತ ಶ್ಚಿತ್ರಸೇನ ಸ್ತತ್ಸೂನು ಶ್ಚಿತ್ರವಿಕ್ರಮಃ ।
ತತ್ಸುತೋ ರಾಜಮಾರ್ತಂಡೋ ಮಾರ್ತಂಡ ಇವ ಭಾಸತೇ ॥ ೪ ॥

ತತಸ್ತು ತಸ್ಮಾತ್ಸಂಜಾತೋ ರಾಜಚೂಡಾಮಣಿ ರ್ನೃಪಃ ।
ತತಸ್ತು ತನಯೋ ಜಾತೋ ರಾಜಶಾರ್ದೂಲ ಇತ್ಯಥ ॥ ೫ ॥

ರಾಜಶಾರ್ದೂಲತನಯೋ ದ್ವಿಜರಾಜಕುಲೋತ್ತಮಃ ।
ಅಯೋಧನಪ್ರವೀಣೋಽಭೂದ್ದ್ವಿಜರಾಜಕುಲೋತ್ತಮಾತ್ ॥ ೬ ॥

ಅಯೋಧನಪ್ರವೀಣಾಚ್ಚ ಸಂಜಾತೋ ರಾಜಕುಂಜರಃ ।
ರಾಜಕುಂಜರಸೂನುಶ್ಚ ಪರರಾಜಭಯಂಕರಃ ॥ ೭ ॥

ಉಗ್ರಸೇನಸ್ತು ತತ್ಪುತ್ರೋ ಮಹಾಸೇನ ಸ್ತದಾತ್ಮಜಃ ।
ಶತ್ರುಂಜಯಸ್ತು ಸಂಜಾತೋ ಮಹಾಸೇನಮಹೀಪತೇಃ ॥ ೮ ॥

ಶತ್ರುಂಜಯಾ ದ್ಭೀಮರಥ ಸ್ತಸ್ಮಾ ದ್ಭೀಮಪರಾಕ್ರಮಃ ।
ತಸ್ಮಾತ್ಪ್ರತಾಪಮಾರ್ತಂಡ ಸ್ತತೋ ವಿಕ್ರಮಕಂಚುಕಃ ॥ ೯ ॥

---

ಮಗನು ಚಿತ್ರಸೇನನು, ಚಿತ್ರಸೇನನ ಮಗನು ಚಿತ್ರವಿಕ್ರಮನೆಂಬುವನು, ಚಿತ್ರ ವಿಕ್ರಮನ ಮಗನಾದ ರಾಜಮಾರ್ತಂಡನೆಂಬುವನು ಸೂರ್ಯನಂತೆ ಪ್ರಕಾಶಿಸುತ್ತಿದ್ದನು.

೫-೧೦. ರಾಜಚೂಡಾಮಣಿಯೆಂದು ಹೆಸರುಳ್ಳ ಅವನ ಮಗನು ರಾಜನಾಗಿದ್ದನು. ಅವನಿಗೆ ರಾಜಶಾರ್ದೂಲನೆಂಬ ಮಗನು ಇದ್ದನು. ಅವನಿಗೆ ದ್ವಿಜರಾಜಕುಲೋತ್ತಮನೆಂಬ ಮಗನು ಇದ್ದನು. ಅವನಿಗೆ ಪರರಾಜ ಭಯಂಕರನೆಂಬ ಮಗನು ಹುಟ್ಟಿದನು. ಅವನಿಗೆ ಉಗ್ರಸೇನನೆಂಬ ಮಗನೂ, ಉಗ್ರಸೇನನಿಗೆ ಮಹಾಸೇನನೆಂಬ ಮಗನೂ, ಮಹಾಸೇನನಿಗೆ ಶತ್ರುಂಜಯನೆಂಬ ಮಗನೂ

**ಯುದ್ಧಕೋಲಾಹಲ ಸ್ತಸ್ಮಾ ಜ್ಜಾತೋ ವಿಕ್ರಮಕಂಚುಕಾತ್ ।**
**ಯುದ್ಧಕೋಲಾಹಲಾತ್ಪಾಂಡ್ಯಾ ಜ್ಜಾತ ಶ್ಚಾತುಲವಿಕ್ರಮಃ ॥ ೧೦ ॥**

**ತಸ್ಮಾದತುಲಕೀರ್ತಿಶ್ಚ ತತಃ ಕೀರ್ತಿವಿಭೂಷಣಃ ।**
**ಏವಂ ಪರಂಪರಾ ಪಾಂಡ್ಯಭೂಪಾಲಾನಾ ಮನುಕ್ರಮಾತ್ ॥ ೧೧ ॥**

**ಸುಂದರೇಶಾಂಶಭೂತಾನಾಂ ಕಥಿತಾ ಕಲ್ಮಷಾಪಹಾ ।**
**ಏತೇ ಪಾಂಡ್ಯಮಹೀಪಾಲಾ ಮಧುರಾನಗರೇಶ್ವರಾಃ ॥ ೧೨ ॥**

**ಕ್ರಮಾದ್ವಿಶ್ವಂಭರಾಂ ಸರ್ವಾಂ ಪರಿಪಾಲ್ಯ ದಿವಂ ಯಯುಃ ।**
**ತತೋ ಮನ್ವಂತರೇ ಪ್ರಾಪ್ತೇ ಕಲ್ಲೋಲಾವಿದ್ಧಮೂರ್ತಿಕಃ ॥ ೧೩ ॥**

**ಪೃಥ್ವೀ ಮೇಕೋದಕಾಂ ಚಕ್ರೇ ಸ್ಥಲಶೇಷಾಂ ಪಯೋನಿಧಿಃ ।**
**ಮಹಾಪ್ರಲಯಕಾಲೇಽಪಿ ನ ನಷ್ಟಾ ಮಧುರಾಪುರೀ ॥ ೧೪ ॥**

---

ಹುಟ್ಟಿದನು. ಶತ್ರುಂಜಯರಾಜನಿಗೆ ಭಯಂಕರವಾದ ಪರಾಕ್ರಮವುಳ್ಳ ಭೀಮರಥನೆಂಬ ಮಗನು ಇದ್ದನು. ಅವನಿಗೆ ಪ್ರತಾಪಮಾರ್ತಂಡನೂ, ಪ್ರತಾಪಮಾರ್ತಂಡನಿಗೆ ವಿಕ್ರಮಕಂಚುಕನೆಂಬ ಮಗನೂ ಇದ್ದರು.

೧೧-೧೬. ವಿಕ್ರಮಕಂಚುಕರಾಜನಿಗೆ ಯುದ್ಧಕೋಲಾಹಲನೆಂಬ ಮಗನು ಹುಟ್ಟಿದನು. ಯುದ್ಧಕೋಲಾಹಲರಾಜನಿಗೆ ಅತುಲಕೀರ್ತಿಯೆಂಬ ಮಗನು ಹುಟ್ಟಿದನು. ಅತುಲಕೀರ್ತಿಪಾಂಡ್ಯರಾಜನಿಗೆ ಕೀರ್ತಿವಿಭೂಷಣನೆಂಬ ಮಗನು ಹುಟ್ಟಿದನು. ಪಾಂಡ್ಯವಂಶದ ರಾಜರು ಈ ಕ್ರಮದಿಂದ ಪ್ರಸಿದ್ಧರಾಗಿರುವರು. ಇವರೆಲ್ಲರೂ ಸುಂದರೇಶನ ಅಂಶದಿಂದ ಹುಟ್ಟಿದವರು. ಬಹಳ ಪವಿತ್ರರಾದವರು. ಮಧುರಾನಗರಕ್ಕೆ ರಾಜರಾಗಿರುವ ಈ ಪಾಂಡ್ಯವಂಶದ ರಾಜರ ವಂಶಪರಂಪರೆಯನ್ನು ಕ್ರಮವಾಗಿ ಹೇಳಿದೆನು. ಇವರೆಲ್ಲರೂ ನ್ಯಾಯದಿಂದ ರಾಜ್ಯವನ್ನು ಪರಿಪಾಲನೆ ಮಾಡಿ, ಸ್ವರ್ಗವನ್ನು ಹೊಂದಿದರು. ಅನಂತರದಲ್ಲಿ ಮನ್ವಂತರಕಾಲವು ಪ್ರಾಪ್ತ

ಗಮಿಷ್ಯತಿ ವಿನಾಶಂ ಸಾ ಕಥಂ ಮನ್ವಂತರಾದಿಷು ।
ಪ್ರಾಸಾದ ಸ್ಸುಂದರೇಶಸ್ಯ ಹೇಮಪದ್ಮಾಕರಃ ಪರಂ ॥ ೧೫ ॥

ನಿಲಯಶ್ಚ ಮಹಾದೇವ್ಯಾ ಹಾಲಾಸ್ಯಕ್ಷೇತ್ರ ಮದ್ಭುತಂ ।
ಪ್ರಾಪ್ತೇ ಪ್ರಲಯಕಾಲೇಽಪಿ ವಿನಾಶಂ ಪ್ರಾಪ ನಾಬ್ಧಿನಾ ॥ ೧೬ ॥

ಸುಂದರೇಶ್ವರಸಾನ್ನಿಧ್ಯಾ ತ್ಸದಾ ಲಿಂಗೇ ವಿಶೇಷತಃ ।
ತಲ್ಲಿಂಗಸ್ಯ ಲಯೋ ನಾಸ್ತಿ ಸಂವರ್ತೇಷು ಮಹತ್ಸು ಚ ॥ ೧೭ ॥

ಸುಮೀನಾಕ್ಷ್ಯಾ ಮಹಾದೇವ್ಯಾ ಹಾಲಾಸ್ಯಕ್ಷೇತ್ರ ಮದ್ಭುತಂ ।
ಈಶಾಪದಾನಸಂಭೂತಮಂತ್ರಿಣಾಮಪಿ ಬೃಂದಕಂ ॥ ೧೮ ॥

ಹೇಮಪದ್ಮಾಕರಂ ತೀರ್ಥಂ ತಥಾನ್ಯತ್ ಸಪ್ತಸಾಗರಂ ।
ಪಾಲಿತಂ ಪರಮೇಶಸ್ಯ ಪ್ರಭಾವಾನಾಂ ಪ್ರಸಿದ್ಧಯೇ ॥ ೧೯ ॥

---

ನಾಯಿತು. ಆಗ ಸಮುದ್ರವು ತೆರೆಗಳ ಮೂಲಕವಾಗಿ ಹೆಚ್ಚಾಗಿ ಬಂದು ಭೂಮಿಯೆಲ್ಲವನ್ನೂ ಆವರಿಸಿಕೊಂಡಿತು. ಮಹಾಪ್ರಳಯಕಾಲದಲ್ಲಿಯೂ ಮಧುರಾನಗರವು ನಾಶವಾಗತಕ್ಕದ್ದಲ್ಲವು. ಆದ್ದರಿಂದ ಮನ್ವಂತರದ ಕಾಲದಲ್ಲಿ ಈ ನಗರವು ನಾಶವಾಗಲಿಲ್ಲ. ಸುಂದರೇಶ್ವರನ ದೇವಾಲಯವೂ, ಹೇಮಪದ್ಮಾಕರ ತೀರ್ಥವೂ, ಮೀನಾಕ್ಷೀದೇವಿಯ ದೇವಾಲಯವೂ, ಆಶ್ಚರ್ಯಕರವಾದ ಹಾಲಾಸ್ಯಕ್ಷೇತ್ರವೂ ಪ್ರಳಯಕಾಲದಲ್ಲಿಯೂ ಸಮುದ್ರದಿಂದ ನಾಶವಾಗಲಿಲ್ಲ.

೧೭-೨೨. ಹಾಲಾಸ್ಯಕ್ಷೇತ್ರದಲ್ಲಿರುವ ಶಿವಲಿಂಗದಲ್ಲಿ ಯಾವಾಗಲೂ ಸುಂದರೇಶ್ವರನ ಸಾನ್ನಿಧ್ಯವು ಇರುವುದರಿಂದ ಮಹಾಪ್ರಳಯದಲ್ಲಿಯೂ ಆ ಲಿಂಗವು ನಾಶವಾಗುವುದಿಲ್ಲ. ಮೀನಾಕ್ಷೀದೇವಿಯ ಆಶ್ಚರ್ಯಕರವಾದ ಹಾಲಾಸ್ಯಕ್ಷೇತ್ರವೂ ಈಶ್ವರನ ಮಹಿಮೆಯಿಂದ ಪ್ರಾದುರ್ಭೂತರಾದ ಶಿವಭಕ್ತರ ಸಮೂಹವೂ, ಹೇಮಪದ್ಮಾಕರ ತೀರ್ಥವೂ, ಸಪ್ತಸಾಗರ ತೀರ್ಥವೂ, ಈಶ್ವರನ ಮಹಿಮೆಯ ಪ್ರಸಿದ್ಧಿಗಾಗಿ ರಕ್ಷಿತವಾಗಿತ್ತು. ಪ್ರಳಯಕಾಲದಲ್ಲಿ ಬಹಳ ಬಿಸಿಲು, ಮಳೆ, ಗಾಳಿ

ಮಹಾತಪೈರ್ಮಹಾವಾತೈರ್ಮಹಾವರ್ಷೈಶ್ಚರಾಚರಂ ।
ಜಗದ್ವಿನಾಶ ಮುಗಮತ್ಪ್ರವೃದ್ಧೇರಪಿ ಸಾಗರೈಃ ॥ ೨೦ ॥

ಸಂವರ್ತಾಂತೇ ತು ಸಂಭೂತೇ ಚಿರಕಾಲೇ ಗತೇ ಸತಿ ।
ವಾತವರ್ಷಾ ತಪಾ ನಷ್ಟಾಃ ಪ್ರವೃದ್ಧಾ ಅಪಿ ಸಾಗರಾಃ ॥ ೨೧ ॥

ಯಥಾ ಪೂರ್ವ ಮಭೂದ್ಭೂಮಿ ರ್ನಿಬಿಡಾ ಕಾನನೈಃ ಸತೀ ।
ದೇವತಿರ್ಯಙ್ಮನುಷ್ಯಾದ್ಯಾ ಸ್ಸ್ರಷ್ಟ್ರಾಸೃಷ್ಟಾಶ್ಚ ಜಂತವಃ ॥ ೨೨ ॥

ಸೂರ್ಯಾ ತ್ಸೋಮಾಚ್ಚ ಸಂಜಾತಾಃ ಪಾರ್ಥಿವಾ ಅಪಿ ಪೂರ್ವವತ್ ।
ಪಾಂಡ್ಯಶ್ಚೇರಶ್ಚ ಚೋಲಶ್ಚ ರಾಜಾನೋಽಪ್ಯಭವನ್ಕ್ರಮಾತ್ ॥ ೨೩ ॥

ವಂಶಶೇಖರಪಾಂಡ್ಯಶ್ಚ ರಾಜಾಭೂ ತ್ಪಾಂಡ್ಯಮಂಡಲೇ ।
ಸುಂದರೇಶ್ವರದೇವಸ್ಯ ಪರಿತಸ್ತು ವಿಮಾನಕಂ ॥ ೨೪ ॥

---

ಇವುಗಳಿಂದ ಸಮುದ್ರವು ಹೆಚ್ಚಿದ್ದಾಗಿ ಲೋಕವನ್ನು ನಾಶಗೊಳಿಸಿತು. ಪ್ರಳಯ ಕಾಲವು ಕಳದನಂತರ ಆ ಕಾಲಕ್ಕಾಗಿ ಹೆಚ್ಚದ ಗಾಳಿ, ಬಿಸಿಲು, ಮಳೆಗಳು ಕಡಿಮೆ ಯಾದ ಕಾರಣ ಸಮುದ್ರದ ನೀರು ಒಂದುಸಮನಾಗಿ ನಿಂತು, ಭೂಮಿಯು ಹಿಂದಿ ನಂತೆಯೇ ಕಾಡುಗಳಿಂದ ತುಂಬಿತ್ತು. ದೇವತೆಗಳೂ, ತಿರ್ಯಕ್‌ಪ್ರಾಣಿಗಳೂ ಮನುಷ್ಯರೂ ಇವರೇ ಮೊದಲಾದ ಪ್ರಾಣಿಗಳನ್ನು ಬ್ರಹ್ಮನು ಸೃಷ್ಟಿಮಾಡಿದನು.

೨೩–೨೮. ಸೂರ್ಯನ ಮತ್ತು ಚಂದ್ರನ ವಂಶದಲ್ಲಿ ಕ್ರಮವಾಗಿ ಹುಟ್ಟಿದ ರಾಜರುಗಳು ಹಿಂದಿನಂತೆಯೇ ರಾಜ್ಯವನ್ನು ಆಳುವುದಕ್ಕೆ ಪ್ರಾರಂಭಿಸಿದರು. ಪಾಂಡ್ಯ. ಚೇರ, ಮತ್ತು ಚೋಳರಾಜರೂ ಕ್ರಮವಾಗಿ ಆಯಾಯ ದೇಶಗಳನ್ನು ಪಾಲನೆ ಮಾಡುತ್ತಿದ್ದರು. ಪಾಂಡ್ಯದೇಶದಲ್ಲಿ ವಂಶಶೇಖರಪಾಂಡ್ಯರಾಜನು ಸುಂದರೇಶ್ವರ ದೇವಸ್ಥಾನದ ಸುತ್ತಲೂ ಸಣ್ಣದಾಗಿರುವ ನಗರವನ್ನು ಕಟ್ಟಿಕೊಂಡು ಕೆಲವು ವರ್ಷ ಗಳವರಿಗೆ ಆಳುತ್ತಿದ್ದರು. ಹೀಗೆ ಅವನು ರಾಜ್ಯವಾಳುತ್ತಿರುವಾಗ ಕೆಲವುಕಾಲವು ಕಳೆದನಂತರ ಪ್ರಜೆಗಳು ಅವನ ರಾಜ್ಯಪಾಲನೆಯ ಕ್ರಮದಿಂದ ವೃದ್ಧಿಯನ್ನು

ಪುರೀ ಮಲ್ಪೀಯಸೀಂ ಕೃತ್ವಾ ನ್ಯವಸತ್ತಾಂ ಚಿದಬ್ದಕಾನ್ ।
ಕಾಲೇನ ಕೇನಚಿತ್ತಸ್ಮಿನ್ಪುರಾ ತೇನಾ ಭಿರಕ್ಷಿತಾಃ ॥ ೨೫ ॥

ಪ್ರಜಾಃ ಸಂವರ್ಧಿತಾ ಶ್ಚಾಸನ್ನಿಬಿಡಾऽऽಸೀಚ್ಚ ಸಾ ಪುರೀ ।
ಪ್ರಜಾನಾಮಪಿ ಬಾಹುಲ್ಯಂ ಸ್ವಪುರಸ್ಯಾಲ್ಪತಾಂ ತು ಸಃ ॥ ೨೬ ॥

ದೃಷ್ಟ್ವಾ ವಿಷಣ್ಣಹೃದಯಃ ಪುನಃ ಪುನರಚಿಂತಯತ್ ।
ಪಶ್ಚಾತ್ಕದಾಚಿದ್ದೇವೇಶಂ ಕರುಣಾವರುಣಾಲಯಂ ॥ ೨೭ ॥

ಕದಂಬಕಾನನಾಧೀಶಂ ಶಂಕರಂ ಪ್ರಾಪ್ಯ ಭಕ್ತಿಮಾನ್ ।
ವಂಶ ಶೇಖರಪಾಂಡ್ಯಶ್ಚ ವಿಜ್ಞಾಪನ ಮಥಾಕರೋತ್ ॥ ೨೮ ॥

ದೇವದೇವ ಮಹಾದೇವ ಮಧುರಾನಗರೀಶ್ವರ ।
ಚತುರಾನನ ಶಾಙ್ರ್ಗಿಭ್ಯಾ ಮಾರಾಧಿತಪದದ್ವಯ ॥ ೨೯ ॥

ದೇವತಾ ಸಾರ್ವಭೌಮಸ್ಯ ಪುರೀ ತವ ಗರೀಯಸೀ ।
ತತ್ಪ್ರಮಾಣಂ ನ ಜಾನಂತಿ ಮಾದೃಶಾಃ ಪಾಮರಾ ಜನಾಃ ॥ ೩೦ ॥

---

ಹೊಂದಿದರು. ನಗರದಲ್ಲಿ ವಾಸಮಾಡಲು ಪ್ರಜೆಗಳಿಗೆ ಸ್ಥಳವು ಸಾಲದೆ ಇತ್ತು. ತನ್ನ ನಗರವು ಸಣ್ಣದಾಗಿ ಪ್ರಜೆಗಳಿಗೆ ವಾಸಸ್ಥಳವು ಸಾಲದೆ ಇರುವುದನ್ನು ರಾಜನು ನೋಡಿ, ಖಿನ್ನನಾಗಿ ಬಹಳ ಯೋಚನೆಮಾಡಿ, ಕರುಣಾಶಾಲಿಯಾದ, ದೇವದೇವನಾದ, ಕದಂಬವನಾಧಿಪನಾದ ಹಾಲಾಸ್ಯೇಶ್ವರನ ಹತ್ತಿರಕ್ಕೆ ಬಂದು ವಿಜ್ಞಾಪನೆ ಮಾಡಿದನು.

೨೯-೩೨. ಎಲೈ ದೇವದೇವನಾದ ಮಹಾದೇವನೆ ಮಧುರಾನಗರಾಧೀಶ್ವರನೆ, ಬ್ರಹ್ಮ, ವಿಷ್ಣುಗಳಿಂದ ಸೇವಿತವಾದ ಪಾದಗಳುಳ್ಳ ದೇವನೆ, ದೇವಶ್ರೇಷ್ಠನಾದ ನಿನ್ನ ಈ ನಗರವು ದೊಡ್ಡದಾಗಿತ್ತು. ದಡ್ಡರಾದ ನನ್ನಂತೆ ಇರುವ ಜನರು ಈ ನಗರದ ಪ್ರಮಾಣವನ್ನು ತಿಳಿಯಲು ಸಾಧ್ಯವಿಲ್ಲ. ಎಲೈ ದಯಾನಿಧಿಯೆ, ಈ ನಗರದ

**ಯಥಾ ತದ್ವ್ಯಕ್ತ ಮುಭವತ್ತಥಾ ಕುರು ಕೃಪಾನಿಧೇ ।**
**ಇತಿ ರಾಜ್ಞಾ ಪ್ರಾರ್ಥಿತಃ ಸನ್ಸುಂದರೇಶಃ ಸದಾಶಿವಃ　　॥ ೩೧ ॥**

**ಸರ್ವಜ್ಞಶ್ಚಂದ್ರಮೌಳೀ ಚ ಶರಣಾಗತವತ್ಸಲಃ ।**
**ಆತ್ಮಲಿಂಗಾದಾ ವಿರಾಸೀದ್ರಮ್ಯಾಂ ಸಿದ್ಧಾಕೃತಿಂ ದಧನ್　　॥ ೩೨ ॥**

**ಗರ್ಭಧಾಮ್ನೋ ವಿನಿರ್ಗತ್ಯ ಭರ್ಗಃ ಪನ್ನಗಭೂಷಣಃ ।**
**ಮಹಾಮಂಟಪಮಧ್ಯಸ್ಥ ವಂಶಶೇಖರಭೂಪತೇಃ　　॥ ೩೩ ॥**

**ಸಮೀಪಂ ಪ್ರಾಪ ತಂ ವೀಕ್ಷ್ಯ ಕಟಾಕ್ಷೇಣ ಕೃಪಾವತಾ ।**
**ಭುಜಂಗಭೂಷಣ ಸ್ತಸ್ಯ ಭುಜಂಗಂ ಭೋಗಿನಾಂ ಪ್ರಭುಂ　　॥ ೩೪ ॥**

**ವಾಸುಕಿಂ ಪ್ರೇಷಯಾಮಾಸ ಪುರಸೀಮಾಂತದರ್ಶನೇ ।**
**ಶಂಕರಸ್ಯಾಜ್ಞಯಾ ಸೋಽಪಿ ತದ್ಭುಜಾದವರುಹ್ಯ ಚ　　॥ ೩೫ ॥**

**ಶಂಭೋಸ್ತು ಪುರತಃ ಸ್ಥಿತ್ವಾ ವಿಜ್ಞಪ್ತಿಮಿತಿ ಚಾಕರೋತ್ ।**
**ಜಿಂಹ್ಮಗಃ ಖಲ್ವಹಂ ದೇವ ಸಾಲೋ ಜಿಹ್ಮೋ ಭವೇತ್ಧ್ರುವಂ　　॥ ೩೬ ॥**

---

ಪ್ರಮಾಣವು ನಮಗೆ ತಿಳಿಯುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸಿದ ರಾಜನ ಅಭಿಲಾಷೆಯಂತೆ ಭಕ್ತವತ್ಸಲನಾದ, ಸರ್ವಜ್ಞನಾದ ಸುಂದರೇಶ್ವರನು ಸುಂದರನಾದ ಸಿದ್ಧಪುರುಷನ ಆಕೃತಿಯನ್ನು ಧರಿಸಿ, ಆತ್ಮಲಿಂಗದಿಂದ ಆವಿರ್ಭವಿಸಿದನು.

೩೩–೩೬. ಸಿದ್ಧಪುರುಷನ ಆಕಾರದಲ್ಲಿರುವ ಸುಂದರೇಶ್ವರನು ಗರ್ಭಗೃಹದಿಂದ ಹೊರಗಡೆಯ ಮಹಾಮಂಟಪದಲ್ಲಿರುವ ವಂಶಶೇಖರಭೂಪಾಲನ ಹತ್ತಿರಕ್ಕೆ ಬಂದು, ದಯೆಯಿಂದ ಕೂಡಿರುವ ಕಟಾಕ್ಷದಿಂದ ಅವನನ್ನು ನೋಡಿದನು ಅನಂತರದಲ್ಲಿ ತಾನು ಸರ್ಪಭೂಷಣನಾಗಿರುವ ಕಾರಣ, ತನಗೆ ಅಲಂಕಾರವಾಗಿರುವ ನಾಗರಾಜನಾದ ವಾಸುಕಿಯನ್ನು ಮಧುರಾನಗರದ ಎಲ್ಲೆಯನ್ನು ತೋರಿಸಿಕೊಡುವುದಕ್ಕಾಗಿ ಕಳುಹಿಸಿದನು. ಶಂಕರನ ಆಜ್ಞೆಯಂತೆ ವಾಸುಕಿಯು ಅವನ ಹೆಗಲಿನಿಂದ ಇಳಿದು ಶಿವನ ಎದುರಿಗೆ ನಿಂತುಕೊಂಡು " ಎಲೈ ಪ್ರಭುವೆ, ನಾನು ವಕ್ರವಾಗಿ ಸಂಚರಿಸುವವನು ಈ ಪ್ರಾಕಾರವೂ ವಕ್ರವಾಗಿ ಮೊದಲನೆಯ ಗುರುತಾಗಿರುವುದು. ಇದಕ್ಕೆ ನನ್ನ ಹೆಸರನ್ನು ಇರಿಸಬೇಕು" ಎಂದು ವಿಜ್ಞಾಪಿಸಿಕೊಂಡನು.

ತಸ್ಯ ಸಾಲಸ್ಯಾಭಿಧಾನಂ ಮನ್ನಾಮ್ನಾ ಭವತು ಪ್ರಭೋ ।
ಇತ್ಯುಕ್ತ್ವಾ ಯೋಜನಾಮಾತ್ರಂ ಪ್ರಾಚ್ಯಾಂ ಲಿಂಗವರಸ್ಯ ಚ ॥ ೩೭ ॥

ಗತ್ವಾ ಸ್ವವಾಲಂ ನಿಕ್ಷಿಪ್ಯ ಪ್ರದಕ್ಷಿಣವಶೇನ ತು ।
ಭೋಗಿಭೋಗೇನ ದೀರ್ಘೇಣ ಪರಿತೋ ಮಧುರಾಪುರೀಂ ॥ ೩೮ ॥

ಪರಿವೇಷ್ಟ್ಯಾನನಂ ಸ್ವಸ್ಯ ಸಾಲಪ್ರಾಂತೇ ಹ್ಯಯೋಜಯತ್ ।
ಪುರೀ ಪ್ರಮಾಣಂ ರಾಜ್ಞಶ್ಚ ದರ್ಶಯಿತ್ವೇತಿ ವಾಸುಕಿಃ ॥ ೩೯ ॥

ಭುಜಂಗಭೂಷಣಸ್ಯಾಥ ಭುಜಂ ಪ್ರಾಪ ಭುಜಂಗಮಃ ।
ತತಃ ಸಿದ್ಧಾಕೃತಿ ಶ್ಶಂಭು ರ್ವಂಶಶೇಖರಭೂಪತಿಂ ॥ ೪೦ ॥

ಭೋಗಿಭೋಗಪ್ರಮಾಣೇನ ಪ್ರಾಕಾರಂ ಕಾರಯಾದ್ಭುತಂ ।
ಪಾಲಿತಾಭಿಃ ಪ್ರಜಾಭಿಸ್ತ್ವಂ ಚಿರಂಜೀವೇತ್ಯುದೀರ್ಯ ಚ ॥ ೪೧ ॥

---

೩೭–೪೧. ವಾಸುಕಿಯು ಹೀಗೆ ಹೇಳಿ, ಮೂಲಲಿಂಗದ ಪೂರ್ವದಿಕ್ಕಿನಲ್ಲಿ ಒಂದು ಯೋಜನದಷ್ಟು ದೂರ ಹೋದನು. ಅಲ್ಲಿ ತನ್ನ ಬಾಲವನ್ನು ಇರಿಸಿ, ಪ್ರದಕ್ಷಿಣೆಯಾಗಿ ತನ್ನ ಉದ್ದವಾದ ಶರೀರದಿಂದ ಮಧುರಾನಗರದ ಸುತ್ತಲೂ ಸುತ್ತಿಕೊಂಡು ಮೊದಲು ತಾನು ಬಾಲವನ್ನು ಇರಿಸಿದ್ದ ಪ್ರದೇಶಕ್ಕೆ ಬಂದನು. ರಾಜನಿಗೆ ಇದರಿಂದ ನಗರದ ಪ್ರಮಾಣವನ್ನು ವಾಸುಕಿಯು ತಿಳಿಸಿದನು. ಅನಂತರ ನಾಗಭೂಷಣನಾದ ಪರಮೇಶ್ವರನ ಭುಜವನ್ನು ಅವನು ಹೊಂದಿದನು. ಅನಂತರದಲ್ಲಿ ಸಿದ್ಧನ ವೇಷದಿಂದ ಇರುವ ಸುಂದರೇಶ್ವರನು "ಈ ಸರ್ಪಶರೀರದ ಪ್ರಮಾಣದಿಂದ ಸರಿಯಾಗಿ ಅಳತೆಮಾಡಿ, ಈ ನಗರದ ಪ್ರಾಕಾರವನ್ನು ಕಟ್ಟಿಸಿ, ನೀನು ಬಹಳಕಾಲ ಸುಖವಾಗಿ ಪ್ರಜೆಗಳನ್ನು ಪಾಲನೆಮಾಡುತ್ತಾ ಇರು" ಎಂದು ವಂಶಶೇಖರರಾಜನಿಗೆ ಆಶೀರ್ವಾದವನ್ನು ಮಾಡಿ, ಸಮುದ್ರದಲ್ಲಿ ತೆರೆಯು ಅಡಗುವಂತೆ, ತನ್ನ ಮೂಲ ಲಿಂಗದಲ್ಲಿ ಅದೃಶ್ಯನಾದನು.

**ಅಂತರ್ದಧೇ ಮಹಾಲಿಂಗೇ ತರಂಗ ಇವ ವಾರಿಧೌ ।**
**ಅಥ ನತ್ವಾ ಮಹೀಪಾಲೋ ಲಿಂಗಮೂರ್ತಿಂ ಸದಾಶಿವಂ ॥ ೪೨ ॥**

**ಸಮರ್ಪ್ಯ ಗೋಲಕಾಂ ತಸ್ಮೈ ನವರತ್ನವಿಚಿತ್ರಿತಾಂ ।**
**ಗಂಗಾಚಂದ್ರಕಲಾಭ್ಯಾಂ ಚ ಕಿರೀಟಮಪಿ ಶೋಭಿತಂ ॥ ೪೩ ॥**

**ಪ್ರಭಾಸಂಕಲ್ಪವೃಕ್ಷಾಂಶ್ಚ ಸುವಸ್ತ್ರಾಭರಣಾನಿ ಚ**
**ಪ್ರಾಕಾರಂ ಕಾರಯಾಮಾಸ ಜಿಹ್ವಾಂ ಜಿಹ್ಮಗವರ್ತ್ಮನಾ ॥ ೪೪ ॥**

**ತದಾ ಪ್ರಭೃತಿ ತತ್ಕ್ಷೇತ್ರಂ ಕದಂಬವನಸಂಜ್ಞಿತಂ ।**
**ಶ್ರೀಹಾಲಾಸ್ಯಮಿತಿ ಪ್ರೋಕ್ತಂ ಬುಧೈರಾಶೀವಿಷಾಖ್ಯಯಾ ॥ ೪೫ ॥**

**ಯೋಜನದ್ವಯಮಾತ್ರೇಣ ವಿಸ್ತಾರೇಣ ಸಮನ್ವಿತಾ ।**
**ಮಧುರಾನಗರೀ ಚಾಸೀದಾಯಾಮೇನ ಚ ತಾವತಾ ॥ ೪೬ ॥**

---

೪೨–೪೫. ಅನಂತರದಲ್ಲಿ ವಂಶಶೇಖರರಾಜನು ಲಿಂಗಮೂರ್ತಿಯಾಗಿರುವ ಶಿವನಿಗೆ ನಮಸ್ಕಾರಮಾಡಿ, ನವರತ್ನಖಚಿತವಾದ ಗೋಲಕವನ್ನು ಅರ್ಪಿಸಿದನು. ಗಂಗಾ ಮತ್ತು ಚಂದ್ರಕಳಾ ಇವುಗಳಿಂದ ಪ್ರಕಾಶಿಸುತ್ತಿರುವ ಕಿರೀಟವನ್ನೂ, ಕಲ್ಪವೃಕ್ಷಗಳನ್ನೂ, ವಸ್ತ್ರ ಮತ್ತು ಬಹಳ ಕಾಂತಿಯುಳ್ಳ ಆಭರಣಗಳನ್ನೂ, ಹಾಲಾಸ್ಯಾಧಿಪತಿಗೆ ಒಪ್ಪಿಸಿದನು. ವಕ್ರವಾದ ಮಾರ್ಗದಿಂದ ನಡೆಯುತ್ತಿರುವವರ (ಪ್ರತಿಕೂಲವಾಗಿರುವಂತೆ) ನಾಲಗೆಯಂತೆ ಇರುವ ಕುಟಿಲವಾದ ಪ್ರಾಕಾರವನ್ನು ಕಟ್ಟಿಸಿದನು. ಕದಂಬವನವೆಂದು ಪ್ರಸಿದ್ಧವಾಗಿರುವ ಆ ಕ್ಷೇತ್ರವು ಆ ಕಾಲಮೊದಲುಗೊಂಡು ಸರ್ಪಗಳ ಹೆಸರಿನಿಂದ ಹಾಲಾಸ್ಯಕ್ಷೇತ್ರವೆಂದು ಪ್ರಸಿದ್ಧಿಯನ್ನು ಹೊಂದಿತು.

೪೬–೫೦. ಮಧುರಾನಗರವು ಎರಡು ಯೋಜನ ವಿಸ್ತಾರದಿಂದ ಕೂಡಿದ್ದಾಗಿ, ಅಷ್ಟೇ ಅಗಲವುಳ್ಳದ್ದಾಗಿ ಆಯಿತು. ಸುಬ್ರಹ್ಮಣ್ಯಮಹಾಪರ್ವತವು ದಕ್ಷಿಣದಿಕ್ಕಿನ ಬಾಗಿಲಿಗೆ ಸರಿಯಾಗಿ ಇತ್ತು. ಪುಷ್ಪವನಕ್ಷೇತ್ರವು ಪೂರ್ವದಿಕ್ಕಿಗೆ ಸರಿಯಾಗಿತ್ತು.

ಶ್ರೀಮತ್ಪುಷ್ಪವನಕ್ಷೇತ್ರಂ ತಸ್ಯಾಃ ಪ್ರಾಗ್ದ್ವಾರಮೀರಿತಂ ।
ದಕ್ಷಿಣದ್ವಾರ ಮಭವ ತ್ಸುಬ್ರಹ್ಮಣ್ಯ ಮಹಾಚಲಂ ॥ ೪೭ ॥

ಶ್ರೀಪತ್ರಿಕಾಪುರೀ ಪ್ರತ್ಯಗ್ದ್ವಾರಂ ಪುರ್ಯಾಃ ಪ್ರಕೀರ್ತಿತಂ ।
ಉದಗ್ದ್ವಾರಪ್ರದೇಶಸ್ತು ವಿಶ್ರುತೋ ವೃಷಭಾಚಲಃ ॥ ೪೮ ॥

ಶ್ರೀಹಾಲಾಸ್ಯಶಿವಕ್ಷೇತ್ರೇ ಪ್ರಮಾಣಮಿತಿ ಕೀರ್ತಿತಂ ।
ತದಂತರೇ ಪ್ರವಿಷ್ಟಾ ಯೇ ಜಂತವಸ್ಸಕಲಾ ಅಪಿ ॥ ೪೯ ॥

ಪಶುಪಕ್ಷಿಮೃಗಾದ್ಯಾಶ್ಚ ತತ್ರಸ್ಥಾಃ ಸ್ಥಾವರಾ ಅಪಿ ।
ಜೀವನ್ಮುಕ್ತಾ ಇತಿ ಜ್ಞೇಯಾ ನಿರಘಾಃ ಶಂಕರಾಂಶಕಾಃ ॥ ೫೦ ॥

ಕೃತ್ವಾ ಮಹಾಂತಿ ಪಾಪಾನಿ ಶ್ರೀಹಾಲಾಸ್ಯೇ ಮೃತಾಶ್ಚ ಯೇ ।
ತೇ ಸರ್ವೇ ಶಿವಸಾಯುಜ್ಯಂ ಲಭಂತೇ ಹಿ ನ ಸಂಶಯಃ ॥ ೫೧ ॥

ಹಾಲಾಸ್ಯಮಪಿ ಮಾನೇವಂ ಜ್ಞಾತ್ವಾ ಮತಿಮತಾಂ ವರಾಃ ।
ನಿವಸಂತಿ ಚ ತತ್ರೈವ ಇಹಾಮುತ್ರ ಸುಖೇಪ್ಸವಃ ॥ ೫೨ ॥

---

ಪತ್ರಿಕಾನಗರವು ಮಧುರಾನಗರದ ಪಶ್ಚಿಮದ ಬಾಗಿಲಿಗೆ ಬಂದಿತು. ಉತ್ತರದಿಕ್ಕಿನಲ್ಲಿ ಪ್ರಸಿದ್ಧವಾದ ವೃಷಭಪರ್ವತವು ಇತ್ತು. ಹಾಲಾಸ್ಯಕ್ಷೇತ್ರದ ವಿಸ್ತೀರ್ಣವನ್ನು ವಿವರಿಸಿ ಹೇಳಿರುವೆನು. ಆ ಪ್ರದೇಶದ ಮಧ್ಯದಲ್ಲಿ ಇರುವ ಪಶು, ಪಕ್ಷಿ, ಮೃಗಗಳೇ ಮೊದಲಾಗಿ ಸ್ಥಾವರ ಪ್ರಾಣಿಗಳೂ ಸಹ ಶಿವನ ಅಂಶವಾಗಿರುವ ಕಾರಣ ಎಲ್ಲರೂ ಜೀವನ್ಮುಕ್ತರೆನಿಸುವರು.

೫೧-೫೩. ಬಹಳ ಪಾಪಗಳನ್ನು ಮಾಡಿದಾಗ್ಯೂ ಹಾಲಾಸ್ಯಕ್ಷೇತ್ರದಲ್ಲಿ ಮೃತರಾದವರು ಶಿವನ ಸಾಯುಜ್ಯವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಬುದ್ಧಿವಂತರಾದವರು ಹಾಲಾಸ್ಯಕ್ಷೇತ್ರದ ಮಹಿಮೆಯನ್ನು ಚೆನ್ನಾಗಿ ತಿಳಿದು, ಇಹಪರಗಳಲ್ಲಿ

ಶ್ರೀಹಾಲಾಸ್ಯಾಖ್ಯಮತುಲಂ ವೃತ್ತಂ ಪ್ರಾಕಾರ ಮದ್ಭುತಂ ।
ನಿರ್ವರ್ತ್ಯ ಪಾಂಡ್ಯಭೂಪಸ್ತಾಂ ಪುರೀಮತ್ಯಲಕಾಂ ವ್ಯಧಾತ್ ॥ ೫೩ ॥

ಅಂಭೋದಪದಸಂರೋಧಿ ಹೈಮಪ್ರಾಸಾದಸಂಯುತಾಂ ।
ಧ್ವಜದಂಡಾಗ್ರಸಂಸ್ಪೃಷ್ಟವಿಯದ್ಗಂಗಾಜಲಾನ್ವಿತಾಂ ॥ ೫೪ ॥

ಆದಿತ್ಯರಥಸಸ್ತಾಶ್ವಚರ್ವಿತೋದ್ಯಾನಪಲ್ಲವಾಂ ।
ಹೋಮಧೂಮಪರಿಕ್ಲಿಷ್ಟಸುರಸಿಂಧುಸರೋರುಹಾಂ ॥ ೫೫ ॥

ಯಜಮಾನಧ್ವಜಾಹೂತಸರ್ವದೇವಸಮಾಕುಲಾಂ ।
ಫುಲ್ಲಕಲ್ಹಾರಕಮಲಕಾಂತಕಾಸಾರಶೋಭಿತಾಂ ॥ ೫೬ ॥

ಏವ ಮತ್ಯದ್ಭುತಾಂ ಕೃತ್ವಾ ಮಹತೀಂ ಮಧುರಾಪುರೀಂ ।
ಪ್ರಾಸಾದಂ ಸುಂದರೇಶಸ್ಯ ಪ್ರಾಕಾರಾನ್ಗೋಪುರಾಣಿ ಚ ॥ ೫೭ ॥

---

ಸುಖವನ್ನು ಹೊಂದುವ ಇಚ್ಛೆಯಿಂದ ಅಲ್ಲಿಯೇ ವಾಸಮಾಡುವರು. ವಂಶಶೇಖರ ಪಾಂಡ್ಯರಾಜನು ಬಹಳ ಉತ್ತಮವಾದ ಕೋಟೆಯನ್ನು ಮಧುರಾನಗರಕ್ಕೆ ಕಟ್ಟಿಸಿ, ಅದನ್ನು ಕುಬೇರನ ನಗರಕ್ಕಿಂತಲೂ ಅತಿಶಯವಾಗಿರುವಂತೆ ಮಾಡಿದನು.

೫೪–೫೬. ಆ ನಗರದಲ್ಲಿ ಉಪ್ಪರಿಗೆ ಮನೆಗಳು ಮೋಡಗಳನ್ನು ಮುಟ್ಟುವಷ್ಟು ಎತ್ತರವಾಗಿದ್ದವು. ಉಪ್ಪರಿಗೆ ಮನೆಗಳ ಮೇಲೆ ಹಾಕಿರುವ ಬಾವುಟಗಳು ಆಕಾಶಗಂಗೆಯನ್ನು ಮುಟ್ಟುವಂತೆ ಇದ್ದವು. ಉದ್ಯಾನವನಗಳಲ್ಲಿರುವ ಮರಗಳ ಚಿಗುರುಗಳನ್ನು ಸೂರ್ಯನ ರಥದ ಕುದುರೆಗಳು ತಿನ್ನುವಂತೆ ಇದ್ದವು. ಆ ನಗರದಲ್ಲಿರುವ ಯಜ್ಞ ಮಾಡುವವರು ಮಾಡುತ್ತಿರುವ ಯಜ್ಞಗಳ ಹೋಮಧೂಮವು ದೇವಗಂಗೆಯ ಹೂವುಗಳನ್ನು ಮುಟ್ಟುವಹಾಗೆ ಇತ್ತು. ಆ ನಗರದಲ್ಲಿ ಯಜ್ಞಮಾಡುವವರು ಆಹುತಿ ಸ್ವೀಕಾರಕ್ಕಾಗಿ ಬರುವಂತೆ ಮಾಡಿದ ದೇವತೆಗಳು ತುಂಬಿದ್ದರು ಆ ನಗರದಲ್ಲಿ ಕೊಳಗಳು ಅರಳಿರುವ ಕಮಲ, ನೈದಿಲೆ, ಕಲ್ಹಾರಪುಷ್ಪಗಳಿಂದ ತುಂಬಿದ್ದವು. ವಂಶಶೇಖರಪಾಂಡ್ಯನು ಮಧುರಾನಗರವನ್ನು ಈಪ್ರಕಾರವಾಗಿ ಹೊಸದಾಗಿ ನಿರ್ಮಿಸಿದನು.

ದೇವ್ಯಾಃ ಶಫರನೇತ್ರಾಯಾ ನಿಲಯಂ ಮಂಟಪಾನಿ ಚ ।
ಅನ್ಯತ್ಸರ್ವಂ ಜೀರ್ಣಯುಕ್ತಂ ನವೀಕೃತ್ಯ ಚ ವಸ್ತು ಚ ॥ ೫೮ ॥

ಕಾಂಚನೈರಪಿ ರತ್ನೈಶ್ಚ ವಿತಾನೈ ಶ್ಛತ್ರಚಾಮರೈಃ ।
ಅಲಂಚಕ್ರೇ ವಸ್ತುಜಾತಂ ಪ್ರಾಸಾದಾದ್ಯಂ ಸ ಭೂಪತಿಃ ॥ ೫೯ ॥

ಪ್ರಲಯಾ ತ್ಪೂರ್ವಮವನಿ ರ್ಯಥಾಸೀತ್ತಾ ಭವತತ್ತಃ ।
ಪ್ರಾಸಾಧಾದ್ಯಂ ಶಂಕರಸ್ಯ ಪೂರ್ವವದ್ರಾಜತೇ ಪುನಃ ॥ ೬೦ ॥

ರಾಜಾ ಚ ಮುದಿತೋ ಭೂತ್ವಾ ದೇವಬ್ರಾಹ್ಮಣಭಕ್ತಿಮಾನ್ ।
ರಾಜ್ಯಂ ಚಕಾರ ಮನುವದ್ಧರ್ಮಮಾರ್ಗರತಃ ಸದಾ ॥ ೬೧ ॥

ಮೀನಾಕ್ಷೀಪತಿಃ ಶಂಭುಃ ಸ್ವಭಕ್ತಾನಾಮನುಗ್ರಹಂ ।
ಕರ್ತುಂ ಕರೋತಿ ಸಾನ್ನಿಧ್ಯಂ ಸದಾ ಲಿಂಗೇ ವಿಶೇಷತಃ ॥ ೬೨ ॥

---

ಸುಂದರೇಶ್ವರನ ದೇವಾಲಯ, ಪ್ರಾಕಾರ, ಗೋಪುರ, ಇವುಗಳನ್ನೂ, ಮೀನಾಕ್ಷೀ ದೇವಿಯ ದೇವಾಲಯ ಮತ್ತು ಮಂಟಪಗಳು, ಇವೆಲ್ಲವೂ ಜೀರ್ಣವಾಗಿರುವುದನ್ನೆಲ್ಲವನ್ನೂ ಹೊಸದಾಗಿ ಮಾಡಿಸಿದನು.

೫೯–೬೨. ಜೀರ್ಣವಾಗಿರುವ ಪದಾರ್ಥಗಳೆಲ್ಲವನ್ನೂ ಹೊಸದಾಗಿ ಮಾಡಿಸಿ ಚಿನ್ನದ ಹಿಡಿಯಿಂದ ಕೂಡಿರುವ ರತ್ನಖಚಿತವಾದ ಛತ್ರ, ಚಾಮರಗಳನ್ನೂ ಅಲಂಕಾರವಾಗಿರುವಂತೆ ಮಾಡಿಸಿದನು. ಅನಂತರದಲ್ಲಿ ಭೂಮಿಯು ಪ್ರಳಯಕ್ಕೆ ಮುಂಚಿತವಾಗಿರುವಂತೆ ಇತ್ತು. ದೇವದೇವನ ದೇವಸ್ಥಾನವೇ ಮೊದಲಾದವುಗಳು ಹಿಂದಿನಂತೆಯೇ ಪ್ರಕಾಶಿಸುತ್ತಿದ್ದವು. ಪಾಂಡ್ಯರಾಜನು ಧರ್ಮಮಾರ್ಗದಲ್ಲಿ ಆಸಕ್ತನಾಗಿರುತ್ತಾ, ದೇವಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿ ರಾಜ್ಯವನ್ನು ಮನುಚಕ್ರವರ್ತಿಯಂತೆ ಪಾಲಿಸುತ್ತಾ ಇದ್ದನು. ಮೀನಾಕ್ಷೀದೇವಿಗೆ ಪತಿಯಾದ ಶಿವನು ತನ್ನ ಭಕ್ತರಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಶಿವಲಿಂಗದಲ್ಲಿ ಯಾವಾಗಲೂ ಸಾನ್ನಿಧ್ಯವನ್ನು ಕೊಡುತ್ತಿದ್ದನು.

ತತ್ಕಾರುಣ್ಯಕಟಾಕ್ಷೇಣ ದೀಕ್ಷಿತೋ ವಂಶಶೇಖರಃ ।
ವಂಶಚೂಡಾಮಣಿಂ ಪುತ್ರಂ ಲಬ್ಧ್ವಾ ಚ ಚಿರ ಮೋದತೇ ॥ ೬೩ ॥

ಇಯ ಮೇಕೋನಪಂಚಾಶ ಲ್ಲೀಲಾ ಪ್ರೋಕ್ತಾ ಮಹೇಶಿತುಃ ।
ಸಾ ಸಕೃಚ್ಛ್ರವಣಾತ್ ಪುಂಸಾಂ ಸರ್ವಾಃ ಸಿದ್ಧೀಃ ಪ್ರಯಚ್ಛತಿ ॥ ೬೪ ॥

ಪುರಾರಿಣಾ ಕೃತಾ ಲೀಲಾ ಪುರಸೀಮಾಪ್ರಸಿದ್ಧಯೇ ।
ಶ್ರೋತಾ ವಕ್ತಾ ಚ ಭಕ್ತ್ಯಾ ಚ ಚಿರಂ ಜೀವತಿ ಭೂತಲೇ ॥ ೬೫ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಪುರಸೀಮಾಪ್ರದರ್ಶನಂ ನಾಮ
ಪಂಚಪಂಚಾಶೋಽಧ್ಯಾಯಃ

---

೬೩-೬೫. ಹಾಲಾಸ್ಯಾಧಿಪತಿಯ ಕಟಾಕ್ಷಕ್ಕೆ ಪಾತ್ರನಾಗಿರುವ ವಂಶಶೇಖರ ರಾಜನು ಶಿವಭಕ್ತಿಯನ್ನು ಹೊಂದಿ, ತನ್ನ ವಂಶಕ್ಕೆ ರತ್ನಪ್ರಾಯನಾದ ಮಗನನ್ನು ಪಡೆದನು. ಮತ್ತು ಸುಖದಿಂದ ವೃದ್ಧಿಯನ್ನು ಹೊಂದುತ್ತಿದ್ದನು. ಒಂದು ಸಾರಿ ಕೇಳಿದ ಮಾತ್ರದಿಂದಲೇ ಕೇಳಿದವರಿಗೆ ಪಾತಕಗಳನ್ನು ನಾಶಮಾಡಿ, ಎಲ್ಲಾ ಸಿದ್ಧಿಗಳನ್ನೂ ಉಂಟುಮಾಡುವ ನಲವತ್ತೊಂಬತ್ತನೆಯ ಲೀಲೆಯನ್ನು ಹೇಳಿರುವೆನು. ಪುರಾರಿಯಾದ ಪರಮೇಶ್ವರನು ಮಧುರಾನಗರದ ಎಲ್ಲೆಯನ್ನು ಎಲ್ಲರಿಗೂ ಪ್ರಕಟವಾಗಿ ತೋರಿಸಿರುವ ಈ ಲೀಲೆಯನ್ನು ಹೇಳಿದವನು ಮತ್ತು ಕೇಳಿದವನು ಭೂಮಿಯಲ್ಲಿ ಸುಖದಿಂದ ಬಹಳಕಾಲ ಜೀವಿಸುವನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಪುರಸೀಮಾಪ್ರದರ್ಶನವೆಂದು ಹೆಸರುಳ್ಳ ಐವತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಷಟ್‌ಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ವಂಶಶೇಖರಭೂಪಾಲೇ ವಸುಧಾಂ ಸತಿ ಶಾಸತಿ ।
ಸಂಭೂಯ ಬಹವೋ ಭೂಪಾಸ್ತೇನ ಯೋದ್ಧುಂ ಸಮಾಯಯುಃ ॥ ೧ ॥

ವೀರೋ ವಿಕ್ರಮಚೋಳಶ್ಚ ತೇಷಾಂ ಮಧ್ಯೇ ಮಹತ್ತರಃ ।
ಪ್ರಧಾನಶತ್ರುರಭವತ್ತಸ್ಯ ಪಾಂಡ್ಯಮಹೀಪತೇಃ ॥ ೨ ॥

ನರೇಶಶ್ಚ ಗಜೇಶಶ್ಚ ಶೂರಶ್ಚಾಶ್ವಪತಿರ್ಮಹಾನ್
ಏತೇ ವಿಕ್ರಮಚೋಲಸ್ಯ ನೃಪಾಃ ಪ್ರಾಪುಃ ಸಹಾಯತಾಂ ॥ ೩ ॥

---

### ಐವತ್ತಾರನೆಯ ಅಧ್ಯಾಯವು

೧-೫. ಅಗಸ್ತ್ಯಋಷಿಯು ಹೇಳಿದನು.—ವಂಶಶೇಖರಪಾಂಡ್ಯರಾಜನು ರಾಜ್ಯವನ್ನು ಆಳುತ್ತಿರುವಾಗ ಬಹಳಜನ ರಾಜರು ಒಟ್ಟಾಗಿ ಅವನನ್ನು ಸೋಲಿಸಲು ಯುದ್ಧಕ್ಕಾಗಿ ಬಂದರು. ಅವರಲ್ಲಿ ಶೂರರಾದ ವಿಕ್ರಮಚೋಳನೆಂಬ ರಾಜನು ಮುಖ್ಯನಾಗಿದ್ದನು. ಅವನೇ ಪಾಂಡ್ಯರಾಜನಿಗೆ ಮುಖ್ಯ ಶತ್ರುವಾಗಿದ್ದನು. ನರೇಶ, ಗಜೇಶ, ಅಶ್ವಪತಿ ಎಂಬ ಇತರ ರಾಜರುಗಳು ವಿಕ್ರಮಚೋಳರಾಜನ ಸಹಾಯಕ್ಕಾಗಿ ಬಂದರು. ಎಣಿಕೆಯಿಲ್ಲದಿರುವ ಕುದುರೆ, ಮನುಷ್ಯರು ಇವರಿಂದ ಕೂಡಿರುವ

**ಅಸಂಖ್ಯಾತಾ ಗಜಾಶ್ವಾಶ್ಚ ನರಾಃ ಶೂರತರಾ ಅಪಿ ।**
**ತೈರ್ನರೇಂದ್ರೈಃ ಸಹಾಯಾಂತಿ ಪುನರನ್ಯೇಪಿ ಪಾರ್ಥಿವಾಃ　　॥ ೪ ॥**

**ಸರ್ವೇ ತೇ ನೃಪಶಾರ್ದೂಲಾಃ ಸಹ್ಯಯೋನಿತಟೇ ಶುಭೇ ।**
**ಸ್ಕಂಧಾವಾರಂ ಪ್ರಕಲ್ಪ್ಯಾಥ ನಿವಸಂತ್ಯಾ ಹವೋದ್ಧತಾಃ　　॥ ೫ ॥**

**ತದ್ಯೋಧಾ ಮಧುರಾಂ ಪ್ರಾಪ್ಯ ತ್ವಗೃಹ್ಣನ್ಸ್ಕು ಗೋಧನಂ ।**
**ತಟಾಕಾನಾಂ ಚ ತೀರಾಣಿ ಬಬಂಧು ಶ್ಚೋನ್ನತಾನಿ ಚ ।　　॥ ೬ ॥**

**ವ್ರೀಹ್ಯಾದೀನಾ ಮಾಯುತಿಂ ಚ ಪರಿವೃತ್ತ್ಯ ನ್ಯವಾರಯನ್ ।**
**ಪಾಂಡ್ಯೋಪಿ ಸಚಿವೈಃ ಸಾರ್ಧಂ ಮಂತ್ರಯಾಮಾಸ ದೈಷ್ಟಿಕಂ　　॥ ೭ ॥**

**ಚೋಲಾದ್ಯಾ ಬಹವೋ ಭೂಪಾ ಬಹುಸೇನಾಭಿ ರಾವೃತಾಃ ।**
**ಬಲೇನ ಜೇತುಂ ತಾನ್ಸರ್ವಾನಶಕ್ತಾ ದುರ್ಬಲಾ ವಯಂ　　॥ ೮ ॥**

---

ಶೂರರಾದ ಈ ರಾಜರ ಜೊತೆಗೆ ಇತರ ರಾಜರೂ ಸೇರಿದರು. ಇವರೆಲ್ಲರೂ ಮಂಗಳಕರವಾದ (ಸಹ್ಯಪರ್ವತದ ತಪ್ಪಲಿನಲ್ಲಿ) ಕಾವೇರಿಯ ನದಿಯ ದಡದಲ್ಲಿ ತಮ್ಮ ಸೇನೆಯನ್ನು ಇಳಿಸಿ, ಯುದ್ಧಮಾಡಲುದ್ಯುಕ್ತರಾಗಿದ್ದರು.

೬–೯. ಅವರ ಸೈನಿಕರು ಮಧುರಾನಗರಕ್ಕೆ ಬಂದು, ಹಸುಗಳೆಲ್ಲವನ್ನೂ ಹಿಡಿದುಕೊಂಡು ಹೋದರು. ಕೆರೆ ಮತ್ತು ಕೊಳಗಳನ್ನೂ ಅವುಗಳ ತೀರವನ್ನೂ ಹಾಳುಮಾಡಿದರು. ಬತ್ತವೇ ಮೊದಲಾದ ಬೆಳೆಗಳನ್ನು ತುಳಿದು ನಾಶಮಾಡಿದರು. ಆಗ ಪಾಂಡ್ಯರಾಜನು ತನ್ನ ಮಂತ್ರಿಗಳೊಡನೆ ದೈವಗತಿಯಿಂದ ಎದಗಿರುವ ಈ ವಿಪತ್ತಿನಿಂದ ಪಾರಾಗಲು ತಕ್ಕ ಉಪಾಯವನ್ನು ಯೋಚಿಸಿದನು. ಚೋಳನೇ ಮೊದಲಾದ ಅನೇಕ ರಾಜರು ಬಹಳ ಸೇನೆಯೊಡನೆ ನಮ್ಮನ್ನು ಸುತ್ತಿಕೊಂಡು ಬರುತ್ತಿರುವರು. ಇವರನ್ನು ಗೆಲ್ಲುವುದಕ್ಕೆ ತಕ್ಕಷ್ಟು ಸೇನೆಯು ನಮ್ಮಲ್ಲಿ ಇರುವುದಿಲ್ಲವಾದ್ದರಿಂದ ನಾವುಗಳು ಅಶಕ್ತರಾಗಿರುವೆವು. ಭಕ್ತವತ್ಸಲನಾಗಿರುವ

ಶ್ರೀಹಾಲಾಸ್ಯಪತಿಃ ಶಂಭುಶ್ಶರಣ್ಯೋ ಭಕ್ತವತ್ಸಲಃ ।
ಸ ಏಕಏವ ಚಾಸ್ಮಾಕಂ ಸಹಾಯೋನ್ಯೋ ನ ಕಶ್ಚನ ॥ ೯ ॥

ಇತ್ಯುಕ್ತೇ ಸತಿ ಭೂಪಾಲೇ ಶಂಭುಭಕ್ತಿಸಮನ್ವಿತೇ ।
ತದುಕ್ತಂ ಸತ್ಯಮೇವೇತಿ ಪ್ರತ್ಯೂಚುಃ ಸಚಿವಾ ನೃಪಂ ॥ ೧೦ ॥

ಅಟ್ಟಾಲಸುಂದರಂ ಶಂಭು ಮಿಷ್ಟಾರ್ಥದ ಮಿಹ ದ್ರುತಂ ।
ಸಂಪ್ರಾಪ್ಯ ಪ್ರಾರ್ಥಯಾಮಾಸ ವಂಶಶೇಖರಭೂಪತಿಃ ॥ ೧೧ ॥

ದೇವದೇವ ಕೃಪಾಸಿಂಧೋ ಪ್ರಣತಾರ್ತಿಹರ ಪ್ರಭೋ ।
ಅಟ್ಟಾಲವೀರ ವರದ ವಿಷ್ಟಪತ್ರಯತುಷ್ಟಿದ ॥ ೧೨ ॥

ತ್ವಮೇವ ಮಮ ಮಾತಾ ಚ ತ್ವಮೇವ ಚ ಪಿತಾ ಮಮ ।
ತ್ವಮೇವ ಮಮ ಬಂಧುಶ್ಚ ತ್ವಮೇವ ಚ ಗುರು ರ್ಮಮ ॥ ೧೩ ॥

ತ್ವಮೇವ ಮಮ ವಿದ್ಯಾ ಚ ತ್ವಮೇವ ದ್ರವಿಣಂ ಮಮ
ತ್ವಮೇವ ಮೇ ರಕ್ಷಿತಾ ಚ ಸರ್ವಂ ವಸ್ತು ತ್ವಮೇವ ಚ ॥ ೧೪ ॥

---

ಹಾಲಾಸ್ಯೇಶ್ವರನು ಒಬ್ಬನೇ ನಮಗೆ ಸಹಾಯಕನಾಗಿರುವನು. ಇವನು ಹೊರತು ಬೇರೆ ಸಹಾಯಕರು ನಮಗೆ ಯಾರೂ ಇರುವುದಿಲ್ಲವು. ಎಂದು ಶಿವನಲ್ಲಿ ಭಕ್ತನಾದ ರಾಜನು ಹೇಳಿದ ಮಾತನ್ನು ಕೇಳಿ ಮಂತ್ರಿಯೇ ಮೊದಲಾದವರೆಲ್ಲರೂ ನೀನು ಹೇಳುವುದು ನಿಜವಾದದ್ದೆಂದು ಉತ್ತರವನ್ನು ಹೇಳಿದರು.

೧೧–೧೪. ವಂಶಶೇಖರಭೂಪಾಲನು ಬೇಗನೆ ಇಷ್ಟಸಿದ್ಧಿಯನ್ನು ಕೊಡುವ ಅಟ್ಟಾಲವೀರನಾದ ಶಿವನ ಸಮೀಪಕ್ಕೆ ಬಂದನು.' ಅವನು '' ನಮಸ್ಕಾರಮಾಡಿದವರ ಸಂಕಟಗಳನ್ನು ಪರಿಹರಿಸುವ, ದಯಾಶಾಲಿಯಾದ, ಎಲೈ ದೇವದೇವನೆ, ನೀನು ಲೋಕಗಳನ್ನೂ ಸಂತೋಷಪಡಿಸುವವನಾಗಿರುತ್ತೀಯೆ ಮತ್ತು ಎಲ್ಲರಿಗೂ ಇಷ್ಟ ಸಿದ್ಧಿಗಳನ್ನು ಉಂಟುಮಾಡುತ್ತಿರುತ್ತೀಯೆ. ನೀನೇ ನನಗೆ ತಂದೆಯೂ, ತಾಯಿಯೂ, ಬಂಧುವೂ, ಗುರುವೂ ಆಗಿರುತ್ತೀಯೆ. ನೀನೇ ನನಗೆ ವಿದ್ಯೆಯೂ, ದ್ರವ್ಯವೂ ಆಗಿರುವುದಲ್ಲದೆ, ನನಗೆ ರಕ್ಷಕನಾಗಿಯೂ ನನ್ನ ಸರ್ವಸ್ವವೂ ಆಗಿರುತ್ತೀಯೆ.

ಚೋಲೇನ ಬಹವೋ ಭೂಪಾ ಮಯಾ ಯೋದ್ಧುಂ ಸಮಾಗತಾಃ ।
ತಾನ್ಜೇತುಂ ಮಮ ಶಕ್ತಿರ್ನ ಕಿಂ ಕರ್ತವ್ಯಮಿತಃ ಪರಂ ॥ ೧೫ ॥

ತ್ವದೀಯಂ ಕ್ಷೇತ್ರಮೇತ್ನೈತಚ್ಛ್ರೀಹಾಲಾಸ್ಯಂ ಪರಾತ್ಪರಂ ।
ತತ್ರ ಸ್ಥಿತಾ ಜನಾಃ ಸರ್ವೇ ತ್ವದೀಯಾ ಏವ ಶಂಕರ ॥ ೧೬ ॥

ಅಹಂ ತ್ವದ್ದಾಸ ಏವಾಸ್ಮಿ ನಾತ್ರ ಸಂದೇಹಕಾರಣಂ ।
ತ್ವತ್ ಕ್ಷೇತ್ರಸ್ಯ ತ್ವದೀಯಾನಾಂ ಜನಾನಾಂ ಮಮ ವಾ ಪ್ರಭೋ ॥ ೧೭ ॥

ಭವಿಷ್ಯದ್ಧ್ವಂಸನಂ ಚೈತತ್ತ್ವನೈವ ಹಿ ಚ ದೂಷಣಂ ।
ಇತ್ಯುಕ್ತ್ವಾ ಸೋಽಶ್ರುಪೂರ್ಣಾಕ್ಷೋ ದಂಡವತ್ಪ್ರಣನಾಮ ಚ ॥ ೧೮ ॥

ಮಾ ಭೈಷೀ ನೃಪ ಧೀರಸ್ಸನ್ಯುದ್ಧಂ ಕುರ್ವರಿಭಿಃ ಸಹ ।
ಸಾಹಾಯ್ಯಂ ತೇ ಕರಿಷ್ಯಾಮೀತ್ಯೈಶ ಮಾವಿರಭೂದ್ವಚಃ ॥ ೧೯ ॥

---

೧೫–೧೮. ಚೋಳರಾಜನೊಡನೆ ಸೇರಿಕೊಂಡು ಬಹಳ ರಾಜರು ನನ್ನ ಸಂಗಡ ಯುದ್ಧಮಾಡುವುದಕ್ಕಾಗಿ ಬರುತ್ತಿರುವರು. ಅವರನ್ನು ಜಯಿಸುವುದಕ್ಕೆ ನನಗೆ ಸಾಮರ್ಥ್ಯವಿಲ್ಲವು. ಆದ್ದರಿಂದ ಈಗ ನಾನು ಏನುಮಾಡಲಿ, ಪರಾತ್ಪರವಾದ ಈ ಹಾಲಾಸ್ಯಕ್ಷೇತ್ರವು ನಿನಗೆ ಸಂಬಂಧಪಟ್ಟದ್ದಾಗಿರುವುದು. ಎಲೈ ಶಿವನೆ, ಈ ಕ್ಷೇತ್ರದಲ್ಲಿ ಇರುವ ಜನರೆಲ್ಲರೂ ನಿನ್ನವರೇ ಆಗಿರುವರು. ನಾನೂ ನಿನಗೆ ದಾಸನಾಗಿರುವುದರಲ್ಲಿ ಕೊಂಚವೂ ಸಂದೇಹವಿಲ್ಲವು. ನಿನ್ನ ಕ್ಷೇತ್ರವೂ, ನಿನ್ನ ಕ್ಷೇತ್ರದ ಜನರೂ ತೊಂದರೆಗೆ ಒಳಗಾಗುವುದು, ನಿನ್ನ ಅಶಕ್ತಿಗೆ ಕಾರಣವಾಗಿ ನಿನಗೆ ದೂಷಣೆಯನ್ನುಂಟುಮಾಡುವುದು. ಆದ್ದರಿಂದ ಇದನ್ನೂ ನಮ್ಮೆಲ್ಲರನ್ನೂ ರಕ್ಷಿಸು, ಎಂದು ಹೇಳಿ, ವಂಶಶೇಖರಭೂಪಾಲನು ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ದಂಡಾಕಾರವಾಗಿ ನಮಸ್ಕಾರಮಾಡಿದನು.

೧೯–೨೨. "ಎಲೈ ರಾಜನೆ ಹೆದರಬೇಡ, ಶತ್ರುಗಳೊಡನೆ ಯುದ್ಧವನ್ನು ಧೈರ್ಯದಿಂದ ಮಾಡು. ನಿನಗೆ ನಾನು ಸಹಾಯವನ್ನು ಮಾಡುವೆನು." ಎಂದು

ತಚ್ಛ್ರುತ್ವಾ ವಿಸ್ಮಿತಸ್ಸಮ್ರಾಟ್ ಸಂತೋಷಾತಿಶಯಾನ್ವಿತಃ ।
ಪ್ರಣಮ್ಯಾಷ್ಟಾಂಗಪಂಚಾಂಗತ್ರ್ಯಂಗೈಃ ಶಂಭುಂ ಪುನಃ ಪುನಃ ॥ ೨೨ ॥

ಸಹಸಾ ಭಸ್ಮನೋದ್ಧೂಲ್ಯ ಸ್ವಕೀಯಂ ಚ ಕಲೇಬರಂ ।
ದೃಢ ಮಾಮುಕ್ತಕವಚ ಸ್ಸ್ವಯಂ ಶೂರತರೋ ನೃಪಃ ॥ ೨೧ ॥

ಸ್ವಲ್ಪಸೇನಾರಥಗಜವಾಜಿಭಿಶ್ಚ ಸಮನ್ವಿತಃ ।
ಶಂಭುಂ ಪ್ರದಕ್ಷಿಣೀಕೃತ್ಯ ನತ್ವಾ ಯುದ್ಧಾಯ ನಿರ್ಯಯೌ ॥ ೨೨ ॥

ಪಾಂಡ್ಯನಿರ್ಗಮನಂ ಶ್ರುತ್ವಾ ಚೋಲೋ ವಿಕ್ರಮವಿಶ್ರುತಃ ।
ಸಹಾಯಭೂತೈರನ್ಯೈಶ್ಚ ಭೂಪೈ ಸ್ಸಹ ಸಮಾಯಯೌ ॥ ೨೩ ॥

ಪ್ರಥಿತೌ ತಾವುಭೌ ಪಾಂಡ್ಯಚೋಳೌ ವಿಕ್ರಮಮಾನಿತೌ ।
ಅಭಿಮುಖ್ಯಂ ಪ್ರಾಪತು ಸ್ತೌ ವೃಷಾದ್ರೇರುತ್ತರ ಸ್ಥಲೇ ॥ ೨೪ ॥

---

ಆಕಾಶವಾಣಿಯು ರಾಜನಿಗೆ ಕೇಳಿಸಿತು ಅದನ್ನು ಕೇಳಿ ರಾಜನು ಆಶ್ಚರ್ಯದಿಂದ ಸಂತೋಷಪಟ್ಟನು. ಶಿವನಿಗೆ ಅವನು ಪಂಚಾಂಗ, ಅಷ್ಟಾಂಗ, ತ್ರ್ಯಂಗಗಳ ಕ್ರಮದಿಂದ ನಮಸ್ಕರಿಸಿದನು. ಬೇಗ ತನ್ನ ಶರೀರವನ್ನು ಭಸ್ಮದಿಂದ ಉದ್ಧೂಳನೆಯನ್ನು ಮಾಡಿ ಕೊಂಡು ಯುದ್ಧಕ್ಕಾಗಿ ತಕ್ಕ ವೇಷವನ್ನು ಧರಿಸಿ, ಬಹಳ ಶೂರನಾದ ವಂಶಶೇಖರ ರಾಜನು ಶಿವನಿಗೆ ಪ್ರದಕ್ಷಿಣ ನಮಸ್ಕಾರಮಾಡಿ, ತನ್ನ ಕೊಂಚ ಸೇನೆಯೂ, ಆನೆ, ಕುದುರೆ ಇವುಗಳೊಡನೆ ಯುದ್ಧಕ್ಕಾಗಿ ಹೊರಟನು.

೨೩–೨೮. ಪರಾಕ್ರಮದಲ್ಲಿ ಪ್ರಸಿದ್ಧನಾದ ಚೋಳರಾಜನು, ಪಾಂಡ್ಯರಾಜನು ಯುದ್ಧಕ್ಕಾಗಿ ಬಂದದ್ದನ್ನು ಕೇಳಿ, ತನ್ನ ಸಹಾಯಕರಾದ ರಾಜರೊಡನೆ ಯುದ್ಧಕ್ಕೆ ಸಿದ್ಧನಾಗಿ ಬಂದನು. ಶೌರ್ಯದಲ್ಲಿ ಪ್ರಸಿದ್ಧನಾದ ಪಾಂಡ್ಯರಾಜನೂ, ವಿಕ್ರಮಚೋಳ ರಾಜನೂ ಪರಸ್ಪರ ಅಭಿಮುಖರಾಗಿ ವೃಷಾದ್ರಿಯ ಉತ್ತರಪ್ರದೇಶದಲ್ಲಿ ಯುದ್ಧಕ್ಕಾಗಿ ನಿಂತರು. ಆಯಾಯ ರಾಜರ ಭಟರಿಗೆ ದ್ವಂದ್ವಯುದ್ಧವಾಯಿತು. ವಿಕ್ರಮಚೋಳ ರಾಜನಿಗೆ ಸಹಾಯಮಾಡಲು ಬಂದಿದ್ದ ರಾಜರ ಸೈನಿಕರು ಬಹಳ ಕ್ರೂರವಾದ ಬಾಣ

ದ್ವಂದ್ವಯುದ್ಧ ಮಭೂತ್ತೇಷಾಂ ಯೋಧಾನಾಂ ಪಾಂಡ್ಯಚೋಳಯೋಃ ।
ಧನ್ವಿನಸ್ತು ಭಟಾಃ ಕೇಚಿಚ್ಛರೈಸ್ತೀಕ್ಷ್ಣತರೈರಪಿ ॥ ೨೫ ॥

ಸಹಾಯಭೂತಾಶ್ಚೋಲಸ್ಯ ಪ್ರಜಹ್ರುಃ ಪಾಂಡ್ಯರಾಡ್ಭಟಾನ್ ।
ಸಿಂಹನಾದಂ ಸಮಾಕರ್ಣ್ಯ ಯೋಧಾನಾಂ ಚೋಲಭೂಪತೇಃ ॥ ೨೬ ॥

ಹರಶ್ಚಾಟ್ಟಾಲನಿಲಯೋ ದೇವೋ ಧನ್ವ್ಯಭವಜ್ಞವಾತ್ ।
ಸುಂದರೇಶ್ವರ ಇತ್ಯೇವ ಸ್ವನಾಮಾಂ ಕಾ ನ್ಸಹೂನಪಿ ॥ ೨೭ ॥

ಪಾಂಡ್ಯರಾಡ್ಭಟಮಧ್ಯಸ್ಥ ಶ್ಶರಾನ್ವ್ಯಸೃಜ ದದ್ಭುತಾನ್ ।
ಏಕೆ ಶ್ಚೋಲಸ್ಯ ಯೋಧಾನಾಂ ಬಾಧತೇ ಸ್ಮ ಶತಂ ಶರಃ ॥ ೨೮ ॥

ದೃಷ್ಟ್ವಾ ಚೋಲಸ್ತು ತರಸಾ ಶರಂ ಶಂಭ್ವಾಖ್ಯಯಾಂಕಿತಂ ।
ವಿಶಿಷ್ಟತ್ವಾ ದ್ಬುದ್ಧಿಮತಾಮೇವಂ ಚಿತ್ತೇ ಹ್ಯಚಿಂತಯತ್ ॥ ೨೯ ॥

ಸುಂದರೇಶಃ ಸ್ವಭಕ್ತಾನಾಂ ಕಾಮಧುಕ್ಕಾಮಧೇನುವತ್ ।
ಚಿಂತಾಮಣಿ ರಿವಾಭಾತಿ ಚಿಂತಿತಾರ್ಥಪ್ರದಾನತಃ ॥ ೩೦ ॥

---

ಗಳಿಂದ ಪಾಂಡ್ಯರಾಜನ ಸೈನಿಕರನ್ನು ಹೊಡದರು. ಆಗ ಅಟ್ಟಾಲವೀರನಾದ ಶಂಭುವು ಚೋಳರಾಜನ ಸೇನಾಜನರ ಆರ್ಭಟವನ್ನು ಕೇಳಿದನು. ಕೂಡಲೇ ಅವನು ಪಾಂಡ್ಯ ರಾಜನ ಸೇನಾಮಧ್ಯದಲ್ಲಿ ನಿಂತು ಧನಸ್ಸನ್ನು ಹಿಡಿದುಕೊಂಡು, ಸುಂದರೇಶ್ವರನೆಂದು ಹೆಸರಿನಿಂದ ಮುದ್ರಿತವಾಗಿರುವ ಬಹಳ ಬಾಣಗಳನ್ನು ಬಿಟ್ಟನು. ಚೋಳರಾಜನ ನೂರುಜನ ಯೋಧರನ್ನು ಶಿವನ ಒಂದು ಬಾಣವು ನಾಶಮಾಡುತ್ತಿತ್ತು.

೨೯–೩೨. ಚೋಳರಾಜನು ಶಿವನ ಹೆಸರಿನಿಂದ ಗುರುತಾಗಿರುವ ಬಾಣವನ್ನು ನೋಡಿ, ಬುದ್ಧಿವಂತನಾಗಿರುವುದರಲ್ಲಿ ಶ್ರೇಷ್ಠನಾದ ಕಾರಣ " ಸುಂದರೇಶ್ವರನು ಕಾಮಧೇನುವಿನಂತೆ ತನ್ನ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುತ್ತಿರುವನು. ಆದ್ದರಿಂದ ಈ ದೇವನನ್ನು ಚಿಂತಾಮಣಿ ಎಂಬ ರತ್ನದಂತೆ ಇರುವನೆಂದು ಹೇಳಬಹುದು. ಭಕ್ತರಲ್ಲಿ

ಕಲ್ಪಪಾದಪಕಲ್ಪಶ್ಚ ಕಾರುಣ್ಯಾದ್ರ್ರಕಟಾಕ್ಷತಃ ।
ಭುವನೇಷ್ವಪಿ ಸರ್ವೇಷು ಪ್ರಸಿದ್ಧೋ ಯಃ ಪರಶ್ಶಿವಃ ॥ ೩೧ ॥

ತಮೇವ ನೂನಂ ಭೂಪಾಲಃ ಪುರಸ್ಕೃತ್ಯ ಸಮಾಗತಃ ।
ತೇನ ಯೋದ್ಧುಂ ವಯಂ ತಸ್ಮಾನ್ನ ಶಕ್ತಾಃ ಶಂಭುವೈಭವಾತ್ ॥ ೩೨ ॥

ಪುರೇಶೋ ಭಕ್ತರಕ್ಷಾರ್ಥ ಮಕರೋತ್ಕಾಷ್ಠವಿಕ್ರಯಂ ।
ಯೋತ್ಸ್ಯಾಮಶ್ಚೇದನೇ ನೈವ ನಷ್ಟಾ ಏವ ವಯಂ ಧ್ರುವಂ ॥ ೩೩ ॥

ಇತಿ ನಿಶ್ಚಿತ್ಯ ಯೋಧಾನ್ಸ್ವಾನ್ಜ್ಞಾತಾರ್ಥಾನಕರೋತ್ತದಾ ।
ನರಾಶ್ವಗಜನಾಥಾದ್ಯಾ ನ್ನೃಪಾನೇವ ಮಚೋದಯತ್ ॥ ೩೪ ॥

ಚೋಲಭೂಪತಿವಾಕ್ಯಂ ಚ ಶ್ರುತ್ವಾ ವಂಶಭವಾ ನೃಪಾಃ ।
ವಿಹಾಯಾ ಯೋಧನೋದ್ಯೋಗಂ ತೂಷ್ಣೀಮೇವ ಸ್ಥಿತಾ ಭಟೈಃ ॥ ೩೫ ॥

---

ತನ್ನ ಕಟಾಕ್ಷವನ್ನು ಬೀರುವುದರಲ್ಲಿ ಕಲ್ಪವೃಕ್ಷದಂತೆ ಇರುವನು. ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧನಾಗಿರುವ ಪರಶಿವನ ದಯವನ್ನು ಸಂಪಾದಿಸಿ, ಪಾಂಡ್ಯರಾಜನು ಯುದ್ಧಕ್ಕೆ ಬಂದಿರುವನು ಆದ್ದರಿಂದ ಶಿವನ ಮಹಿಮೆಯನ್ನು ಮುಂದುಮಾಡಿಕೊಂಡಿರುವ ಈ ರಾಜನೊಡನೆ ಯುದ್ಧಮಾಡಲು ನನಗೆ ಶಕ್ತಿಯಿಲ್ಲವು.

೩೩–೩೬. ಪೂರ್ವದಲ್ಲಿ ಸುಂದರೇಶ್ವರನು ಭಕ್ತರನ್ನು ರಕ್ಷಿಸುವುದಕ್ಕಾಗಿ ಕಟ್ಟಿಗೆಯ ಹೊರೆಯನ್ನು ಮಾರಿದನು. ಇಷ್ಟುಮಟ್ಟಿನ ಭಕ್ತವಾತ್ಸಲ್ಯವುಳ್ಳ ಶಿವನ ಆಶ್ರಯದಲ್ಲಿ ಇರುವ ಈ ರಾಜನ ಸಂಗಡ ನಾವು ಯುದ್ಧಮಾಡಿದರೆ ಅದರಿಂದ ನಮಗೆ ತೊಂದರೆಯು ಉಂಟಾಗುವುದೇ ಖಂಡಿತವು. ಹೀಗೆಂದು ಮನಸ್ಸಿನಲ್ಲಿ ಚೋಳರಾಜನು ನಿಶ್ಚಯಮಾಡಿಕೊಂಡು ತನ್ನ ಸೇನೆಯವರೆಲ್ಲರಿಗೂ ಈ ವಿಷಯವನ್ನು ತಿಳಿಸಿದನು. ಅವನು ತನ್ನ ಜೊತೆಯ ರಾಜರು ಮತ್ತು ಸೇನಾಪತಿಗಳೂ, ಮಾವಟಿಗರೂ, ಕುದುರೆಯ ಸವಾರರೂ ಇವರೆಲ್ಲರಿಗೂ ತಿಳಿಸಿದನು. ಸತ್ಕುಲಪ್ರಸೂತರಾದ ಆ ರಾಜರು

ಪುನರ್ಮ್ಲೇಚ್ಛತುರುಷ್ಕಾದ್ಯಾ ಇತ್ಯುಕ್ತಂ ಚೋಳಭೂಪತಿಂ ।
ಪ್ರಭರ್ತ್ಸ್ಯ ಯೋದ್ಧುಮುದ್ಯೋಗ ಮಕುರ್ವನ್ನತಿವಿಕ್ರಮಾತ್ ॥ ೩೬ ॥

ಅಟ್ಟಾಲವೀರಂ ತಂ ಶಂಭುಂ ದೃಷ್ಟ್ವಾ ಪ್ರತ್ಯಕ್ಷತೋಽಗ್ರತಃ ।
ಪಾಂಡ್ಯಭೂಪೋ ನಿರ್ಭಯಸ್ಸ ತಸ್ಥೌ ಧೀರೋ ರಣಾಂಕಣೇ ॥ ೩೭ ॥

ಅಟ್ಟಾಲವೀರಸ್ಸಹಸಾ ಭಕ್ತಾಪದ್ಭಂಜನಕ್ಷಮಃ ।
ಸ್ವನಾಮಾಂಕಶರಂಚೈಕಂ ವ್ಯಸೃಜತ್ತಾನರೀನ್ ಪ್ರತಿ ॥ ೩೮ ॥

ನಿಸೃಷ್ಟಸ್ತೇನ ದೇವೇನ ತೀಕ್ಷ್ಣಸ್ತೇಜೋಮಯ ಶ್ಶರಃ ।
ಸಹಸ್ರಧಾ ಪ್ರಭಿನ್ನೋಽಭೂತ್ಸಹಸ್ರಾಂಶು ರಿವಾಂಶುಭಿಃ ॥ ೩೯ ॥

ಸರ್ವಾನ್ ಮ್ಲೇಚ್ಛತುರುಷ್ಕಾದ್ಯಾನ್ಮಾನವಿಕ್ರಮಮೋಹಿತಾನ್ ।
ಸರಂಧ್ರಾನಕರೋತ್ಸದ್ಯಃ ಸ ಶರೋಹೃತ್ಪ್ರದೇಶತಃ ॥ ೪೦ ॥

---

ಚೋಳರಾಜನ ಮಾತನ್ನು ಕೇಳಿ, ಯುದ್ಧ ಸನ್ನಾಹವನ್ನು ಬಿಟ್ಟು, ತಮ್ಮ ತಮ್ಮ ಸೇನೆಯೊಡನೆ ಸುಮ್ಮನೆ ನಿಂತರು. ಆಗ ತುರುಷ್ಕರೂ, ಮ್ಲೇಚ್ಛರೂ ಇವರೇ ಮೊದಲಾದವರು ಚೋಳರಾಜನನ್ನು ಬೆದರಿಸಿ ಬಹಳ ಪರಾಕ್ರಮದಿಂದ ಯುದ್ಧಮಾಡಲು ಉದ್ಯುಕ್ತರಾಗಿ ನಿಂತರು.

೩೭–೪೦. ಪಾಂಡ್ಯರಾಜನು, ಸುಂದರೇಶ್ವರನು ಅಟ್ಟಾಲವೀರನರೂಪದಿಂದ ಯುದ್ಧಮಾಡುತ್ತಿರುವುದನ್ನು ನೋಡಿ, ತಾನು ಯಾವ ಭಯವೂ ಇಲ್ಲದೆ, ಧೀರನಾಗಿ ಯುದ್ಧರಂಗದಲ್ಲಿ ಸ್ಥಿರನಾಗಿ ಇದ್ದನು. ಭಕ್ತರ ಆಪತ್ತನ್ನು ನಾಶಮಾಡುವುದರಲ್ಲಿ ಸಮರ್ಥನಾದ ಅಟ್ಟಾಲವೀರನೆಂದು ಪ್ರಸಿದ್ಧನಾದ ಸುಂದರೇಶ್ವರನು ತನ್ನ ಹೆಸರಿನಿಂದ ಗುರುತುಮಾಡಿರುವ ಒಂದು ಬಾಣವನ್ನು ಆ ಶತ್ರುಗಳಮೇಲೆ ಬಿಟ್ಟನು. ಆ ಬಾಣವು ಸೂರ್ಯನ ಸಾವಿರ ಕಿರಣಗಳ ಹಾಗೆ, ಸಾವಿರ ಬಾಣಗಳ ಆಕಾರವನ್ನು ಧರಿಸಿ, ತೇಜಸ್ಸಿನ ರೂಪದಿಂದ ನುರಿಯುತ್ತಾ ದುರಭಿಮಾನದಿಂದಲೂ, ಪರಾಕ್ರಮದಿಂದಲೂ ಮೋಹಗೊಂಡಿರುವ ಆ ಮ್ಲೇಚ್ಛರ ಹೃದಯವನ್ನು ಸೀಳಿತು.

ಶಂಭುನಾಮಾಂಕಿತೈರ್ಬಾಣೈಃ ಸರ್ವೇ ತೇ ಭಿನ್ನವಕ್ಷಸಃ ।
ಗಜೈರಶ್ವೈಃ ಸ್ವಕೀಯೈಶ್ಚ ಸಹಿತಾ ನ್ಯಪತನ್ ಸ್ಥಲೇ ॥ ೪೧ ॥

ರಣಾಂಕಣಂ ಸಮಾಲೋಕ್ಯ ಗಜಾದಿಶವಪೂರಿತಂ ।
ಚೋಳಸ್ಸ್ತುವನ್ ಸುಂದರೇಶವೈಭವಂ ಪ್ರಯಯೌ ಕ್ಷಣಾತ್ ॥ ೪೨ ॥

ಚೋಳಂ ತುರಗ ಮಾರುಹ್ಯ ಗಚ್ಛಂತ ಮತಿವೇಗತಃ ।
ಆಲೋಕ್ಯಾನ್ಯೇ ಮಹೀಪಾಶ್ಚ ನಿಶ್ವಸಂತ ಸ್ತಮನ್ವಯುಃ ॥ ೪೩ ॥

ಏವ ಮಟ್ಟಾಲವೀರಸ್ತು ವಿಜಯಂ ಚ ಪರಾಜಯಂ ।
ದದೌ ಪಾಂಡ್ಯಾಯ ಚೋಳಾಯ ಸ್ವತಂತ್ರೋ ಭಕ್ತವತ್ಸಲಃ ॥ ೪೪ ॥

ಕಿಂಚಿತ್ಸ್ಮಿತ್ವಾ ಪಾಂಡ್ಯಮುಖಂ ಕಟಾಕ್ಷೇಣ ವಿಲೋಕ್ಯ ಚ ।
ಅಟ್ಟಾಲವೀರಶಂಭುಶ್ಚ ಸ್ವಮಟ್ಟಾಲ ಮುಪಾವಿಶತ್ ॥ ೪೫ ॥

---

೪೧–೪೩. ಶಿವನ ಹೆಸರಿನಿಂದ ಗುರುತಾಗಿರುವ ಬಾಣಗಳಿಂದ ಶೀಳಿದ ಎದೆಯುಳ್ಳ ಅವರೆಲ್ಲರೂ ತಮ್ಮ ತಮ್ಮ ಆನೆ, ಕುದುರೆಗಳೊಡನೆ ಯುದ್ಧರಂಗದಲ್ಲಿ ಬಿದ್ದರು. ಚೋಳರಾಜನು ಯುದ್ಧರಂಗವು ಆನೆಯೇ ಮೊದಲಾದ ಪ್ರಾಣಿಗಳ ಮೃತಶರೀರದಿಂದ ತುಂಬಿರುವುದನ್ನು ನೋಡಿ, ಸುಂದರೇಶ್ವರನ ಮಹಿಮೆಯನ್ನು ಹೊಗಳುತ್ತಾ, ತನ್ನ ನಗರಕ್ಕೆ ಹಿಂತಿರಿಗಿ ಹೋದನು. ಕುದುರೆಯನ್ನು ಹತ್ತಿಕೊಂಡು ಅತಿ ವೇಗದಿಂದ ಹೋಗುತ್ತಿರುವ ಚೋಳರಾಜನನ್ನು ನೋಡಿ, ಇತರ ರಾಜರು ಎಲ್ಲರೂ ನಿಟ್ಟುಸುರು ಬಿಡುತ್ತಾ ಅವನನ್ನು ಅನುಸರಿಸಿ ಓಡಿದರು.

೪೪–೪೭. ಅಟ್ಟಾಲವೀರನಾದ ಸುಂದರೇಶ್ವರನು ಭಕ್ತರಲ್ಲಿ ಪ್ರೀತಿಯುಳ್ಳವನಾಗಿ ಪಾಂಡ್ಯರಾಜನಿಗೆ ಜಯವನ್ನೂ, ಚೋಳರಾಜನಿಗೆ ಅಪಜಯವನ್ನೂ ಉಂಟುಮಾಡಿ, ಪಾಂಡ್ಯರಾಜನನ್ನು ಕಟಾಕ್ಷದಿಂದ ನೋಡಿ, ತನ್ನ ಪೀಠದಲ್ಲಿ ಕೂತುಕೊಂಡನು. ಪಾಂಡ್ಯರಾಜನು ಗಾಯವಿಲ್ಲದ ಶರೀರವುಳ್ಳವನಾಗಿ ತನ್ನ ಜನರೊಡನೆ ಕೂಡಿಕೊಂಡು,

ಪಾಂಡ್ಯೋ ಪ್ಯಕ್ಷತಸರ್ವಾಂಗ ಶ್ಲಾಘ್ಯಶ್ಚೈಃ ಸ್ವಜನಾದಿಭಿಃ ।
ಸಹಿತೋಽಟ್ಟಾಲಗಂ ಶಂಭುಂ ನತ್ವಾ ಪ್ರಸ್ತುತ್ಯ ಭಕ್ತಿತಃ ॥ ೪೬ ॥

ಮುಕ್ತಾಫಲಾನಿ ಚಿತ್ರಾಣಿ ಭೂಷಣಾನ್ಯಂಬರಾಣಿ ಚ ।
ದೇವಾಯ ಪ್ರದದೌ ತಸ್ಮೈ ರತ್ನಚಿತ್ರಧನುಶ್ಶರೌ ॥ ೪೭ ॥

ಸರ್ವೇ ಪ್ರತ್ಯಕ್ಷತೋ ದೃಷ್ಟ್ವಾ ವಿಕ್ರಮಂ ಚಾಟ್ಟವಾಸಿನಃ ।
ಪ್ರಶಂಸ ನ್ನಾಥ ನಾಥೇತಿ ಮಧುರಾವಾಸಿನೋ ಜನಾಃ ॥ ೪೮ ॥

ವಂಶಶೇಖರಭೂಪೋಽಪಿ ವರವಾಗ್ಭಿಃ ಕವೀಶ್ವರೈಃ ।
ಪ್ರಶಸ್ಯಮಾನೋ ಮಗ್ನೋಽಭೂನ್ಮಹಾಸಂತೋಷಸಾಗರೇ ॥ ೪೯ ॥

ಅಥಾಟ್ಟಾಲಪತೇಃ ಶಂಭೋರನುಗ್ರಹಮಭೀಷ್ಟದಂ ।
ಲಬ್ಧ್ವಾ ಸರ್ವಾನರೀನ್ಜಿತ್ವಾ ಸಾರ್ವಭೌಮೋಽಭವನ್ನೃಪಃ ॥ ೫೦ ॥

ಇತಿ ಪಂಚಾಶಿಕಾ ಲೀಲಾ ಕದಂಬವನವಾಸಿನಃ ।
ಮಯಾ ಪ್ರೋಕ್ತಾ ಚ ಯುಷ್ಮಾಕಂ ಶ್ರೋತೄಣಾ ಮಿಷ್ಟಸಿದ್ಧಿದಾ ॥ ೫೧ ॥

---

ಅಟ್ಟಾಲವೀರನಾದ ಸುಂದರೇಶ್ವರನಿಗೆ ನಮಸ್ಕಾರಮಾಡಿ, ಭಕ್ತಿಯಿಂದ ಸ್ತೋತ್ರ ಮಾಡಿ, ರತ್ನಖಚಿತವಾದ ಧನುರ್ಬಾಣಗಳನ್ನೂ, ಮುತ್ತುಗಳೂ, ವಸ್ತ್ರಾಭರಣಗಳೂ ಇವುಗಳನ್ನು ಕೊಟ್ಟನು.

೪೮-೫೧. ಮಧುರಾನಗರದ ಜನರೆಲ್ಲರೂ ಅಟ್ಟಾಲವೀರನಾದ ಶಂಭುವಿನ ಪರಾಕ್ರಮವನ್ನು ಪ್ರತ್ಯಕ್ಷವಾಗಿ ನೋಡಿ, ಶ್ಲಾಘನೆ ಮಾಡಿದರು. ವಂಶಶೇಖರ ರಾಜನನ್ನು ಕವಿಗಳು ಬಹಳವಾಗಿ ಹೊಗಳುತ್ತಾ ಇದ್ದರು, ರಾಜನು ಬಹಳ ಸಂತೋಷದಿಂದ ಸುಖವಾಗಿದ್ದನು. ಅಟ್ಟಾಲವೀರನಾದ ಸುಂದರೇಶ್ವರನ ಅನುಗ್ರಹದಿಂದ ವಂಶಶೇಖರಪಾಂಡ್ಯರಾಜನು ಶತ್ರುಗಳನ್ನೆಲ್ಲರನ್ನೂ ಗೆದ್ದು ಚಕ್ರವರ್ತಿಯಾದನು.

ಕದಂಬವನಾಧಿಪನಾದ ಸುಂದರೇಶ್ವರನು ಆಚರಿಸಿದ ಲೀಲೆಯು ಕೇಳಿದವರಿಗೆ ಇಷ್ಟಸಿದ್ಧಿಯನ್ನುಂಟುಮಾಡುವುದು. ಐವತ್ತನೆಯ ಈ ಲೀಲೆಯನ್ನು ಹೇಳಿರುವೆನು.

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಚೋಲಸೇನಾಪ್ರಭಂಜನಂ ನಾಮ ಷಟ್ಪಂಚಾಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ ಚೋಳಸೇನಾ ಪ್ರಭಂಜನವೆಂದು ಹೆಸರುಳ್ಳ ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥
॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಸಪ್ತಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಸಂಘಿಭ್ಯಃ ಸಂಘಫಲಕಾಂ ದದೌ ಹಾಲಾಸ್ಯನಾಯಕಃ ।
ಯಯಾ ಚ ಲೀಲಯಾ ತಾಂ ಚ ವಕ್ಷ್ಯೇಽಹಂ ಮುನಿಪುಂಗವಾಃ ॥ ೧ ॥

ಹಿರಣ್ಯಗರ್ಭೋ ಭಗವಾನ್ಬ್ರಹ್ಮಾ ಲೋಕಪಿತಾಮಹಃ ।
ಚರಾಚರಂ ಜಗತ್ಸರ್ವಂ ಸೃಷ್ಟ್ವಾ ವಿಹರತಿ ಪ್ರಭುಃ ॥ ೨ ॥

ಗಾಯತ್ರ್ಯಾ ಚೈವ ಸಾವಿತ್ರ್ಯಾ ಸರಸ್ವತ್ಯಾ ಸಮನ್ವಿತಃ ।
ವಾರಣಸೀಮಹಾಕ್ಷೇತ್ರಂ ಪ್ರಾಪ ಕರ್ತುಂ ಮಹಾಧ್ವರಂ ॥ ೩ ॥

---

### ಐವತ್ತೇಳನೆಯ ಅಧ್ಯಾಯವು

೧-೫. ಹಾಲಾಸ್ಯೇಶ್ವರನಾದ ಶಿವನು ಜ್ಞಾನಾಭಿವೃದ್ಧಿಗಾಗಿ ಒಂದು ಸಂಘವನ್ನು ಮಾಡಿಕೊಂಡು ಇದ್ದ ಸಂಘದವರಿಗಾಗಿ ಒಂದು ವಿದ್ಯಾಪೀಠವನ್ನು ಅನುಗ್ರಹಿಸಿದ ಲೀಲೆಯನ್ನು ಹೇಳುವೆನು. ಹಿರಣ್ಯಗರ್ಭನೆಂಬ ಹೆಸರಿನಿಂದ ಚತುರ್ಮುಖ ಬ್ರಹ್ಮನು, ಸ್ಥಿರ, ಚರಾತ್ಮಕವಾದ ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡುತ್ತಾ ಆನಂದದಿಂದ ಇರುವನು. ಅವನು ಒಂದು ಕಾಲದಲ್ಲಿ ದೊಡ್ಡ ಯಜ್ಞವನ್ನು ಮಾಡುವ ಉದ್ದೇಶದಿಂದ ಗಾಯಿತ್ರೀ, ಸಾವಿತ್ರೀ, ಸರಸ್ವತೀದೇವಿಯರೊಡನೆ ವಾರಾಣಸೀ ಕ್ಷೇತ್ರಕ್ಕೆ

ಪಿತಾಮಹೇಶ್ವರಂ ಲಿಂಗಂ ಪ್ರತಿಷ್ಠಾಪ್ಯ ತದಗ್ರತಃ ।
ದಶಾಶ್ವಮೇಧಿಕಂ ತೀರ್ಥಂ ಸಸರ್ಜಾತುಲವೈಭವಂ ॥ ೪ ॥

ನವಕಂ ಚಾಶ್ವಮೇಧಾನಾಂ ಕೃತ್ವಾ ಶಂಕರಸನ್ನಿಧೌ ।
ತತ್ತೀರ್ಥೇಽವಭೃತಂ ಕರ್ತುಂ ತ್ವಕರೋಚ್ಛಕ್ತಿಭಿಃ ಸ್ತ್ರಿಭಿಃ ॥ ೫ ॥

ದಶಮೇ ಚಾಶ್ವಮೇಧೇ ಚ ನಿವೃತ್ತೇಽವಭೃತಕ್ರಿಯಾಂ ।
ವಿರಂಚಿಃ ಕರ್ತುಮುದ್ಯೋಗ ಮಕರೋನ್ಮುನಿಭಿ ರ್ವೃತಃ ॥ ೬ ॥

ತದಾ ಸರಸ್ವತೀ ದೇವೀ ಗಾನಂ ಗಂಧರ್ವಯೋಷಿತಾಂ ।
ಶ್ರುತ್ವಾ ಸಂಮೋಹಿತಾ ಸದ್ಯೋ ನಾಯಯೌ ಭರ್ತುರಂತಿಕಂ ॥ ೭ ॥

ಗಾಯತ್ರ್ಯಾ ಚೈವ ಸಾವಿತ್ರ್ಯಾ ಸಹಿತ ಸ್ಸಪಿತಾಮಹಃ ।
ನಿರ್ವೃತ್ಯಾವಭೃತಂ ಕರ್ತುಂ ತ್ವಾಸ್ತೇ ಚಾನಂದಕಾನನೇ ॥ ೮ ॥

---

ಬಂದನು. ಅಲ್ಲಿ ಪಿತಾಮಹೇಶ್ವರನೆಂದು ಹೆಸರುಳ್ಳ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಅದರ ಮುಂದುಗಡೆಯಲ್ಲಿ ಬಹಳ ಪವಿತ್ರವಾದ ಶತಾಶ್ವಮೇಧಿಕ ತೀರ್ಥವೆಂದು ಹೆಸರುಳ್ಳ ತೀರ್ಥವನ್ನು ನಿರ್ಮಿಸಿದನು. ಶಿವನ ಸನ್ನಿಧಿಯಲ್ಲಿ ಒಂಭತ್ತು ಅಶ್ವಮೇಧಯಾಗಗಳನ್ನು ಮಾಡಿ, ತನ್ನ ಜೊತೆಯಲ್ಲಿರುವ ಮೂರು ಶಕ್ತಿದೇವಿಯರೊಡನೆ ಅವಭೃಥ ಸ್ನಾನವನ್ನು ಮಾಡಲು ಸಿದ್ಧನಾದನು.

೬-೧೨. ಮುನಿಗಳೊಡನೆ ದಶಾಶ್ವಮೇಧಿಕ ತೀರ್ಥದಲ್ಲಿ ಸ್ನಾನಮಾಡುವುದಕ್ಕಾಗಿ ಸಿದ್ಧನಾದ ತನ್ನ ಪತಿಯಾದ ಬ್ರಹ್ಮನ ಸಮೀಪಕ್ಕೆ ಸರಸ್ವತೀ ದೇವಿಯು ಬರಲಿಲ್ಲ. ಆಗ ಅವಳು ಸಂಗೀತವನ್ನು ಹಾಡುತ್ತಾ ಇದ್ದ ಗಂಧರ್ವ ಸ್ತ್ರೀಯರ ಗಾನವನ್ನು ಕೇಳಿ ಆನಂದದಿಂದ ಇದ್ದಳು. ಬ್ರಹ್ಮನು ಗಾಯಿತ್ರೀ ಮತ್ತು ಸಾವಿತ್ರೀದೇವಿಯರೊಡನೆ, ಅವಭೃತಸ್ನಾನವನ್ನು ನೆರವೇರಿಸಿ, ಆನಂದವನದಲ್ಲಿರುವಾಗ ಸರಸ್ವತೀ ದೇವಿಯು ಬಂದು ತನ್ನ ಪತಿಯನ್ನು ಆಕ್ಷೇಪಣೆಮಾಡಿದಳು. ಅವಳು ತನ್ನನ್ನು

**ಸರಸ್ವತೀ ತ್ವಥಾಗತ್ಯ ಶಕ್ತಿಭ್ಯಾಂ ಸಹಿತಂ ವಿಧಿಂ ।**
**ವಿಲೋಕ್ಯ ಭರ್ತ್ಸಯಾಮಾಸ ಭರ್ತಾರಮಪಿ ಕೋಪಿತಾ ॥ ೯ ॥**

**ಶ್ರುತ್ವಾ ತದ್ಭರ್ತ್ಸನಂ ಸರ್ವಂ ಕೋಪೇನ ಸ್ಫುರಿತಾಧರಃ ।**
**ಶಾಪಂ ದದೌ ಸರಸ್ವತ್ಯೈ ಪತ್ನ್ಯೈ ಪಂಕಜಸಂಭವಃ ॥ ೧೦ ॥**

**ಅನೌಚಿತ್ಯೇನ ಕೋಪೇನ ಯುಕ್ತಾ ತ್ವಂ ತು ಸರಸ್ವತಿ ।**
**ಚತ್ವಾರಿಂಶಚ್ಚ ಜನ್ಮಾನಿ ಕ್ರಮಾದಷ್ಟೋತ್ತರಾಣಿ ಚ ॥ ೧೧ ॥**

**ಮರ್ತ್ಯಲೋಕೇ ಮರ್ತ್ಯರೂಪಾ ಜನಿಷ್ಯಸಿ ನ ಸಂಶಯಃ ।**
**ಇತಿ ಶಪ್ತ್ವಾ ಭಾರತೀಂ ತಾಂ ಜಹೌ ಕೋಪಂ ಪಿತಾಮಹಃ ॥ ೧೨ ॥**

**ಅಥ ವಾಗ್ವಾದಿನೀ ಭೀತಾ ಭರ್ತುಃ ಪಾದಾಂಬುಜದ್ವಯಂ ।**
**ನತ್ವಾ ಸ್ಪೃಷ್ಟ್ವಾ ಚ ಪಾಣಿಭ್ಯಾಂ ಪ್ರಾರ್ಥಯಾಮಾಸ ತಂ ಪತಿಂ ॥ ೧೩ ॥**

---

ಆಕ್ಷೇಪಿಸಿದ್ದಕ್ಕಾಗಿ, ಬ್ರಹ್ಮನು ಕೋಪಗೊಂಡು "ಎಲೈ ಸರಸ್ವತಿಯೆ, ಕೋಪಕ್ಕೆ ಕಾರಣವಿಲ್ಲದಿದ್ದರೂ ಕೋಪಮಾಡಿಕೊಂಡು ಇರುವ ನೀನು ನಲವತ್ತೆಂಟು ವಿಧವಾದ ಜನ್ಮಗಳನ್ನು ಹೊಂದಿ ಭೂಮಿಯಲ್ಲಿ ಇರುತ್ತೀಯೆ. ಇದರಲ್ಲಿ ಸಂಶಯವಿಲ್ಲ" ಎಂದು ಸರಸ್ವತೀದೇವಿಗೆ ಶಾಪವನ್ನು ಕೊಟ್ಟು ಉಪಶಾಂತನಾದನು.

೧೩-೧೭. ಆಗ ಸರಸ್ವತಿಯು ತನ್ನ ಪತಿಯ ಕಾಲುಗಳೆರಡನ್ನೂ ಹಿಡಿದು ಕೊಂಡು ನಮಸ್ಕಾರ ಮಾಡುತ್ತಾ, "ಎಲೈ ದಯಾಶಾಲಿಯೆ, ನೀನು ನನ್ನ ಅಪರಾಧ ವನ್ನು ಮನ್ನಿಸಿ, ಕಟಾಕ್ಷದಿಂದ ನೋಡು" ಎಂದು ಬಹಳ ವಿಧವಾಗಿ ಬೇಡಿ ಕೊಂಡಳು. ಆಗ ಬ್ರಹ್ಮನು ಸರಸ್ವತೀದೇವಿಯ ವಿಷಯದಲ್ಲಿ ದಯೆಯುಳ್ಳವನಾಗಿ ಪ್ರತಿಶಾಪವನ್ನು ಕೊಟ್ಟನು. "ವಾಗ್ರೂಪವಾದ ನಿನ್ನ ಶರೀರದಲ್ಲಿ ಅಕಾರವೇ ಮೊದಲಾಗಿ, ಹಕಾರ ರೂಪದಿಂದ ವರ್ಣಗಳು ಬೇರೆ ಬೇರೆಯಾದ ಆಯಾಯ ವರ್ಣಾ ತ್ಮಕವಾದ ಜ್ಞಾನವನ್ನುಂಟುಮಾಡುವುವು. ಇವೆಲ್ಲವೂ ಬೇರೆ ಬೇರೆ ಕವಿಗಳ

ಮಯಾ ಚಾಜ್ಞಾನವಶತಃ ಕೃತಂ ಸರ್ವಂ ಚ ಭರ್ತ್ಸನಂ ।
ಕ್ಷಮಸ್ವ ಕರುಣಾಸಿಂಧೋ ಕಟಾಕ್ಷೇಣ ವಿಲೋಕ್ಯ ಮಾಂ ॥ ೧೪

ಪುನಃ ಪುನರಿತಿ ಬ್ರಾಹ್ಮ್ಯಾ ಪ್ರಾರ್ಥಿತೋ ಹಂಸವಾಹನಃ ।
ಪ್ರತಿಶಾಪಂ ದದೌ ಪಶ್ಚಾದ್ಭಾರತ್ಯೈ ಚಾನುಕಂಪಯಾ ॥ ೧೫

ತ್ವದಂಗಸಂಭವಾ ವರ್ಣಾ ಶ್ಚಾದಿ ಸಾಂತಾಶ್ಚ ವಾಙ್ಮಯಾಃ ।
ಜನಿಷ್ಯಂತಿ ಮಿಥೋ ಭಿನ್ನೈರಾಕಾರೈಸ್ಸುಧಿಯೋ ಭುವಿ ॥ ೧೬ ।

ಹಕಾರರೂಪೀ ಭಗವಾನ್ಸರ್ವವ್ಯಾಪೀ ಸದಾಶಿವಃ ।
ತೇಷಾಂ ಚ ಸುಧಿಯಾಂ ಮಧ್ಯೇ ಭವತ್ಯೇಕಃ ಕವೀಶ್ವರಃ ॥ ೧೭ ।

ಆಹತ್ಯೈಕೋನಪಂಚಾಶತ್ಸಂಘಿನ ಸ್ತತ್ಕವೀಶ್ವರಾಃ ।
ಭೂಲೋಕಶಿವಲೋಕೇ ಚ ಶಿವಕ್ಷೇತ್ರಶಿಖಾಮಣೌ ॥ ೧೮ ।

---

ರೂಪದಿಂದ ಇರುವುವು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವ ಪೂಜ್ಯನಾದ ಸದಾಶಿವನು ಹಕಾರ ರೂಪದಿಂದ ಇರುವನು. ಆವನು ಇವರೆಲ್ಲರಿಗೂ ಕವೀಶ್ವರನಾಗಿರುವನು. ಇವರೆಲ್ಲರೂ ಒಟ್ಟು ಸೇರಿ ವಿದ್ಯಾಪೀಠಕ್ಕೆ ಸಂಬಂಧಪಟ್ಟ ನಲವತ್ತೊಂಭತ್ತು ಜನ ಕವೀಶ್ವರರಾಗಿರುವರು.

೧೮–೨೪. ಬ್ರಹ್ಮನ ದ್ವಾದಶಾಂತಸ್ಥವಾದ ಬ್ರಹ್ಮ ವಿಷ್ಣ್ವಾದಿಗಳಿಂದ ನಮಸ್ಕೃತವಾದ, ಬಹಳ ಪವಿತ್ರವಾದ, ಶಿವಕ್ಷೇತ್ರಗಳಲ್ಲಿ ಬಹಳ ಉತ್ತಮವಾದ ಭೂಲೋಕ, ಶಿವಲೋಕವೆಂಬ ಹಾಲಾಸ್ಯಕ್ಷೇತ್ರದಲ್ಲಿ ಇವರೆಲ್ಲರೂ ಒಟ್ಟಾಗಿ ಸೇರಿ, ದ್ರಾವಿಡಭಾಷಾಕವಿಗಳಾಗಿ, ತಮ್ಮ ತಮ್ಮ ಕವಿತ್ವಗಳಿಂದ ಸುಂದರೇಶ್ವರನಿಗೆ ಆಶ್ಚರ್ಯವನ್ನೂ ಆನಂದವನ್ನೂ ಉಂಟುಮಾಡಿ, ಅವನ ಅನುಗ್ರಹವನ್ನು ಹೊಂದುವರು. ಅನೇಕ ಗ್ರಂಥಗಳನ್ನು, ಬರೆದು, ನಿನ್ನ ಅಂಶಸಂಭೂತರಾದ ಕಾರಣ ಕವೀಶ್ವರರಾಗಿ, ಬಹಳಮಟ್ಟಿನ ರಾಜಮರ್ಯಾದೆಯನ್ನೂ ಭೋಗವನ್ನೂ

ವಿಧಾತುರ್ದ್ವಾರದಶಾಂತಸ್ಥೇ ವಿಧಿವಿಷ್ಣ್ವಾದಿವಂದಿತೇ ।
ಸಮಸ್ತಪಾಪತಾಪಾದಿವ್ಯಾಧಿತೂಲಮಹಾನಲೇ ॥ ೧೯ ॥

ಶ್ರೀಹಾಲಾಸ್ಯೇ ಮಹಾಸ್ಥಾನೇ ಸುಂದರೇಶ್ವರಸತ್ಪುರೇ ।
ಸಂಭೂಯ ದ್ರಾವಿಡಾಸ್ಸರ್ವೇ ಕವಿತ್ವಾತಿಶಯೇನ ಚ ॥ ೨೦ ॥

ವಿಸ್ಮಾಪಯಂತಸ್ಸಂತೋಷ್ಯ ಸ್ತುತಿಭಿ ಸ್ಸುಂದರೇಶ್ವರಂ ।
ಲಬ್ಧ್ವಾ ತಸ್ಯಾನುಗ್ರಹಂ ಚ ಭುಕ್ತ್ವಾ ಭೋಗಾನ್ಮಹೀತಲೇ ॥ ೨೧ ॥

ಕೃತ್ವಾ ಪ್ರಬಂಧಾನ್ವಿವಿಧಾ‌ನ್ ರಾಜಪೂಜ್ಯತ್ವಮಾಪ್ಯ ಚ ।
ಸಂತಸ್ತ್ವದಂಗಸಂಭೂತಾ ಸ್ತೇ ದ್ರಾವಿಡಕವೀಶ್ವರಾಃ ॥ ೨೨ ॥

ಮುಕ್ತಾ ಭವಂತು ದೇಹಾಂತೇ ಸುಂದರೇಶಪ್ರಸಾದತಃ ।
ತ್ವಂ ಯಥಾಪೂರ್ವ ಮಸ್ಮಾಭಿಸ್ಸಾರ್ಧಂ ಸರ್ವಸುಖಾನಿ ಚ ॥ ೨೩ ॥

ಅನುಭುಂಕ್ಷ್ವ ನವದ್ಯಾಂಗಿ ವಿಕಸನ್ಮುಖಪಂಕಜೇ ।
ಇತ್ಯಾಜ್ಞಾಪ್ಯ ಸುರಶ್ರೇಷ್ಠ ಸ್ಸುರೇಶಾದಿಸುರಾರ್ಚಿತಃ ॥ ೨೪ ॥

ಭಾರತೀಂ ಭಗವಾನ್ಬ್ರಹ್ಮಾ ಶಕ್ತಿತ್ರಯಸಮನ್ವಿತಃ ।
ಸತ್ಯಲೋಕಮಥ ಪ್ರಾಪ ಲೋಕಾನಾಮುಪರಿ ಸ್ಥಿತಂ ॥ ೨೫ ॥

---

ಅನುಭವಿಸಿ, ಸುಂದರೇಶ್ವರನ ಅನುಗ್ರಹದಿಂದ ಮುಕ್ತರಾಗುವರು. ಅನಂತರದಲ್ಲಿ ಪವಿತ್ರಳಾದ ನೀನು ನನ್ನ ಜೊತೆಯಲ್ಲಿ ಬಹಳ ವಿಧವಾದ ಭೋಗಗಳನ್ನು ಅನುಭವಿಸು" ಎಂದು ಇಂದ್ರಾದಿದೇವಪೂಜ್ಯನಾದ ಬ್ರಹ್ಮನು ಭಾರತೀದೇವಿಗೆ ಪ್ರತಿಶಾಪವನ್ನು ಕೊಟ್ಟನು.

೨೫-೨೮. ಅನಂತರದಲ್ಲಿ ಗಾಯಿತ್ರೀ ಸಾವಿತ್ರೀದೇವಿಯರೊಡನೆ, ಎಲ್ಲಾ ಲೋಕಗಳಿಗಿಂತಲೂ (ಎತ್ತರದಲ್ಲಿ) ಪೂಜ್ಯವಾದ ತನ್ನ ಸತ್ಯಲೋಕಕ್ಕೆ ಹೋದನು. ಈ ಪ್ರಕಾರವಾದ ಬ್ರಹ್ಮನ ಶಾಪದಿಂದ ಭಾರತೀದೇವಿಯ ಅಂಶವನ್ನು ಹೊಂದಿ

ಏವಂ ವಿಧಾತುಶ್ಶಾಪೇನ ಭಾರತ್ಯಂಶಾ ನೃರೂಪಿಣಃ ।
ಜಾಯಂತೇ ಭೂತಲೇ ಚಾಷ್ಟಚತ್ವಾರಿಂಶತ್ಕವೀಶ್ವರಾಃ ॥ ೨೬ ॥

ಸರ್ವೇ ನತ್ಕೀರಕಪಿಲಭರಣಾದ್ಯಾಶ್ಚ ಸಂಘಿನಃ ।
ಗಂಗಾಪ್ರವಾಹವಿಶದವಾಗ್ಜಾಲಾತುಲವೈಭವಾಃ ॥ ೨೭ ॥

ವರವಾಗ್ಭಿರ್ಮಹೀಪಾಲಾನ್ವರ್ಣಯಿತ್ವಾರ್ಥಸಂಚಯಂ ।
ಜಯಂ ಚ ಲಬ್ಧ್ವಾ ಸರ್ವತ್ರ ಸಂಚರಂತಿ ಮುದಾ ಬುಧಾಃ ॥ ೨೮ ॥

ಸರ್ವೇ ಕದಾಚಿತ್ಸಂಭೂಯ ಸಂಘಿನ ಸ್ಸತ್ಕವೀಶ್ವರಾಃ ।
ಸಮಸ್ತಭಾಷಾನಿಪುಣಾ ಸ್ಸರ್ವಶಾಸ್ತ್ರಾರ್ಥಪಾರಗಾಃ ॥ ೨೯ ॥

ಶಿವಾರ್ಚನಪರಾ ನಿತ್ಯಂ ಶಿವಧರ್ಮಪರಾಯಣಾಃ ।
ದಕ್ಷಾ ದ್ರಾವಿಡಭಾಷಾಯಾ ಮತ್ಯಂತಂ ನಿರ್ಮಲಾಶಯಾಃ ॥ ೩೦ ॥

---

ಮನುಷ್ಯರ ಆಕಾರದಿಂದ ಕವೀಶ್ವರರು ಉಂಟಾಗಿರುವರು. ಇವರು ಒಟ್ಟು ನಲವತ್ತೆಂಟು ಜನರು ಇರುವರು. ನತ್ಕೀರ, ಕಪಿಲ, ಭರಣ ಇವರೇ ಮೊದಲಾದವರೆಲ್ಲರೂ ವಿದ್ಯಾಸಂಘಕ್ಕೆ ಸೇರಿದವರು. ಪವಿತ್ರವಾದ ಗಂಗಾಪ್ರವಾಹದಂತೆ ಇರುವ ವಾಕ್ಪಾಟವವುಳ್ಳವರಾಗಿ ಬಹಳ ಮಹಿಮೆಯಿಂದ ಇರುವರು. ಇವರು ಶ್ರೇಷ್ಠವಾದ ತಮ್ಮ ವಾಕ್ಯಗಳಿಂದ ರಾಜರನ್ನು ವರ್ಣಿಸಿ, ಅವರಿಂದ ಹೇರಳವಾದ ದ್ರವ್ಯವನ್ನೂ ಮರ್ಯಾದೆಯನ್ನೂ ಹೊಂದಿ, ಭೂಮಿಯಲ್ಲಿ ಎಲ್ಲಾ ಕಡಯಲ್ಲಿಯೂ ಜಯಶೀಲರಾಗಿ ಸಂತೋಷದಿಂದ ಸಂಚರಿಸಿರುವರು.

೨೯-೩೦. ಈ ಕವೀಶ್ವರರು ಎಲ್ಲಾ ಭಾಷೆಗಳಲ್ಲಿಯೂ ನಿಪುಣರು. ಎಲ್ಲಾ ಶಾಸ್ತ್ರಾರ್ಥಗಳನ್ನೂ ತಿಳಿದವರು. ಯಾವಾಗಲೂ ಶಿವನನ್ನು ಪೂಜಿಸಲು ಆಸಕ್ತಿಯುಳ್ಳವರು. ಶಿವದೀಕ್ಷಾಸಂಬಂಧವಾದ ಧರ್ಮವನ್ನು ಆಚರಿಸುವವರು. ದ್ರಾವಿಡಭಾಷೆಯಲ್ಲಿ ಗ್ರಂಥಗಳನ್ನು ಬರೆಯಲು ನಿಪುಣರಾಗಿರುವರು ಇವರು

ಭೂಲೋಕಶಿವಲೋಕೇಶಂ ಪುರುಹೂತಪ್ರಪೂಜಿತಂ ।
ಭಕ್ತಾಭೀಷ್ಟಪ್ರದಂ ಸದ್ಯಸ್ಸರ್ವಾಪದ್ಭಂಜನಕ್ಷಮಂ ॥ ೩೧ ॥

ಮನೋಜ್ಞಶಫರಾಕ್ಷ್ಯಾ ಚ ಮಹಾದೇವ್ಯಾ ಸಮನ್ವಿತಂ ।
ಜಗತಾಂ ಮೂಲಭೂತಂ ಚ ಶಂಕರಂ ಸುಂದರೇಶ್ವರಂ ॥ ೩೨ ॥

ದ್ರಷ್ಟುಂ ಸಮಾಗತಾಸ್ಸರ್ವೇ ಹಾಲಾಸ್ಯಾಖ್ಯಪುರಂ ಪ್ರತಿ ।
ಹಾಲಾಸ್ಯೇಶವಿಮಾನಂ ತು ತೇಷಾಂ ದಷ್ಟಿಪಥಂ ಗತಂ । ॥ ೩೩ ॥

ಶಾಂತಕುಂಭಮಯಂ ಕುಂಭಂ ವಿಮಾನೋರ್ಧ್ವೇ ವಿರಾಜಿತಂ ।
ದೃಷ್ಟಮಾತ್ರೇಣ ಜಂತೂನಾಮಯತ್ನೇನಾಪವರ್ಗದಂ ॥ ೩೪ ॥

ದೂರತ ಸ್ಸಂಘಿನೋ ದೃಷ್ಟ್ವಾ ಪ್ರಣಿಪತ್ಯಾಥ ಭಕ್ತಿತಃ ।
ಉತ್ಥಾಯ ನಿಶ್ಚಲಾ ತಸ್ಥು ರಾನಂದಾತಿಶಯೇನ ಚ ॥ ೩೫ ॥

---

ಪರಿಶುದ್ಧವಾದ ಮನಸ್ಸುಳ್ಳವರು. ಇವರೆಲ್ಲರೂ ಒಟ್ಟಾಗಿ ಒಂದು ಸಂಘವನ್ನು ಮಾಡಿಕೊಂಡು, ಇಂದ್ರಪೂಜಿತನಾದ, ಭೂಲೋಕ ಶಿವಲೋಕೇಶ್ವರನಾದ, ವಿಪತ್ತನ್ನು ಪರಿಹರಿಸುವುದರಲ್ಲಿ ಶಕ್ತನಾದ, ಮೀನಾಕ್ಷೀ ಸಮೇತನಾದ ಸುಂದರೇಶ್ವರನನ್ನು ದರ್ಶನಮಾಡಲು, ಹಾಲಾಸ್ಯಕ್ಷೇತ್ರಕ್ಕೆ ಬಂದರು.

೩೩-೩೮. ಹಾಲಾಸ್ಯೇಶ್ವರನ ವಿಮಾನದ ಚಿನ್ನದ ಕಲಶವು ದರ್ಶನದಿಂದಲೇ ಮುಕ್ತಿಯನ್ನು ಕೊಡುವ ಮಹಿಮೆಯುಳ್ಳಕಾರಣ ಅದನ್ನು ಇವರು ನೋಡಿದಕೂಡಲೆ, ಭಕ್ತಿಯಿಂದ ನಮಸ್ಕಾರಮಾಡಿ, ಬಹಳ ಸಂತೋಷವುಳ್ಳವರಾದರು. ಷಡ್ಗುಣೈಶ್ವರ್ಯ ಸಂಪನ್ನನಾದ, ಭಕ್ತರನ್ನು ಅನುಗ್ರಹಮಾಡುವುದರಲ್ಲಿ ಆಸಕ್ತನಾದ ಸುಂದರೇಶ್ವರನು ಕವಿಯ ವೇಷವನ್ನು ಧರಿಸಿ, ಅವರ ಎದುರಿಗೆ ಬಂದು ನಿಂತನು. ಅವನು ವಿದ್ವಾಂಸರನ್ನು ದಯೆಯಿಂದ ಕೂಡಿದ ಕಟಾಕ್ಷದಿಂದ ನೋಡಿ, ಪ್ರೌಢವಾದ ಮಾತುಗಳಿಂದ

ಭಗವಾನ್ಸುಂದರಾಧೀಶೋ ಭಕ್ತಾನುಗ್ರಹತತ್ಪರಃ ।
ಕವೀಶ್ವರವಪುರ್ಧೃತ್ವಾ ತೇಷಾಮಾವಿರಭೂತ್ಪರಃ ॥ ೩೬ ॥

ಕಾರುಣ್ಯಾದ್ರ್ರಕಟಾಕ್ಷೇಣ ವಿಲೋಕ್ಯ ವಿದುಷಾಂ ವ್ರಜಂ ।
ಪ್ರಾಹ ಪ್ರಗಲ್ಭವಾಗ್ಜಾಲೈ ರೀಶ್ವರಸ್ಸ ಕವೀಶ್ವರಃ ॥ ೩೭ ॥

ಕೇ ಯೂಯಂ ಕುತ ಆಯಾತಾಃ ಕಾಂಕ್ಷಾ ವಸ್ತುಷು ಕೇಷು ವಃ ।
ಕಾ ವಿದ್ಯಾ ಕಥಯಂತ್ವಾರ್ಯಾಃ ಕಿಮರ್ಥಮಿಹ ಚಾಗತಾಃ ॥ ೩೮ ॥

ಸಂಪೃಷ್ಟಾಸ್ತೇ ಸಮಾಕರ್ಣ್ಯ ಗಂಭೀರಂ ತದ್ವಚಃ ಕ್ರಮಾತ್ ।
ಪ್ರತ್ಯುತ್ತರಂ ದದು ಸ್ಸರ್ವೇ ಪ್ರತ್ಯಕ್ಷಿತಶಿವಾಯ ಚ ॥ ೩೯ ॥

ವಯಂ ವರ್ಣೇಷು ಜಾತಾಶ್ಚ ವಿಧಿವಿಗ್ರಹಜೇಷು ಚ ।
ತಾಮ್ರಪರ್ಣೀನದೀತೀರಾದಾಯಾತಾ ಅತಿಪಾವನಾತ್ ॥ ೪೦ ॥

---

ಅವರೆಲ್ಲರ ಸಂಗಡಲೂ ಮಾತನಾಡಿದನು. "ನೀವು ಯಾರು ? ಎಲ್ಲಿಂದ ಬಂದಿರಿ ? ನಿಮಗೆ ಯಾವ ಪದಾರ್ಥವು ಬೇಕಾಗಿರುವುದು ? ನೀವು ಏನನ್ನು ಕಲಿತಿರುವಿರಿ ? ಇಲ್ಲಿಗೆ ಯಾತಕ್ಕೆ ಬಂದಿರಿ ?" ಎಂದು ಪ್ರಶ್ನೆ ಮಾಡಿದ ಪ್ರತ್ಯಕ್ಷನಾದ ಶಿವನ ಗಂಭೀರವಾದ ಮಾತನ್ನು ಕೇಳಿ, ಅವರೆಲ್ಲರೂ ಉತ್ತರವನ್ನು ಹೇಳಿದರು.

೩೯-೪೪. "ನಾವೆಲ್ಲರೂ ಜ್ಞಾನರೂಪನಾದ ಬ್ರಹ್ಮನ ಆಕಾರವಾದ ಅಕ್ಷರಗಳಿಂದ ಹುಟ್ಟಿದವರು. ಬಹಳ ಪರಿಶುದ್ಧವಾದ ತಾಮ್ರಪರ್ಣೀನದೀತೀರದಿಂದ ಬಂದಿರುವವರು. ನಮಗೆ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಹೊಂದುವುದರಲ್ಲಿ ಅಪೇಕ್ಷೆಯು ಇರುವುದು. ನಾವು ಒಂದು ಘಳಿಗೆಗೆ ಒಂದುನೂರು ಕವನಗಳನ್ನು ಮಾಡಬಲ್ಲವರು, ಹಾಲಾಸ್ಯೇಶ್ವರನನ್ನು ಸೇವಿಸುವುದಕ್ಕಾಗಿ ಇಲ್ಲಿಗೆ ಬಂದಿರುತ್ತೇವೆ.

ಧರ್ಮಾರ್ಥಕಾಮಮೋಕ್ಷೇಷು ಕಾಂಕ್ಷಾಸ್ಮಾಕಂ ಚ ವಿದ್ಯತೇ ।
ಅಸ್ಮಾಕಂ ಕವಿತಾ ವಿದ್ಯಾ ಘಟಿಕಾಶತವಾದಿನೀ ॥ ೪೧ ॥

ಶ್ರೀ ಹಾಲಾಸ್ಯೇಶ್ವರೇಶಸ್ಯ ಸೇವಾರ್ಥಮಿಹ ಚಾಗತಾಃ ।
ಭವದ್ದರ್ಶನಮಾತ್ರೇಣ ಶ್ರೀಹಾಲಾಸ್ಯಪತಿಂ ಶಿವಂ ॥ ೪೨ ॥

ದೃಷ್ಟ್ವಾ ಯಥಾ ಮನಸ್ತುಷ್ಟಿ ಸ್ತಥಾಽಭೂತ್ಸತ್ಯಮೇವ ನಃ ।
ಇತಃ ಪೂರ್ವಂ ಚ ನಾಸ್ಮಾಭಿಸ್ಸೇವಿತಸ್ಸುಂದರಃ ಪ್ರಭುಃ ॥ ೪೩ ॥

ತ್ವದ್ದರ್ಶನೇನ ಸರ್ವಂ ಚ ಭವಿಷ್ಯತ್ಯಸ್ಮದೀಪ್ಸಿತಂ ।
ಅಸ್ಮಾಕಂ ಮಿತ್ರಭೂತಸ್ತ್ವ ಮಸ್ಮಾಸ್ವೇಕೋ ನ ಸಂಶಯಃ ॥ ೪೪ ॥

ತಸ್ಮಾದನುಗ್ರಹಃ ಕಾರ್ಯೋ ಭವತಾಸ್ಮತ್ಸುಬಂಧುನಾ ।
ಸಾಹಾಯ್ಯಂ ಕುರು ಸೇವಾರ್ಥಮಿದಾನೀಂ ಸುಂದರಪ್ರಭೋ ॥ ೪೫ ॥

ಇತ್ಯುಕ್ತ ಸ್ಸಂಘಿಭಿ ಸ್ಸರ್ವೈಸ್ಸ ರ್ವಜ್ಞಸ್ಸ ಕವೀಶ್ವರಃ ।
ಸ್ವಕವಿತ್ವಾಮೃತರಸೈಃ ಪ್ರೀಣಯಿತ್ವಾ ಚ ಸಂಘಿನಃ ॥ ೪೬ ॥

---

ನಿನ್ನನ್ನು ನೋಡಿದ ಮಾತ್ರದಿಂದಲೇ ಹಾಲಾಸ್ಯೇಶ್ವರನನ್ನು ನೋಡಿದಷ್ಟು ಸಂತೋಷವು ನಮಗೆ ಉಂಟಾಗಿರುವುದು. ನಾವು ಇಲ್ಲಿಯ ವರೆಗೂ ಸುಂದರೇಶ್ವರನ ದರ್ಶನವನ್ನು ಮಾಡಿ ಅವನನ್ನು ಸೇವಿಸಿಲ್ಲ. ಈಗ ನಿನ್ನ ದರ್ಶನದಿಂದಲೇ ನಮ್ಮ ಇಷ್ಟವೆಲ್ಲವೂ ಸಿದ್ಧಿಯಾಗುವುದು.

೪೫–೪೮. ನೀನೂ ನಮಗೆ ಆಪ್ತನಾಗಿ ನಮ್ಮಂತೆ ಕವಿಯಾಗಿರಬೇಕೆಂದು ನಮ್ಮ ಇಚ್ಛೆಯು ಇರುವುದು. ನಮ್ಮ ಈ ಪ್ರಕಾರವಾದ ಅಪೇಕ್ಷೆಯನ್ನು ನಡೆಸಿ ನಮಗೆ ಅನುಗ್ರಹವನ್ನು ಮಾಡಬೇಕೆಂದು ನಾವು ಇಚ್ಛೆಮಾಡುತ್ತೇವೆ. ಆದರೆ ಈಗ ಸುಂದರೇಶ್ವರನ ಸೇವೆಗಾಗಿ ನಮಗೆ ಸಹಾಯವನ್ನು ಮಾಡು" ಎಂದು ಕವಿಗಳಾದ ಅವರೆಲ್ಲರೂ ಹೇಳಿದ ಮಾತನ್ನು ಕೇಳಿ, ಕವೀಶ್ವರನಾದ, ಸರ್ವಜ್ಞನಾದ ಸುಂದರೇಶ್ವರನು ತನ್ನ ಸರಸವಾದ ಮಾತುಗಳಿಂದ ಅವರಿಗೆ ಸಂತೋಷಪಡಿಸಿದನು.

ಜಗತಾಂ ಮೂಲಭೂತಂ ಚ ಮೂಲಲಿಂಗಂ ಚಿರಂತನಂ ।
ದೇವಾನಾಂ ಪ್ರಥಮಂ ಚೇತಿ ಶ್ರುತಿವಾಕ್ಯಪರಿಷ್ಟುತಂ ॥ ೪೭ ॥

ದರ್ಶಯಿತ್ವಾದ್ಯ ಧರ್ಮಾದ್ಯಾಃ ಪುರುಷಾರ್ಥಾ ಭವಂತು ವಃ ।
ಇತ್ಯುಕ್ತ್ವಾಂತರ್ದಧೇ ಶಂಭುಃ ಕವೀಶ್ವರವರಾಕೃತಿಃ ॥ ೪೮ ॥

ಸಂಘಿನೋ ವಿಸ್ಮಿತಾಸ್ಸಂತಃ ಸಂತೋಷ್ಯ ಸ್ತವನೈಃ ಶಿವಂ ।
ಕವಿತ್ವಸುಧಯಾ ಮರ್ತ್ಯಾನ್ ಪ್ರೀಣಯಿತ್ವಾ ನಿರಂತರಂ ॥ ೪೯ ॥

ನ್ಯವಸನ್ಮಧುರಾಪುರ್ಯಾಂ ನಕ್ಕೀರಾದ್ಯಾಶ್ಚ ಸಂಘಿನಃ ।
ವಂಶಶೇಖರಪಾಂಡ್ಯೋಽಪಿ ವರವಾಕ್ಸುಕವೀಶ್ವರಃ ॥ ೫೦ ॥

ಲೋಕೇ ಕವಿತ್ವವಿದ್ಯಾಯಾ ಸ್ಸಾರ್ವಭೌಮ ಇತಿ ಶ್ರುತಿಃ ।
ನವಭಿಶ್ಚ ರಸೈಃ ಪೂರ್ಣಂ ಸಂಘಿನಾಂ ಕವಿತಾಮೃತಂ ॥ ೫೧ ॥

---

ಅವನು ಪ್ರಪಂಚಕ್ಕೆಲ್ಲಕ್ಕೂ ಆಧಾರವಾಗಿರುವ ಪುರಾತನವಾಗಿರುವ "ಯೋದೇವಾನಾಂ ಪ್ರಥಮಂ" ಎಂಬ ವೇದವಾಕ್ಯದಿಂದ ಸ್ತುತ್ಯವಾದ ಹಾಲಾಸ್ಯೇಶ್ವರ ಶಿವಲಿಂಗವನ್ನು ಅವರಿಗೆ ದರ್ಶನಮಾಡಿಸಿ, ನಿಮಗೆ ಚತುರ್ವಿಧ ಪುರುಷಾರ್ಥಗಳೂ ಸಿದ್ಧವಾಗಲಿ, ಎಂದು ವರವನ್ನು ಕೊಟ್ಟು ಅದೃಶ್ಯನಾದನು.

೪೯–೫೧. ಆಗ ಆ ಕವಿಗಳೆಲ್ಲರೂ ಶಿವನನ್ನು ಬಹಳ ವಿಧವಾಗಿ ಸ್ಮರಿಸಿದರು. ಮಧುರಾನಗರದಲ್ಲಿದ್ದುಕೊಂಡು ಪ್ರತಿದಿನವೂ ಸುಂದರೇಶ್ವರನ ವಿಷಯವಾಗಿ ಸ್ತುತಿಗಳನ್ನು ಮಾಡಿ, ಸಂತೋಷಪಡಿಸುತ್ತಿದ್ದರು ವಂಶಶೇಖರಪಾಂಡ್ಯರಾಜನು ಬಹಳ ಸರಸವಾಗಿ ಮಾತನಾಡುವ ಉತ್ತಮ ಕವಿಯಾಗಿದ್ದನು. ಲೋಕದಲ್ಲಿ ಅವನನ್ನು ಕವನ ಮಾಡುವುದರಲ್ಲಿ ನಿಪುಣನೆಂದು ಹೇಳುತ್ತಿದ್ದರು. ಅವನು ನಕ್ಕೀರನೇ ಮೊದಲಾದ ಕವಿಗಳು ಮಾಡಿರುವ ನವರಸಪೂರ್ಣವಾದ ಪ್ರಬಂಧವನ್ನು ಕೇಳಿ, ಅವುಗಳ ಚಮತ್ಕಾರಗಳನ್ನು ತಿಳಿದ ಕಾರಣ ಬಹಳವಾಗಿ ದ್ರವ್ಯವನ್ನು ಅವರಿಗೆ ಉಚಿತವಾಗಿ ಕೊಡುತ್ತಿದ್ದನು

ಪೀತ್ವಾ ರಸಜ್ಞಾ ಸ್ತೃಪ್ತಾಸ್ಸನ್ತೇಭ್ಯಶ್ಚಾರ್ಥಾನ್ಸ್ವಹೂನ್ದದೌ ।
ಶಂಭೋಸ್ಸೇವಾನಂತರಂ ಚ ತೇಷಾಂ ಸ್ಥಾತುಂ ಚ ಮಂಟಪಂ ॥ ೫೨ ॥

ಮಧ್ಯಭಾಗೇ ಮಹಾಚಿತ್ರಂ ಕಾರಯಾಮಾಸ ಪಾಂಡ್ಯರಾಟ್ ।
ಉಪವಿಶ್ಯ ಚ ತೇ ತಸ್ಮಿನ್ಸಂಘಿನಃ ಸಂಘಮಂಟಪೇ ॥ ೫೩ ॥

ವಿದ್ಯಾಗೋಷ್ಠ್ಯಾ ವಿಶೇಷಜ್ಞಾ ವಿಹರಂತಿ ನಿರಂತರಂ ।
ಅನ್ಯೇ ಕೇಚಿತ್ಕವಯಃ ಕವಿತ್ವಂ ಸಂಘಿನಾಮಪಿ ॥ ೫೪ ॥

ಪ್ರದೂಷ್ಯಾತ್ಮಕವಿತ್ವಂ ಚ ಸಭಾಯಾಂ ವರ್ಣಯಂತ್ಯಸತ್ ।
ಕುಕವೀನಾಮುದಂತಂ ತಂ ವಿದಿತ್ವಾ ಸುಕವೀಶ್ವರಾಃ ॥ ೫೫ ॥

ಆತ್ಮೀಯವಿದ್ಯಾಧಿಕ್ಯಂ ಚ ವ್ಯಕ್ತೀಕರ್ತುಂ ಸಮುತ್ಸುಕಾಃ ।
ವಾರರಾಜೇ ಸೋಮವಾರೇ ವರದಂ ಸೋಮಸುಂದರಂ ॥ ೫೬ ॥

---

೫೨-೫೫. ವಂಶಶೇಖರಪಾಂಡ್ಯನು ಆ ಕವಿಗಳೆಲ್ಲರೂ ಶಿವನನ್ನು ಸೇವೆ ಮಾಡಿದ ನಂತರ ಒಂದು ಕಡೆಯಲ್ಲಿ ಇರುವುದಕ್ಕಾಗಿ ಆ ದೇವಾಲಯದ ಮಧ್ಯದಲ್ಲಿ ಒಂದು ಸುಂದರವಾದ ಮಂಟಪವನ್ನು ಕಟ್ಟಿಸಿ ಕೊಟ್ಟನು. ಅವರೆಲ್ಲರೂ ಆ ಸಂಘ ಮಂಟಪದಲ್ಲಿ ಕೂತುಕೊಂಡು ತಮ್ಮ ತಮ್ಮ ವಿದ್ಯಾವಿಷಯವಾದ ತಾರತಮ್ಯವನ್ನು ಪರಸ್ಪರವಾಗಿ ಬೋಧಿಸುತ್ತಾ ಯಾವಾಗಲೂ ಅಲ್ಲಿ ವಿಹಾರ ಮಾಡುತ್ತಿದ್ದರು. ಕವಿಗಳಲ್ಲದ ಕೆಲವರು ಈ ಸಂಘದ ಕವಿಗಳು ಮಾಡಿರುವ ಪ್ರಬಂಧಗಳನ್ನು ದೂಷಿಸಿ, ಆ ಸಂಘಮಂಟಪದಲ್ಲಿ ತಮ್ಮ ತಮ್ಮ ಕವಿತ್ವಗಳನ್ನು ವರ್ಣಿಸುತ್ತಿದ್ದಾಗ, ಕವೀಶ್ವರ ರಾದ ಇವರುಗಳು ತಮ್ಮ ಕವಿತ್ವದಲ್ಲಿರುವ ಸರಿಯಾದ ಭಾಗವನ್ನು ಅವರಿಗೆ ತಿಳಿಯ ಪಡಿಸಿ, ಆ ಕವಿಗಳ ತಪ್ಪು ತಿಳುವಳಿಕೆಯನ್ನು ಅಲ್ಲಿ ಸರಿಪಡಿಸುವುದರಲ್ಲಿ ಕುತೂಹಲ ರಾಗಿ ಕಾಲವನ್ನು ಕಳೆಯುತ್ತಿದ್ದರು.

೫೬-೬೧. ವಾರಗಳಲ್ಲಿ ಉತ್ತಮವಾದ ಸೋಮವಾರವು ಬಂದಕೂಡಲೆ ಆ ಕವಿಗಳೆಲ್ಲರೂ ಭಕ್ತರಿಗೆ ವರವನ್ನು ಅನುಗ್ರಹಿಸುವ ಸುಂದರೇಶ್ವರನನ್ನು ಬಹಳ

ಸಂಪ್ರಾಪ್ಯ ತೇಸುಪುಷ್ಪೈಸ್ತ್ರೈಃ ಪೂಜಯಾಮಾಸುರದ್ಭುತೈಃ ।
ಅಥ ಹಾಲಾಸ್ಯನಾಥಂ ತಂ ಅನಂತಾನಂದದಾಯಕಂ ॥ ೫೭ ॥

ಭಕ್ತ್ಯಾತಿಪ್ರವಣಾಸ್ಸಂತಃ ಸಂಘಿನಸ್ತೇ ಯಯಾಚಿರೇ ।
ದೇವದೇವ ಮಹಾದೇವ ಪರಮಾತ್ಮನ್ಪರಾತರ ॥ ೫೮ ॥

ಪರಿಪೂರ್ಣ ಚಿದಾನಂದಮಯ ಸುಂದರನಾಯಕ ।
ಭವತಸ್ಸೇವಿತುಂ ನಿತ್ಯಂ ಶ್ರೀಮಚ್ಚರಣಪಂಕಜಂ ॥ ೫೯ ॥

ಭವಾಮಶ್ಚ ವಯಂ ಸರ್ವೇ ಭವತ್ಪಾರ್ಶ್ವನಿವಾಸಿನಃ ।
ವಿದ್ಯಾವತಾಮಿಹಾಸ್ಮಾಕಂ ವಿದ್ಯಾಧಿಕ್ಯಪ್ರಸಿದ್ಧಯೇ ॥ ೬೦ ॥

ವಿದ್ಯಾಪೀಠಂ ವಿಚಿತ್ರಂ ಚ ವಯಂ ತು ನ ಲಭಾಮಹೇ ।
ದೇವ ನಃ ಫಲಕಾಂ ದಿವ್ಯಾಂ ವಿಶಾಲಾಂ ಸುಖಮಾಸಿತುಂ ॥ ೬೧ ॥

---

ಉತ್ತಮವಾದ ವಾಕ್ಪುಷ್ಪಗಳಿಂದ ಅರ್ಚನೆ ಮಾಡುತ್ತಿದ್ದರು. ಅವರು ಹೀಗೆಯೇ ಕೆಲವು ದಿನಗಳು ಕಳೆದನಂತರ, ಅಪಾರವಾದ ಆನಂದವನ್ನು ಕೊಡುವ ಹಾಲಾಸ್ಯಪ್ರಭುವಾದ ಸೋಮಸುಂದರೇಶ್ವರನನ್ನು ಬಹಳ ಭಕ್ತಿಯಿಂದ ಸೇವಿಸಿ, ಎಲೈ ದೇವದೇವನೆ, ಮಹಾದೇವನೆ, ಪರಾತ್ಪರನಾದ ಪರಮಾತ್ಮನೆ, ಪರಿಪೂರ್ಣ ಚಿನ್ಮೂರ್ತಿಯಾದ ಸುಂದರೇಶ್ವರನೆ, ನಿನ್ನ ಹತ್ತಿರದಲ್ಲಿದ್ದುಕೊಂಡು ನಿನ್ನ ಚರಣ ಸೇವೆಯನ್ನು ಪ್ರತಿದಿನವೂ ನಾವು ಆಚರಿಸಲು ಆಸೆಯಿಂದ ಇರುವೆವು. ನಿನ್ನ ಸಮೀಪದಲ್ಲಿರುವುದರಿಂದ ನಮ್ಮ ವಿದ್ಯೆಯು ದಿನಂಪ್ರತಿಯಲ್ಲಿಯೂ ಹೆಚ್ಚುವುದು. ಇದಕ್ಕಾಗಿ ನಾವೆಲ್ಲರೂ ಒಂದು ವಿದ್ಯಾಪೀಠವನ್ನು ಹೊಂದಿ, ಅದರಲ್ಲಿ ಸುಖವಾಗಿ ಕೂತುಕೊಂಡು, ನಮ್ಮ ವಿದ್ಯೆಯನ್ನು ಹೆಚ್ಚಿಸಿಕೊಳ್ಳುವುದಕ್ಕೆ ಅನುಕೂಲವಾಗುವಂತೆ ನೀನು ಅನುಗ್ರಹವನ್ನು ಮಾಡು. ವಿದ್ಯಾವಂತರಾದ ನಮಗೆ ಒಂದು ವಿದ್ಯಾಪೀಠವನ್ನು ಅನುಗ್ರಹಿಸಿ, ನಮ್ಮ ವಿದ್ಯೆಯು ಪ್ರಕಟವಾಗುವಂತೆ ಅನುಗ್ರಹಿಸು" ಎಂದು ಪ್ರಾರ್ಥಿಸಿದರು.

ದೇಹಿ ಪ್ರಕಾಶಯಂತೀಂ ಚ ವಿದ್ವತ್ತಾಂತಾಮನುತ್ತಮಾಂ ।
ಇತಿ ಸಂಪ್ರಾರ್ಥಿತ ಶ್ಶಂಭು ಸ್ಸಂಘಿಭಿ ಸ್ಸಕಲೈರಪಿ ॥ ೬೨ ॥

ಸಮಸ್ತ ಜಗದಾಧಾರೋ ನಿರಾಧಾರೋ ಮಹೇಶ್ವರಃ ।
ಸರ್ವಜ್ಞಾನಪ್ರದ ಸ್ಸದ್ಯಃ ಸರ್ವಾಜ್ಞಾನವಿಮೋಚನಃ ॥ ೬೩ ॥

ವಿದ್ಯಾಪೀಠಾತ್ಸ್ವಕೀಯಾಚ್ಚ ಪವಿತ್ರಾನ್ಮಾತೃಕಾಮಯಾತ್ ।
ಉತ್ಪಾದ್ಯಪೀಠಮಪರ ಮತಿನಿರ್ಮಲಮದ್ಭುತಂ ॥ ೬೪ ॥

ಅಕಾರಾದಿಕ್ಷಕಾರಾಂತಂ ಮಾತೃಕಾಕ್ಷರಮಂಡಿತಂ ।
ಚತುರಶ್ರಂ ಶರಚ್ಚಂದ್ರಚಂದ್ರಿಕಾಧವಳಪ್ರಭಂ ॥ ೬೫ ॥

ತೇಜೋಮಯಂ ದುರ್ನಿರೀಕ್ಷ್ಯ ಚಂಡಾಂಶೋರಿವ ಮಂಡಲಂ ।
ಮೂಲಲಿಂಗಾತ್ಸ್ವಯಮಪಿ ಪ್ರತ್ಯಕ್ಷೀಕೃತ್ಯ ಶಂಕರಃ ॥ ೬೬ ॥

---

೬೨-೬೩. ಆಗ ಸುಂದರೇಶ್ವರನ ಮನಸ್ಸಿನಲ್ಲಿ ಕವಿಗಳ ಪ್ರಾರ್ಥನೆಯು ಹೊಳೆಯಿತು. ಅವನು ಜ್ಞಾನಪ್ರಪಂಚಕ್ಕಾಧಾರನು. ಆದರೆ ಅವನಿಗೆ ಆಧಾರವು ಬೇರೆ ಇಲ್ಲವು. ಹೀಗೆ ಇರುವುದರಿಂದಲೇ ಅವನಿಗೆ ಮಹೇಶ್ವರನೆಂದು ಪ್ರಸಿದ್ಧಿಯು ಬಂದಿರುವುದು. ಇವನು ಎಲ್ಲರ ಮನಸ್ಸಿನ ಅಜ್ಞಾನವನ್ನೂ ತೊಲಗಿಸುವನು. ಮತ್ತು ಆ ಕ್ಷಣದಲ್ಲಿ ಉತ್ತಮವಾದ ಜ್ಞಾನವನ್ನು ಎಲ್ಲರಿಗೂ ಉಪದೇಶ ಮಾಡುವವನು.

೬೪-೬೭. ಆಗ ವರ್ಣಾತ್ಮಕವಾದ, ಪವಿತ್ರವಾದ, ತಾನು ವಾಸವಾಗಿರುವ, ವಿದ್ಯಾಪೀಠದಿಂದ ಕವಿಗಳಾಗಿ ಇನ್ನೊಂದು ಪೀಠವನ್ನು ನಿರ್ಮಿಸಿದನು. ಅದಕ್ಕೂ ವಿದ್ಯಾಪೀಠವೆಂದು ಹೆಸರು. ಅದು ಬಹಳ ಪವಿತ್ರವಾದುದು. ಬಹಳ ಆಶ್ಚರ್ಯಕರವಾದದ್ದು. ಅಕಾರ ಮೊದಲುಗೊಂಡು ಕ್ಷಕಾರವೂ ಪೂರ್ತಿಯಾಗಿರುವ ಅಕ್ಷರಗಳ ರೂಪದಿಂದ ಆ ಪೀಠವು ಪ್ರಕಾಶಿಸುತ್ತಿತ್ತು. ಆ ಪೀಠವು ಚತುರಶ್ರಾಕಾರವಾಗಿ (ಚಚ್ಚೌಕಾಗಿವಾಗಿ) ಇತ್ತು. ಶರತ್ಕಾಲದ ಚಂದ್ರನ ಬೆಳದಿಂಗಳಿನಂತೆ ಶುಭ್ರವಾದ ಕಾಂತಿಯುಳ್ಳದಾಗಿತ್ತು. ಆದರೆ ಸೂರ್ಯಮಂಡಲದಂತೆ ತೇಜಶ್ಶಾಲಿಯಾಗಿ

ನಿರ್ಗತ್ಯ ಗರ್ಭಭವನಾತ್ಕವಿವೇಷಧರೋ ಹರಃ ।
ಇಹಾಸ್ಥೇತಿ ಪ್ರೋಚ್ಯ ತೇಭ್ಯಃ ಪ್ರದದೌ ಪೀಠಮುತ್ತಮಂ ॥ ೬೭ ॥

ತೇ ತ್ವಾದಾಯಾರತ್ನಿಮಾತ್ರಫಲಕಾಂ ಮಾತೃಕಾಮಯೀಂ ।
ಆನಂದಸಾಗರೇ ಮಗ್ನಾ ಅಭವನ್ಕವಿಪುಂಗವಾಃ ॥ ೬೮ ॥

ವಿದ್ಯಾಪೀಠಮಿತಿ ಪ್ರಾಹುಸ್ತತ್ಪೀಠಂ ಮುನಯೋಽಖಿಲಾಃ ।
ಕೇಚಿದ್ವ್ಯಾಖ್ಯಾಪೀಠಮಿತಿ ಜ್ಞಾನಪೀಠ ಮಿತೀತರೇ ॥ ೬೯ ॥

ಸರಸ್ವತೀಪೀಠಮಿತಿ ಮಾತೃಕಾಪೀಠಮಿತ್ಯಪಿ ।
ಸಾರ್ಥೈಶ್ಚ ನಾಮಭಿಶ್ಚಾನ್ಯೈಃ ವರ್ಣಯಂತಿ ಕವೀಶ್ವರಾಃ ॥ ೭೦ ॥

ಸರ್ವೈಸ್ತತ್ಸಂಘಕವಿಭಿಃ ಸಂಘಪೀಠಮಿತೀರಿತಂ ।
ಪ್ರಥಿತಂ ಭುವನೇ ಪೀಠಂ ತತ್ಸಂಘಫಲಕೇತಿ ಚ ॥ ೭೧ ॥

---

ನೋಡಲಸಾಧ್ಯವಾಗಿತ್ತು. ಕವಿಗಳಿಗೆ ಅವರ ಇಷ್ಟಪ್ರಕಾರದಂತೆ ಈ ಪೀಠವನ್ನು ಅನುಗ್ರಹಿಸುವುದಕ್ಕಾಗಿ ಸುಂದರೇಶ್ವರನು ತನ್ನ ಮೂಲಲಿಂಗದಿಂದ ಕವಿಯ ಆಕಾರವನ್ನು ಧರಿಸಿ ಪ್ರತ್ಯಕ್ಷವಾಗಿ ನಿಂತನು. ಅವನು ಆ ಪೀಠವನ್ನು ಹಿಡಿದುಕೊಂಡು ತನ್ನ ವಾಸಸ್ಥಾನವಾದ ಗರ್ಭಗೃಹದಿಂದ ಹೊರಕ್ಕೆ ಬಂದು ಕವಿಗಳನ್ನು ನೋಡಿ, "ನೀವೆಲ್ಲರೂ ಇದರ ಮೇಲೆ ಕುಳಿತುಕೊಳ್ಳಿರಿ" ಎಂದು ಹೇಳಿ ಅವರಿಗೆ ಆ ಪೀಠವನ್ನು ಕೊಟ್ಟನು.

೬೭-೭೩. ಅವರು ಮಾತೃಕಾಮಯವಾದ ಒಂದು ಮೊಳ ಮಾತ್ರ ಚೌಕವಾಗಿರುವ ಆ ವಿದ್ಯಾಪೀಠವನ್ನು ಸುಂದರೇಶ್ವರನಿಂದ ತೆಗೆದುಕೊಂಡು ಸಂತೋಷವುಳ್ಳವರಾದರು. ಋಷಿಗಳೆಲ್ಲರೂ ಅದನ್ನು ವಿದ್ಯಾಪೀಠವೆಂದು ಕರೆಯುವರು. ಕೆಲವರು ವ್ಯಾಖ್ಯಾಪೀಠವೆಂತಲೂ, ಇನ್ನು ಕೆಲವರು ಜ್ಞಾನಪೀಠವೆಂತಲೂ, ಸರಸ್ವತೀ ಪೀಠ, ಮಾತೃಕಾಪೀಠ ಸಾರ್ಥಕವಾದಎಂಬ ಹೆಸರುಗಳಿಂದ ಆ ಪೀಠವನ್ನು ಕರೆಯುತ್ತಿದ್ದರು. ಆದರೆ ಸಂಘಫಲಕ, ಸಂಘಪೀಠವೆಂದು ಈ ಕವಿಗಳೆಲ್ಲರೂ ಆ ಪೀಠಕ್ಕೆ

**ತಾಂ ಸಂಘಫಲಕಾಂ ಸರ್ವೇ ನಕ್ಕೀರಾದ್ಯಾಃ ಕವೀಶ್ವರಾಃ ।**
**ಸಂಘಮಂಟಪಮಧ್ಯೇ ತು ಶುಭ್ರಾಂಬರಸಮಾಸ್ತೃತೇ ॥ ೭೨ ॥**

**ನಿಧಾಯ ಚಕ್ರುಃ ಪೂಜಾಂ ಚ ಗಂಧಾದ್ಯೈರ್ಮಾತೃಕಾಕ್ಷರೈಃ ।**
**ಪ್ರಥಮಂ ಫಲಕಾಯಾಂ ಚ ನಕ್ಕೀರಸ್ಸಮುಪಾವಿಶತ್ ॥ ೭೩ ॥**

**ಸ್ಯಾರತ್ನಿಮಾತ್ರಾ ಫಲಕಾ ವೃದ್ಧಿಂ ಪ್ರಾಪ್ತೇಶ್ವರಾಜ್ಞಯಾ ।**
**ತಾ ಮಾರುರೋಹ ಕಪಿಲ ಸ್ಸರ್ವಜ್ಞ ಸ್ಸತ್ಕವೀಶ್ವರಃ ॥ ೭೪ ॥**

**ತತಸ್ಸಾ ಪೂರ್ವವದ್ವೃದ್ಧಿಂ ಸಂಪ್ರಾಪ್ನೋತಿ ಕ್ಷಣೇನ ಚ ।**
**ಭರಣೋsಪಿ ಕವಿಶ್ರೇಷ್ಠ ಸ್ತಾಮಾರುಹ್ಯಾಧಿಕಂ ಬಭೌ ॥ ೭೫ ॥**

**ಪುನಶ್ಚ ಸಂಘಫಲಕಾ ಪ್ರವೃದ್ಧಾ ಶಂಭುವೈಭವಾತ್ ।**
**ಇತರೇಭ್ಯಶ್ಚ ಸಂಘಿಭ್ಯ ಸ್ಸಾವಕಾಶಂ ದದೌ ಕ್ರಮಾತ್ ॥ ೭೬ ॥**

**ಏವಮೀಶಪ್ರಸಾದೇನ ವಿದ್ಯಾಪೀಠೇ ಸುಖಂ ಸ್ಥಿತಾಃ ।**
**ವಿದ್ಯಾಗೋಷ್ಠೀಂ ಚ ವಿವಿಧಾಂ ಚಕ್ರಿರೇ ಸಂಘಿನಸ್ತದಾ ॥ ೭೭ ॥**

---

ಹೆಸರನ್ನು ಇರಿಸಿ, ಪ್ರಸಿದ್ಧಪಡಿಸಿದರು. ನಕ್ಕೀರನೇ ಮೊದಲಾದ ಕವೀಶ್ವರರೆಲ್ಲರೂ ರಾಜನು ಕಟ್ಟಿಸಿದ್ದ ಸಂಘಮಂಟಪದ ಮಧ್ಯದಲ್ಲಿ ಶುಭ್ರವಾದ ವಸ್ತ್ರದಮೇಲೆ ಆ ಪೀಠವನ್ನು ಇರಿಸಿ, ಮಾತೃಕಾಕ್ಷರಗಳಿಂದಲೂ, ಗಂಧಾದಿ ದ್ರವ್ಯಗಳಿಂದಲೂ ಪೂಜಿಸಿದರು.ಅನಂತರದಲ್ಲಿ ಮೊದಲು ನಕ್ಕೀರನು ಆ ಪೀಠವನ್ನು ಏರಿದನು.

೭೪-೭೭. ಆಗ ಆ ಪೀಠವು ಈಶ್ವರನ ಆಜ್ಞೆಯಿಂದ ವೃದ್ಧಿಯನ್ನು ಹೊಂದಿತು. ಅನಂತರ ಕವೀಶ್ವರನಾದ ಕಪಿಲನು ಆ ಪೀಠವನ್ನು ಏರಿಕೊಂಡನು. ಆ ಪೀಠವು ಆ ಕ್ಷಣದಲ್ಲಿ ವೃದ್ಧಿಯನ್ನು ಹೊಂದಿತು. ಭರಣನೆಂಬ ಕವಿಶ್ರೇಷ್ಠನು ಆ ಪೀಠವನ್ನು ಏರಿದನು ಒಂದುಮೊಳದಂತೆ ವೃದ್ಧಿಯನ್ನುಅದು ಹೊಂದುತ್ತಾ ಆ ಸಂಘದ ಕವಿಗಳೆಲ್ಲರಿಗೂ ಕುಳಿತುಕೊಳ್ಳಲು ಅವಕಾಶವನ್ನು ಕೊಟ್ಟಿತು. ಈಶ್ವರನ ಅನುಗ್ರಹದಿಂದ ವಿದ್ಯಾಪೀಠದಲ್ಲಿ ಕೂತುಕೊಂಡು ಸುಖದಿಂದ ಇರುವ ಸಂಘದ ಕವೀಶ್ವರರು ವಿದ್ಯಾಗೋಷ್ಠಿಯನ್ನು ಮಾಡುತ್ತಿದ್ದರು.

ಫಲಕಾಮೀಶದತ್ತಾಂ ತಾಮುಸ್ತುವನ್ಸಕಲಾ ಜನಾಃ ।
ವಿಲಿಖ್ಯ ಸಂಘಾಕವಯೋ ವಿರಚಯ್ಯ ಪ್ರಬಂಧಕಾನ್ ॥ ೭೮ ॥

ಸಂಘಮಂಟಪಮಧ್ಯೇತು ಕ್ಷಿಪ್ತ್ವಾ ಕ್ಷಿಪ್ತ್ವಾನುವಾಸರಂ ।
ವ್ರಜಂತಿ ಕಾಲತಸ್ತೇ ತು ಪ್ರಬಂಧಾ ಬಹುಲಾ ಅಪಿ ॥ ೭೯ ॥

ಸಂಕೀರ್ಣಾ ಅಭವರ್ನ ಸಂಘಕವಿಭಿಃ ಕೃತಿಭಿಃ ಕೃತಾಃ ।
ಏಕದಾ ವಿದುಷಾಂ ತೇಷಾಂ ವಿವಾದೋಽಭೂತ್ಪರಸ್ಪರಂ ॥ ೮೦ ॥

ಪ್ರಬಂಧೋ ಮಾಮಕೋ ರಮ್ಯಃ ಪ್ರಬಂಧಾತ್ತಾವಕಾ ದಪಿ ।
ಅಹಂ ಕೃತೀ ತ್ವಂ ತು ಹೇಯ ಇತಿವಕ್ತ್ರೃತ್ವಗರ್ವಿಣಃ ॥ ೮೧ ॥

ಸಮವೇತಾ ವಯಂ ಸರ್ವೇ ನಿರೂಪ್ಯಾಸ್ಮತ್ಪ್ರಬಂಧಕಾನ್ ।
ತಾರತಮ್ಯಂ ಪರಿಜ್ಞಾಯ ಗೃಹೀತವ್ಯಾಶ್ಚ ರಮ್ಯಕಾಃ ॥ ೮೨ ॥

---

೭೮-೮೧. ಸುಂದರೇಶ್ವರನು ಅನುಗ್ರಹಿಸಿದ ಸಂಘಫಲಕವನ್ನು ಜನರೆಲ್ಲರೂ ಹೊಗಳುತ್ತಿದ್ದರು. ಸಂಘದ ಕವಿಗಳು ಗ್ರಂಥಗಳನ್ನು ಬರೆದು ಪ್ರತಿದಿನವೂ ಸಂಘ ಮಂಟಪದ ಮಧ್ಯದಲ್ಲಿ ರಾಶಿಯಾಗಿ ಇರಿಸುತ್ತಿದ್ದರು. ಇವರು ಬರೆದ ಗ್ರಂಥಗಳೂ ಬಹಳವಾಗಿ, ಅನೇಕ ವಿಧವಾದ ಶಾಸ್ತ್ರಗಳಿಗೆ ಸಂಬಂಧಪಟ್ಟವುಗಳಾಗಿ ಇದ್ದವು. ಒಂದು ಕಾಲದಲ್ಲಿ ಆ ಕವಿಗಳಿಗೆ ಪರಸ್ಪರವಾಗಿ ನನ್ನ ಗ್ರಂಥವು ರಮ್ಯವಾಗಿರುವುದು. ನಿನ್ನ ಗ್ರಂಥವು ನನ್ನ ಗ್ರಂಥಕ್ಕಿಂತಲೂ ಕಡಿಮೆಯಾಗಿರುವುದು. ನಿನಗಿಂತಲೂ ನಾನು ಬುದ್ಧಿವಂತನು, ಎಂದು ವಿವಾದವು ಉಂಟಾಯಿತು. ಅವರು ಅಹಂಕಾರದಿಂದ ಹೀಗೆ ಹೇಳುತ್ತಾ ಎಲ್ಲರೂ ಒಟ್ಟಾಗಿ ಸೇರಿದರು.

೮೨-೮೫. ಆಗ ಅವರೆಲ್ಲರೂ ನಮ್ಮ ಗ್ರಂಥಗಳನ್ನು ಒಂದು ಕಡೆಯಲ್ಲಿ ಸೇರಿಸಿ, ಅವುಗಳಲ್ಲಿ ಉತ್ತಮ, ಮಧ್ಯಮ, ನೀಚವೆಂಬ ಪ್ರಕಾರವನ್ನು ತಿಳಿದುಕೊಂಡು, ಉತ್ತಮಗ್ರಂಥಗಳನ್ನು ಆರಿಸಿಕೊಂಡು, ಉಳಿದ ಗ್ರಂಥಗಳನ್ನು ನಾಶಮಾಡೋಣ ವೆಂದು ಒಂದು ನಿರ್ಬಂಧವನ್ನು ಮಾಡಿಕೊಂಡರು. ಎಲ್ಲರೂ ಅಹಂಕಾರದಿಂದಲೂ,

**ಇತ್ಯರಮ್ಯಾಃ ಪರಿತ್ಯಾಜ್ಯಾಸ್ಸಮಯಂ ಚಕ್ರಿರೇ ಬುಧಾಃ ।**
**ತ್ವರಯಾ ಪರಯಾ ಯುಕ್ತಾಸ್ಸರ್ವೇ ಸಂಘಕವೀಶ್ವರಾಃ ॥ ೮೩ ॥**

**ಶರೀರಾಹಂತಯಾ ಗ್ರಸ್ತಚೇತಸೋ ಮದನೋಹಿತಾಃ ।**
**ಸಂಘಮಂಟಪಮಾಸಾದ್ಯ ಪಶ್ಯಂತಿಸ್ಮ ಪ್ರಬಂಧಕಾನ್ ॥ ೮೪ ॥**

**ಸರ್ವಾನ್ಪ್ರಬಂಧಾನ್ಸಂಕೀರ್ಣಾನ್ ಅಧರೋತ್ತರಪಾರ್ಶ್ವಗಾನ್ ।**
**ದೃಷ್ಟ್ವಾ ವಿಷಣ್ಣಾಸ್ತೇ ಸರ್ವೇಮ್ಲಾನವಕ್ತ್ರಾಸ್ಸಮಾಸತಃ ॥ ೮೫ ॥**

**ಹಕಾರರೂಪೀ ಹಾಲಾಸ್ಯನಾಯಕಃ ಕರುಣಾನಿಧಿಃ ।**
**ಅನರ್ಘ್ಯರತ್ನಕನಕಕ್ಲೃಪ್ತಾಖಿಲವಿಭೂಷಣಃ ॥ ೮೬ ॥**

**ಅತಿಶುಭ್ರಾಂಬರೋಷ್ಣೀಷೋತ್ತರೀಯೈಸ್ಸಮಲಂಕೃತಃ ।**
**ಗಾತ್ರಂ ಕುಂಕುಮಪಂಕೇನ ಕುರ್ವನ್ಬಾಲಾರುಣಪ್ರಭಂ ॥ ೮೭ ॥**

---

ತ್ವರೆಯಿಂದಲೂ ಕೂಡಿದ ಮನಸ್ಸುಳ್ಳವರಾಗಿ ಸಂಘಮಂಟಪದ ಮಧ್ಯಕ್ಕೆ ಬಂದು ಗ್ರಂಥಗಳನ್ನು ವಿಮರ್ಶೆಮಾಡುತ್ತಿದ್ದರು. ಅಲ್ಲಿ ಅವರ ಗ್ರಂಥಗಳೆಲ್ಲವೂ ಒಂದಕ್ಕೊಂದು ಬೆರೆದುಕೊಂಡು ಉಚ್ಚ, ನೀಚ ಭಾವಗಳಿಗೆ ಸಂಬಂಧಪಟ್ಟಿದ್ದವು. (ಮೇಲುಜಾತಿಯ ಗ್ರಂಥವು ಕೀಳುಭಾವವನ್ನು ಹೊಂದಿತು. ಕೀಳುಜಾತಿಯ ಗ್ರಂಥವು ಉತ್ತಮವಾಯಿತು) ಇದರಿಂದ ಅವರು ಖಿನ್ನಮನಸ್ಕರಾಗಿ ಬಾಡಿದ ಮುಖವುಳ್ಳವರಾಗಿ ಸುಮ್ಮನಿದ್ದರು.

೮೬-೯೦. ಆಗ ಹಕಾರರೂಪದಿಂದ ಇರುವ ದಯಾಶಾಲಿಯಾದ ಹಾಲಾಸ್ಯೇಶ್ವರನು, ಬಹಳ ಬೆಲೆಬಾಳುವ ರತ್ನಖಚಿತವಾದ ಆಭರಣಗಳನ್ನು ಹಾಕಿಕೊಂಡನು. ಶುಭ್ರವಾದ ವಸ್ತ್ರ, ಶಿರೋಭೂಷಣ (ರುಮಾಲು) ಗಳನ್ನು ಧರಿಸಿದನು, ಕೆಂಪಿನ ಗಂಧವನ್ನು ಧರಿಸಿ, ಎಳೆಯ ಸೂರ್ಯನ ಕಿರಣದಂತೆ ಹೊಳೆಯುತ್ತಾ, ಇರುವ ಕವಿಯ ವೇಷವನ್ನು ಧರಿಸಿದನು. ತನ್ನ ಕವಿತ್ವದಿಂದ ಎಲ್ಲರನ್ನೂ ಬೆರಗುಮಾಡುತ್ತಾ, ಸಂಘಸಭಾಮಂಟಪಕ್ಕೆ ಬಂದನು, ಭಕ್ತವತ್ಸಲನಾದ ಅವನು ಎಲ್ಲರನ್ನೂ ಕೃಪಾದೃಷ್ಟಿ

ಕವಿವೇಷಧರೋ ಭೂತ್ವಾ ಕವಿತ್ವಾತಿಶಯೇನ ಚ ।
ವಿಸ್ಮಾಪಯನ್ಕವೀನ್ಸರ್ವಾನ್ ಪ್ರಾದುರಾಸೀತ್ಸಭಾಂತರೇ ॥ ೮೮ ॥

ವಿಲೋಕ್ಯ ತಾನ್ಕೃಪಾದೃಷ್ಟ್ಯಾ ಭಗವಾನ್ಭಕ್ತವತ್ಸಲಃ ।
ಪ್ರಾಹ ಪ್ರಗಲ್ಭವಾಗ್ಜಾಲೈರ್ಮಧುರೈರ್ಮಧುರಾಧಿಪಃ ॥ ೮೯ ॥

ಕಿಂ ಯೂಯಂ ಮ್ಲಾನವದನಾ ಬ್ರೂತ ಖೇದಂ ಮಮಾದ್ಯ ವಃ ।
ತತ್ಸರ್ವಂ ವ್ಯಪನೇಷ್ಯಾಮೀತ್ಯುಕ್ತೇ ತಸ್ಮಿನ್ ತಮಬ್ರುವನ್ ॥ ೯೦ ॥

ಕವೀಶ್ವರ ಮಹಾಪ್ರಾಜ್ಞ ಲಕ್ಷ್ಯಲಕ್ಷಣವಿತ್ತಮ ।
ಅಸ್ಮಾಕಂ ಮಿತ್ರಭೂತಸ್ತ್ವಂ ನಾಯಕೋಽಪಿ ತ್ವಮೇವ ಹಿ ॥ ೯೧ ॥

ಅಸ್ಮತ್ಕೃತಾನ್ಪ್ರಬಂಧಾಂಶ್ಚ ಸಂಕೀರ್ಣಾನಧರೋತ್ತರಾನ್ ।
ಪೃಥಕ್ಪೃಥಕ್ಸಮಾದಾಯ ಸಂಧಾಯಾದ್ಯಾರ್ಪಯಾಶು ನಃ ॥ ೯೨ ॥

---

ಯಿಂದ ನೋಡಿ, ಮೃಧುವಾದ ಮತ್ತು ಪ್ರೌಢವಾದ ಮಾತುಗಳನ್ನಾಡುತ್ತಾ "ನೀವೆಲ್ಲರೂ ಯಾತಕ್ಕಾಗಿ ಬಾಡಿದ ಮುಖವುಳ್ಳವರಾಗಿ ಇರುವಿರಿ, ನಿಮ್ಮ ಮನಸ್ಸಿನ ಖೇದಕಾರಣವನ್ನು ನನಗೆ ತಿಳಿಸಿರಿ, ಅದೆಲ್ಲವನ್ನೂ ನಾನು ಹೋಗಲಾಡಿಸುವೆನು" ಎಂದು ಕವೀಶ್ವರರನ್ನು ಪ್ರಶ್ನೆಮಾಡಿದನು.

೯೧–೯೩. ಆಗ ಅವರೆಲ್ಲರೂ "ನೀನು ಕವೀಶ್ವರನಾಗಿರುತ್ತೀಯೆ. ಬಹಳ ತಿಳುವಳಿಕೆಯುಳ್ಳವನಾಗಿರುವೆ ಗ್ರಂಥಗಳ ಮತ್ತು ಕವಿತ್ವದ ಲಕ್ಷ್ಯ (ಉದಾಹರಣೆ) ಲಕ್ಷಣ (ಇರುವ ಕ್ರಮ) ಇವುಗಳನ್ನು ಚೆನ್ನಾಗಿ ತಿಳಿದಿರುತ್ತೀಯೆ. ನಮಗೆಲ್ಲರಿಗೂ ಆಪ್ತರಾಗಿದ್ದುಕೊಂಡು ನೀನು ನಮ್ಮಲ್ಲಿ ಮುಖ್ಯನಾಗಿ ಇರುವದನ್ನು ನಾವು ಸಮ್ಮತಿಸಿರುವೆವು. ನಾವು ಬರೆದಿರುವ ಗ್ರಂಥಗಳು ಅನೇಕ ವಿಷಯಗಳನ್ನೊಳಗೊಂಡಿರುವುವು. ಅವುಗಳಲ್ಲಿ ಕೆಲವು ಉತ್ತಮವಾಗಿರುವುವು. ಕೆಲವು ಕಡಿಮೆಯ ಗುಣವುಳ್ಳದ್ದಾಗಿರುವುವು. ಅವೆಲ್ಲವನ್ನೂ ನೀನು ಬೇರೆಬೇರೆಯಾಗಿ ವಿಮರ್ಶೆಮಾಡಿ

ಅಷ್ಟಚತ್ವಾರಿಂಶದೇವ ಭವಾಮಸ್ಸಂಖ್ಯಯಾ ವಯಂ ।
ಅಸ್ಮಾಸ್ವೇಕೋ ನಾಯಕಶ್ಚ ಭವಿಷ್ಯತಿ ಭವಾನಪಿ ॥ ೯೩ ॥

ಇತಿ ಶ್ರುತ್ವಾ ವಚಸ್ತೇಷಾಮೀಶ್ವರ ಸ್ಸತ್ಕವೀಶ್ವರಃ ।
ತಥಾ ಕರಿಷ್ಯ ಇತ್ಯುಕ್ತ್ವಾ ತಾನ್ಪ್ರಬಂಧಾನ್ಪೃಥಕ್ಪೃಥಕ್ ॥ ೯೪ ॥

ಪ್ರಗೃಹ್ಯ ಪ್ರದದೌ ತೇಭ್ಯಸ್ಸಂಘಿಭ್ಯಸ್ಸುಂದರೇಶ್ವರಃ ।
ಶಂಭೋಃ ಕಿಮೇತದಾಶ್ಚರ್ಯಂ ಸರ್ವಸಂಘಟ್ಟಕಸ್ಯ ಹಿ ॥ ೯೫ ॥

ತೇ ತಸ್ಯ ಪಾಟವಂ ದೃಷ್ಟ್ವಾ ಸಂಘುಸ್ಥಾಸ್ಸತ್ಕವೀಶ್ವರಾಃ ।
ಸುಪ್ರೀತಾ ವಿಸ್ಮಿತಾಸ್ಸಂತಃ ಪುನಃ ಪ್ರಾಹುಸ್ತಮೀಶ್ವರಂ ॥ ೯೬ ॥

ತ್ವಂ ಸಂಘಫಲಕಾಯಾಂ ಚ ಸಹಾಸ್ಮಾಭಿಃ ಕವೀಶ್ವರಃ ।
ಉಪವಿಶ್ಯಾಸ್ಮದೀಯಾಂಶ್ಚ ಪ್ರಬಂಧಾನವಲೋಕಯ ॥ ೯೭ ॥

---

ನೋಡು. ಮತ್ತು ನಮ್ಮ ಮನಸ್ಸಿಗೆ ಸಮಾಧಾನವನ್ನು ಹೇಳಿ, ಆ ಗ್ರಂಥವನ್ನು ನಮಗೆ ಕೊಡು  ನಾವೆಲ್ಲರೂ ಒಟ್ಟು ಸೇರಿ ನಲವತ್ತೆಂಟು ಜನರಾಗಿ ಇರತಕ್ಕದ್ದು ಅವರಲ್ಲಿ ನೀನು ಮುಖ್ಯನಾಗಿರಬೇಕು" ಎಂದು ಹೇಳಿದರು.

೯೪-೯೭. ಈಶ್ವರನು ಅವರ ಮಾತನ್ನು ಕೇಳಿ, "ಹಾಗೆಯೇ ಮಾಡುತ್ತೇನೆ" ಎಂದು ಹೇಳಿದನು. ಆ ಗ್ರಂಥಗಳೆಲ್ಲವನ್ನೂ ಬೇರೆಬೇರೆಯಾಗಿ ತೆಗೆದುಕೊಂಡು ವಿಮರ್ಶೆಮಾಡಿ ಆ ಕವಿಗಳಿಗೆ ಕೊಟ್ಟನು. ಎಲ್ಲವನ್ನೂ ಸೇರಿಸಿ ಹಂಗಡಿಸುವ ಶಿವನಿಗೆ ಈ ಕಾರ್ಯವು ಆಶ್ಚರ್ಯಕರವಲ್ಲವು. ಅವರು ಅವನು ಗ್ರಂಥವನ್ನು ವಿಮರ್ಶೆ ಮಾಡುವ ಪಟುತ್ವವನ್ನು ನೋಡಿ, ಬಹಳ ಸಂತೋಷವೂ ಆಶ್ಚರ್ಯವೂ ಉಳ್ಳವರಾದರು. ಅನಂತರದಲ್ಲಿ ಆ ಕವಿಗಳು ಎಲ್ಲರೂ ಸೇರಿ "ನೀನು ಕವೀಶ್ವರನಾಗಿರುತ್ತೀಯೆ ಆದ್ದರಿಂದ ಸಂಘಫಲಕದಲ್ಲಿ ಕೂತುಕೊಂಡು ನಮ್ಮ ಗ್ರಂಥಗಳನ್ನು ವಿಮರ್ಶೆಮಾಡು." ಎಂದು ಬೇಡಿಕೊಂಡರು.

ಏವಂ ಸಂಪ್ರಾರ್ಥಿತಸ್ತೈಸ್ತು ಕವಿವೇಷಧರೋ ಹರಃ
ಫಲಕಾಂ ತಾಮಾರುರೋಹ ಮಹತೀಂ ಮಾತೃಕಾಮಯೀಂ ॥ ೯೮ ॥

ಬಭೌ ತತ್ಫಲಕಾಮಧ್ಯೇ ನಿವಸನ್ಕವಿರೀಶ್ವರಃ
ಜ್ಯೋತಿರ್ಮಂಡಲಮಧ್ಯಸ್ಥಃ ಪೂರ್ಣಚಂದ್ರ ಇವಾಮಲಃ ॥ ೯೯ ॥

ಸಂವೃತಸ್ಸಂಘಕವಿಭಿಃ ಸರ್ವಾವರಣದೈವತೈಃ ।
ದಕ್ಷಿಣಾಮೂರ್ತಿರಿವ ಚ ರಾಜತೇ ಸುಂದರೇಶ್ವರಃ ॥ ೧೦೦ ॥

ಸಂಘಿನಾಂ ಹೃದ್ಗತಾನ್ಯಾಶು ಸಂಹೃತ್ಯ ಚ ತಮಾಂಸಿ ಚ ।
ವಿಕಾಸಯತಿ ತೇಷಾಂ ಚ ಹೃತ್ಪದ್ಮಾನೀವಭಾಸ್ಕರಃ ॥ ೧೦೧ ॥

ತಾರಜಾತೈಃ ಪರಿವೃತಃ ಪರಿಪೂರ್ಣಃ ಶಶೀ ಯಥಾ ।
ಸಂಘಿಭಿಶ್ಚಾವೃತಃ ಸರ್ವೈಸ್ತಥಾ ಭಾತಿ ಕವೀಶ್ವರಃ ॥ ೧೦೨ ॥

---

೯೮-೧೦೨. ಕವಿಯ ವೇಷವನ್ನು ಧರಿಸಿರುವ ಸುಂದರೇಶ್ವರನು ಆ ಕವಿಗಳ ಮಾತನ್ನು ಕೇಳಿ, ಮಾತೃಕಾಮಯವಾದ ಆ ಪೀಠವನ್ನು ಆರೋಹಣೆಮಾಡಿದನು. ಕವಿಗಳ ಮಧ್ಯದಲ್ಲಿ ಇರುವ ಕವಿಯಾದ ಪರಮೇಶ್ವರನು (ಜ್ಯೋತಿರ್ಮಂಡಲದ ಮಧ್ಯದಲ್ಲಿ) ನಕ್ಷತ್ರಮಂಡಲದ ಮಧ್ಯದಲ್ಲಿ ಹೊಳೆಯುತ್ತಿರುವ ಪೂರ್ಣಚಂದ್ರನಂತೆ ಪ್ರಕಾಶಿಸುತ್ತಿದ್ದನು ಮತ್ತು ಸಂಘಕವಿಗಳಿಂದ ಸುತ್ತುವರಿದಿರುವ ಕವೀಶ್ವರನಾದ ಸುಂದರೇಶ್ವರನು ಆವರಣ ದೇವತೆಗಳಿಂದ ಸುತ್ತುವರಿದಿರುವ ದಕ್ಷಿಣಾಮೂರ್ತಿಯಂತೆ ಪ್ರಕಾಶಿಸುತ್ತಿದ್ದನು. ಆಗ ಸುಂದರೇಶ್ವರನು ಸಂಘಕವಿಗಳ ಮನಸ್ಸಿನ ಅಜ್ಞಾನವನ್ನು ನಾಶಮಾಡುತ್ತಾ, ಕತ್ತಲೆಯನ್ನು ನಾಶಮಾಡಿ ಜನರಿಗೆ ಸಂತೋಷವನ್ನು ಉಂಟು ಮಾಡುವ ಸೂರ್ಯನಂತೆ ಹೊಳೆಯುತ್ತಿದ್ದನು. ಮತ್ತು ವಿದ್ಯಾಪೀಠದಲ್ಲಿರುವಾಗ ಸುಂದರೇಶ್ವರನು ದಪ್ಪನಾದ ನಕ್ಷತ್ರಗಳ ಮಧ್ಯದಲ್ಲಿರುವ ಪೂರ್ಣಚಂದ್ರನಂತೆ ಹೊಳೆಯುತ್ತಿದ್ದನು.

ವಿಲೋಕ್ಯ ಸಂಘಿನಃ ಸರ್ವೇ ವಿದ್ವದ್ವೇಷಧರಂ ಹರಂ ।
ದೇವೋ ವಾ ಮಾನುಷೋ ವಾನ್ಯೋವೇತ್ಯಂತರಮಭಾವಯನ್॥ ॥ ೧೦೩ ॥

ಈಶಶ್ಚ ತೇಷಾಮೇಕಸ್ಸನ್ತಾನ್ಪ್ರಬಂಧಾನ್ವಿಲೋಕ್ಯ ಚ ।
ದೋಷಾದೋಷೌ ಸ್ಫುಟೀಕೃತ್ಯ ಪ್ರೋಚ್ಯ ತೈಸ್ಸಹ ತಸ್ಥಿವಾನ್ ॥ ೧೦೪ ॥

ಶಾಸ್ತ್ರಂ ತ್ವಥಾಧಿಕಾರಾಖ್ಯ ಮಕರೋತ್ತೀಕ್ಷ್ಣಯಾ ಧಿಯಾ ।
ಸರ್ವಜ್ಞಃ ಸರ್ವವೇದಾಂತೈಃ ಪ್ರತಿಪಾದ್ಯ ಸ್ಸದಾಶಿವಃ ॥೧೦೫ ॥

ಸ್ವಂ ಸ್ವಂ ಪ್ರಬಂಧಂ ದೃಷ್ಟ್ವಾ ತೇ ಸಂಘಿನೋ ಹರ್ಷಸಂಯುತಾಃ ।
ಶಬ್ದಾರ್ಥದೋಷೌ ದೋಷಾಂ ಶ್ಚ ವರ್ಣಯಂತಿ ಪರಸ್ಪರಂ ॥ ೧೦೬ ॥

ಅಥ ನಕ್ಕೀರ ಉತ್ಥಾಯ ತೇಷಾಂ ಮಧ್ಯೇऽತಿಮತ್ಸರೀ ।
ಮತ್ಪ್ರಬಂಧೇ ಪಂಚಮಸ್ಯ ಗೇಯಸ್ಯ ಸದೃಶೋ ನ ಹಿ ॥ ೧೦೭ ॥

---

೧೦೩-೧೦೬. ಸಂಘದ ಕವೀಶ್ವರರೆಲ್ಲರೂ ವಿದ್ವಾಂಸನ ವೇಷವನ್ನು ಹಾಕಿಕೊಂಡು ಇರುವ ಸುಂದರೇಶ್ವರನನ್ನು ನೋಡಿ, "ಇವನು ದೇವತೆಯೋ, ಮನುಷ್ಯನೋ, ಅಥವಾ ಬೇರೆ ಯಾರೋ ಉತ್ತಮನಾಗಿರಬೇಕು" ಎಂದು ಅವನ ವಿಷಯದಲ್ಲಿ ಬೇಧಬುದ್ಧಿಯಿಲ್ಲದೆ ಇದ್ದರು. ಸುಂದರೇಶ್ವರನೂ ಕೂಡ ಆ ಪ್ರಬಂಧಗಳನ್ನು ನೋಡಿ, ಅವುಗಳ ಗುಣದೋಷಗಳನ್ನು ವಿವರಿಸಿ ಹೇಳುತ್ತಾ ಆ ಕವಿಗಳೊಡನೆಯೇ ಇದ್ದನು. ಅನಂತರದಲ್ಲಿ ಸರ್ವಜ್ಞನಾಗಿಯೂ, ಸರ್ವವೇದಾಂತಗಮ್ಯನಾಗಿಯೂ ಇರುವ ಸುಂದರೇಶ್ವರನು ತನ್ನ ಬಹಳ ಏಕಾಗ್ರವಾದ ಬುದ್ಧಿಯಿಂದ ಆಧಿಕಾರಿಕ ಶಾಸ್ತ್ರವೆಂಬ ಪ್ರಬಂಧವನ್ನು ನಿರ್ಮಿಸಿದನು. ಸಂಘದ ಕವಿಗಳೆಲ್ಲರೂ ತಮ್ಮ ತಮ್ಮ ಗ್ರಂಥಗಳನ್ನು ವಿಮರ್ಶೆಮಾಡುತ್ತಾ ಸಂತೋಷದಿಂದ ಇರುವವರಾಗಿ, ಇತರ ಗ್ರಂಥಗಳ ಶಬ್ದದೋಷ ಮತ್ತು ಅರ್ಥದೋಷಗಳನ್ನು ಪರಸ್ಪರವಾಗಿ ಹೇಳಿಕೊಳ್ಳುತ್ತಿದ್ದರು.

೧೦೭–೧೧೦. ಆಗ ನಕ್ಕೀರನೆಂಬ ಕವೀಶ್ವರನು ಅವರಲ್ಲಿ ಇತರರ ಉತ್ಕರ್ಷವನ್ನು ಸಹಿಸದೆ ಇರುವವನು. ಅವನು ಮೇಲಕ್ಕೆ ಎದ್ದು "ನನ್ನ ಗ್ರಂಥದಲ್ಲಿ

ಯುಷ್ಮತ್ಕೃತಪ್ರಬಂಧೇಷು ಶುದ್ಧಶ್ಯಬ್ದೋರ್ಥಸುಂದರಃ ।
ಇತಿ ತದ್ವಚನಂ ಶ್ರುತ್ವಾ ದೇವದೇವಃ ಕವೀಶ್ವರಃ ॥ ೧೦೮ ॥

ಶಬ್ದಾರ್ಥಕೋಮಲತರಾ ಶಬ್ದಾನ್ಪ್ರೋಚ್ಯ ಸ್ವಯಂ ಕ್ಷಣಾತ್ ।
ಮದೀಯೇನ ಕವಿತ್ವೇನ ಶಬ್ದಾರ್ಥಸುಭಗೇನ ಚ ॥ ೧೦೯ ॥

ಲಕ್ಷ್ಯಲಕ್ಷಣಯುಕ್ತೇನ ತ್ವತ್ಕವಿತ್ವಂ ಸಮಂ ನಹಿ ।
ಮದೀಯಂ ತ್ವತ್ಕವಿತ್ವಂ ವಾ ರಮ್ಯಂ ಬ್ರೂತ ಬುಧಾ ಇತಿ ॥ ೧೧೦ ॥

ಸುಸ್ಮಿತಂ ಪ್ರೋಚ್ಯ ತೈಸ್ಸಾರ್ಧಂ ಕ್ರೀಡತೇ ಸುಂದರೇಶ್ವರಃ ।
ಈಶೋಕ್ತಗೇಯಮುಖಿಲ ಮಾಕರ್ಣ್ಯಾತಿಮನೋಹರಂ ॥ ೧೧೧ ॥

ಪುನಃ ಪುನಃ ಶಿರಃ ಕಂಪಂ ಚಕ್ರುಃ ಸಂಘಕವೀಶ್ವರಾಃ ।
ಮಾನಸೇಷು ನನಂದುಸ್ತೇ ಮಾಧುರ್ಯಾತಿಶಯಾನ್ವಿತಂ ॥ ೧೧೨ ॥

---

ಐದನೆಯು ಪದ್ಯಕ್ಕೆ ಸಮನಾದ ಪದ್ಯವಿರುವುದಿಲ್ಲ. ನೀವು ಮಾಡಿರುವ ಗ್ರಂಥದಲ್ಲಿ ಶಬ್ಧವು ಶಬ್ಧಾರ್ಥಕ್ಕಿಂತಲೂ ಸುಂದರವಾಗಿರುವುದು" ಎಂದು ಹೇಳಿದನು. ಆ ಮಾತನ್ನು ಕೇಳಿ, ಕವೀಶ್ವರನಾದ ದೇವದೇವನು ಆ ಕ್ಷಣದಲ್ಲಿ ಶಬ್ಧಾರ್ಥಕ್ಕಿಂತಲೂ ಮೃದುವಾದ ಪದಗಳನ್ನು ಹೇಳಿ, ಲಕ್ಷ್ಯ, ಲಕ್ಷಣಯುಕ್ತವಾಗಿರುವ, ಸುಂದರವಾದ ಶಬ್ಧಾರ್ಥಗಳಿಂದ ಮನೋಹರವಾದ ನನ್ನ ಕವಿತ್ವಕ್ಕೆ, ನೀನು ಮಾಡಿರುವ ಪದ್ಯವು ಸಮನಾಗಿರುವುದಿಲ್ಲ. ಈ ವಿದ್ವಾಂಸರು ಯಾರ ಪ್ರಬಂಧವು ಚೆನ್ನಾಗಿರುವುದು ಎಂಬುದನ್ನು ಹೇಳುವರು, ಎಂದು ಮಂದಹಾಸದಿಂದ ಹೇಳುತ್ತಾ ಅವರೊಡನೆ ಆಟವಾಡುತ್ತಿದ್ದನು.

೧೧೧-೧೧೪. ಸುಂದರೇಶ್ವರನು ಹೇಳಿದ ಪದ್ಯವನ್ನು ಕೇಳಿದ ಕವೀಶ್ವರರು ಅದು ಬಹಳ ಮನೋಹರವಾಗಿರುವದರಿಂದ ಅವರೆಲ್ಲರೂ ಬಹಳ ಸಂತೋಷದಿಂದ ತಲೆಯನ್ನಾಡಿಸಿದರು. ಅದರಲ್ಲಿರುವ ಮಾಧುರ್ಯವನ್ನು ನೋಡಿ, ಮನಸ್ಸಿನಲ್ಲಿ ಬಹಳ ಆನಂದವನ್ನು ಅನುಭವಿಸಿದರು. ಸುಂದರೇಶ್ವರನು ಹೇಳಿದ ಪದ್ಯವು ನವರಸ

ತತ್ಕವಿತ್ವಂ ನವರಸಸಂಪೂರ್ಣಂ ಸತ್ಕವೀಶ್ವರಾಃ ।
ಮತ್ತಸ್ಯಾಶುಕವಿತ್ವೇನ ರೋಷಮಾತ್ಸರ್ಯವಾರಿಧೇಃ ॥ ೧೧೩ ॥

ನಕ್ಕೀರಸ್ಯ ಸಮಕ್ಷೇ ತೇ ಕೇಚಿನ್ನೋಕ್ತ್ವಾ ಚ ತಸ್ಥಿರೇ ।
ನಕ್ಕೀರಸ್ತ್ವಬ್ರವೀದ್ದೋಷ ಮೀಶಗೇಯಸ್ಯ ಮೋಹತಃ ॥ ೧೧೪ ॥

ಮಹಾಮಧುರವಾಕ್ಪ್ರಾಹ ಮಧುರಾಪತೀಶ್ವರಃ ।
ಮತ್ಸರೀತಿ ಪ್ರಸಿದ್ಧ ಸ್ತ್ವಮತಥ್ಯಂ ತದ್ವಚೋ ಭೃಶಂ ॥ ೧೧೫ ॥

ಅನ್ಯೋಽಪಿ ಕಶ್ಚಿದ್ದೋಷಂ ಮೇ ಗೇಯಸ್ಯ ಕಥಯೇದ್ಯದಿ ।
ತದಾ ತ್ವದ್ವಚನಂ ತಥ್ಯ ಮಿತ್ಯುಕ್ತ್ವಾ ರೋಷಮಾಸ್ಥಿತಃ ॥ ೧೧೬ ॥

ಅನ್ಯಃ ಕಶ್ಚಿದಪಿ ಪ್ರಾಹ ದೋಷಂ ಗೇಯಂ ಚ ಶಾಂಕರೇ ।
ತದಾಶರೀರಿಣೀ ವಾಣೀ ಖಾದಭೂನ್ಮೋಹಸತ್ತಯೋ ॥ ೧೧೭ ॥

---

ಸಂಪೂರ್ಣವಾಗಿರುವುದು, ಎಂದು ತಿಳಿದುಕೊಂಡು ಅವರೆಲ್ಲರೂ ಪರೋತ್ಕರ್ಷಾಸಹಿಷ್ಣುವಾದ ಆ ಶುದ್ಧ ಕವಿಯಾದ ನಕ್ಕೀರನ ಎದುರಿಗೆ ಯಾವ ಮಾತನ್ನೂ ಆಡದೆ ಸುಮ್ಮನೆ ಇದ್ದರು. ಆಗ ನಕ್ಕೀರನು ಅಜ್ಞಾನದಿಂದ ಸುಂದರೇಶ್ವರನ ಪದ್ಯದಲ್ಲಿ ದೋಷವಿರುವುದೆಂದು ಹೇಳಿದನು.

೧೧೫-೧೧೮. ಬಹಳ ಮೃದುವಾಗಿ ಮಾತನಾಡುವ ಸುಂದರೇಶ್ವರನು "ನೀನು ಅಸೂಯೆಯುಳ್ಳವನೆಂದು ಪ್ರಸಿದ್ಧನಾಗಿರುತ್ತೀಯೆ. ನಿನ್ನ ಮಾತು ಬಹಳ ಮಟ್ಟಿಗೆ ಅಸತ್ಯವಾದದ್ದು. ನೀನು ಹೊರತು, ಇನ್ನೊಬ್ಬರು ನನ್ನ ಪದ್ಯದಲ್ಲಿ ದೋಷವನ್ನು ಹೇಳಿದರೆ ಆಗ ನಿನ್ನ ಮಾತನ್ನು ನಂಬತಕ್ಕದ್ದು." ಎಂದು ನಕ್ಕೀರನಿಗೆ ಹೇಳಿ, ಅವನ ವಿಷಯದಲ್ಲಿ ಕೋಪವನ್ನು ಹೊಂದಿದನು. ಆಗ ಇನ್ನೊಬ್ಬನು ಶಿವನು ಮಾಡಿರುವ ಪದ್ಯದಲ್ಲಿ ದೋಷವನ್ನು ಹೇಳಿದನು. "ನಿಮ್ಮ ವಿವಾದದ ಉಪಶಾಂತಿಗಾಗಿ ಸುಂದರೇಶ್ವರನೇ ನಿಮ್ಮಲ್ಲಿಯೇ ಒಬ್ಬ ಕವೀಶ್ವರನಾಗಿ

ಯುಷ್ಮದ್ವಿವಾದಶಾಂತ್ಯರ್ಥಂ ಯುಷ್ಮಾಸ್ವೇಕಃ ಕವೀಶ್ವರಃ ।
ಸುಂದರೇಶ್ವರ ಏವಾಯಂ ವರ್ತತೇ ನಮತಾಮುಕಂ ॥ ೧೧೮ ॥

ಇತಿ ಶಂಭೋರ್ವಚಃ ಶ್ರುತ್ವಾ ಗಗನೇ ಗರ್ಜಿತಂ ಯಥಾ ।
ಸಂಘಿನೋ ಭೀತಹೃದಯಾಃ ಕವಿರೂಪಂ ಮಹೇಶ್ವರಂ ॥ ೧೧೯ ॥

ಸ್ತುವಂತಶ್ಚ ನಮಂತಶ್ಚ ವರ್ತಂತೇ ವೀತಮತ್ಸರಾಃ ।
ಕೃಪಾಭರಕಟಾಕ್ಷೇಣ ಸಂಘಸ್ಥಾಕ್ಸತ್ಕವೀಶ್ವರಾನ್ ॥ ೧೨೦ ॥

ಆಲೋಕ್ಯಾನುಗ್ರಹಂ ತೇಷಾಮುಕರೋತ್ಸತತಂ ಶಿವಃ ।
ಶಿವಪ್ರಸಾದಲಾಭೇನ ಸರ್ವೇ ಶಂಭುಕವೀಶ್ವರಾಃ ॥ ೧೨೧ ॥

ಭುಕ್ತ್ವಾ ಸುದುರ್ಲಭಾರ್ ಭೋಗಾರ್ ಚಿರಂಜೀವಂತಿ ಭೂತಲೇ ।
ಏಕಪಂಚಾಶಿಕಾ ಲೀಲಾ ಶೋಕಮೋಹಭಯಾಪಹಾ ॥ ೧೨೨ ॥

ಶ್ರೋತವ್ಯಾ ಪಠಿತವ್ಯಾ ಚ ಬುಧೈರ್ಭೋಗಾಪವರ್ಗದಾ

---

ಇರುವನು. ಆದ್ದರಿಂದ ಇವನಿಗೆ ನಮಸ್ಕಾರವನ್ನು ಮಾಡಿರಿ" ಎಂದು ಆಕಾಶ ವಾಣಿಯು ಕೇಳಿಸಿತು. ಅದರಿಂದ ಆ ಪದ್ಯವನ್ನು ಮಾಡಿದವರ ವಿಷಯದಲ್ಲಿ ತಪ್ಪು ತಿಳುವಳಿಕೆಯು ಅವರಿಗೆ ಹೋಯಿತು.

೧೧೮–೧೨೩ ಅಂತರಿಕ್ಷದಲ್ಲಿ ಗುಡುಗಿನ ಧ್ವನಿಯಂತೆ ಇರುವ ಆಕಾಶವಾಣಿ ಯನ್ನು ಕೇಳಿದ ಕವೀಶ್ವರರೆಲ್ಲರೂ ಆಗ ಹೆದರಿದರು. ಕವಿರೂಪದಿಂದ ಇರುವ ಮಹೇಶ್ವರನನ್ನು ಸ್ತುತಿಮಾಡಿ, ನಮಸ್ಕರಿಸಿದರು. ಆವನ ವಿಷಯದಲ್ಲಿ ಸರಿಯಾದ ತಿಳುವಳಿಕೆಯಿಂದ ಇದ್ದರು. ದೇವದೇವನಾದ ಸುಂದರೇಶ್ವರನು ಸಂಘಕವೀಶ್ವರರನ್ನು ಕೃಪಾಪೂರ್ಣಕಟಾಕ್ಷದಿಂದ ನೋಡಿ ಯಾವಾಗಲೂ ಅವರಿಗೆ ಅನುಗ್ರಹವನ್ನು ಮಾಡುತ್ತಿದ್ದನು. ಶಿವನ ಅನುಗ್ರಹವನ್ನು ಹೊಂದಿದ ಕವೀಶ್ವರರು ಎಲ್ಲರೂ ಭೂಮಿಯಲ್ಲಿ ಬಹಳ ಭೋಗಗಳನ್ನು ಅನುಭವಿಸುತ್ತಾ, ಬಹಳಕಾಲ ಸುಖವಾಗಿದ್ದರು. ಸುಂದರೇಶ್ವರನು ಆಚರಿಸಿದ ಐವತ್ತೊಂದನೆಯ ಈ ಲೀಲೆಯು ದುಃಖ, ಅಜ್ಞಾನ, ಭಯಗಳನ್ನು ನಾಶಮಾಡಿ, ಭುಕ್ತಿ ಮುಕ್ತಿಗಳನ್ನು ಉಂಟುಮಾಡುವುದು. ಇದನ್ನು ತಿಳಿದವರು ಯಾವಾಗಲೂ ಓದಬೇಕು ಮತ್ತು ಕೇಳಬೇಕು.

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಸಂಘಫಲಕಾಪ್ರದಾನಂ ನಾಮ ಸಪ್ತಪಂಚಾಶೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಸಂಘಫಲಕಾಪ್ರದಾನವೆಂದು ಹೆಸರುಳ್ಳ ಐವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಅಷ್ಟಪಂಚಾಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಆದಿಶೈವಾನ್ವಯೋದ್ಭೂತವಿಪ್ರವರ್ಯಜಯಾಯ ಚ ।
ಪಾಂಡ್ಯೇಶಚಿಂತಾನುಗುಣಾಂ ವಿಲಿಖ್ಯಾರ್ಯಾಂ ಪ್ರದಾಯ ಚ ॥ ೧ ॥

ನೀವೀಂ ನಿಷ್ಕಸಹಸ್ರೇಣ ನಿರ್ಮಿತಾಂ ಪಾಂಡ್ಯಭೂಭುಜಾ ।
ವಿವಾಹಾರ್ಥಂ ದದೌ ಶಂಭುಸ್ತಾಂ ಲೀಲಾಂ ಕಥಯಾಮಿ ವಃ ॥ ೨ ॥

---

### ಐವತ್ತೆಂಟನೆಯ ಅಧ್ಯಾಯವು

೧–೨. ಅಗಸ್ತ್ಯಋಷಿಯು ಹೇಳಿದನು :—ಆದಿ-ಶೈವವಂಶದಲ್ಲಿ ಹುಟ್ಟಿದ ಬ್ರಾಹ್ಮಣನು ಜಯಶೀಲನಾಗುವುದಕ್ಕಾಗಿ, ಪಾಂಡ್ಯರಾಜನ ಅಭಿಪ್ರಾಯಾನುಗುಣವಾದ ಆರ್ಯಾಪದ್ಯವನ್ನು ಸುಂದರೇಶ್ವರನು ಬರೆದುಕೊಟ್ಟು, ಪಾಂಡ್ಯರಾಜನಿಂದ ಒಂದು ಸಾವಿರನಿಷ್ಕಗಳ ಗಂಟನ್ನು ಆ ಬ್ರಾಹ್ಮಣನಿಗೆ ವಿವಾಹಕ್ಕಾಗಿ ಕೊಡಿಸಿದ ಸುಂದರೇಶ್ವರನ ಲೀಲೆಯನ್ನು ವಿವರಿಸಿ ಹೇಳುವೆನು.

ವಂಶಶೇಖರಪಾಂಡ್ಯೋಽಪಿ ಸಂಘಿಭಿಶ್ಚ ಕವೀಶ್ವರೈಃ ।
ಗೀಯಮಾನಚರಿತ್ರಸ್ಸನ್ಗಂಧರ್ವೈಃ ಕಿನ್ನರೈರಪಿ ॥ ೩ ॥

ಚಿರಂಜೀವನ್ಮಹೀಂ ಸರ್ವಾಂ ಶಾಸ್ತ್ರನೀತ್ಯಾನುಶಾಸ್ಯ ಚ ।
ಪುತ್ರಂ ರಾಜ್ಯಾಧಿಪಂ ಕೃತ್ವಾ ಸಾಯುಜ್ಯಂ ಪ್ರಾಪ ಶಾಂಭವಂ ॥ ೪ ॥

ವಂಶಶೇಖರಭೂಪಸ್ಯ ವಂಶಚೂಡಾಮಣಿಸ್ಸುತಃ ।
ವಿಕ್ರಮೇಣ ಕವಿತ್ವೇನ ಕಾಂತ್ಯಾ ಕರುಣಯಾ ಶ್ರಿಯಾ ॥ ೫ ॥

ಮಹತ್ಯಾ ಮನುನೀತ್ಯಾ ಚ ಮಹಾದೇವಾಂಘ್ರಿಪಂಕಜೇ ।
ಅತಿದುರ್ಲಭಯಾ ಭಕ್ತ್ಯಾ ಪಿತುರಪ್ಯಧಿಕೋ ಭವತ್ ॥ ೬ ॥

ಪಲ್ಲವೈಶ್ಚ ಫಲೈಃ ಪುಷ್ಪೈರನ್ವಿತೈರತಿಪಾವನೈಃ ।
ಶ್ರೀವೃಕ್ಷಾದ್ಯೈಃ ಪುಣ್ಯವೃಕ್ಷೈರಸಂಖ್ಯೈಶ್ಚಂಪಕದ್ರುಮೈಃ । ॥ ೭ ॥

---

೩–೬. ವಂಶಶೇಖರ ಪಾಂಡ್ಯರಾಜನು ಸಂಘದ ಕವೀಶ್ವರರಿಂದ ಹೊಗಳಿಸಿಕೊಂಡು ಇದ್ದನು. ಇವನ ಚರಿತ್ರೆಯನ್ನು ಗಂಧರ್ವರೂ ಕಿನ್ನರರೂ ಕೂಡ ಪದ್ಯ ರೂಪದಿಂದ ಗಾನಮಾಡುತ್ತಿದ್ದರು. ಭೂಮಿಯೆಲ್ಲವನ್ನೂ ನೀತಿಶಾಸ್ತ್ರಕ್ಕನುಸಾರವಾಗಿ ರಕ್ಷಿಸುತ್ತಾ ಬಹಳಕಾಲ ಸುಖವಾಗಿದ್ದನು. ಕೊನೆಗೆ ತನ್ನ ಮಗನನ್ನು ರಾಜ್ಯಾಧಿಪತಿಯನ್ನಾಗಿ ಮಾಡಿ. ಶಿವಸಾಯುಜ್ಯವನ್ನು ಹೊಂದಿದನು. ವಂಶಶೇಖರಪಾಂಡ್ಯ ರಾಜನ ಮಗನಾದ ವಂಶಚೂಡಾಮಣಿ ಪಾಂಡ್ಯರಾಜನು, ಪರಾಕ್ರಮ, ಕವನವನ್ನು ಮಾಡುವುದು, ತೇಜಶ್ಶಾಲಿಯಾಗಿರುವುದು ಪ್ರಾಣಿಗಳಲ್ಲಿ ದಯೆ, ಐಶ್ವರ್ಯ, ದೇವದೇವನಾದ ಮಹಾದೇವನಲ್ಲಿ ಬಹಳ ಭಕ್ತಿ, ಇವೇ ಮೊದಲಾದ ಗುಣಗಳಿಂದ ತನ್ನ ತಂದೆಯನ್ನು ಮೀರಿ ಇದ್ದನು.

೭–೧೨. ಅವನು ಬಹಳ ಪರಿಶುದ್ಧವಾದ ಫಲಪುಷ್ಪಾದಿಗಳಿಗಾಗಿ, ಶ್ರೀವೃಕ್ಷವೇ ಮೊದಲಾದ ವೃಕ್ಷಗಳಿಂದ ತುಂಬಿರುವಂತೆ ಉದ್ಯಾನವನವನ್ನು ಮಾಡಿಸಿ, ಅದರಲ್ಲಿ ಬೆಳದಿರುವ ಪುಷ್ಪಗಳಿಂದ ಸುಂದರೇಶ್ವರನ ಪೂಜೆಯನ್ನು ಬಹಳ

ಸುಂದರೇಶ್ವರಪೂಜಾರ್ಥಂ ವಿಧಾಯೋಪವನಾನಿ ಚ ।
ನಿತ್ಯಂ ಪುಷ್ಪವಿಶೇಷೈಶ್ಚ ಸ ಸೋಮೇಶಮಪೂಜಯತ್ ॥ ೮ ॥

ಕದಾಚಿಚ್ಚೈತ್ರಮಾಸೇ ತು ಚೈತ್ರ್ಯಾಂ ವಿಭವವಿಸ್ತರಾತ್ ।
ಪಯೋದಧಿಘೃತಕ್ಷೌದ್ರಪ್ರಮುಖೈಶ್ಚ ಪವಿತ್ರಕೈಃ ॥ ೯ ॥

ಅಭಿಷೇಕೋಚಿತೈರ್ದ್ರವ್ಯೈ ರಭಿಷಿಚ್ಯಾಖಿಲೈಶ್ಶಿವಂ ।
ಚಂದ್ರ ಚಂದನಕಸ್ತೂರೀಕುಂಕುಮಾದಿಸುಗಂಧಕೈಃ ॥ ೧೦ ॥

ಹಿಮತೋಯಯುಕ್ತೈಃ ಪಂಕೈರ್ಮಹಾಲಿಂಗಂ ಸಪೀಠಕಂ ।
ಸಮಾಲಿಪ್ಯ ಸಮಾಪೂರ್ಯ ಪುಷ್ಪೈಶ್ಚಂಪಕಸಂಭವೈಃ ॥ ೧೧ ॥

ಧೂಪಾದ್ಯೈರುಪಚಾರೈಶ್ಚ ಕ್ರಮಾಚ್ಛಂಭುಂ ಪ್ರಪೂಜ್ಯ ಚ ।
ಆಲೋಕ್ಯ ಸುಂದರೇಶಸ್ಯ ಸೌಂದರ್ಯಾತಿಶಯಂ ಮುದಾ ॥ ೧೨ ॥

ತಸ್ಯಾಕರೋನ್ನಾಮಧೇಯಮಿತಿ ಚಂಪಕಸುಂದರಂ ।

---

ಭಕ್ತಿಯಿಂದ ನೆರವೇರಿಸುತ್ತಿದ್ದನು. ಅವನು ಒಂದು ಕಾಲದಲ್ಲಿ ಚೈತ್ರಮಾಸದ ಪೂರ್ಣಿಮಾ ದಿನದಲ್ಲಿ ಬಹಳ ವೈಭವದಿಂದ ಅನೇಕ ವಿಧವಾದ ಅಭಿಷೇಕ ದ್ರವ್ಯಗಳನ್ನು ಸಿದ್ಧಪಡಿಸಿಕೊಂಡು, ಸುಂದರೇಶ್ವರನಿಗೆ ಅಭಿಷೇಕವನ್ನು ಮಾಡಿ, ಸುಗಂಧದ್ರವ್ಯಗಳಿಂದ ಅನುಲೇಪನ ಮಾಡಿ, ಸಂಪಿಗೆಯೇ ಮೊದಲಾದ ಹೂವು ಗಳಿಂದ ಪೂಜಿಸಿ, ಧೂಪಾದಿ ಉಪಚಾರಗಳಿಂದ ಪೂಜೆಯನ್ನು ಮಾಡಿಸಿದನು. ಆನಂತರದಲ್ಲಿ ದೇವದೇವನ ಸಮೀಪದಲ್ಲಿ ನಿಂತು ಅವನನ್ನು ನೋಡಿ, ಅವನ ಸೌಂದರ್ಯವನ್ನು ಶ್ಲಾಘಿಸುತ್ತಾ, ಬಹಳ ಸಂತೋಷದಿಂದ ಚಂಪಕಸುಂದರೇಶ ನೆಂದು ಹೆಸರಿನಿಂದ ದೇವನನ್ನು ಕರೆದನು.

೧೩–೧೮. ಆಗಿನಿಂದ ಜನರೆಲ್ಲರೂ ಸುಂದರೇಶ್ವರನನ್ನು ಚಂಪಕಸುಂದರ ನೆಂದು ಕರೆಯುವರು ಮತ್ತು ಸಂಪಿಗೆಯ ಹೂವಿನಿಂದ ಪೂಜಿಸುವರು. ಚಂಪಕ ಪಾಂಡ್ಯನೆಂದು ಹೆಸರು ಹೊಂದಿದ ಸುಂದರೇಶ್ವರನು ಅಲ್ಲಿ ಎಲ್ಲರಿಗೂ ಸುಖವನ್ನುಂಟು ಮಾಡುತ್ತಾ ಆನಂದದಿಂದ ಇರುವನು. ವಂಶಚೂಡಾಮಣಿ ರಾಜನು ಉತ್ತಮ ಸ್ತ್ರೀಯರಿಂದ ತುಂಬಿರುವ ಮಧುರಾನಗರದ ಅಂದವನ್ನು ನೋಡುತ್ತಾ, ತನ್ನ

ತದಾ ಪ್ರಭೃತಿ ಲೋಕೇಷು ಲೋಕಾಸ್ಸರ್ವೇ ವದಂತಿ ಹಿ || ೧೩ ||

ಇತಿ ನಿಪಾಟವೀಶಂ ಚ ನಾಮ್ನಾ ಚಂಪಕಸುಂದರಂ |
ಶಂಭುಂ ಚಂಪಕಪುಷ್ಪೈಸ್ಸ ಪೂಜಯುಸ್ಸುಂದರೇಶ್ವರಂ || ೧೪ ||

ಪ್ರಾಪ್ಯ ಚಂಪಕಪಾಂಡ್ಯಾಖ್ಯಾಂ ಸೌಖ್ಯೇನ ಚಿರಮೇಧತೇ |
ಸ ಕದಾಚಿನ್ಮಹಿಷ್ಯಾ ಚ ಸಾರ್ಧಂ ಸೌಧತಲೇ ಸ್ಥಿತಃ || ೧೫ ||

ಮಲಯಾಚಲಸಂಭೂತಮಂದಮಾರುತವೀಜಿತಃ |
ಮಧುರಾಪುರಮಾಧುರ್ಯಂ ಮಹಿಳಾ ರತ್ನಮಂಡಿತಂ || ೧೬ ||

ವಿಲೋಕ್ಯ ವಿಸ್ಮಿತೋ ಭೂತ್ವಾ ಕಾಲಂ ನಿನ್ಯೇ ಮಹೀಪತಿಃ |
ಪದ್ಮಿನ್ಯಾ ನಿಕಟಸ್ಥಾಯಾಃ ಪವನಸ್ಯ ವಶಾಂಗತಂ || ೧೭ ||

---

ಅರಮನೆಯ ಉಪ್ಪರಿಗೆಯ ಮೇಲೆ ತನ್ನ ಪ್ರೀತಿಪಾತ್ರಳಾದ ಪತ್ನಿಯೊಡನೆ ಮಲಯ ಪರ್ವತದ ಮಂದಮಾರುತ ಸುಖವನ್ನು ಅನುಭವಿಸುತ್ತಾ ಸುಖವಾಗಿ ಕಾಲವನ್ನು ಕಳೆಯುತ್ತಿರುವಾಗ ಹತ್ತಿರದಲ್ಲಿರುವ ಪದ್ಮಿನೀ ಜಾತಿಯುವಳಾದ ತನ್ನ ಪತ್ನಿಯ ಕೇಶ ಪಾಶದ ಪರಿಮಳವನ್ನು ಆಘ್ರಾಣಿಸಿದನು. ಅದು ಉಪಮಾರಹಿತವಾಗಿದ್ದ ಕಾರಣ ರಾಜನಿಗೆ ಆ ಪರಿಮಳದ ವಿಷಯದಲ್ಲಿ ಇತರ ಸಂಬಂಧದಿಂದ ಉಂಟಾಗಿರುವುದೋ, ಅಥವಾ ಸ್ವಾಭಾವಿಕವೋ ಎಂದು ಸಂಶಯವು ಉಂಟಾಯಿತು.

೧೮-೨೨. ಆಗ ರಾಜನು ತನ್ನ ಸಂಶಯವನ್ನು ಪರಿಹರಿಸಿಕೊಳ್ಳುವುದಕ್ಕಾಗಿ "ತನ್ನ ಮನಸ್ಸಿನ ಈ ಸಂಶಯವು ಹೋಗುವಂತೆ ಪದ್ಯವನ್ನು ಬೇಗ ಬರೆದು ಕೊಡುವ ವರಿಗೆ ಒಂದು ಸಾವಿರ ಚಿನ್ನದ ನಾಣ್ಯಗಳನ್ನು ಬಹುಮಾನವಾಗಿ ಕೊಡುವೆನು" ಎಂದು ಪ್ರಸಿದ್ಧಿಪಡಿಸಿ, ಆ ದ್ರವ್ಯವನ್ನು ಒಂದು ಗಂಟುಕಟ್ಟಿ ಕವೀಶ್ವರರು ಪ್ರತಿ ನಿತ್ಯವೂ ಕೂತುಕೊಳ್ಳುವ ಸಂಘಮಂಟಪದಲ್ಲಿ ಕಟ್ಟಿಸಿದನು. ಆಗ ಕವಿಗಳೆಲ್ಲರೂ

ಉಪಮಾರಹಿತಂ ದೇವ್ಯಾಃ ಆಜಿಘ್ರೇತ್ಕೇಶಸೌರಭಂ ।
ಸ್ವಾಭಾವಿಕೋಽಯಂ ಕಿಂ ಗಂಧೋ ಪುಷ್ಪಸಂಸರ್ಗಜೋಽಪಿ ವಾ ॥ ೧೮ ॥

ಚಿಂತಯನ್ನಿತಿ ಭೂಪಾಲಶ್ಶ್ಲೋಕಂ ಕಾಂಚಿತ್ಕ್ರಿಯಾಂ ವ್ಯಧಾತ್ ।
ಮಚ್ಚಿಂತಾ ಸದೃಶಂ ಸದ್ಯಃ ಕವಿತ್ವಂ ಯೋ ಜನೋ ವದೇತ್ ॥ ೧೯ ॥

ತಸ್ಮೈ ಸಹಸ್ರನಿಷ್ಕೈಶ್ಚ ನೀವೀಂ ದಾಸ್ಯಾಮಿ ನಿರ್ಮಿತಾಂ ।
ಇತಿ ನಿಶ್ಚಿತ್ಯ ನಿರ್ಮಾಯ ನೀವೀಂ ನಿಷ್ಕಸಹಸ್ರಕೈಃ ॥ ೨೦ ॥

ಬಧ್ವಾ ಪ್ರಲಂಬಯಾಮಾಸ ಸಂಘಮಂಟಪಸನ್ನಿಧೌ ।
ಸಂಘಸ್ಥಾಃ ಕವಯಃ ಸರ್ವೇ ಕೃತಗೇಯಾಃ ಪೃಥಕ್ಪೃಥಕ್ ॥ ೨೧ ॥

ರಾಜಾನಂ ಶ್ರಾವಯಾಮಾಸುಃ ಸ್ವಂ ಸ್ವಂ ಗೇಯಂ ಮುದಾನ್ವಿತಾಃ ।
ಸ್ವಚಿಂತಾನುಗುಣಂ ಗೇಯಂ ನಾಶೃಣೋತ್ಪಾಂಡ್ಯಭೂಪತಿಃ ॥ ೨೨ ॥

ಖಿನ್ನಾಸ್ತೇ ಕವಯೋ ಜಗ್ಮುಸ್ತತ್ರ ನೀವೀ ಚ ಲಂಬತೇ ।
ತಸ್ಮಿನ್ಕಾಲೇತ್ವಾದಿಶೈವವಂಶವಾರಿಧಿಚಂದ್ರಮಾಃ ॥ ೨೩ ॥

---

ಬೇರೆ ಬೇರೆಯಾಗಿ ಪದ್ಯಗಳನ್ನು ಬರೆದು ಸಂತೋಷದಿಂದ ತಮ್ಮ ತಮ್ಮ ಪದ್ಯಗಳನ್ನು ರಾಜನ ಮುಂದೆ ಓದಿದರು. ಅವುಗಳನ್ನು ರಾಜನು ಕೇಳಿದನು. ಅವುಗಳಲ್ಲಿ ಯಾವುದೂ ತನ್ನ (ರಾಜನ) ಮನಸ್ಸಿನ ಅಭಿಪ್ರಾಯಕ್ಕೆ ಅನುಗುಣವಾಗಿರಲಿಲ್ಲ. ಅದರಿಂದ ಕವಿಗಳು ಖೇದವನ್ನು ಹೊಂದಿದರು. ದ್ರವ್ಯವು ಮಾತ್ರ ಹಾಗೆಯೇ ಇತ್ತು.

೨೩–೨೮. ಆ ಕಾಲಕ್ಕೆ ಸರಿಯಾಗಿ ಆದಿಶೈವವಂಶದಲ್ಲಿ ಹುಟ್ಟಿದ, ಪದ ವಾಕ್ಯವೇ ಮೊದಲಾದ ಶಾಸ್ತ್ರಗಳನ್ನೂ, ಶೈವಸಿದ್ಧಾಂತವನ್ನೂ, ತಿಳಿದವನಾದ ಸುಂದರೇಶ್ವರನ ಪಾದಕಮಲದಲ್ಲಿ ಬಹಳ ಭಕ್ತಿಯಿಂದ ಇರುವ, ಸುಂದರನಾಥ ನೆಂಬುವನು ತಂದೆಯು ಇಲ್ಲದೆ, ಬಡತನದಿಂದ ಇದ್ದನು. ಅವನು ಸುಂದರೇಶ್ವರನ

ಪದವಾಕ್ಯಪ್ರಮಾಣಜ್ಞಃ ಶೈವಸಿದ್ಧಾಂತಪಾರಗಃ ।
ಸುಂದರೇಶ್ವರಪಾದಾಬ್ಜಭಕ್ತಿರತ್ನಮಹೋದಧಿಃ　　　॥ ೨೪ ॥

ನಾಮ್ನಾ ಸುಂದರನಾಥಶ್ಚ ಪಿತೃಹೀನೋ ಧನೇನ ಚ ।
ಸುಂದರೇಶ್ವರಮೀಶಾನಮುಪಗಮ್ಯ ಪ್ರಣಮ್ಯ ಚ　　　॥ ೨೫ ॥

ಏವಂ ಸಂಪ್ರಾರ್ಥಯಾಮಾಸ ವಿವಾಹಾರ್ಥಾರ್ಥಲಿಪ್ಸಯಾ ।
ಉದ್ವೋಢುಂ ಚೋದಿತಃ ಕಾಲ ಅತ್ಯೇತಿ ಶಿವ ಮೇ ಪ್ರಭೋ　　　॥ ೨೬ ॥

ಅತೀವ ವಿದ್ಯತೇ ಲಜ್ಜಾ ಸಜ್ಜಾತ್ರಾಣಾಂ ತು ಮಧ್ಯಮೇ ।
ಪಿತಾ ಮೇ ತ್ವಂ ಹಿ ಮಾತಾ ಚ ಧನಂ ಬಂಧುಸ್ತ್ವಮೇವ ಹಿ　　　॥ ೨೭ ॥

ಭಗವತ್ಪಾದಪೂಜಾಂ ಚ ಕರ್ತುಂ ಚೈವ ಮಹಾಕ್ರತುಂ ।
ಅನುಗ್ರಾಹ್ಯ ಸ್ತ್ವಯಾ ಸದ್ಯಃ ಕಟಾಕ್ಷೇಣ ಕೃಪಾವತಾ　　　॥ ೨೮ ॥

ಕರ್ಮಣಾ ಮನಸಾ ವಾಚಾ ತ್ವಾಮೇವಾರಾಧಯಾಮ್ಯಹಂ ।
ಶಂಭುರ್ವಿಪ್ರಾತ್ಮಜವಚಃ ಶ್ರುತ್ವಾ ಜಾತದಯಃ ಶಿವಃ　　　॥ ೨೯ ॥

---

ಹತ್ತಿರಕ್ಕೆ ಬಂದು ನಮಸ್ಕರಿಸಿ, "ಎಲೈ ಪ್ರಭುವೆ, ನನಗೆ ಮದುವೆಯಾಗುವ ವಯಸ್ಸು ಮೀರಿಹೋಗುತ್ತಾ ಇದೆ ಸರಿಯಾದ ವಂಶಸ್ಥರಲ್ಲಿ ಈ ಮಾತನ್ನು ನಾನು ಹೇಳಿಕೊಳ್ಳಲು ನಾಚಿಕೆಯಾಗುತ್ತದೆ. ನೀನು ನನಗೆ ತಂದೆಯಾಗಿಯೂ ತಾಯಿಯಾಗಿಯೂ ಮತ್ತು ಇತರ ವಿಧವಾದ ಎಲ್ಲಾ ಹಿತಚಿಂತಕನಾಗಿಯೂ ಇರುತ್ತೀಯೆ. ನಾನು ನಿನ್ನ ಸೇವೆಯನ್ನು ನಡಸಿಕೊಂಡು ಬರುತ್ತಿದ್ದೇನೆ. ದಯಾಶಾಲಿಯಾದ ನೀನು, ನಿನ್ನ ಕಟಾಕ್ಷದಿಂದ ನನ್ನನ್ನು ಅನುಗ್ರಹಿಸಬೇಕು ನಾನು ಮನೋವಾಕ್ಕಾಯ ಕರ್ಮಗಳಿಂದಲೂ ಯಾವಾಗಲೂ ನಿನ್ನ ಸೇವೆಯನ್ನೇ ಮಾಡುತ್ತಿರುವೆನು" ಎಂದು ಹೇಳುತ್ತಾ ಬೇಡಿಕೊಂಡನು.

೨೯–೩೨. ಆಗ ಈಶ್ವರನಿಗೆ ಅವನ ಮಾತನ್ನು ಕೇಳಿದ್ದರಿಂದ ಅವನಲ್ಲಿ ದಯೆಯು ಉಂಟಾಯಿತು. ರಾಜನ ಮನಸ್ಸಿನ ಅಭಿಪ್ರಾಯಕ್ಕನುಗುಣವಾಗಿ—

ರಾಜ್ಞಾಶ್ಚಿತ್ತಾನುಸದೃಶೀಮಾರ್ಯಾಮೇವಾವದಚ್ಛಿವಃ ।
'ಜಾನಾಸಿ ಪುಷ್ಪಗಂಧಾನ್ಭ್ರಮರ ತ್ವಂ ಬ್ರೂಹಿ ತತ್ವತೋ ಮೇsದ್ಯ ।
ದೇವ್ಯಾಃ ಕೇಶಕಲಾಪೇ ತುಲ್ಯೋ ಗಂಧೇನ ಕಿಂ ಗಂಧಃ ' ॥ ೩೦ ॥

ಏತಾಮಾರ್ಯಾಂ ವಿಲಿಖ್ಯಾಶು ಕವಿವೇಷಧರೋ ಹರಃ ।
ಪ್ರತ್ಯಕ್ಷೀಕೃತ್ಯ ದತ್ವಾsಥ ತಸ್ಮೈ ಚ ಬ್ರಹ್ಮಚಾರಿಣೇ ॥ ೩೧ ॥

ವಕ್ಷ್ಯೇ ಮಾಂ ಪತ್ರಿಕಾಂ ಸದ್ಯಃ ಸಂಘಸ್ಥೇಭ್ಯಃ ಪ್ರದರ್ಶಯ ।
ತೈಸ್ಸಾರ್ಧಂ ಪ್ರಾಪ್ಯ ರಾಜಾನಂ ಭಣಾರ್ಯಾ ಮರ್ಥಸಿದ್ಧಯೇ ।
ಗರ್ಭಗೇಹಾನ್ನಿರ್ಗತೇನ ಪ್ರೋಕ್ತಂ ಕವಿವರೇಣ ಚ ॥ ೩೨ ॥

ವಚಶ್ಶ್ರುತ್ವಾ ಬ್ರಹ್ಮಚಾರೀ ಪ್ರೀತಿವಿಸ್ಮಯಸಂಯುತಃ ।
ತಥಾ ಕರಿಷ್ಯ ಇತ್ಯುಕ್ತ್ವಾ ಪತ್ರಿಕಾಂ ತಾಂ ಪ್ರಗೃಹ್ಯ ಚ ॥ ೩೩ ॥

ಪ್ರಣಮ್ಯ ಪ್ರಯಯೌ ಯತ್ರ ವರ್ತಂತೇ ತತ್ರ ಸಂಘಿನಃ ।
ಪತ್ರಿಕಾಂ ದರ್ಶಯಾಮಾಸ ಪ್ರಾಪ್ತಾಂ ಶಂಭೋರನುಗ್ರಹಾತ್ ॥ ೩೪ ॥

---

ಜಾನಾಸಿ ಪುಷ್ಪಗಂಧಾನ್ ಭ್ರಮರ " ತ್ವಂ ಬ್ರೂಹಿ ತತ್ತ್ವತೋ ಮೇದ್ಯ ।
ದೇವ್ಯಾಃ ಕೇಶಕಲಾಪೇ ತುಲ್ಯೋ ಗಂಧೇನ ಕಿಂ ಗಂಧಃ " ॥

(ಎಲೈ ದುಂಬಿಯೇ, ನೀನು ಹೂವಿನ ಪರಿಮಳವನ್ನು ಚೆನ್ನಾಗಿ ತಿಳಿದಿರುತ್ತೀಯೆ. ದೇವಿಯ ಕೇಶಪಾಶದಲ್ಲಿರುವ ಪರಿಮಳವು ನೀನು ಅನುಭವಿಸಿರುವ ಪರಿಮಳಕ್ಕೆ ಸಮನಾಗಿರುವುದೇ ಇದನ್ನು ವಿಮರ್ಶೆಮಾಡಿ ಹೇಳು) ಎಂದು ಅರ್ಥವನ್ನು ಕೊಡುವ, ಈ ಪದ್ಯವನ್ನು ಸುಂದರೇಶ್ವರನು ಬರೆದುಕೊಂಡು, ಕವಿಯ ವೇಷದಿಂದ ಬಂದು ಆ ಬ್ರಹ್ಮಚಾರಿಯ ಕೈಯ್ಯಲ್ಲಿ ಕೊಟ್ಟು, " ಎಲೈ ಮಗುವೆ, ನೀನು ಈ ಕಾಗದವನ್ನು ಸಂಘದಲ್ಲಿರುವ ಕವಿಗಳಿಗೆ ಈಗಲೆ ತೋರಿಸು. ನಿನ್ನ ಕಾರ್ಯಸಿದ್ಧಿಗಾಗಿ ನೀನು ಇದನ್ನು ಸಂಘದ ಕವಿಗಳೊಡನೆ ರಾಜನ ಎದುರಿಗೆ ಹೇಳು " ಎಂದು ಹೇಳಿದನು.

೩೩-೩೪. ದೇವಾಲಯದ ಗರ್ಭಗೃಹದಿಂದ ಬಂದು, ಕವಿಯು ಹೇಳಿ ತನಗೆ ಕೊಟ್ಟಿರುವ ಕಾಗದವನ್ನು ತೆಗೆದುಕೊಂಡು ಆವನು ನಮಸ್ಕರಿಸಿ, ಪ್ರೀತಿ ಮತ್ತು ಆಶ್ಚರ್ಯಗಳಿಂದ ಕೂಡಿದವನಾಗಿ, ಹಾಗೆಯೇ ಮಾಡುತ್ತೇನೆ ಎಂದು ಹೇಳಿ, ಸಂಘದ ಕವಿಗಳಿಗೆ ಆ ಪತ್ರಿಕೆಯನ್ನು ತೋರಿಸುವುದಕ್ಕಾಗಿ ಹೊರಟುಹೋದನು.

ಸಂಘಪೀಠೋಪವಿಷ್ಟೇಭ್ಯಃ ಸಂಘಿಭ್ಯ ಸ್ಸ ಮುದಾನ್ವಿತಃ ॥ ೩೫ ॥

ತಾಮಾದಾಯ ವಿಲೋಕ್ಯಾಥ ತಾಮಾರ್ಯಾಂ ಪರಿಪಠ್ಯ ಚ ।
ಸಂಜಾತವಿಸ್ಮಯಾಸ್ಸರ್ವೇ ಸಂಘಿನ ಸ್ತ್ವಭವನ್ಕ್ರಮಾತ್ ॥ ೩೬ ॥

ಅಥ ಚಂಪಕಪಾಂಡ್ಯಂ ತಂ ಪ್ರಾಪ್ಯ ಸಂಘಕವೀಶ್ವರಾಃ ।
ತಾಮಾರ್ಯಾಂ ಶ್ರಾವಯಾಮಾಸು ಶ್ಶಬ್ದಾರ್ಥಸುಮನೋಹರಾಂ ॥ ೩೭ ॥

ಸ್ವಚಿಂತಾನುಗುಣಾಮಾರ್ಯಾಂ ಶ್ರುತ್ವಾ ಪಾಂಡ್ಯಮಹೀಪತಿಃ ।
ಮಚ್ಚಿಂತಾನುಗುಣಾ ಹ್ಯೇಷಾ ಕೋ ವಕ್ತಾ ಸ ಮಹಾಕವಿಃ ॥ ೩೮ ॥

ಇತಿ ತೇನೋಕ್ತಮಾಕರ್ಣ್ಯ ಪ್ರದರ್ಶ್ಯ ಬ್ರಹ್ಮಚಾರಿಣಂ ।
ಅಯಮೇವ ಹಿ ವಕ್ತಾಽಽರ್ಯಾಂ ಪ್ರಾಹುಃ ಪ್ರಾಕ್ತನಕೋವಿದಾಃ ॥ ೩೯ ॥

---

೩೫-೩೮. ಅನಂತರದಲ್ಲಿ ಆ ಬ್ರಹ್ಮಚಾರಿಯು ಸುಂದರೇಶ್ವರನು ತನಗೆ ಅನುಗ್ರಹಿಸಿ ಕೊಟ್ಟಿರುವ ಪತ್ರಿಕೆಯನ್ನು ಸಂಘಮಂಟಪದ ವಿದ್ಯಾಪೀಠದಲ್ಲಿ ಕೂತುಕೊಂಡಿರುವ ಕವಿಗಳಿಗೆ ಸಂತೋಷದಿಂದ ತೋರಿಸಿದನು. ಅವರೆಲ್ಲರೂ ಆ ಪತ್ರಿಕೆಯನ್ನು ತೆಗೆದುಕೊಂಡು, ಆ ಪದ್ಯವನ್ನು ಕ್ರಮವಾಗಿ ಎಲ್ಲರೂ ಓದಿ ಆಶ್ಚರ್ಯವುಳ್ಳವರಾದರು. ಅನಂತರದಲ್ಲಿ ಆ ಕವಿಗಳೆಲ್ಲರೂ ಚಂಪಕಪಾಂಡ್ಯರಾಜನಿಗೆ ಮನೋಹರವಾದ ಶಬ್ದಾರ್ಥಗಳಿಂದ ಕೂಡಿರುವ ಆ ಪದ್ಯವನ್ನು ಓದಿ ಹೇಳಿದರು. ಅದನ್ನು ಕೇಳಿ ಪಾಂಡ್ಯರಾಜನು ನನ್ನ ಮನಸ್ಸಿನ ಆಲೋಚನೆಗೆ ಸರಿಯಾಗಿರುವ ಈ ಪದ್ಯವನ್ನು ಹೇಳಿರುವವನು ಮಹಾಕವಿಯಾಗಿರುವನು ಎಂದು ಹೇಳಿದನು.

೩೯-೪೨. ಆ ರಾಜನ ಮಾತನ್ನು ಕೇಳಿದ ಅವರೆಲ್ಲರೂ "ಇವನು ಈ ಪದ್ಯವನ್ನು ಹೇಳಿರುವನು" ಎಂದು ಬ್ರಹ್ಮಚಾರಿಯನ್ನು ತೋರಿಸಿದರು. ಅವನು ಸರಿಯಾದ ಆಚಾರವಂತನಾಗಿದ್ದನು. ಆಗಮಗಳೆಲ್ಲದರಲ್ಲಿಯೂ ನಿಪುಣನಾಗಿದ್ದನು. ಆದಿಶೈವವಂಶದಲ್ಲಿ ಹುಟ್ಟಿದವನಾಗಿ ಶ್ರೇಷ್ಠನಾಗಿದ್ದನು. ಸುಂದರನಾಥನೆಂಬ ಹೆಸರಿಗೆ

ಸದಾಚಾರರತಂ ನಿತ್ಯಂ ಸಕಲಾಗಮಪಾರಗಂ ।
ಆದಿಶೈವಕುಲಾಂಭೋಧಿ ಪೂರ್ಣಚಂದ್ರಮಿವ ಸ್ಥಿತಂ ॥ ೪೦ ॥

ನಾಮ್ನಾ ಸುಂದರನಾಥಾಖ್ಯ ಮತಿಸುಂದರ ಮಂಗಕೈಃ ।
ವಿಲೋಕ್ಯಾ ಶ್ಚರ್ಯಸಂಯುಕ್ತಃ ಪ್ರಾಹ ಪಾಂಡ್ಯಮಹೀಪತಿಃ ॥ ೪೧ ॥

ಮಧ್ಯಸ್ಥಾಂ ನೀವೀಂ ಪ್ರಗೃಹ್ಯ ತ್ವಂ ಸ್ವರ್ಣಟಂಕೈಶ್ಚ ನಿರ್ಮಿತಾಂ ।
ಇತ್ಯುಕ್ತ್ವಾ ಪ್ರೇಷಯಾಮಾಸ ಗಂತುಂ ಸರ್ವಾನ್ಸ್ವವೇಶ್ಮಸು ॥ ೪೨ ॥

ಅಥ ಚಂಪಕಪಾಂಡ್ಯೋಽಪಿ ಮನಸ್ಯಂತಸ್ಸವಿಸ್ಮಯಃ ।
ಆಸ್ಥಾನಮಂಟಪಾತ್ತಸ್ಮಾದುತ್ಥಾಯಾಂತಃ ಪುರಂ ಯಯೌ ॥ ೪೩ ॥

ತದಾ ಗ್ರಹೀತುಮುದ್ಯುಕ್ತೇ ಸ್ವಾಂ ನೀವೀಂ ಶಂಭುವಿಪ್ರಜಃ ।
ಆರ್ಯಾಯಾ ದೂಷಣಂ ಪ್ರಾಹ ನಕ್ಕೀರೋ ಮತ್ಸರೀ ತದಾ ॥ ೪೪ ॥

---

ಅನುಸಾರವಾಗಿ ಸುಂದರವಾದ ಅಂಗಗಳಿಂದ ಪ್ರಕಾಶಿಸುತ್ತಿದ್ದನು ರಾಜನು ಅವನನ್ನು ಕರೆದು ಬಹಳ ಆಶ್ಚರ್ಯವುಳ್ಳವನಾಗಿ, " ಸಂಘಮಂಟಪದ ಮಧ್ಯದಲ್ಲಿರುವ ಚಿನ್ನದ ನಾಣ್ಯಗಳಿಂದ ತುಂಬಿದ ಚೀಲವನ್ನು ನೀನು ತೆಗೆದುಕೋ" ಎಂದು ಹೇಳಿ, ಉಳಿದವರೆಲ್ಲರನ್ನೂ ಮನೆಗೆ ಕಳುಹಿಸಿದನು.

೪೩-೪೬. ಅನಂತರದಲ್ಲಿ ಚಂಪಕಪಾಂಡ್ಯರಾಜನು ಮನಸ್ಸಿನಲ್ಲಿ ಆಶ್ಚರ್ಯವುಳ್ಳವನಾಗಿ ಆ ಸಭಾಮಂಟಪದಿಂದ ಎದ್ದು ಅಂತಃಪುರಕ್ಕೆ ಹೊರಟುಹೋದನು. ಆಗ ಆ ಸುಂದರನಾಥನೆಂಬ ಬ್ರಹ್ಮಚಾರಿಯು ದ್ರವ್ಯದ ಗಂಟನ್ನು ತೆಗೆದುಕೊಳ್ಳುವುದಕ್ಕೆ ಉದ್ಯುಕ್ತನಾದನು. ಅಸೂಯೆಯುಳ್ಳ ನಕ್ಕೀರನೆಂಬ ಕವಿಯು ಆ ಪದ್ಯವು ಸರಿಯಾಗಿಲ್ಲವೆಂದು ಹೇಳಿದನು. ಆಗ ಆ ಬ್ರಾಹ್ಮಣನು ಸುಂದರೇಶ್ವರನ ಹತ್ತಿರಕ್ಕೆ ಬಂದು ಭಕ್ತಿಯಿಂದ ನಮಸ್ಕಾರ ಮಾಡಿ, ಸ್ತೋತ್ರಮಾಡಿ, " ನಕ್ಕೀರಕವಿಯು ನೀವು ಬರೆದಿರುವ ಪದ್ಯದಲ್ಲಿ ತಪ್ಪನ್ನು ಹೇಳುತ್ತಿರುವನು." ಎಂದು ಹೇಳಿದನು. ಅಪಾರ ದಯಾಶಾಲಿಯಾದ ಶಿವನು ಕೂಡಲೆ ಕವಿಯ ವೇಷವನ್ನು ಧರಿಸಿ, ಸಂಘಮಂಟಪಕ್ಕೆ

ದ್ವಿಜಸ್ತು ಶಂಭುಂ ಸಂಪ್ರಾಪ್ಯ ನತ್ವಾ ಪ್ರಸ್ತುತ್ಯ ಭಕ್ತಿತಃ ।
ನತ್ಕೀರೋ ದೂಷಯತ್ಯಾರ್ಯಾಮಿತಿ ಪ್ರೋವಾಚ ಸಾಂಜಲಿಃ ॥ ೪೫ ॥

ಕರುಣಾಸಾಗರಃ ಶಂಭುಃ ಕವಿವೇಷಂ ಪ್ರಗೃಹ್ಯ ಚ ।
ಸಂಘಮಂಟಪಮಾಸಾದ್ಯ ಸಂಘಸ್ಥಾನ ಬ್ರವೀತ್ಕವೀನ್ ॥ ೪೬ ॥

ಯುಷ್ಮಾಸು ಕೋಸ್ಯಾ ಆರ್ಯಾಯಾ ದೂಷಣಂ ತ್ವವದತ್ಕವಿಃ ।
ಇತ್ಯುಕ್ತೇ ಸುಂದರೇಶೇನ ಕವಿವೇಷಧರೇಣ ಚ ॥ ೪೭ ॥

ಕ್ರುದ್ಧಸ್ತದಾಹ ನತ್ಕೀರೋ ವಕ್ತಾಹಮಿತಿ ಚಾಬ್ರವೀತ್ ।
ಕ್ವೇಯ ಮುಕ್ತಿಸ್ತ್ವಯಾ ಚಾತ್ರ ದೂಷಣಂ ತು ಕವೇ ವದ ॥ ೪೮ ॥

ಆಕ್ಷೇಪಂ ಚ ಸಮಾಧಾನಂ ವದತೋ ರುಭಯೋ ರಪಿ ।
ಆವಯೋರಪಿ ಚಾತುರ್ಯಂ ಜಾನಂತ್ಯೇತೇ ಕವೀಶ್ವರಾಃ ॥ ೪೯ ॥

---

ಬಂದು ಸಂಘದ ಕವಿಗಳನ್ನು ನೋಡಿ, " ನಿಮ್ಮಲ್ಲಿ ಯಾವ ಕವಿಯು ಈ ಪದ್ಯದಲ್ಲಿ ತಪ್ಪನ್ನು ಹೇಳಿರುವವನು " ಎಂದು ಪ್ರಶ್ನೆ ಮಾಡಿದನು. ಕವಿಯ ವೇಷದಿಂದ ಇರುವ ಸುಂದರೇಶ್ವರನ ಮಾತನ್ನು ಕವಿಗಳೆಲ್ಲರೂ ಕೇಳಿದರು

೪೭. ನತ್ಕೀರಕವಿಗೆ ಕೋಪವು ಬಂದಿತು. " ನಾನು ಪದ್ಯದಲ್ಲಿ ತಪ್ಪನ್ನು ತಿಳಿದು ಹೇಳಿರುವವನು " ಎಂದು ಉತ್ತರವನ್ನು ಕೊಟ್ಟನು.

೪೮. ಆಗ ಕವಿಯ ವೇಷದಿಂದ ಇರುವ ಸುಂದರೇಶ್ವರನು " ಎಲೈ ದುಷ್ಟ ಕವಿಯೆ, ನೀನು ಹೇಳುವ ಈ ಮಾತಿನಂತೆ ಈ ಪದ್ಯದಲ್ಲಿ ದೋಷವು ಹೇಗೆ ಆಗುವುದು ಅದನ್ನು ದೃಢಪಡಿಸು. ಈ ವಿಷಯದಲ್ಲಿರುವ ಆಕ್ಷೇಪಣೆ ಮತ್ತು ಸಮಾಧಾನಗಳನ್ನು ನಾವಿಬ್ಬರೂ ಹೇಳೋಣ, ನಮ್ಮಿಬ್ಬರ ಬುದ್ಧಿಚಾತುರ್ಯವನ್ನು ಎಲ್ಲವನ್ನೂ ಈ ಉಳಿದಿರುವ ಕವೀಶ್ವರರು ತಿಳಿದು ಹೇಳುವರು " ಎಂದು ಹೇಳಿದನು.

೪೯–೫೨. ಕೋಪದಿಂದ ಇರುವ, ಹಾವಿನಂತೆ ಇರುವ ನತ್ಕೀರಕವಿಯು ಆ ಮಾತನ್ನು ಕೇಳಿ, "ತಲೆಯ ಕೂದಲಿನಲ್ಲಿ (ಪರಿಮಳವು ಸ್ವಭಾ) ರುವ ಸುವಾಸನೆಯು ಸ್ವಭಾವಗುಣವಲ್ಲ. ಆದ್ದರಿಂದ ಈ ಪದ್ಯದಲ್ಲಿ ಅರ್ಥದೋಷವಿರುವುದು. ಶಬ್ದ

ಅಥ ಪ್ರಾಹ ಸ ನತ್ಕೀರಃ ಕ್ರುದ್ಧಾಶೀ ವಿಷಸನ್ನಿಭಃ ।
ಗಂಧಃಸ್ವಾಭಾವಿಕೋ ನಾಸ್ತಿ ಕೇಶಸ್ಯೇತಿ ಮಯೋದಿತಂ ॥ ೫೦ ॥

ಅರ್ಥದೂಷಣಸಂಜ್ಞಶ್ಚ ದೋಷೋ ಯೋ ವಿದ್ಯತೇsತ್ರ ತು ।
ನತ್ಕೀರಸ್ಯ ವಚಶ್ಶ್ರುತ್ವಾ ಹಾಲಾಸ್ಯೇಶಃ ಕವೀಶ್ವರಃ ॥ ೫೧ ॥

ಅತಿಪ್ರಗಲ್ಭಯಾ ವಾಚಾ ಪುನಃ ಪ್ರಾಹ ವಿಲೋಕ್ಯ ತಂ ।
ಪದ್ಮಿನೀಕೇಶಭಾರಶ್ಚ ಪದ್ಮಕಲ್ಹಾರಗಂಧವಾನ್ ॥ ೫೨ ॥

ಇತಿ ಲೋಕಪ್ರಸಿದ್ಧೋsಪಿ ನ ಜ್ಞಾತಸ್ಸ ಕಥಂ ತ್ವಯಾ ।
ಆಕರ್ಣ್ಯಾಥ ಕವೇರ್ವಾಕ್ಯಮಥ ನತ್ಕೀರ ಅಬ್ರವೀತ್ ॥ ೫೩ ॥

ತಾಸಾಂ ಕೇಶಭರೋsಪ್ಯನ್ಯಗಂಧಸಂಸರ್ಗವಾನಿತಿ ।
॥ ಈಶ್ವರ ಉವಾಚ ॥
ದಿವ್ಯಸ್ತ್ರೀಕೇಶಪಾಶಶ್ಚ ನಿತ್ಯಸ್ಸಹಜ ಏವ ಹಿ ॥ ೫೪ ॥

---

ದೋಷವಿಲ್ಲ. ಎಂದು ನಾನು ಹೇಳಿರುವೆನು" ಎಂದು ಹೇಳಿದನು. ಆಗ ಕವೀಶ್ವರನಾದ ಹಾಲಾಸ್ಯೇಶ್ವರನು ನತ್ಕೀರನ ಮಾತನ್ನು ಕೇಳಿ, "ಪದ್ಮಿನೀಜಾತಿಯ ಸ್ತ್ರೀಯರ ಕೇಶ ಪಾಶದಲ್ಲಿ ಪದ್ಮ, ಕಲ್ಹಾರ ಪುಷ್ಪದ ಪರಿಮಳವು ಸ್ವತಸ್ಸಿದ್ಧವಾಗಿರುವುದು. ಎಂದು ಲೋಕದಲ್ಲಿ ಅನುಭವವಿರುವುದು. ಲೋಕಪ್ರಸಿದ್ಧವಾದ ಈವಿಷಯವನ್ನು ಕವಿಯಾದ ನೀನು ತಿಳಿದಿಲ್ಲ." ಎಂದು ಪ್ರೌಢವಾಗಿ ಹೇಳಿದನು. ಅದನ್ನು ಕೇಳಿ ನತ್ಕೀರನು "ಪರಿಮಳವಿರುವ ಪದಾರ್ಥದ ಸಂಬಂಧವಿಲ್ಲದೆ ಕೇಶಪಾಶಕ್ಕೆ ಪರಿಮಳವು ಇರುವುದಿಲ್ಲ. ಆದ್ದರಿಂದ ಪದ್ಮಿನೀಜಾತಿಯ ಸ್ತ್ರೀಯರ ಕೇಶಪಾಶವು ಸುವಾಸನೆಯಿರುವ ಪದಾರ್ಥಗಳ ಬಂಧದಿಂದಲೇ ಸುವಾಸನೆಯುಳ್ಳದ್ದಾಗಿರುವುದ.." ಎಂದು ಹೇಳಿದನು.

೫೩–೫೬ "ದಿವ್ಯಸ್ತ್ರೀಯರ ಕೇಶದಲ್ಲಿರುವ ಪರಿಮಳವು ಯಾವಾಗಲೂ ಹುಟ್ಟುಗುಣವಾಗಿರುವುದು. ಮತ್ತು ಅದು ನಿತ್ಯವಾದದ್ದು. ಅದನ್ನು ಬದ ಲಾಯಿಸಲು ಯಾರಿಗೂ ಸಾಮರ್ಥ್ಯವಿಲ್ಲ" ಎಂದು ಕವೀಶ್ವರನಾದ ಸುಂದರೇಶ್ವರನು ಹೇಳಿದ್ದನ್ನು ಕೇಳಿ, ನತ್ಕೀರನು "ಜಾಜಿಯೇ ಮೊದಲಾದ ಹೂವುಗಳಿಂದಲೂ

ತಮನ್ಯಥಯಿತುಂ ಕೋ ವಾ ಶಕ್ತೋಽಸ್ತಿ ಜಗತೀತಲೇ ।
ಕವೀಶ್ವರೇಣೇಶ್ವರೇಣ ಪ್ರೋಕ್ತಂ ಶ್ರುತ್ವಾ ವಚಃ ಕವಿಃ ॥ ೫೫ ॥

ನತ್ಕೀರೋಽಪಿ ಪುನಃ ಪ್ರಾಹ ಕೋಪಪ್ರಸ್ಫುರಿತಾಧರಃ ।
ಪಾರಿಜಾತಪ್ರಸೂನಾದ್ಯೈಶ್ಚಾನ್ಯೈಃ ಕಸ್ತೂರಿಕಾದಿಭಿಃ ॥ ೫೬ ॥

ತತ್ಕೇಶಾ ಅಪಿ ಸಂಸ್ಕಾರೈ ಸ್ಸುಗಂಧಾ ನಾನ್ಯಥಾ ಧ್ರುವಂ ।
ನತ್ಕೀರವಚ ಆಕರ್ಣ್ಯ ಕವೀಶಃ ಕಾಮಶಾಸನಃ ॥ ೫೭ ॥

ಕರ್ತಾ ಪ್ರತ್ಯುತ್ತರಾಭಾವಂ ವಚೋ ವಕ್ತುಂ ಪ್ರಚಕ್ರಮೇ ।
ತಥಾ ವಿಧಾಃ ಕಿಂ ಗೌರ್ಯಾಶ್ಚ ಕುಂತಲಾ ಅತಿಕೋಮಲಾಃ ॥ ೫೮ ॥

ನಿತ್ಯೈಃ ಪರಿಮಳೈರ್ಯುಕ್ತಾ ನಿತ್ಯಾ ನೀಲಪ್ರಭಾತುಲಾಃ ।
ಮನೋಹರಾ ಮನೋವಾಚಾಮತಿದೂರಗುಣೋಜ್ವಲಾಃ ॥ ೫೯ ॥

---

ಕಸ್ತೂರಿಯೇ ಮೊದಲಾದ ಪರಿಮಳ ದ್ರವ್ಯಗಳಿಂದಲೂ ಕೇಶಗಳಿಗೆ ಸುವಾಸನೆಯು ಉಂಟಾಗುವುದು. ಕೇಶದಲ್ಲಿ ಪರಿಮಳವು ಸ್ವಾಭಾವಿಕ ಗುಣವಾಗಿಲ್ಲ" ವೆಂದು ಪುನಃ ಉತ್ತರ ಕೊಟ್ಟನು.

೫೭–೬೦. ಕಾಮನನ್ನು ನಿಗ್ರಹ ಮಾಡಿರುವ ಕವೀಶ್ವರನಾದ ಸುಂದರೇಶ್ವರನು ತಾನೇ ಪದ್ಯವನ್ನು ಬರೆದಿರುವ ಕಾರಣ ಪುನಃ ಆಕ್ಷೇಪಣೆಯು ಬರದಂತೆ ಸಮಾಧಾನವನ್ನು ಹೇಳಲು ಉಪಕ್ರಮಿಸಿ " ಗೌರೀದೇವಿಯ ಬಹಳ ಮೃದುವಾದ ಕೇಶಗಳು ಯಾವಾಗಲೂ ನಿತ್ಯವಾದ ಪರಿಮಳವುಳ್ಳವುಗಳು. ನೀಲವಾದ ಕಾಂತಿಯುಳ್ಳವುಗಳು. ಅವುಗಳಿಗೆ ಹೋಲಿಕೆಯೇ ಇರುವುದಿಲ್ಲ. ಅವು ಬಹಳ ಸುಂದರವಾದವುಗಳು. ಅವುಗಳನ್ನು ವರ್ಣಿಸಲು ಮನಸ್ಸಿಗೆ ಸಾಮರ್ಥ್ಯವಿಲ್ಲ. ಅವುಗಳನ್ನು ವರ್ಣಿಸುವುದಕ್ಕೆ ತಕ್ಕ ಶಬ್ದಗಳೇ ಇರುವುದಿಲ್ಲ. ಅತ್ಯುತ್ತಮವಾದ ಗುಣಗಳಿಂದ ಕೂಡಿದ ಆ ಕೇಶಗಳು ವೇದಪ್ರಸಿದ್ಧವಾಗಿ ಅಂತರಿಕ್ಷವೆಲ್ಲವನ್ನೂ

ಅಖಿಲಂ ಗಗನಂ ವ್ಯಾಪ್ತಾ ನಿಖಿಲಶ್ರುತಿಸಂಸ್ತುತಾಃ ।
ಅನಂತಸದ್ಗುಣಾಧಾರಾ ಭವಾನೀಕುಂತಲಸ್ಯ ಚ ॥ ೬೦ ॥

ಅಸ್ತಿ ಚೇದ್ದೋಷಲೇಶೋಽಪಿ ತಂ ಚ ಮೂಢಕವೇ ವದ ।
ಪುನಶ್ಚಾಹ ಸ ನಕ್ಕೀರೋ ದೇವ್ಯಾಃ ಕೇಶೋಽಪಿ ನಿಂದ್ಯತೇ ॥ ೬೧ ॥

ಅಸಂಸ್ಕೃತಶ್ಚೇದ್ಗಂಧೈಶ್ಚ ದಿವ್ಯವೃಕ್ಷಪ್ರಸೂನಜೈಃ ।
ಕರ್ಣನಾರಾಚ ಭೂತಂ ತದ್ವಚಶ್ಶ್ರುತ್ವಾ ಕವೀಶ್ವರಃ ॥ ೬೨ ॥

ಫಾಲದೃಷ್ಟ್ಯಾ ಪಶ್ಯತಿ ಸ್ಮ ಕಿಂಚಿತ್ಕೋಪವಶೇನ ತಂ ।
ಭೀತ್ಯಾತಿಶೀಘ್ರಂ ಗಚ್ಛತ್ಸು ಸತ್ಸು ಸಂಘುಕವಿಷ್ವಪಿ ॥ ೬೩ ॥

ಧೈರ್ಯಾದ್ವೀತಭಯೋ ಭೂತ್ವಾ ನಕ್ಕೀರಸ್ತ್ವೇವ ಮಬ್ರವೀತ್ ।
ಭೂತೇ ಸಹಸ್ರಮಕ್ಷೀಣಿ ಪರಿತ ಸ್ಸಂ ತ್ವನೇನ ಕಿಂ ॥ ೬೪ ॥

ವ್ಯಾಪಿಸಿಕೊಂಡಿರುವ ಬಹಳವಾದ ಉತ್ತಮ ಗುಣಗಳಿಗೆ ಆಧಾರವಾದ ಭವಾನೀದೇವಿಯ ಕೇಶಪಾಶದಲ್ಲಿಯೂ, ನೀನೂ ಈ ಪ್ರಕಾರವಾದ ದೋಷವನ್ನು ಹೇಳುತ್ತೀಯಾ" ಎಂದು ಪ್ರಶ್ನೆ ಮಾಡಿದನು.

೬೧–೬೪ ಆಗ ನಕ್ಕೀರನು "ಪದ್ಮಿನೀಜಾತಿಯ ಸ್ತ್ರೀಯಾದರೇನು, ದಿವ್ಯ ಸ್ತ್ರೀಯಾದರೇನು, ದಿವ್ಯವೃಕ್ಷಗಳ ಹೂವುಗಳಿಂದಲಾಗಲಿ, ಸುಗಂಧದ್ರವ್ಯಗಳಿಂದಾಗಲಿ, ಕೇಶಪಾಶಕ್ಕೆ ಸಂಸ್ಕಾರ ಮಾಡದಿದ್ದರೆ, ಪರಿಮಳವು ಇರುವುದಿಲ್ಲ. ಕೇಶಪಾಶದಲ್ಲಿ ಪರಿಮಳವು ಸ್ವಾಭಾವಿಕವಲ್ಲ" ಎಂದು ಉತ್ತರ ಕೊಟ್ಟನು. ಆಗ ಸುಂದರೇಶ್ವರನಿಗೆ ಕಿವಿಯಿಂದ ಕೇಳಲು ಕ್ರೂರವಾಗಿರುವ ಆ ಮಾತನ್ನು ಕೇಳಿದ್ದರಿಂದ ಕೊಂಚ ಕೋಪವು ಬಂದಿತು. ಆಗ ಅವನು ನಕ್ಕೀರನನ್ನು ಹಣೆಗಣ್ಣಿನಿಂದ ಕೊಂಚ ಮಟ್ಟಿಗೆ ನೋಡಿದನು. ಸಂಘದ ಇತರ ಕವಿಗಳೆಲ್ಲರೂ ಹೆದರಿಕೊಂಡು ಬೇಗ ದೂರಕ್ಕೆ ಹೋಗುತ್ತಿದ್ದರು. ಆಗ ನಕ್ಕೀರನು ಹೆದರದೆ, ಧೈರ್ಯದಿಂದ ಸ್ಥಿರನಾಗಿ ನಿಂತು "ಭೂತದ ಸುತ್ತಲೂ ಸಾವಿರ ಕಣ್ಣುಗಳಿರಲಿ, ಅದರಿಂದ ಭಯವೇನು ? ತಪ್ಪು ಯಾವಾಗಲೂ ತಪ್ಪಾಗಿಯೇ ಇರುವುದು. ಆದ್ದರಿಂದ ನಾನು ಈ ಗೊಡ್ಡು ಬೆದರಿಕೆಗೆ ಹೆದರುವವನಲ್ಲ" ಎಂದು ಉತ್ತರ ಹೇಳಿದನು.

ದೋಷಸ್ತು ದೋಷ ಏವ ಸ್ಯಾನ್ನಾಹಂ ಭೀತೋಽಸ್ಮಿ ಭೀಷಯಾ
ತಸ್ಯಾಮರ್ಷವಚಶ್ಶ್ರುತ್ವಾ ತ್ಯಕ್ತ್ವಾ ಚಾಮರ್ಷಮಾತ್ಮನಃ ॥ ೬೫ ॥

ದೃಷ್ಟ್ವಾ ತಸ್ಯ ಮನೋಧೈರ್ಯಂ ಚಿರಂ ತೂಷ್ಣೀಂ ಶಿವಸ್ಸ್ಥಿತಃ ।
ಪುನಶ್ಚಾಹ ಶಿವೋ ದೇವ್ಯಾ ನಿಖಿಲಾಸ್ಸದ್ಗುಣಾ ಅಪಿ ॥ ೬೬ ॥

ಗಂಧಾದಯಃ ಸ್ವತಸ್ಸಿದ್ಧಾ ಯಥಾ ಸರ್ವಜ್ಞತಾದಯಃ ।
ಕಿಂತು ಸಾ ಪುಷ್ಪಕೇಶೀತಿ ಪ್ರಸಿದ್ಧಾ ವೇದಶಾಸ್ತ್ರಯೋಃ ॥ ೬೭ ॥

ಪರಿಪೂರ್ಣಾ ಪರಾಶಕ್ತಿಃ ಸಚ್ಚಿದಾನಂದಲಕ್ಷಣಾ ।
ಶಂಭುವಾಕ್ಯಂ ಸಮಾಕರ್ಣ್ಯ ಸರ್ವೇ ಸಂಘಕವೀಶ್ವರಾಃ ॥ ೬೮ ॥

ಪುನಃ ಪುನಶ್ಶಿರಃಕಂಪಂ ಕೃತ್ವಾ ತುಷ್ಟಿಂ ಪರಾಂ ಯಯುಃ ।
ನಿರುತ್ತರಸ್ಸ ನ್ನಕ್ಕೀರ ಸ್ತೂಷ್ಣೀಂ ಭೂತೋ ವ್ಯಥಾಯುತಃ ॥ ೬೯ ॥

---

೬೫-೬೮. ಕವೀಶ್ವರನಾದ ಶಿವನು ಅವನ ಹಠದ ಮಾತನ್ನು ಕೇಳಿದನು. ಅವನ ಮನಸ್ಸಿನ ಧೈರ್ಯವನ್ನು ಚೆನ್ನಾಗಿ ತಿಳಿದುಕೊಂಡು ತಾನೇ ತನ್ನ ಹಠವನ್ನು ಬಿಟ್ಟು ಸುಮ್ಮನೆ ಇದ್ದನು. ಆದರೂ ಬದಲಾಗಿ ಹೇಳಲು ಉಪಕ್ರಮಿಸಿ, “ಸರ್ವಜ್ಞತ್ವವೇ ಮೊದಲಾದ ಗುಣಗಳು ದೇವಿಯಲ್ಲಿ ಸ್ವಭಾವ ಸಿದ್ಧವಾಗಿರುವುವು. ಇದರಂತೆ ಅನೇಕ ಸದ್ಗುಣಗಳೂ ದೇವಿಯಲ್ಲಿರುವುವು. ಗಂಧಾದಿಗಳು ಸ್ವಭಾವ ವಾಗಿರುವಲ್ಲಿ ಸಂಶಯವಿಲ್ಲ. ಮತ್ತು ಬಹಳ ಉತ್ತಮಗುಣಗಳಿಂದ ಪರಿಪೂರ್ಣಳಾದ ಸಚ್ಚಿದಾನಂದ ರೂಪದಿಂದ ಇರುವ ಪರಾಶಕ್ತಿಯು ದೇವಿಯಾಗಿರುವಳು ವೇದಗಳೂ ಮತ್ತು ಶಾಸ್ತ್ರಗಳೂ ಅವಳನ್ನು ಪುಷ್ಪಕೇಶೀ ಎಂದು ಹೊಗಳುತ್ತಿರುವುವು. ಆದ್ದರಿಂದ ದೇವಿಯ ಕೇಶಪಾಶದಲ್ಲಿ ಪರಿಮಳವು ಸ್ವಾಭಾವಿಕವೆಂದು ಹೇಳಿದನು.

೬೯-೭೧. ಕವೀಶ್ವರನಾದ ಸುಂದರೇಶ್ವರನ ಮಾತನ್ನು ಕೇಳಿ, ಸಂಘದ ಕವೀಶ್ವರರು ಎಲ್ಲರೂ ಬಹಳ ಆನಂದದಿಂದ ತಲೆಯನ್ನು ತೂಗಿದರು. ಆಗ ನಕ್ಕೀರನು ಪ್ರತ್ಯುತ್ತರವನ್ನು ಹೇಳದೆ ಸುಮ್ಮನೆ ಇದ್ದನು. ಆಗ ಅವನಿಗೆ ಮನಸ್ಸಿ

ಶಂಭುನೇತ್ರಾಗ್ನಿನಾ ಕಿಂಚಿತ್ತಪ್ತೋ ಹಾ ಹೇತಿ ಮೂರ್ಛಿತಃ ।
ಪಯಃ ಪಯ ಇತಿ ಕ್ರಂದನ್ಪರಿತೋ ಹೇಮಪದ್ಮಿನೀಂ ॥ ೭೦ ॥

ಪರಿಭ್ರಮನ್ಪಿಪಾಸಾರ್ತ ಸ್ತ್ವಪತತ್ತಜ್ಜಲಾಂತರೇ ।
ಕವೀಶ್ವರಾಕೃತಿ ಶಂಭುಸ್ತತ್ರ ಸದ್ಯಸ್ತಿರೋದಧೇ ॥ ೭೧ ॥

ಶಿವವಿಪ್ರಾತ್ಮಜಸ್ಸದ್ಯಸ್ತಾಂ ನೀವೀಂ ಪರಿಗೃಹ್ಯ ಚ ।
ಉದ್ವಾಹ್ಯ ಕಾಂಚಿತ್ಕನ್ಯಾಂ ಚ ಸರ್ವೋತ್ಕೃಷ್ಟಂ ಬಂಧುಮಧ್ಯತಃ ॥ ೭೨ ॥

ತುಷ್ಟ ಸ್ಸಪುತ್ರಾನ್ವ್ಯಾಪ್ತ್ಯಾ ಚ ಧನಧಾನ್ಯಾದಿಸಂಪದಾ ।
ಭೂಲೋಕಶಿವಲೋಕೇ ಚ ಸುಖೇನ ಚಿರಮೇಧತೇ ॥ ೭೩ ॥

ಶ್ರೀಹಾಲಾಸ್ಯಪತಿಂ ಶಂಭುಂ ಭಕ್ತಾಭೀಷ್ಟಪ್ರದಾಯಕಂ ।
ಪ್ರಣಮ್ಯ ಭಕ್ತಿಯುಕ್ತಸ್ಸ್ವಯಂ ಯಂ ಕಾಮಯತೀಹ ಯಃ ॥ ೭೪ ॥

---

ನಲ್ಲಿ ದುಃಖವು ಉಂಟಾಯಿತು. ಶಿವನ ಹಣೆಗಣ್ಣಿನ ನೋಟದಿಂದ ಕೊಂಚಮಟ್ಟಿಗೆ ಸುಟ್ಟವನಾದ ಕಾರಣ ಜ್ಞಾನವಿಲ್ಲದವನಾಗಿ "ನೀರು ನೀರು" ಎಂದು ಕೂಗುತ್ತಾ ಬಾಯಾರಿಕೆಯಿಂದ ಬಳಲಿ ಆ ಕೊಳದವಳಗೆ ಬಿದ್ದನು. ಕವೀಶ್ವರನ ಆಕಾರವನ್ನು ಹೊಂದಿದ ಸುಂದರೇಶ್ವರನು ಆ ಕ್ಷಣದಲ್ಲಿಯೇ ಅದೃಶ್ಯನಾದನು.

೭೨–೭೪. ಶಿವದ್ವಿಜಕುಮಾರನು ಅನಂತರದಲ್ಲಿ ಆ ಹಣದ ಗಂಟಿನಿಂದ ವಿವಾಹವನ್ನು ಮಾಡಿಕೊಂಡು, ತನ್ನ ಬಂಧುಬಳಗ ಮಧ್ಯದಲ್ಲಿ ಶ್ರೇಷ್ಠನಾಗಿದ್ದನು. ಅವನು ಆ ಮಧುರಾನಗರದಲ್ಲಿ ಧನಧಾನ್ಯಾದಿಗಳಿಂದ ದಿನಂಪ್ರತಿ ವೃದ್ಧಿಯನ್ನು ಹೊಂದುತ್ತಾ, ಸತ್ಪುತ್ರನನ್ನು ಹೊಂದಿ ಬಹಳ ಸುಖದಿಂದ ಇದ್ದನು. ಭಕ್ತರ ಇಷ್ಟಗಳನ್ನು ಅನುಗ್ರಹಿಸುವ ಹಾಲಾಸ್ಯಾಧಿಪನಾದ ಸುಂದರೇಶ್ವರನಿಗೆ ಭಕ್ತಿಯಿಂದ ನಮಸ್ಕಾರ ಮಾಡುವವನು ಇಷ್ಟಾರ್ಥವೆಲ್ಲವೂ ಅವು ಸುಲಭವಾಗಲಿ,ದುರ್ಲಭವಾಗಲಿ, ಶಿವನ ದಯೆಯಿಂದ ಎಲ್ಲವನ್ನೂ ಹೊಂದಿ, ಭೋಗವನ್ನು ಅನುಭವಿಸಿ ಕೊನೆಯಲ್ಲಿ ಮುಕ್ತಿಯನ್ನು ಹೊಂದುವನು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕೋನಷಷ್ಠಿತಮೋಽಧ್ಯಾಯಃ

|| ಅಗಸ್ತ್ಯ ಉವಾಚ ||

ರಕ್ಷತಿ ಸ್ಮ ಸ ಗೌರೀಶೋ ನತ್ಕೀರಮಪರಾಧಿನಂ ।
ಯಯಾ ತು ಲೀಲಯಾ ತಾಂ ಚ ಶೃಣುಧ್ವಂ ಮುನಿಪುಂಗವಾಃ || ೧ ||

ಸತಿ ಮಜ್ಜತಿ ನತ್ಕೀರೇ ಹೇಮಪದ್ಮಾಕರಾಂತರೇ ।
ತತ್ಸ್ನೇಹಾತಿಶಯಾತ್ ಖಿನ್ನಾಃ ಕಪಿಲಾದ್ಯಾಶ್ಚ ಸಂಘಿನಃ || ೨ ||

ವಿಹಾಯ ವಿದ್ಯಾಗೋಷ್ಠೀಂ ಚ ಭೋಗ್ಯವಸ್ತುಷು ಚಾದರಂ ।
ಫಲಕಾಯಾಂ ತು ದಿವ್ಯಾಯಾಂ ಸ್ಥಾತುಂ ಶ್ರದ್ಧಾಂ ನ ಚಕ್ರಿರೇ || ೩ ||

---

### ಐವತ್ತೊಂಬತ್ತನೆಯ ಅಧ್ಯಾಯವು

೧-೪. ಅಗಸ್ತ್ಯಋಷಿಯು ಹೇಳಿದನು :—ಗೌರೀದೇವಿಗೆ ಪತಿಯಾದ ಶಿವನು ತಪ್ಪಿತಸ್ಥನಾದ ನತ್ಕೀರನನ್ನು ರಕ್ಷಿಸಿದ ಲೀಲೆಯನ್ನು ನಾನು ಹೇಳುವೆನು ನೀವೆಲ್ಲರೂ ಕೇಳಿರಿ. ನತ್ಕೀರನು ಹೇಮಪದ್ಮಾಬ್ಧಿನೀ ಕೊಳದಲ್ಲಿ ಮುಳುಗಿಕೊಂಡು ಇರುವುದನ್ನು ಕಂಡು, ಅವನ ಮಿತ್ರರೆಲ್ಲರೂ ಖಿನ್ನರಾಗಿ, ವಿದ್ಯಾಗೋಷ್ಠಿಯನ್ನು ಬಿಟ್ಟರು. ಸುಖಾಭಿಲಾಷೆಯನ್ನು ಬಿಟ್ಟರು. ದಿವ್ಯವಾದ ಮಾತೃಕಾಪೀಠದಲ್ಲಿ

**ದೋಷಂ ಮುಹುರ್ಮುಹುಶ್ಚಿಂತ್ಯ ನಕ್ಕೀರಸ್ಯ ಮಹಾಕವೇಃ ।**
**ತದ್ದೋಷಪರಿಹಾರಂ ಚ ಕರ್ತುಂ ತೇದ್ರಾಗ ಚಿಂತಯನ್ ॥ ೪ ॥**

**ಅಥ ನಿಶ್ಚಿಕ್ಯುರಾರ್ಯಾಸ್ತೇ ನಕ್ಕೀರಸ್ಯಾಪರಾಧಿನಃ ।**
**ಸುಂದರೇಶ್ವರ ಏವೇತಿ ಕೃಪಾಧೀನೋಽಸ್ಯ ರಕ್ಷಿತಾ ॥ ೫ ॥**

**ಕರ್ತುಂ ಪ್ರಸನ್ನಂ ತಂ ಶಂಭುಂ ನವ್ಯೈಃ ಸ್ತುತಿಪದೈರಪಿ ।**
**ಸಮವೇತಾ ಸ್ಸಂಘಿನಸ್ತೇ ಪ್ರಾಪುಸ್ತಂ ಸುಂದರೇಶ್ವರಂ ॥ ೬ ॥**

**ಸರ್ವೇ ಪ್ರಣಮ್ಯ ಚಾಷ್ಟಾಂಗಪಂಚಾಂಗತ್ರ್ಯಂಗಭೇದತಃ ।**
**ತುಷ್ಟುವುಃ ಪರಯಾ ಭಕ್ತ್ಯಾ ಸ್ತುತಿವಾಕ್ಯೈಃ ಸ್ತುತಿಪ್ರಿಯಂ ॥ ೭ ॥**

**ಸುಂದರೇಶ್ವರ ಸರ್ವೇಶ ಸರ್ವಜ್ಞ ಶಶಿಭೂಷಣ ।**

---

ಕೊತುಕೊಳ್ಳುವುದನ್ನು ತ್ಯಜಿಸಿದರು. ಮಹಾಕವಿಯಾದ ನಕ್ಕೀರನಲ್ಲಿ ಆ ಕಾಲಕ್ಕೆ ಸರಿಯಾಗಿ ಉಂಟಾದ ಮಹಾಪರಾಧವನ್ನು ಯೋಚಿಸುತ್ತಾ, ಅದು ಪರಿಹಾರವಾಗುವುದಕ್ಕೆ ತಕ್ಕ ಉಪಾಯವನ್ನು ಆಲೋಚಿಸಿದರು.

೫-೭. ಪೂಜ್ಯರಾದ ಅವರು ಯೋಚಿಸುತ್ತಾ ಅಪರಾಧಿಯಾದ ನಕ್ಕೀರನನ್ನು ಬಹಳ ದಯೆಯುಳ್ಳ ಸುಂದರೇಶ್ವರನೇ ಕಾಪಾಡುವನೆಂದು ನಿಶ್ಚಯ ಮಾಡಿದರು. ಅವನನ್ನು ಸಂತೋಷಪಡಿಸುವುದಕ್ಕಾಗಿ ಸಂಘದ ಕವಿಗಳೆಲ್ಲರೂ ಒಟ್ಟಾಗಿ ಸೇರಿ, ಸುಂದರೇಶ್ವರನ ಸಮೀಪಕ್ಕೆ ಬಂದರು. ಹೊಸದಾಗಿರುವ ಸ್ತೋತ್ರಗಳನ್ನು ಮಾಡಿ, ಹೇಳಿದರು. ಅಷ್ಟಾಂಗ, ಪಂಚಾಂಗ, ತ್ರ್ಯಂಗ ಎಂಬ ಕ್ರಮದಿಂದ ಮೂರು ವಿಧವಾಗಿ ನಮಸ್ಕಾರ ಮಾಡಿದರು. ಸ್ತೋತ್ರಪ್ರಿಯನಾದ ಸುಂದರೇಶ್ವರನನ್ನು ಅನೇಕ ವಿಧವಾಗಿ ಸ್ತುತಿಸಿದರು.

೮. ಎಲೈ ಸುಂದರೇಶ್ವರನೇ, ನೀನು ಎಲ್ಲರನ್ನೂ ರಕ್ಷಿಸುವ ಅಧಿಪತಿಯಾಗಿರುತ್ತೀಯೆ. ಎಲ್ಲರೂ ಅಚರಿಸುವ ನಡವಳಿಕೆಯಲ್ಲಿನ ನ್ಯೂನಾತಿರೇಕಗಳನ್ನು ತಿಳಿಯಬಲ್ಲವನಾಗಿರುತ್ತೀಯೆ ವಿಪತ್ತಿನಲ್ಲಿ ಸಿಕ್ಕಿದವರನ್ನು ರಕ್ಷಿಸುವುದಕ್ಕೆ ತಕ್ಕ ಅಮೃತ

**ಸೂರ್ಯಸೋಮಾಗ್ನಿನಯನ ರಕ್ಷಾಸ್ಮಾನಂಬಿಕಾಪತೇ ॥ ೮ ॥**

**ಸುರಾಸುರನರಾದ್ಯೈಶ್ಚ ಪೂಜಿತಾಂಘ್ರಿಸರೋರುಹ ।**
**ಪುರಂದರವಿಮಾನಸ್ಥ ಪಾಹ್ಯಸ್ಮಾನ್ಪಾಪಪೀಡಿತಾನ್ ॥ ೯ ॥**

**ಕರುಣಾವಾರಿಧೇ ಕಾಲಹರ ಕಾಮಹರ ಪ್ರಭೋ ।**
**ಕಾಲಕೂಟಹರಾಘೌಘ ಹರಾಸ್ಮಾನಾಶು ಪಾಲಯ ॥ ೧೦ ॥**

**ಸುಮೀನಾಕ್ಷೀಪತೇ ಶಂಭೋ ಶ್ರೀಮದ್ಧಾಲಾಸ್ಯನಾಯಕ ।**
**ಸರ್ವೇಷಾಂ ಜಗತಾಮಾದೌ ಸ್ವಯಂಭೂತಾದ್ಯ ಪಾಹಿ ನಃ ॥ ೧೧ ॥**

---

ಮಯವಾದ ಚಂದ್ರನನ್ನು ಆಭರಣವಾಗಿ ಹೊಂದಿರುತ್ತೀಯೆ. ನಿಗ್ರಹಾನುಗ್ರಹವನ್ನು ಮಾಡಲು ಚಂದ್ರ, ಸೂರ್ಯ, ಅಗ್ನಿ, ಎಂಬ ಮೂರು ದೇವತೆಗಳನ್ನೇ ಕಣ್ಣುಗಳನ್ನಾಗಿ ಹೊಂದಿರುತ್ತೀಯೆ. ಮತ್ತು ಜಗನ್ಮಾತೆಯಾದ ಪಾರ್ವತಿಯನ್ನು ನೀನು ನಿನ್ನ ಅಧೀನದಲ್ಲಿ ಇರಿಸಿಕೊಂಡು ಇರುತ್ತೀಯೆ. ನಮ್ಮನ್ನು ರಕ್ಷಿಸು.

೯ ಇಂದ್ರನು ನಿರ್ಮಾಣ ಮಾಡಿಸಿರುವ ವಿಮಾನದಲ್ಲಿರುವ ಹಾಲಾಸ್ಯ ಪ್ರಭುವೇ, ದೇವತೆಗಳು, ಅಸುರರು, ಇವರೇ ಮೊದಲಾದವರೆಲ್ಲರೂ ನಿನ್ನ ಕಮಲದಂತಿರುವ ಪಾದಗಳಿಗೆ ನಮಸ್ಕಾರ ಮಾಡುತ್ತಿರುವರು. ಈ ಪ್ರಕಾರದ ಮಹಿಮೆಯಿಂದ ಇರುವ ನೀನು ಪಾಪದಿಂದ ತೊಂದರೆಪಡುತ್ತಿರುವ ನಮ್ಮನ್ನು ರಕ್ಷಿಸು.

೧೦. ಎಲೈ ಸುಂದರೇಶ್ವರನೇ, ನೀನು ಬಹಳಮಟ್ಟಿನ ದಯೆಯುಳ್ಳವನಾಗಿ ಇರುತ್ತೀಯೆ. ಯಮನನ್ನು ನಿಗ್ರಹಿಸಿರುತ್ತೀಯೆ. ಕಾಮನನ್ನು ನಾಶಪಡಿಸಿರುತ್ತೀಯೆ. ಪ್ರಪಂಚಕ್ಕೆ ತೊಂದರೆಯನ್ನು ಕೊಡುವ ಕಾಲಕೂಟವಿಷದ ತೊಂದರೆಯನ್ನು ತಪ್ಪಿಸಿ, ರಕ್ಷಿಸಿರುತ್ತೀಯೆ. ಭಕ್ತರ ಪಾಪರಾಶಿಗಳನ್ನು ನಾಶಮಾಡಿ ಮೃತ್ಯುವನ್ನು ಗೆದ್ದು ಸರಿಯಾದ ಮಾರ್ಗದಲ್ಲಿರುವಂತೆ ಮಾಡಿ, ತೊಂದರೆಯನ್ನು ತಪ್ಪಿಸುವ ಶಕ್ತಿಯುಳ್ಳ ನೀನು ನಮ್ಮನ್ನು ಬೇಗ ರಕ್ಷಿಸು.

೧೧. ಮೀನಾಕ್ಷೀದೇವಿಗೆ ಅಧಿಪತಿಯಾಗಿ, ಹಾಲಾಸ್ಯಕ್ಷೇತ್ರಕ್ಕೆ ಪ್ರಭುವಾಗಿ, ಪ್ರಪಂಚಗಳು ಎಲ್ಲಕ್ಕೂ ಮೊದಲಿನಲ್ಲಿ ತನ್ನಷ್ಟಕ್ಕೇ ತಾನೇ ಆವಿರ್ಭೂತನಾಗಿರುವ ನೀನು ಈಗ ನಮ್ಮನ್ನು ರಕ್ಷಿಸು.

ಪತೇ ಪಶೂನಾಂ ಭಕ್ತಾನಾಂ ಸ್ವಾಂತಸ್ಥ ಸುಖದಾಯಕ ।
ಆಪತ್ಸಮುದ್ರೇ ಸಮ್ಮಗ್ನಾ ನಸ್ಮಾಂಸ್ತ್ವಸ್ಮಾತ್ಸಮುದ್ಧರ ॥ ೧೨ ॥

ಭೂಲೋಕಶಿವಲೋಕೇಶ ಸಾಲೋಕ್ಯಾದಿಪದಪ್ರದ ।
ತ್ರೈಲೋಕ್ಯರಕ್ಷಾದಕ್ಷಾ ಸ್ಮಾನಾಲೋಕಯ ಕಟಾಕ್ಷತಃ ॥ ೧೩ ॥

ಮಂಜೀರಮಂಜುಲಪದಭಂಜೀಕೃತವಿಪದ್ಭ್ರಮ ।
ಸಂಜೀವಯ ಸದಾಚಾ ಸ್ಮಾನ್ಪುಂಜೀಭೂತಾಂ ಶ್ಚ ದುಷ್ಕೃತಾತ್ ॥ ೧೪ ॥

ಚರ್ಮಾಂಬರಧರಾ ಶೇಷಧರ್ಮಕಾಮಾರ್ಥಮೋಕ್ಷದ ।
ಕುರ್ವ ನುಗ್ರಹ ಮಸ್ಮಾಕಂ ಸರ್ವಸಚ್ಚಿತ್ಸುಖಾತ್ಮಕ ॥ ೧೫ ॥

---

೧೨. ಎಲೈ ದೇವನೆ, ನೀನು ಪಶುಗಳಿಗೆ ಎಲ್ಲರಿಗೂ ಪತಿಯಾಗಿರುತ್ತೀಯೆ. ಭಕ್ತರ ಹೃದಯದಲ್ಲಿ ಸ್ಥಿರನಾಗಿರುತ್ತೀಯೆ ಮತ್ತು ಭಕ್ತರಿಗೆ ಸುಖವನ್ನು ಕೊಡುತ್ತಾ ಇರುತ್ತೀಯೆ. ನಾವು ಸಮುದ್ರವಂತೆ ಇರುವ ದೊಡ್ಡ ವಿಪತ್ತಿನಲ್ಲಿ ಸಿಕ್ಕಿ ಇರುತ್ತೇವೆ. ನಮ್ಮನ್ನು ರಕ್ಷಿಸು.

೧೩. ಭೂಲೋಕ, ಶಿವಲೋಕವೆಂಬ ಹಾಲಾಸ್ಯಕ್ಷೇತ್ರಕ್ಕೆ ಅಧಿಪತಿಯಾದ ಎಲೈ ಸುಂದರೇಶ್ವರನೆ, ನೀನು ಸಾಲೋಕ್ಯವೇ ಮೊದಲಾದ ಮುಕ್ತಿಗಳನ್ನು ಅನುಗ್ರಹಿಸುತ್ತೀಯೆ. ಮತ್ತು ನೀನು ಮೂರು ಲೋಕಗಳನ್ನೂ ಕಾಪಾಡುವ ಸಮರ್ಥನಾಗಿ ಇರುತ್ತೀಯೆ. ನಮ್ಮನ್ನು ನೀನು ಕಟಾಕ್ಷದಿಂದ ನೋಡಿ ರಕ್ಷಿಸು.

೧೪. ಭೂಷಣಧ್ವನಿಯಿಂದ ಮನೋಹರವಾದ ಪಾದಗಳುಳ್ಳವನಾಗಿ ಭಕ್ತರ ವಿಪತ್ತುಗಳನ್ನು ನಾಶಮಾಡುವ ನೀನು ದುಷ್ಕರ್ಮಗಳ ರಾಶಿಯಾಗಿರುವ ನಮ್ಮನ್ನು ರಕ್ಷಿಸು.

೧೫. ಚರ್ಮವನ್ನು ವಸ್ತ್ರವಾಗಿ ಧರಿಸಿ, ಎಲ್ಲರಿಗೂ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಅನುಗ್ರಹಮಾಡುವ, ಸಚ್ಚಿದಾನಂದ ರೂಪದಿಂದ ಇರುವ ಸುಂದರೇಶ್ವರನೇ, ನೀನು ನಮ್ಮನ್ನು ರಕ್ಷಿಸು.

ನಿತ್ಯಾನಂದ ನಿರಾಧಾರ ನಿರ್ಮಲಾನೇಕಶರ್ಮದ ।
ನಿಷ್ಕಲಾನಂದ ಸಕಲಪರಮಾತ್ಮ ನ್ನಮೋಽಸ್ತು ತೇ ॥ ೧೬ ॥

ಕಾಯೇನ ಮನಸಾ ವಾಚಾ ಜಗತಾ ಮೀಶ್ವರೇ ತ್ವಯಿ ।
ಕೃತಾಪರಾಧಾನಸ್ಮಾಂಶ್ಚ ತ್ರಾಹಿ ತ್ರಾಹಿ ದಯಾನಿಧೇ ॥ ೧೭ ॥

ಏವಮಾದ್ಯೈಶ್ಚ ವಿವಿಧೈಃ ಸ್ತೋತ್ರಜಾಲೈ ರ್ಮುಹುರ್ಮುಹುಃ ।
ಸ್ತುತ್ವಾನತ್ವಾ ಪ್ರಾರ್ಥಯಂತಿ ಸಮವೇತಾಶ್ಚ ಸಂಘಿನಃ ॥ ೧೮ ॥

ಯುಷ್ಮತ್ಪ್ರಸಾದೇನ ವಯಮನುಭೂಯ ಸುಖಾನಿ ಚ ।
ಫಲಕಾಯಾಂ ತು ದಿವ್ಯಾಯಾಂ ಸಂಘಮಂಟಪಮಧ್ಯಮೇ ॥ ೧೯ ॥

---

೧೬. ಎಲೈ ಸುಂದರ ಪ್ರಭುವೆ, ನೀನು ನಿತ್ಯವಾದ ಆನಂದರೂಪದಿಂದ ಇರುತ್ತೀಯೆ. ನಿನಗೆ ಆಧಾರವಾದ ಪದಾರ್ಥವು ನಿನಗಿಂತಲೂ ಬೇರೆಯಿಲ್ಲ. ಕೊಂಚವೂ ದುಃಖಸಂಬಂಧವಿಲ್ಲದ ಅನೇಕ ವಿಧವಾದ ಸುಖಗಳನ್ನು ನೀನು ಅನುಗ್ರಹಿಸುತ್ತೀಯೆ. ನೀನು ನಿಷ್ಕಳರೂಪದಿಂದಲೂ, ಆನಂದರೂಪದಿಂದಲೂ, ಸಕಲ ರೂಪದಿಂದಲೂ ಇರುತ್ತೀಯೆ. ಪರಮಾತ್ಮನಾಗಿರುವ ನಿನಗೆ ನಮಸ್ಕಾರವು.

೧೭. ನಾವುಗಳು ಮಾತಿನಿಂದಲೂ, ಮನಸ್ಸಿನಿಂದಲೂ, ಶರೀರದಿಂದಲೂ ಜಗತ್ಪ್ರಭುವಾದ ನಿನ್ನ ವಿಷಯದಲ್ಲಿ ಅಪರಾಧವನ್ನು ಮಾಡಿರುವೆವು. ನೀನು ಬಹಳ ದಯೆಯುಳ್ಳವನಾದ ಕಾರಣ ನಮ್ಮನ್ನು ಉದಾಸೀನಮಾಡದೆ ಆದರದಿಂದ ರಕ್ಷಿಸು.

೧೮–೨೨. ಸಂಘದ ಕವೀಶ್ವರರು ಎಲ್ಲರೂ ಈ ಪ್ರಕಾರವಾದ ಬಹಳ ವಿಧವಾದ ಸ್ತೋತ್ರಗಳನ್ನು ಹೇಳುತ್ತಾ ಸುಂದರೇಶ್ವರನನ್ನು ನಮಸ್ಕರಿಸಿ, "ದೇವದೇವನಾದ ನಿನ್ನ ಅನುಗ್ರಹದಿಂದ ನಾವು ಸುಖವನ್ನು ಅನುಭವಿಸಿದೆವು. ದಿವ್ಯವಾದ ಸಂಘಮಂಟಪದ ಮಧ್ಯದಲ್ಲಿರುವ ವಿದ್ಯಾಪೀಠದಲ್ಲಿ ಕೂತುಕೊಂಡು, ಯಾವಾಗಲೂ ವಿದ್ಯಾಗೋಷ್ಠಿಯನ್ನು ಮಾಡುತ್ತಾ ಅನ್ಯೋನ್ಯವಾಗಿ ಸ್ನೇಹದಿಂದ ಇದ್ದೆವು.

ಆಸಿತ್ವಾ ಸರ್ವದಾ ವಿದ್ಯಾ ಗೋಷ್ಠೀಂ ಕೃತ್ವಾ ಪರಸ್ಪರಂ ।
ಇತಃ ಪೂರ್ವಂ ಭವತ್ಸೇವಾಂ ಕುರ್ಮಸ್ಸರ್ವೇ ಮುದಾನ್ವಿತಾಃ ॥ ೨೦ ॥

ಲೀಲಯಾ ವಿಶ್ವಸಂಹಾರ ಸೃಷ್ಟಿಸ್ಥಿತಿವಿಧಾಯಕ ।
ಇದಾನೀಂ ಕೀರಕವಿನಾ ನ್ಯೂನಾ ವಿದ್ವತ್ಸಭಾ ಶುಭಾ ॥ ೨೧ ॥

ಶಂಭೋ ನ ಶೋಭತೇತ್ಯಂತಂ ಚಂದ್ರಹೀನೇವ ಶರ್ವರೀ ।
ಕೀರಸ್ತು ಕೃತವಾನ್ಮೋಹಾತ್ ಪ್ರಲಾಪಂ ದುಷ್ಕೃತೇರಿತಃ ॥ ೨೨ ॥

ತತ್ಕ್ಷಮಸ್ವ ಮಹಾದೇವ ತಂ ಚ ರಕ್ಷಾಪರಾಧಿನಂ ।
ಅಂತಾದಿರೂಪಂ ಸ್ತೋತ್ರಂ ಚ ಶಬ್ದಾರ್ಥಾತಿಮನೋಹರಂ ॥ ೨೩ ॥

ತೀರ್ಥೇ ಮಹತಿ ಮಗ್ನಸ್ಸ ಸ್ತವಂ ಪ್ರೀತ್ಯೈ ಕರೋತಿ ಸಃ ।
ತೀರ್ಥತೀರಂ ಚ ಸಂಪ್ರಾಪ್ಯ ಶ್ರುತ್ವಾ ತೇನೋದಿತಾಂ ಸ್ತುತಿಂ ॥ ೨೪ ॥

---

ಸಂತೋಷದಿಂದ ನಿನ್ನ ಸೇವೆಯನ್ನು ಮಾಡುತ್ತಿದ್ದೆವು. ನೀನು ಲೀಲೆಯಿಂದಲೇ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಾ ಇರುತ್ತೀಯೆ. ಈಗ ಕೀರನೆಂಬ ಕವಿಯು ಇಲ್ಲದ ಕಾರಣ ನಮ್ಮ ವಿದ್ವತ್ಸಭೆಯು ಚೆನ್ನಾಗಿರುವುದಿಲ್ಲ. ಚಂದ್ರನಿಲ್ಲದಿರುವ ರಾತ್ರಿಯಹಾಗೆ ನಮ್ಮ ವಿಧ್ವತ್ಸಭೆಯು ಕೊಂಚವೂ ಪ್ರಕಾಶಿಸುವುದಿಲ್ಲ. ನಕ್ಕೀರನು ಅವನ ಪಾಪಕರ್ಮದ ವೇಗದಿಂದ ಅಜ್ಞಾನವುಳ್ಳವನಾಗಿ ಸುಮ್ಮನೆ ಕೆಟ್ಟ ಮಾತನಾಡಿದನು. ಎಲೈ ಮಹಾದೇವನೆ, ಅಪರಾಧಿಯಾದ ಅವನನ್ನು ರಕ್ಷಿಸು.

೨೩–೨೫. ಅಪರಾಧವನ್ನು ಮಾಡಿದ ನಕ್ಕೀರನೂ ಕೂಡ ತೀರ್ಥದಲ್ಲಿ ಮುಳುಗಿಕೊಂಡು, ಶಬ್ದಾರ್ಥಗಳಿಂದ ಸುಂದರವಾದ ಅಂತಾದಿ ಸ್ತೋತ್ರವನ್ನು ನಿನ್ನನ್ನು ಸಂತೋಷಪಡಿಸುವುದಕ್ಕಾಗಿ ಮಾಡಿರುವನು. ನೀನು ಹೇಮಾಬ್ಜಿನೀ ತೀರ್ಥದ ತೀರಕ್ಕೆ ಬಂದು ಅವನು ಮಾಡಿರುವ ಸ್ತುತಿಯನ್ನು ಕೇಳಿ, ನಕ್ಕೀರಕವಿಯನ್ನು

ತಸ್ಮೈ ನತ್ಕೀರಕವಯೇ ಕರ್ತವ್ಯೋಽನುಗ್ರಹ ಸ್ತ್ವಯಾ ।
ಸಂಘಿಷ್ವೇವಂ ಪ್ರಾರ್ಥಿತೇಷು ದಯಾರ್ದ್ರಹೃದಯ ಶ್ಶಿವಃ ॥ ೨೫ ॥

ಅದರ್ಶಯಚ್ಛ್ವಂ ವಪುಶ್ಯಾದೃಶ್ಯಂ ದೇವೈರಪೀಶ್ವರಃ ।
ಸುಮೀನಾಕ್ಷ್ಯಾ ಮಹಾದೇವ್ಯಾ ಸಹಿತಸ್ಸನ್ಸರೋ ಯಯೌ ॥ ೨೬ ॥

ಅಂತಾದಿರೂಪಂ ತತ್ಸ್ತೋತ್ರಂ ಶೃಣ್ವಂಸ್ತೋಷದಮಾತ್ಮನಃ ।
ಮಂದಂಹಸನ್ ಮಹಾಪ್ರೀತ್ಯಾ ರೋಷಂ ಕೀರಕವೌ ಜಹೌ ॥ ೨೭ ॥

ಅಥ ಪ್ರಸಾರ್ಯ ಹಸ್ತಂ ಸ್ವಂ ಮಗ್ನೇ ಮಗ್ನಂ ಜಲಾಂತರೇ ।
ಕೀರ ಮುತ್ತಾರಯಾಮಾಸ ತೀರಸ್ಥ ಸ್ಸುಂದರೇಶ್ವರಃ ॥ ೨೮ ॥

ಸ ಶಂಕರಕರಸ್ಪರ್ಶಾನ್ನಿರ್ದಗ್ಧಾಖಿಲಕಲ್ಮಷಃ ।
ಶಾಂತತಾಪಃ ಶಮಂ ಲಬ್ಧ್ವಾ ಸಂತೋಷಮಗಮತ್ಕ್ಷಣಾತ್ ॥ ೨೯ ॥

---

ಅನುಗ್ರಹಿಸಿ ರಕ್ಷಿಸಬೇಕು. ಎಂದು ಸಂಘದ ಕವಿಗಳೆಲ್ಲರೂ ಹಾಲಾಸ್ಯೇಶ್ವರನನ್ನು ಪ್ರಾರ್ಥಿಸಿದರು. ಶಿವನು ಅವರ ಪ್ರಾರ್ಥನೆಯನ್ನು ಕೇಳಿದನು. ಅದರಿಂದ ಅವನ ವಿಷಯದಲ್ಲಿ ದಯೆಯು ಹೆಚ್ಚಿತು.

೨೬–೨೮ ಆಗ ಸುಂದರೇಶ್ವರನು ದೇವತೆಗಳೂ ಚೆನ್ನಾಗಿ ನೋಡುವುದಕ್ಕೆ ಆಗದೆ ಇರುವ ತನ್ನ ನಿಜವಾದ ಆಕಾರವನ್ನು ಧರಿಸಿಕೊಂಡು, ತನ್ನಂತೆಯೇ ಇರುವ ಮೀನಾಕ್ಷೀದೇವಿಯನ್ನು ತನ್ನ ಜೊತೆಯಲ್ಲಿ ಕರೆದುಕೊಂಡು, ನತ್ಕೀರನಿಗೆ ದರ್ಶನ ವನ್ನು ಕೊಡುವುದಕ್ಕಾಗಿ ಹೇಮಾಬ್ಜಿನೀತೀರಕ್ಕೆ ಬಂದನು ಅಲ್ಲಿ ತನಗೆ ಸಂತೋಷ ವನ್ನುಂಟುಮಾಡುವ ಅಂತಾದಿರೂಪದಿಂದ ಇರುವ ಸ್ತೋತ್ರವನ್ನು ಕೇಳಿ, ಸಂತೋಷ ಪಟ್ಟನು. ಅವನಿಗೆ ನತ್ಕೀರನ ವಿಷಯದಲ್ಲಿ ಕೋಪವು ಹೋಯಿತು. ಬಹಳ ಪ್ರೀತಿಯಿಂದ ಮುಗುಳುನಗೆಯನ್ನು ಹೊಂದಿದವನಾಗಿ ಸುಂದರೇಶ್ವರನು, ತನ್ನ ಕೈಯನ್ನು ನೀರಿನ ವಳಗಡೆ ನೀಡಿ, ನೀರಿನವಳಗೆ ಮುಳುಗಿ ಏಳುತ್ತಿರುವ ನತ್ಕೀರಕವಿ ಯನ್ನು ಎತ್ತಿ ದಡದಲ್ಲಿ ಕೂರಿಸಿದನು.

೨೯–೩೧. ಆಗ ನತ್ಕೀರನು ಶಿವನ ಹಸ್ತಸ್ಪರ್ಶಮಾತ್ರದಿಂದಲೇ ಎಲ್ಲಾ ವಿಧ ವಾದ ಪಾಪಗಳನ್ನು ಕಳೆದುಕೊಂಡು, ಯಾವ ವಿಧವಾದ ಸಂಕಟವೂ ಇಲ್ಲದವನಾಗಿ

ನತ್ಕೀರಸಹಿತಾ ಸ್ಸರ್ವೇ ಸಂಘಸ್ಥಾಸ್ಸತ್ಕವೀಶ್ವರಾಃ ।
ಸಾಂಬಸ್ಯ ದೇವದೇವಸ್ಯ ನತ್ವಾ ಶ್ರೀಚರಣಾಂಬುಜಂ　　॥ ೩೦ ॥

ದೃಷ್ಟ್ವಾ ದೇವಸ್ಯ ದೇವ್ಯಾಶ್ಚ ತೇಜಸ್ಸೌಂದರ್ಯಮದ್ಭುತಂ ।
ಅತ್ಯಂತವಿಸ್ಮಿತಾಸ್ಸಂತ ಸ್ತೋತುಮಾರೇಭಿರೇ ಪುನಃ　　॥ ೩೧ ॥

॥ ಸಂಘನ ಊಚುಃ ॥

ಪಿತಾಮಹಶಿರಶ್ಛೇದ ಪ್ರವೀಣಕರಪಲ್ಲವ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋನಮಃ　　॥ ೩೨ ॥

ನಿಶುಂಭಶುಂಭಪ್ರಮುಖದೈತ್ಯಶಿಕ್ಷಣದಕ್ಷಿಣೇ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರಿ　　॥ ೩೩ ॥

ಶೈಲರಾಜಸ್ಯಜಾಮಾತಃ ಶಶಿರೇಖಾವತಂಸಕ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರ　　॥ ೩೪ ॥

ಶೈಲರಾಜಾತ್ಮಜೆಮಾತಃ ಶಾತಕುಂಭನಿಭಪ್ರಭೆ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರಿ　　॥ ೩೫ ॥

---

ಉಪಶಾಂತವಾದ ಮನಸ್ಸುಳ್ಳವನಾಗಿ, ಆ ಕ್ಷಣದಲ್ಲಿ ಸಂತೋಷವುಳ್ಳವನಾದನು. ಆಗ ಸಂಘದ ಕವಿಗಳೆಲ್ಲಗೂ ನಕ್ಕೀರನೊಡನೆ ತಿರುಗಿ ಕೂಡಿದರು. ದೇವದೇವನ ಪಾದ ಗಳಿಗೆ ನಮಸ್ಕಾರ ಮಾಡಿದರು ಅವರು ದೇವನ ಮತ್ತು ದೇವಿಯ ಆಶ್ಚರ್ಯಕರ ವಾದ ಸೌಂದರ್ಯವನ್ನು ನೋಡಿದರು. ಆದರಿಂದ ಅವರಿಗೆ ಬಹಳ ಆಶ್ಚರ್ಯ ವಾಯಿತು. ಅದರಿಂದ ಅವರು ಬದಲಾಗಿ ಅವರಿಬ್ಬರನ್ನೂ ಸ್ತೋತ್ರ ಮಾಡಿದರು.

೩೨-೩೫. ಸಂಘದ ಕವೀಶ್ವರರು ಹೇಳಿದರು :— ಬ್ರಹ್ಮನ ಶಿರಸ್ಸನ್ನು ಕತ್ತರಿಸಿರುವದರಲ್ಲಿ ನಿಪುಣತೆಯುಳ್ಳ ಹಸ್ತವುಳ್ಳ ಮಹೇಶ್ವರನಾದ ನಿನಗೆ ಮೂರು ಸಾರಿ ನಮಸ್ಕಾರ ಮಾಡುವೆವು. ನಿಶುಂಭ ಶುಂಭನೇ ಮೊದಲಾದ ರಾಕ್ಷಸರನ್ನು ನಿಗ್ರಹಮಾಡಿದ ಮಹೇಶ್ವರಿಗೂ ನಮಸ್ಕಾರಮಾಡುವೆವು. ಬೆಟ್ಟಗಳಿಗೆ ರಾಜನಾದ ಹಿಮವಂತನಿಗೆ ಅಳಿಯನಾಗಿ ಚಂದ್ರನನ್ನು ಆಭರಣವನ್ನಾಗಿ ಧರಿಸಿರುವ ಮಹೇಶ್ವರನಿಗೂ ಗಿರಿರಾಜನಾದ ಹಿಮವಂತನಿಗೆ ಮಗಳಾಗಿ ಸುವರ್ಣಕಾಂತಿಯಿಂದ ಪ್ರಕಾಶಿಸುತ್ತಾ ಜಗನ್ಮಾತೆಯಾದ ಮಹೇಶ್ವರಿಗೂ ಅನೇಕವೇಳೆ ನಮಸ್ಕರಿಸುವೆವು.

ಭೂತನಾಥ ಪುರಾರಾತೇ ಭುಜಂಗಾಮೃತಭೂಷಣ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರ ॥ ೩೬ ॥

ಪಾದಪ್ರಣತಭಕ್ತಾನಾಂ ಪಾರಿಜಾತಗುಣಾಧಿಕೇ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರಿ ॥ ೩೭ ॥

ಹಾಲಾಸ್ಯೇಶ ದಯಾಮೂರ್ತೇ ಹಾಲಾಹಲಲಸದ್ಗಲ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರ ॥ ೩೮ ॥

ನಿತಂಬಿನಿ ಮಹೇಶಸ್ಯ ಕದಂಬವನನಾಯಿಕೇ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಮಹೇಶ್ವರಿ ॥ ೩೯ ॥

ಏವಂ ಭಾಷಾಂತರೈಸ್ತೈಸ್ತೈರ್ವಿವಿಧೈರ್ವಾಕ್ಯವಿಸ್ತರೈಃ ।
ಸ್ತುವಂತಶ್ಚ ನಮಂತಶ್ಚ ಪ್ರೀತಿಂ ಪ್ರಾಪುಃ ಕವೀಶ್ವರಾಃ ॥ ೪೦ ॥

ಮಧುರಾನಾಯಕಃ ಶಂಭುರ್ವಾಚಾ ಮಧುರಯಾ ಯುತಃ ।
ಕಟಾಕ್ಷೇಣ ವಿಲೋಕ್ಯೈನಾನೇವಂ ಪ್ರಾಹ ಕೃಪಾವತಾ ॥ ೪೧ ॥

---

೩೬-೩೭. ಭೂತಗಳೆಲ್ಲಕ್ಕೂ ಅಧಿಪತಿಯಾಗಿರುವ, ತ್ರಿಪುರಗಳನ್ನು ನಾಶ ಮಾಡಿರುವ, ಚಂದ್ರನನ್ನು ಅಲಂಕಾರವಾಗಿ ಧರಿಸಿ, ನಾಗಭೂಷಣನಾಗಿರುವ ಮಹೇಶ್ವರನಿಗೂ, ತನ್ನ ಪಾದಕಮಲಗಳನ್ನು ನಂಬಿಕೊಂಡು ಧ್ಯಾನಮಾಡಿ ನಮಸ್ಕರಿಸುವ ಭಕ್ತರಿಗೆ ಪಾರಿಜಾತವೆಂಬ ಕಲ್ಪವೃಕ್ಷಕ್ಕಿಂತಲೂ ಅತಿಶಯವಾಗಿ ಅನುಗ್ರಹಿಸುವ ಮಹೇಶ್ವರಿಗೂ ಅನೇಕ ನಮಸ್ಕಾರಗಳನ್ನು ಮಾಡುವೆವು.

೩೮-೩೯. ಬಹಳ ದಯೆಯುಳ್ಳವನಾಗಿರುವ ಹಾಲಾಸ್ಯೇಶ್ವರನೆಂದು ಪ್ರಸಿದ್ಧಿಯನ್ನು ಹೊಂದಿ ಹಾಲಾಹಲ ವಿಷವನ್ನು ಕುತ್ತಿಗೆಯಲ್ಲಿ ಧರಿಸಿರುವ ಮಹೇಶ್ವರನಿಗೂ, ಮಹೇಶ್ವರನಿಗೆ ಅನುರೂಪಳಾದ ಪತ್ನಿಯಾಗಿ ಕದಂಬವನಕ್ಕೆ ಅಧಿಪತಿಯಾಗಿರುವ ಮಹೇಶ್ವರಿಗೂ ಅನೇಕ ನಮಸ್ಕಾರಗಳನ್ನು ಮಾಡುವೆವು.

೪೦-೪೩. ಸಂಘದ ಕವೀಶ್ವರರು ಈ ಪ್ರಕಾರವಾಗಿ ದೇಶಭಾಷೆಯಲ್ಲಿ ಅನೇಕ ವಿಧವಾದ ಸ್ತುತಿಗಳನ್ನು ಮಾಡಿದರು. ಪ್ರತ್ಯಕ್ಷರಾಗಿರುವ ಮಹೇಶ್ವರ ಮಹೇಶ್ವರಿ

ವಿದ್ಯಾಪೀಠೇ ಯಥಾಪೂರ್ವಂ ವಿದ್ವದ್ಗೋಷ್ಠೀಂ ವಿಧಾಯ ಚ ।
ಭವಂತಸ್ಸಮುಪೇತಾಶ್ಚ ನಿವಸಂತು ನಿರಂತರಂ       ॥ ೪೨ ॥

ಯುಷ್ಮಾಕಂ ಸಂತು ಸತತಮಿಹಾಮುತ್ರ ಸುಖಾನಿ ಚ ।
ಇತ್ಯುಕ್ತ್ವಾ ಸುಂದರೇಶಶ್ಚ ದೇವ್ಯಾ ಸಾಕಂ ತಿರೋದಧೇ       ॥ ೪೩ ॥

ದೇವದೇವಸ್ಯ ಸಾನ್ನಿಧ್ಯಾಲ್ಲಬ್ಧ್ವಾ ಸರ್ವಾನ್ಮನೋರಥಾನ್ ।
ಸಂಘಿನಸ್ಸಂಘಪೀಠಸ್ಥಾಸ್ಸಮೇಧಂತೇ ಚಿರಾಯುಷಃ       ॥ ೪೪ ॥

ನಕ್ಕೀರಾನುಗ್ರಹಾಯೇಶಕೃತಾಂ ಲೀಲಾಂ ಶೃಣೋತಿ ಯಃ ।
ಮುಕ್ತಮೋಹ ಸ್ಸಶುದ್ಧಾತ್ಮಾ ಮುಕ್ತಿಮೇತಿ ನ ಸಂಶಯಃ       ॥ ೪೫ ॥

ಕಾಲಕಾಲಸ್ಯ ಕಾಮಾರೇಃ ಕದಂಬವನವಾಸಿನಃ ।
ಶಂಕರಸ್ಯ ತ್ರಿಪಂಚಾಶಲ್ಲೀಲೇತಿ ಕಥಿತಾ ಮಯಾ       ॥ ೪೬ ॥

---

ಯರಿಗೆ ಅನೇಕ ವೇಳೆ ನಮಸ್ಕಾರ ಮಾಡಿದರು. ಮತ್ತು ಬಹಳ ಸಂತೋಷ ಪಟ್ಟರು. ಆಗ ಮಧುರಾನಗರಾಧಿಪನಾದ ಶಿವನು ದಯೆಯಿಂದ ಕೂಡಿರುವ ಕಟಾಕ್ಷದಿಂದ ಅವರೆಲ್ಲರನ್ನೂ ನೋಡಿ, “ ನೀವೆಲ್ಲರೂ ಮೊದಲಿನ ಹಾಗೆಯೇ ವಿದ್ಯಾ ಪೀಠದಲ್ಲಿರುತ್ತಾ, ವಿದ್ವತ್ಸಭೆಯನ್ನು ಮಾಡಿಕೊಂಡು ಯಾವಾಗಲೂ ಸುಖವಾಗಿ ವಾಸಮಾಡಿರಿ. ನಿಮಗೆ ಇಹಪರ ಲೋಕಗಳಲ್ಲಿ ಸುಖವು ಉಂಟಾಗಲಿ” ಎಂದು ಮಧುರವಾದ ಮಾತಿನಿಂದ ಅನುಗ್ರಹವನ್ನು ಮಾಡಿದನು. ಅನಂತರದಲ್ಲಿ ಅವನು ಮೀನಾಕ್ಷೀದೇವಿಯೊಡನೆ ಅದೃಶ್ಯನಾದನು.

೪೪–೪೬. ದೇವದೇವನ ಅನುಗ್ರಹದಿಂದ ಎಲ್ಲಾ ವಿಧವಾದ ಇಷ್ಟಾರ್ಥ ಗಳನ್ನು ಹೊಂದಿ, ವಿದ್ಯಾಪೀಠದಲ್ಲಿರುತ್ತಾ ಕವೀಶ್ವರರು ಎಲ್ಲರೂ ಸುಖವಾಗಿದ್ದರು. ನಕ್ಕೀರಕವಿಗೆ ಜಗದೀಶನು ಅನುಗ್ರಹಿಸಿರುವ ಲೀಲೆಯನ್ನು ಕೇಳುವವರು ಅಜ್ಞಾನ ವನ್ನು ಕಳೆದುಕೊಂಡು ಪರಿಶುದ್ಧವಾದ ಮನಸ್ಸುಳ್ಳವರಾಗಿ ಮೋಕ್ಷವನ್ನು ಹೊಂದುವು ದರಲ್ಲಿ ಸಂಶಯವಿಲ್ಲವು. ಯಮನಿಗೂ ಯಮನಾಗಿ, ಕಾಮನನ್ನು ನಿಗ್ರಹಿಸಿದ, ಕದಂಬವನಾಧಿಪನಾದ ಪರಮೇಶ್ವರನು ಆಚರಿಸಿದ ಐವತ್ತಮೂರನೆಯ ಲೀಲೆಯನ್ನು ವರ್ಣಿಸಿರುವೆನು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಹಾತ್ಮ್ಯೇ ನತ್ಕೀರಾನುಗ್ರಹೊ ನಾಮ ಏಕೋನಷಷ್ಟಿತಮೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ನತ್ಕಿರಾನುಗ್ರಹವೆಂದು ಹೆಸರುಳ್ಳ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಷಷ್ಠಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಸೂತ್ರೋಪದೇಶಂ ಕೀರಸ್ಯ ಕಾರಯಾಮಾಸ ಶಂಕರಃ ।**
**ಮಯಾಯಯಾ ಚತಾಂ ಲೀಲಾಂ ಯುಷ್ಮಾಕಂ ಕಥಯಾಮ್ಯಹಂ ॥ ೧ ॥**

**ಶಿವನೇತ್ರಾಗ್ನಿನಾ ತಪ್ತಶ್ಶಿವತೀರ್ಥೇ ನಿಮಜ್ಯ ಚ ।**
**ಶಿವಂ ಸ್ತುತ್ವಾ ಶಿವಂ ಲಬ್ಧ್ವಾ ಶಿವಾನುಗ್ರಹಮಾಪ ಸಃ ॥ ೨ ॥**

**ಶಂಭೋರ್ಲಲಾಟನೇತ್ರೇಣ ವೀಕ್ಷಿತಂ ವಿಬುಧಾ ಅಪಿ ।**
**ನ ಶಕ್ತಾ ರಕ್ಷಿತುಂ ಜಾತು ಕಾಮಂ ಶಕ್ರಾದಯೋ ಯಥಾ ॥ ೩ ॥**

---

### ಅರವತ್ತನೆಯ ಅಧ್ಯಾಯವು

೧–೫. ಅಗಸ್ತ್ಯಋಷಿಯು ಹೇಳಿದನು :—ಶಂಕರನು ದಯೆಯಿಂದ ನಕ್ಕೀರನಿಗೆ ಸೂತ್ರಗಳನ್ನು ಉಪದೇಶಮಾಡಿಸಿದ ಲೀಲೆಯನ್ನು ವಿಸ್ತರಿಸಿ ಹೇಳುವೆನು. ನಕ್ಕೀರನು ಶಿವನ ಫಾಲಾಗ್ನಿಯ ಜ್ವಾಲೆಯಿಂದ ಉಂಟಾದ ಸಂಕಟವನ್ನು ಅನುಭವಿಸುತ್ತಾ, ಶಿವತೀರ್ಥವಾದ ಹೇಮಾಬ್ಜಿನಿಯಲ್ಲಿ ಮುಳುಗಿಕೊಂಡಿದ್ದು ಶಿವನನ್ನು ಸ್ತುತಿಮಾಡಿ, ನಮಸ್ಕರಿಸಿ, ಶಿವನನ್ನು ಪ್ರತ್ಯಕ್ಷವಾಗಿ ನೋಡಿ ಶಿವನ ಅನುರಾಗಕ್ಕೆ ಪಾತ್ರನಾಗಿ, ಸೂತ್ರೋಪದೇಶವನ್ನು ನನ್ನಿಂದ ಹೊಂದಿದನು. ಶಿವನ ಲಲಾಟನೇತ್ರದರ್ಶನಕ್ಕೆ

ಶ್ರೀಮದ್ಧಾಲಾಸ್ಯನಾಥಸ್ಯ ಲಲಟನಯನೇಕ್ಷಿತಂ ।
ಹೇಮಪದ್ಮಾಕರಂ ತೀರ್ಥಂ ನಕ್ಕೀರಂ ತಮಪಾಲಯತ್ ॥ ೪ ॥

ಯಥಾ ನಿಮಗ್ನೋ ನಕ್ಕಿರಸ್ತತ್ತೀರ್ಥಸಲಿಲೇsಮಲೇ ।
ತಾಪಶಾಂತಿಂ ತದಾ ಪ್ರಾಪ ತದುನ್ಮಗ್ನೋsತಿತಾಪವಾನ್ ॥ ೫ ॥

ಶಿವದ್ರೋಹಕೃತಾಂ ಪುಂಸಾಂ ಶಿವತೀರ್ಥಂ ವಿನಾ ಕ್ವಚಿತ್ ।
ಸದ್ಯಶ್ಶಿವಕರಂ ವಸ್ತು ನಾಸ್ತಿ ಲೋಕತ್ರಯೇಷ್ವಪಿ ॥ ೬ ॥

ಏವಂ ತೀರ್ಥಸ್ಯ ಮಾಹಾತ್ಮ್ಯಂ ನಕ್ಕೀರಸ್ತ್ವನುಭೂಯ ಚ ।
ನಿಯಮೇನ ತ್ರಿಸಂಧ್ಯಾಸು ಸ್ನಾನಂ ತತ್ರ ಕರೋತಿ ಸಃ ॥ ೭ ॥

ಸುಮೀನನಯನಾಂ ದೇವೀಂ ಸೋಮಸುಂದರಮೀಶ್ವರಂ ।
ಪ್ರದಕ್ಷಿಣೈಃ ಪ್ರಣಾಮೈಶ್ಚ ಸ್ತೋತ್ರೈರ್ನಿತ್ಯಮತೋಷಯತ್ ॥ ೮ ॥

---

ವಿಷಯನಾಗಿರುವವನನ್ನು ಇಂದ್ರನೇ ಮೊದಲಾದ ಯಾವ ದೇವತೆಗಳೂ ರಕ್ಷಿಸಲಾರರು. ಹೇಮಾಬ್ಜಿನೀ ತೀರ್ಥದಲ್ಲಿ ಅವನು ಮುಳುಗಿರುವ ಕಾರಣ ಅದು ಅವನನ್ನು ರಕ್ಷಿಸಿತು. ಅವನು ಆ ತೀರ್ಥದಲ್ಲಿ ಮುಳುಗಿರುವಾಗ ಸಂಕಟವಿಲ್ಲದವನಾಗಿಯೂ ಮೇಲಕ್ಕೆ ಎದ್ದಾಗ ತಾಪವುಳ್ಳವನಾಗಿಯೂ ಇದ್ದನು.

೬-೮. ಆದ್ದರಿಂದ ಶಿವನ ವಿಷಯದಲ್ಲಿ ದ್ರೋಹಮಾಡಿರುವವರೆಲ್ಲರಿಗೂ ಶಿವತೀರ್ಥದಿಂದಲೇ ಅವರ ತಾಪವು ಪರಿಹಾರವಾಗುವುದು. ಮೂರು ಲೋಕಗಳಲ್ಲಿಯೂ ಇದಕ್ಕಿಂತಲೂ ಬೇರೆಯಾದ ಸುಖಕರವಾದ ಉಪಾಯವು ಇವರಿಗೆ ಬೇರೆ ಇನ್ನೊಂದು ಇಲ್ಲವು. ನಕ್ಕೀರನು ಹೀಗೆ ಇರುವ ಶಿವತೀರ್ಥದ ಮಹಿಮೆಯನ್ನು ಅನುಭವಿಸಿದ ಕಾರಣ ಅವನು ಮೂರು ಸಂಧ್ಯಾಕಾಲಗಳಲ್ಲಿಯೂ, ನಿಯಮದಿಂದ ಆ ತೀರ್ಥದಲ್ಲಿ ಸ್ನಾನವನ್ನು ಮಾಡುತ್ತಿದ್ದನು. ಮತ್ತು ಅವನು ಸೋಮಸುಂದರೇಶ್ವರನನ್ನೂ ಮೀನಾಕ್ಷೀದೇವಿಯನ್ನೂ ಯಾವಾಗಲೂ ಪ್ರದಕ್ಷಿಣ ನಮಸ್ಕಾರಗಳು ಮತ್ತು

**ಅಥ ಪ್ರಸನ್ನೋ ಭಗವಾನ್ಶ್ರೀಮದ್ಧಾಲಾಸ್ಯನಾಯಕಃ ।**
**ತಸ್ಯಾಜ್ಞಾನವಿನಾಶಾಯ ವಿಚಾರಮಕರೋದ್ಧೃದಿ ॥ ೯ ॥**

**ಅಯಂ ದ್ರಾವಿಡಭಾಷಾಯಾಂ ಸೂತ್ರಜ್ಞಾನವಿವರ್ಜಿತಃ ।**
**ನ ವಿಜಾನಾತಿ ನತ್ಕೀರಸ್ಸಶಬ್ದಂ ಚಾಪಶಬ್ದಕಂ ॥ ೧೦ ॥**

**ಸಂದರ್ಭಶಕ್ತಿಂ ಮಹತೀಂ ಭೃಶಂ ತಸ್ಮಾತ್ಸ್ವಯಾನ್ವಿತಃ ।**
**ಪ್ರದೂಷಯತಿ ಕಾವ್ಯಾನಿ ಶಬ್ದಾರ್ಥಸುಭಗಾನ್ಯಪಿ ॥ ೧೧ ॥**

**ವಿಜ್ಞಾನವಾನಯಂ ಕೇನ ಮಮ ಭಕ್ತೋ ಭವಿಷ್ಯತಿ ।**
**ಲೋಕೇ ದ್ರಾವಿಡಸೂತ್ರಾಣಾಮುಪದೇಷ್ಟಾ ನ ವಿದ್ಯತೇ ॥ ೧೨ ॥**

**ಏವಂ ಚಿಂತಾಸಮಾಯುಕ್ತೇ ಕ ಉಪಾಯ ಇತೀಶ್ವರೇ ।**
**ಸುಮೀನಾಕ್ಷೀ ಮಹಾದೇವೀ ಸೋಮಸುಂದರವಲ್ಲಭಾ ॥ ೧೩ ॥**

---

ಸ್ತೋತ್ರಗಳಿಂದ ಸಂತೋಷಪಡಿಸುತ್ತಿದ್ದನು. ಹಾಲಾಸ್ಯೇಶ್ವರನು ನತ್ಕೀರನ ನಡವಳಿಯನ್ನು ನೋಡಿ, ಸಂತೋಷಪಟ್ಟು ಅವನಲ್ಲಿರುವ ಅಜ್ಞಾನವು ನಾಶವಾಗುವ ಉಪಾಯವನ್ನು ಅವನಿಗೆ ಉಪದೇಶಮಾಡುವುದಕ್ಕಾಗಿ ತಾನು ನಿಶ್ಚಯಮಾಡಿದನು.

೧೦-೧೪. "ಇವನಿಗೆ ದ್ರಾವಿಡಭಾಷಾ ಶಬ್ದಜ್ಞಾನವು ಇರುವುದಿಲ್ಲ. ಭಾಷಾ ಸೂತ್ರಗಳಿಗೆ ಅರ್ಥವು ಇವನಿಗೆ ತಿಳಿದಿಲ್ಲ. ಇದರಿಂದ ಶಬ್ದಾರ್ಥಗಳು ಸರಿಯಾಗಿ ತಿಳಿಯದಕಾರಣ ಪದಪದಾರ್ಥಗಳ ಸಮಯಗಳು ತಿಳಿಯದೆ ಅಲ್ಲಲ್ಲಿ ಇವನು ಭ್ರಾಂತಿಯನ್ನು ಹೊಂದುತ್ತಿರುವನು. ಸುಂದರವಾದ ಶಬ್ದಾರ್ಥಗಳಿಂದ ಕೂಡಿದ ಕಾವ್ಯಗಳನ್ನು ಇವನು ಇದರಿಂದ ದೂಷಿಸುವನು. ಇವನಿಗೆ ಜ್ಞಾನವನ್ನು ಉಪದೇಶ ಮಾಡಿದರೆ ನನ್ನಲ್ಲಿ ಭಕ್ತಿಯಿಂದ ಇರುವನು. ಲೋಕದಲ್ಲಿ ದ್ರಾವಿಡಭಾಷಾ ಸೂತ್ರಗಳನ್ನು ಉಪದೇಶಮಾಡುವವರೇ ಇಲ್ಲವು" ಎಂದು ಸುಂದರೇಶ್ವರನು ಯೋಚನೆ ಮಾಡುತ್ತಿರುವುದನ್ನು ತಿಳಿದು, ಮಹಾದೇವಿಯಾದ ಮೀನಾಕ್ಷೀದೇವಿಯು "ಎಲೈ

ಮಹೇಶ್ವರಮನಶ್ಚಿಂತಾಂ ಬುಧ್ವಾ ಪ್ರಾಹ ಮನೋನ್ಮನೀ ।
ಸ್ವಾಮಿನ್ಸರ್ವಜ್ಞ ಸರ್ವೇಶ ಭಕ್ತಾಧೀನ ಪರಾತ್ಪರ ॥ ೧೪ ॥

ಜಾನಾಮ್ಯಹಮುಪಾಯಂ ಚ ಕೀರವಿಜ್ಞಾನಕಾರಣಂ ।
ಇತಿ ದೇವೀವಚಃ ಶ್ರುತ್ವಾ ದೇವದೇವಸ್ತ್ರಿಯಂಬಕಃ ॥ ೧೫ ॥

ತಮುಪಾಯಂ ಭಣ ಭಣ ದೇವೀತ್ಯಾಹ ಸ ಸಾದರಂ ।
ಅಥ ದೇವೀ ಸುಮೀನಾಕ್ಷೀ ಸಚ್ಚಿದಾನಂದರೂಪಿಣೀ ॥ ೧೬ ॥

ಸರ್ವಜ್ಞಂ ಪ್ರತಿ ಸರ್ವಜ್ಞಾ ಪ್ರಾಹೇದಂ ತಂ ಪುರಾಭವಂ ।
ಪುರಾ ಪುರಾರೇ ಕೈಲಾಸಶೈಲೇತ್ವಯ್ಯಧಿತಿಷ್ಠತಿ ॥ ೧೭ ॥

ಕಾರ್ಯಾರ್ಥಮಾಗತಾಃ ಸರ್ವೇ ಸಗಣಾಶ್ಚ ಸವಾಹನಾಃ ।
ತ್ರಯಸ್ತ್ರಿಂಶತ್ಕೋಟಿಸಂಖ್ಯಾಗಣಿತಾ ದೇವತಾಗಣಾಃ ॥ ೧೮ ॥

---

ಸರ್ವಜ್ಞನಾದ ಮಹಾದೇವನೆ, ಭಕ್ತರನ್ನು ರಕ್ಷಿಸುವುದರಲ್ಲಿ ನಿಯಮದಿಂದ ಇರುವ ಪ್ರಭುವೆ, ನಕ್ಕೀರನನ್ನು ಜ್ಞಾನಿಯನ್ನಾಗಿ ಮಾಡುವ ಉಪಾಯವನ್ನು ನಾನ ತಿಳಿದಿರುವೆನು" ಎಂದು ಹೇಳಿದಳು

೧೫-೧೬. ದೇವಿಯ ಮಾತನ್ನು ಕೇಳಿ, ಸುಂದರೇಶ್ವರನು "ಆ ಉಪಾಯವನ್ನು ನನಗೆ ಹೇಳು ಹೇಳು!" ಎಂದು ಆದರದಿಂದ ಪ್ರಶ್ನೆ ಮಾಡಿದನು. ಸಚ್ಚಿದಾನಂದ ರೂಪದಿಂದ ಇರುವ ಸರ್ವಜ್ಞಳಾದ ಮೀನಾಕ್ಷೀದೇವಿಯು ಸರ್ವಜ್ಞನಾದ ಪರಮೇಶ್ವರನಿಗೆ ನಕ್ಕೀರನಿಗೆ ಜ್ಞಾನವನ್ನು ಉಪದೇಶಮಾಡುವ ಕ್ರಮವನ್ನು ಜ್ಞಾಪಿಸಿದಳು. ಮತ್ತು ಅದಕ್ಕಾಗಿ ಹಿಂದೆ ನಡೆದಿರುವ ವೃತ್ತಾಂತವನ್ನು ಹೇಳಿದಳು

೧೭-೧೮. ಎಲೈ ಪುರವೈರಿಯೆ, ನೀನು ಕೈಲಾಸಪರ್ವತದಲ್ಲಿ ಸುಖವಾಗಿರುವಾಗ ದೇವತೆಗಳು ಮೂವತ್ತುಮೂರು ಕೋಟಿಯ ಸಂಖ್ಯೆಯುಳ್ಳವರೂ ತಮ್ಮ

ಮುನೀಶ್ವರಾಶ್ಚ ಸನಕಸನಂದನಮುಖಾ ಅಪಿ ।
ತದಾ ವಸುಂಧರಾ ಸರ್ವಾ ಸಶೈಲವನಸಾಗರಾ　　　॥ ೧೯ ॥

ನಿಮಗ್ನೋತ್ತರಪೂರ್ವಾ ಸೀನ್ನೈರ್ಋತ್ಯಾಂ ತು ಸಮುನ್ನತಾ ।
ದೇವಾದಯಸ್ತತೋ ಭೀತಾಃ ಭೂಸಮೀಕರಣಾಯ ಚ　　　॥ ೨೦ ॥

ಭವಂತಂ ತುಷ್ಟುವುಃ ಸರ್ವೇ ಭಕ್ತ್ಯಾ ಪರಮಯಾ ಯುತಾಃ ।
ಪುನಶ್ಚ ಪ್ರಾರ್ಥಯಾಮಾಸುರೇವಂ ಸಾಂಜಲಿಪಾಣಯಃ　　　॥ ೨೧ ॥

ತ್ವತ್ಸಮಂ ಪುರುಷಂ ಚಾಶು ಸ್ಥಾತುಂ ಮಲಯಪರ್ವತೇ ।
ಪ್ರೇಷಯಿತ್ವಾ ಕೃಪಾಸಿಂಧೋ ಸಮೀಕುರು ಮಹೀಮಿಮಾಂ　　　॥ ೨೨ ॥

ತೇಷಾಂ ವಾಕ್ಯಂ ಸಮಾಕರ್ಣ್ಯ ಭಯಮಪ್ಯವಲೋಕ್ಯ ತತ್ ।
ಭವತಾಪ್ಯೇವಮುಕ್ತಂ ಚ ಸರ್ವಾಪತ್ಪರಿಹಾರಿಣಾ　　　॥ ೨೩ ॥

---

ಪರಿವಾರ ಸಹಿತರಾಗಿ ಕಾರ್ಯಾರ್ಥಿಗಳಾಗಿ ಬಂದರು, ಆಗ ಸನಕನೇ ಮೊದಲಾದ ಮುನೀಶ್ವರರೂ ಬಂದು ಸೇರಿದರು. ಅದರಿಂದ ಬೆಟ್ಟ ಕಾಡು ಇವುಗಳಿಂದ ಕೂಡಿದ ಭೂಮಿಯು ಈಶಾನ್ಯ ದಿಕ್ಕಿನಲ್ಲಿ ಹಳ್ಳವಾಗಿ ನೈರುತ್ಯ ದಿಕ್ಕಿನಲ್ಲಿ ಎತ್ತರ ವಾಯಿತು.

೨೦–೨೫. ಆಗ ದೇವತೆಗಳು ಭೂಮಿಯು ಹೀಗಾಗಿರುವುದನ್ನು ನೋಡಿ, ಅದು ಸರಿಯಾಗುವುದಕ್ಕಾಗಿ ನಿನ್ನನ್ನು ಸ್ತುತಿಮಾಡಿದರು. ಬಹಳ ಭಕ್ತಿಯಿಂದ ನಮಸ್ಕರಿಸಿ, “ಎಲೈ ದೇವದೇವನೆ, ನಿನಗೆ ಸಮನಾದ ಮನುಷ್ಯನನ್ನು ಮಲಯ ಪರ್ವತದಲ್ಲಿ ವಾಸವಾಗಿರುವಂತೆ ಕಳುಹಿಸಿ, ಭೂಮಿಯು ಒಂದೇ ಸಮನಾಗಿರುವ ಹಾಗೆ ಅನುಗ್ರಹವನ್ನು ಮಾಡಬೇಕು.” ಎಂದು ನಿನ್ನನ್ನು ಬೇಡಿದರು. ಆಗ ನೀನು ಅವರ ಭಯವನ್ನು ನೋಡಿ, ಅವರ ಮಾತನ್ನು ಕೇಳಿ, ಅವರ ವಿಪತ್ತು

ದೇವಾಃ ಶೃಣ್ವಂತು ಮದ್ವಾಕ್ಯಂ ದಿವ್ಯಾ ಅಪಿ ಮುನೀಶ್ವರಾಃ ।
ಮತ್ಸಮಃ ಪುರುಷೋ ನಾಸ್ತಿ ನಾರೀ ಗೌರೀನಿಭಾನ ತು ॥ ೨೪ ॥

ತಥಾಪ್ಯೇಕಃ ಪುಮಾನಸ್ತಿ ಮತ್ಸಮ ಸ್ತಪಸೋ ಬಲಾತ್ ।
ನಾರೀ ಗೌರೀಸಮಾಚೈಕಾ ಪಾತಿವ್ರತ್ಯೇ ನ ವಿದ್ಯತೇ ॥ ೨೫ ॥

ಮತ್ಸಮಃ ಪುರುಷೋsಗಸ್ತ್ಯಸ್ಸದಾ ಮದ್ಧ್ಯಾನತತ್ಪರಃ ।
ಲೋಪಾಮುದ್ರಾ ತಸ್ಯ ಪತ್ನೀ ಗೌರೀಧ್ಯಾನೇ ತು ತತ್ಪರಾ ॥ ೨೬ ॥

ಸದಾ ಭವತ್ಯಗಸ್ತ್ಯಸ್ಯ ಶಿವೋsಹಮಿತಿಭಾವನಾ ।
ಗೌರ್ಯಹಂಭಾವನಾ ತಸ್ಯ ಪತ್ನ್ಯಾಃ ಸಂತತಮಸ್ತಿ ಹಿ ॥ ೨೭ ॥

ಮೇರುಮಂದರಕೈಲಾಸಕಾಶೀಶ್ರೀಪರ್ವತಾದಿಷು ।
ಮನ್ಮನೋ ರಮತೇ ನೈವ ಯಥಾ ತಸ್ಯ ಹೃದಂಬುಜೇ ॥ ೨೮ ॥

---

ಪರಿಹಾರವಾಗುವುದಕ್ಕಾಗಿ ಅವರೊಡನೆ ಮಾತನಾಡಿದೆ. ದೇವತೆಗಳೆಲ್ಲರೂ ನನ್ನ ಮಾತನ್ನು ಕೇಳಿರಿ. ನನಗೆ ಸಮನಾದ ಪುರುಷನು ಇಲ್ಲವು. ಆದರೆ ತಪಸ್ಸಿನಿಂದ ಸಿದ್ಧಿಯನ್ನು ಹೊಂದಿರುವ ನನಗೆ ಸಮನಾದ ಪುರುಷನು ಅಗಸ್ತ್ಯ ಋಷಿಯಾಗಿರುವನು. ಗೌರಿದೇವಿಗೆ ಪಾತಿವ್ರತ್ಯದಿಂದ ಸಮನಾದ ಹೆಂಗಸು ಇಲ್ಲವೇ ಇಲ್ಲ.

೨೬-೩೦. ಅಗಸ್ತ್ಯಋಷಿಯು ಯಾವಾಗಲೂ ನನ್ನನ್ನು ಧ್ಯಾನಮಾಡುತ್ತಿರುವನು. ಅವನ ಪತ್ನಿಯಾದ ಲೋಪಾಮುದ್ರಾದೇವಿಯು ಯಾವಾಗಲೂ ಗೌರೀದೇವಿಯನ್ನು ಧ್ಯಾನಮಾಡುತ್ತಿರುವಳು. ಅದರಿಂದ ಅಗಸ್ತ್ಯಋಷಿಗೆ ಶಿವೋಹಂ, ಎಂದು ಭಾವನೆಯು ದೃಢವಾಗಿರುವಂತೆ, ಲೋಪಾಮುದ್ರಾದೇವಿಗೆ ಗೌರ್ಯಹಂ, ಎಂದು ಭಾವನೆಯು ದೃಢವಾಗಿರುವುದು. ನಾನು ಮೇರು, ಮಂದರ, ಕೈಲಾಸ, ಕಾಶೀ, ಶ್ರೀಪರ್ವತ, ಇವೇ ಮೊದಲಾದ ಶಿವಕ್ಷೇತ್ರಗಳಲ್ಲಿ ಪ್ರೀತಿಯಿಂದ ವಾಸವಾ

ತಸ್ಮಾತ್ತ್ವಾಂಬಸ್ಯ ಚ ಮಮ ಸನ್ನಿಭೋ ಅಗಸ್ತ್ಯ ಏವ ಹಿ ।
ಸ ತು ಪ್ರಯಾತು ಸರ್ವಾಪಚ್ಛಾಂತ್ಯರ್ಥಂ ಮಲಯಾಚಲಂ ॥ ೨೯ ॥

ಇತ್ಯುಕ್ತವತಿ ದೇವೇಶೇ ತ್ವಯಿ ದೇವಾ ಮುನೀಶ್ವರಾಃ ।
ಸಾಧು ಸಾಧ್ವಿತಿ ತೇ ಪ್ರಾಹುಸ್ಸಂತೋಷಾತಿಶಯೇನ ಚ ॥ ೩೦ ॥

ಮುನೀಶ್ವರಮಹಾವೃಂದಮಧ್ಯಸ್ಥೇ ಕುಂಭಸಂಭವೇ ।
ತ್ವತ್ಕಟಾಕ್ಷಕ್ಷೇಪಮಾತ್ರಪ್ರೇಷಿತೇ ಸತಿ ಸೊಬ್ರವೀತ್ ॥ ೩೧ ॥

ಶ್ರೀಕಂಠನಾಥ ಭಗವನ್ನಿ ್ರೀಮತ್ಕೈಲಾಸನಾಯಕ ।
ತ್ವದಾಜ್ಞಯಾ ಗಮಿಷ್ಯಾಮಿ ಮಹಾಂತಂ ಮಲಯಾಚಲಂ ॥ ೩೨ ॥

ಮಯಿ ತತ್ರ ಗತೇ ಸರ್ವೇ ತತ್ರತ್ಯಾ ದ್ರಾವಿಡಾ ಜನಾಃ ।
ಜ್ಞಾತುಂ ದ್ರಾವಿಡಶಬ್ದಾಂಶ್ಚ ಭವಿಷ್ಯಂತಿ ಸಮುತ್ಸುಕಾಃ ॥ ೩೩ ॥

---

ಗಿರುವಂತೆ ಅಗಸ್ತ್ಯಋಷಿಯು ಹೃದಯದ ಮಧ್ಯದಲ್ಲಿ ಯಾವಾಗಲೂ ವಾಸವಾಗಿರುವೆನು. ಆದ್ದರಿಂದ ಅವನು ನನಗೆ ಸಮನಾಗಿರುವನು. ಆದ್ದರಿಂದ ಎಲ್ಲಾ ವಿಪತ್ತುಗಳೂ ನಾಶವಾಗುವುದಕ್ಕಾಗಿ ಅಗಸ್ತ್ಯಋಷಿಯು ಈಗ ಮಲಯಪರ್ವತಕ್ಕೆ ಹೋಗಿ ಅಲ್ಲಿ ವಾಸಮಾಡಬೇಕು." ಎಂಬ ದೇವದೇವನಾದ ನಿನ್ನ ಆಜ್ಞೆಯನ್ನು ಕೇಳಿ, ದೇವತೆಗಳೂ ಮುನಿಗಳೂ ಎಲ್ಲರೂ ಸಂತೋಷಪಟ್ಟರು.

೩೧-೩೪ ಅನಂತರದಲ್ಲಿ ನೀನು ಮುನೀಶ್ವರರ ಸಮೂಹದ ಮಧ್ಯದಲ್ಲಿ ಇರುವ ಅಗಸ್ತ್ಯಋಷಿಯನ್ನು ಕಟಾಕ್ಷದಿಂದ ನೋಡಿದೆ. ಆಗ ಅಗಸ್ತ್ಯಋಷಿಯು "ಎಲೈ ಸದ್ಗುಣೈಶ್ವರ್ಯಸಂಪನ್ನನಾದ, ಕೈಲಾಸಾಧಿಪತಿಯಾದ ಶ್ರೀಕಂಠೇಶ್ವರನೆ, ನಾನು ನಿನ್ನ ಆಜ್ಞೆಯಂತೆ ದೊಡ್ಡದಾದ ಮಲಯಪರ್ವತಕ್ಕೆ ಹೋಗುತ್ತೇನೆ ನಾನು ಅಲ್ಲಿಗೆ ಹೋದಕೂಡಲೆ ಆ ದೇಶದಲ್ಲಿರುವ ದ್ರಾವಿಡ ಜನರೆಲ್ಲರೂ, ಆ ಭಾಷೆಯ ಶಬ್ದ

ತೇಷಾಮುಪ್ಯುಪದೇಶಾಯ ಮಮುಪಿಜ್ಞಾನಹೇತವೇ ।
ಮಹ್ಯಂ ದ್ರಾವಿಡಸೂತ್ರಾಣಿ ಸಹಸೋಽಪದಿಶ ಪ್ರಭೋ ॥ ೩೪ ॥

ಇತ್ಯಗಸ್ತ್ಯಪ್ರಾರ್ಥಿತೇನ ಸರ್ವಜ್ಞೇನ ತ್ವಯಾ ತದಾ ।
ಉಪದಿಷ್ಟಾನಿ ಸೂತ್ರಾಣಿ ತಸ್ಮೈ ಕುಂಭಭವಾಯ ಚ ॥ ೩೫ ॥

ಪುನರ್ವಿಜ್ಞಾಪ್ತಿ ಮಕರೋದ್ಭವಂತಂ ಪ್ರತಿ ಕುಂಭಜಃ ।
ಭವದ್ದರ್ಶನಮಸ್ಮಾಕಂ ಭವಿಷ್ಯತಿ ಕದಾ ಪುನಃ ॥ ೩೬ ॥

ಇತ್ಯುಕ್ತೇ ಕುಂಭಜೇ ತೇ ಚ ಸಾನಂದಾಶ್ರುವಿಲೋಚನೇ ।
ತ್ವಯಾ ಭಗವತಾ ಪ್ರೋಕ್ತಮೇವಂ ತತ್ಪ್ರೀತಿಹೇತವೇ ॥ ೩೭ ॥

ಪ್ರದೇಶೇ ಪ್ರಥಿತೇ ಪ್ರಾಚ್ಯಾಂ ಕೃತಮಾಲಾನದೀತಟೇ ।
ಕದಂಬವನ್ಯಾಂ ರುಚಿರೇ ವಿಡಂಬಿತಸುರಾಲಯೇ ॥ ೩೮ ॥

---

ಗಳನ್ನು ತಿಳಿಯಲು ಕುತೂಹಲವುಳ್ಳವರಾಗಿರುತ್ತಾರೆ. ನಾನು ಅದನ್ನು ತಿಳಿದು ಅವರಿಗೆ ಉಪದೇಶಮಾಡುವುದಕ್ಕಾಗಿ ದ್ರಾವಿಡಭಾಷೆಯ ಸೂತ್ರಗಳನ್ನು ನನಗೆ ಬೇಗನೆ ಉಪದೇಶಮಾಡು " ಎಂದು ಪ್ರಾರ್ಥಿಸಿದನು.

೩೫–೩೭. ಸರ್ವಜ್ಞನಾದ ನೀನು ಆ ಋಷಿಯ ಪ್ರಾರ್ಥನೆಯನ್ನು ಕೇಳಿ, ದ್ರಾವಿಡ ಭಾಷೆಯ ಸೂತ್ರಗಳೆಲ್ಲವನ್ನೂ ಅವನಿಗೆ ಉಪದೇಶ ಮಾಡಿರುತ್ತೀಯೆ. ಅನಂತರದಲ್ಲಿ ಅವನು ಬಡಲಾಗಿ " ನಿನ್ನ ದರ್ಶನವು ನನಗೆ ಪುನಃ ಯಾವಾಗ ದೊರೆಯುವುದು " ಎಂದು ವಿಜ್ಞಾಪಿಸಿಕೊಂಡನು.

೩೮–೪೧. ಆನಂದಾಶ್ರುಗಳನ್ನು ಸುರಿಸುತ್ತಿರುವ ಅಗಸ್ತ್ಯಋಷಿಯ ಮಾತುಗಳನ್ನು ಕೇಳಿ, ಅವನಿಗೆ ನಂಬಿಕೆಯನ್ನು ಉಂಟುಮಾಡುವುದಕ್ಕಾಗಿ " ದಕ್ಷಿಣದಲ್ಲಿ ಪ್ರಸಿದ್ಧವಾದ ಕೃತಮಾಲಾನದಿಯ ದಡದಲ್ಲಿ ಸ್ವರ್ಗವನ್ನು ಮೀರಿರುವ ಕದಂಬವನ

ಶ್ರೀಹಾಲಾಸ್ಯಮಿತಿ ಖ್ಯಾತಂ ಮತ್ಕ್ಷೇತ್ರಮತಿಪಾವನಂ ।
ಅನಾದಿಭೂತಮನಘಂ ವಿದ್ಯತೇsಮರವಂದಿತಂ ॥ ೩೯ ॥

ತತ್ರಾನಾದಿಭವಂ ಲಿಂಗಂ ಅಸ್ತಿ ಸಚ್ಚಿತ್ಸುಖಾತ್ಮಕಂ ।
ಕರೋಮಿ ತತ್ರ ಸಾನ್ನಿಧ್ಯಮಹಂ ಕಾಲತ್ರಯೇಷ್ವಪಿ ॥ ೪೦ ॥

ಆವಿರ್ಭೂತಂ ಚ ತಲ್ಲಿಂಗಾತ್ಪ್ರತ್ಯಕ್ಷೇಣ ವಿಲೋಕ್ಯ ಮಾಂ ।
ಲಬ್ಧ್ವಾ ಸರ್ವಾಣಿ ಕಾಮ್ಯಾನಿ ನಿತ್ಯಂ ತ್ವಮಪಿ ದುರ್ಲಭಂ ॥ ೪೧ ॥

ಮದನುಗ್ರಹತೋ ನಿತ್ಯಂ ಮಲಯೇ ತ್ವಂ ತಪಃ ಕುರು ।
ನಿತ್ಯಂ ಸುಖಕರಂ ವಸ್ತು ತಪ ಏವ ಶರೀರಿಣಾಂ ॥ ೪೨ ॥

ತಪಸಾ ಧರ್ಮಕಾಮಾರ್ಥಮೋಕ್ಷಾಂಶ್ಚ ಲಭತೇ ಜನಃ ।
ಜಗದ್ಧಿತಾಯ ಸಹಸಾ ಗಚ್ಛ ತ್ವಂ ಮಲಯಾಚಲಂ ॥ ೪೩ ॥

---

ವಿರುವುದು. ಅದನ್ನು ಹಾಲಾಸ್ಯಕ್ಷೇತ್ರವೆಂದು ಕರೆಯುವರು. ಅದು ಬಹಳ ಪವಿತ್ರವಾದ ನನ್ನ ಕ್ಷೇತ್ರವಾಗಿರುವುದು. ಅದು ಯಾವಾಗಲೂ ಪವಿತ್ರವಾಗಿ ದೇವ ಪೂಜ್ಯವಾಗಿರುವುದು. ಅಲ್ಲಿ ಸಚ್ಚಿದಾನಂದ ರೂಪದಿಂದ ಇರುವ ಅನಾದಿ ಲಿಂಗವಿರುವುದು. ನಾನು ಮೂರು ಕಾಲಗಳಲ್ಲಿಯೂ ಆ ಶಿವಲಿಂಗದಲ್ಲಿ ನನ್ನ ಸಾನ್ನಿಧ್ಯದಿಂದ ವಾಸಮಾಡುತ್ತಿರುವೆನು. ನಾನು ಆ ಶಿವಲಿಂಗದಿಂದ ಆವಿರ್ಭವಿಸಿ, ಪ್ರತ್ಯಕ್ಷನಾಗಿರುವುದನ್ನು ನೋಡಿ, ನೀನು ನಿನ್ನ ಇಷ್ಟಾರ್ಥವೆಲ್ಲವನ್ನೂ ಹೊಂದಿ ನನ್ನ ಅನುಗ್ರಹದಿಂದ ಮಲಯಪರ್ವತದಲ್ಲಿ ತಪಸ್ಸನ್ನು ಮಾಡುತ್ತಾ ಸುಖದಿಂದ ಇರು.

೪೨–೪೩. ಪ್ರಾಣಿಗಳಿಗೆ ಯಾವಾಗಲೂ ತಪಸ್ಸನ್ನು ಮಾಡುವುದೇ ಸುಖಕರವಾದದ್ದಾಗಿರುವುದು. ತಪಸ್ಸಿನಿಂದಲೇ ಜನರೆಲ್ಲರೂ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಹೊಂದುವರು. ನೀನು ಲೋಕದ ಹಿತಕ್ಕಾಗಿ ಮಲಯಪರ್ವತಕ್ಕೆ ಹೋಗು ಎಂದು ಹೇಳುತ್ತಿರುತ್ತೀಯೆ. ದೇವೇಶ್ವರನಾದ ನಿನ್ನ ಆಜ್ಞೆಯಂತೆ ಅಗಸ್ತ್ಯಋಷಿಯು

ಇತ್ಯುಕ್ತೇ ತ್ವಯಿ ದೇವೇಶೆ ತ್ವದಾಜ್ಞಾಪರಿಪಾಲಕಃ ।
ಮಲಯಾಚಲಮಧ್ಯಸ್ಥಸ್ತಪಶ್ಚರತಿ ಸಂತತಂ ॥ ೪೪ ॥

ಮುನಿನಾ ತೇನ ವಿಜ್ಞಾನಂ ಕೀರಸ್ಯ ಭವತು ಕ್ಷಣಾತ್ ।
ಇಯಂ ತು ಮಮ ವಿಜ್ಞಪ್ತಿಸ್ತ್ವದಿಷ್ಟಂ ಸಹಸಾ ಕುರು ॥ ೪೫ ॥

ಇತಿ ದೇವೀವಚಃ ಶ್ರುತ್ವಾ ಸುಂದರೇಶಃ ಕೃಪಾನಿಧಿಃ ।
ಪ್ರಾಹ ದೇವೀಮುಖಂ ವೀಕ್ಷ್ಯ ಶರತ್ಪೂರ್ಣೇಂದುಸನ್ನಿಭಂ ॥ ೪೬ ॥

ಉಮೇ ಸತ್ಯಂ ತ್ವಯಾ ಬುದ್ಧ್ವಾ ವೃತ್ತಾಂತಂ ಚ ಚಿರಂತನಂ ।
ಕಥಿತೋಽದ್ಯಾನುಗ್ರಹಾರ್ಥಂ ನಕ್ಕೀರಸ್ಯ ಮಹಾಕವೇಃ ॥ ೪೭ ॥

ಭುವಿ ದ್ರಾವಿಡಸೂತ್ರಾಣಾಂ ವಿಜ್ಞಾತಾ ಗಸ್ತ್ಯ ಏವ ಹಿ ।
ತೇನೋಽಪದೇಶಃ ಕರ್ತವ್ಯಃ ತ್ವಯಾ ಸಮ್ಯಕ್ಸಮೀರಿತಃ ॥ ೪೮ ॥

---

ಮಲಯಪರ್ವತದಲ್ಲಿ ತಪಸ್ಸನ್ನು ಯಾವಾಗಲೂ ಮಾಡುತ್ತಿರುವನು. ಆ ಋಷಿಯಿಂದ ನಕ್ಕೀರನಿಗೆ ಒಂದು ಕ್ಷಣ ಮಾತ್ರದಲ್ಲಿ ಭಾಷಾಜ್ಞಾನವು ಉಂಟಾಗಲಿ, ಎಂದು ನಾನು ಹೀಗೆ ವಿಜ್ಞಾಪಿಸಿಕೊಂಡಿರುವೆನು. ನಿನ್ನ ಇಚ್ಛೆಯಂತೆ ಬೇಗನೆ ಕಾರ್ಯವನ್ನು ಆಚರಿಸಬಹುದು.

೪೬–೪೯. ಮೀನಾಕ್ಷೀದೇವಿಯು ಹೇಳಿದ, ಈ ಮಾತನ್ನು ಕೇಳಿ ದಯಾಳು ವಾದ ಸುಂದರೇಶ್ವರನು ಪೂರ್ಣಚಂದ್ರನಂತೆ ಇರುವ ದೇವಿಯ ಮುಖವನ್ನು ನೋಡಿ "ಎಲೈ ಪಾರ್ವತಿಯೆ ನೀನು ಹೇಳಿದ್ದೆಲ್ಲವೂ ಸತ್ಯವಾದದ್ದು. ಹಿಂದಿನ ವೃತ್ತಾಂತ ವನ್ನು ತಿಳಿದು ನೀನು ಹೇಳುತ್ತೀಯೆ. ನಕ್ಕೀರಮಹಾಕವಿಗೆ ಇದರಿಂದ ಅನುಗ್ರಹ ವನ್ನು ಮಾಡಲು ಹೇಳಿದ್ದಾಯಿತು. ಭೂಮಿಯಲ್ಲಿ ದ್ರಾವಿಡಭಾಷೆಯ ಸೂತ್ರಗಳನ್ನು ಅಗಸ್ತ್ಯಋಷಿಯೇ ತಿಳಿದಿರುವವನು. ಅವನು ನಕ್ಕೀರನಿಗೆ ನೀನು ಹೇಳಿದಂತೆ ಉಪ

ಇತ್ಯುಕ್ತ್ವಾ ಚಿಂತಯಾಮಾಸ ಮಲಯಸ್ಥಂ ಚ ಮಾಂ ಶಿವಃ ।
ತತೋ ವಿಮಾನಮಾರುಹ್ಯ ಲೋಪಾಮುದ್ರಾಸಮನ್ವಿತಃ ॥ ೪೯ ॥

ಶಿವಚಿಂತಾ ವಾಯುವಶಾತ್ಸದ್ಯಸ್ತತ್ಸನ್ನಿಧಿಂ ಗತಃ ।
ತದಾ ಕದಂಬಕಾಂತಾರಮಧ್ಯಸ್ಥೇಂದ್ರವಿಮಾನಗಃ ॥ ೫೦॥

ಸುಮೀನಾಕ್ಷ್ಯಾ ಮಹಾದೇವ್ಯಾ ಮಹಾದೇವಸ್ಸಮನ್ವಿತಃ ।
ಅತಿಸುಂದರಮಾಶ್ಚರ್ಯಂ ಧೃತ್ವಾ ತೇಜೋಮಯಂ ವಪುಃ ॥ ೫೧ ॥

ಸಾನ್ನಿಧ್ಯಮಕರೋತ್ತಸ್ಯ ಸನ್ನಿಧೌ ರಂಗಮಂಟಪೇ ।
ಜಗತ್ಕಾರಣಭೂತೌ ತೌ ದಂಪತೀ ದಿವ್ಯವಿಗ್ರಹೌ ॥ ೫೨ ॥

ಸುಮೀನಾಕ್ಷೀ ಸುಂದರೇಶೌ ದೃಷ್ಟ್ವಾಹಮತಿ ವಿಸ್ಮಿತಃ ।
ಕರ್ತವ್ಯಂ ಕರ್ಮ ಚಾಜ್ಞಾಯ ಕಾಷ್ಠಪಾಷಾಣ ಸನ್ನಿಭಃ ॥ ೫೩ ॥

ಸಕಲತ್ರಸ್ತಯೋರಗ್ರೇ ಚಿರಂ ನಿಶ್ಚಲತಾಂ ಗತಃ ।
ಅಥ ಪ್ರಣಮ್ಯ ಭಕ್ತ್ಯಾ ಚ ತಯೋಃ ಪಾದಾಂಬುಜಾನಿ ಚ ॥ ೫೪ ॥

---

ದೇಶವನ್ನು ಮಾಡಬೇಕು" ಎಂದು ಹೇಳಿ ಮಲಯಪರ್ವತದಲ್ಲಿರುವ ನನಗೆ ಆಜ್ಞೆಮಾಡಿದನು. ನಾನು ಲೋಪಾಮುದ್ರಾ ಸಹಿತನಾಗಿ ವಿಮಾನದಲ್ಲಿ ಕೂತುಕೊಂಡು, ಶಿವನ ಆಲೋಚನಾನುಸಾರವಾಗಿ ಅವನ ಹತ್ತಿರಕ್ಕೆ ಹೋದನು.

೫೦–೫೩. ಕದಂಬವನದ ಮಧ್ಯದಲ್ಲಿರುವ ಇಂದ್ರನ ವಿಮಾನದ ರಂಗ ಮಂಟಪದಲ್ಲಿ ಮೀನಾಕ್ಷೀಸಮೇತನಾಗಿರುವ ಸುಂದರೇಶ್ವರನು, ಉತ್ತಮವಾದ ತೇಜೋಮಯವಾದ ಶರೀರವನ್ನು ಧರಿಸಿಕೊಂಡು ತನ್ನ ಸಾನ್ನಿಧ್ಯವನ್ನು ಕೊಡುತ್ತಿದ್ದನು. ಜಗತ್ಕಾರಣನಾಗಿರುವ ಉತ್ತಮವಾದ ರೂಪದಿಂದ ಇರುವ ಆ ದಂಪತಿಗಳನ್ನು ಪ್ರತ್ಯಕ್ಷವಾಗಿ ನೋಡಿ, ನನಗೆ ಬಹಳ ಆಶ್ಚರ್ಯವಾಯಿತು.

೫೪–೫೬. ಅವರಿಬ್ಬರನ್ನೂ ನೋಡಿದ ಮಾತ್ರದಿಂದಲೇ ಉಂಟಾದ ಆಶ್ಚರ್ಯದಿಂದ ನನಗೆ ಮಾಡಬೇಕಾದ ಕೆಲಸವು ಮರೆತುಹೋಯಿತು. ನಾನು ನನ್ನ ಪತ್ನಿಯೊಡನೆ ಅವರಿಬ್ಬರ ಎದುರಿನಲ್ಲಿ ಕಲ್ಲಿನ ಪ್ರತಿಮೆಯಂತೆ ಸುಮ್ಮನೆ ನಿಂತು

ಪ್ರಸ್ತುತ್ಯ ಸ್ತುತಿವಾಕ್ಯೈಶ್ಚ ತೌ ವಿಲೋಕ್ಯ ಮುದಾನ್ವಿತಃ ।
ತದಾ ಕೀರೋಽಪಿ ಸುಸ್ನಾತಶ್ಶುಭ್ರವಾಸಾಶ್ಚ ಭಸ್ಮ ಚ ॥ ೫೫ ॥

ಧೃತ್ವಾ ನಿಯಮಸಂಯುಕ್ತೋ ದೇವಂ ದ್ರಷ್ಟುಂ ಸಮಾಯಯೌ ।
ತಂ ಕಾರುಣ್ಯಕಟಾಕ್ಷೇಣ ವೀಕ್ಷ್ಯ ಮಾಮಪಿ ವೀಕ್ಷ್ಯ ಚ ॥ ೫೬ ॥

ಸೂತ್ರಾಣ್ಯುಪದಿಶಸ್ವೇತಿ ಮಹ್ಯಮಾಜ್ಞಾಂ ದದೌ ಶಿವಃ ।
ಗುರೋರ್ಮಾಮಪಿ ಜಗತಾಂ ತಾಮಾಜ್ಞಾಂ ಪ್ರತಿಗೃಹ್ಯ ಚ ॥ ೫೭ ॥

ಉಪದಿಷ್ಟಂ ಕ್ರಮಾತ್ಸೂತ್ರಂ ಕೀರಾಯ ವಿದುಷೇ ಮಯಾ ।
ಉಪದೇಶಕ್ರಮಂ ದೃಷ್ಟ್ವಾ ಭಗವಾನ್ಪಾರ್ವತೀಪತಿಃ ॥ ೫೮ ॥

ಪ್ರಣತಂ ಮಾಂ ಬಹುಶ್ಲಾಘ್ಯಂ ಪ್ರದದೌ ಮೇ ಮನೋರಥಾನ್ ।
ಅಥ ದೇವೀ ಸುಮೀನಾಕ್ಷೀ ಹಾಲಾಸ್ಯೇಶ್ವರಮೀಶ್ವರಂ ॥ ೫೯ ॥

---

ಇದ್ದೆನು. ಒಂದು ಕ್ಷಣವು ಕಳೆದನಂತರ ಅವರಿಬ್ಬರನ್ನೂ ಸ್ತುತಿಮಾಡಿ, ನಮಸ್ಕರಿಸಿ ಭಕ್ತಿಪೂರ್ವಕವಾಗಿ ಅನೇಕ ಸ್ತೋತ್ರಗಳನ್ನು ಹೇಳಿದೆನು. ಹಾಗೆಯೇ ಅವರಿಬ್ಬರನ್ನೂ ನೋಡುತ್ತಾ ಸಂತೋಷದಿಂದ ಇದ್ದೆನು. ಆಗ ನಕ್ಕೀರನು ಸ್ನಾನಮಾಡಿಕೊಂಡು ಶುಭ್ರವಾದ ವಸ್ತ್ರಗಳನ್ನು ಧರಿಸಿ ಭಸ್ಮಧಾರಣೆಯನ್ನು ಮಾಡಿಕೊಂಡು ದೇವದೇವನನ್ನು ದರ್ಶನಮಾಡುವುದಕ್ಕಾಗಿ ಅಲ್ಲಿಗೆ ಬಂದನು.

೫೭--೬೦. ಸುಂದರೇಶ್ವರನು ನನ್ನನ್ನೂ ನಕ್ಕೀರನನ್ನೂ ದಯೆಯಿಂದ ಕೂಡಿದ ಕಟಾಕ್ಷದಿಂದ ನೋಡಿ, ಸ್ತೋತ್ರಗಳನ್ನು ಇವನಿಗೆ ಉಪದೇಶ ಮಾಡು ಎಂದು ನನಗೆ ಅಪ್ಪಣೆ ಮಾಡಿದನು. ಜಗತ್ತಿಗೆ ಗುರುವಾಗಿರುವ ಶಿವನ ಆಜ್ಞಾನುಸಾರವಾಗಿ ವಿದ್ವಾಂಸನಾದ ಆ ನಕ್ಕೀರನಿಗೆ ಸೂತ್ರವನ್ನು ನಾನು ಉಪದೇಶ ಮಾಡಿದೆನು. ಪಾರ್ವತೀಪತಿಯಾದ ಶಿವನು, ನಾನು ಸೂತ್ರಗಳನ್ನು ಉಪದೇಶಮಾಡಿದ ಕ್ರಮವನ್ನು ನೋಡಿ, ನನ್ನನ್ನು ಬಹಳ ಶ್ಲಾಘಿಸಿ, ನನ್ನ ಇಷ್ಟಾರ್ಥಗಳನ್ನು ಅನುಗ್ರಹಿಸಿದನು. ಭಕ್ತವತ್ಸಲಳಾದ ಮೀನಾಕ್ಷೀದೇವಿಯು ತನ್ನ ಪತಿಯಾದ ಹಾಲಾಸ್ಯೇಶ್ವರನನ್ನು ನೋಡಿ, ತನ್ನ ಮನಸ್ಸಿಗೆ ಉಂಟಾಗಿರುವ ಸಂದೇಹವನ್ನು ನಾಶಗೊಳಿಸಿಕೊಳ್ಳ

**ಸ್ವಸಂದೇಹಾಪನೋದಾಯ ಪ್ರಾಹೈವಂ ಭಕ್ತವತ್ಸಲಾ ।**
**ನಕ್ಕೀರಾಯ ಸ್ವಭಕ್ತಾಯ ಸರ್ವಜ್ಞೇನ ತ್ವಯಾ ಪುನಃ　　　　॥ ೬೦ ॥**

**ಸೂತ್ರಾಣಿ ನೋಽಪದಿಷ್ಟಾನಿ ವದ ತತ್ಕಾರಣಂ ವಿಭೋ ।**
**ಇತಿ ದೇವೀವಚಃ ಶ್ರುತ್ವಾ ಶ್ರುತಿವಾಚಾಮಗೋಚರಃ　　　　॥ ೬೧ ॥**

**ಮಂದಸ್ಮಿತೇನ ಮಧುರಂ ಕೃತ್ವಾ ಸ್ವಾನನಮಬ್ರವೀತ್ ।**
**ಶುಶ್ರೂಷವೇರ್ಥಧಾತ್ರೇ ಚ ಮಾತ್ಸರ್ಯರಹಿತಾಯ ಚ　　　　॥ ೬೨ ॥**

**ಸ್ವಾಜ್ಞಾಮಲಂಘಯಿತ್ರೇ ಚ ದೇಯಾ ವಿದ್ಯೇತರಾಯ ನ ।**
**ಸ ನಕ್ಕೀರೋ ಮತ್ಸರವಾನ್ತಸ್ಮಯಾ ನೋಪದೇಶಿತಃ　　　　॥ ೬೩ ॥**

**ವಿದ್ಯಾ ತು ದೇಯಾ ಗುರುಣಾ ಶಿಷ್ಯಂ ಸಮ್ಯಕ್ಪರೀಕ್ಷ್ಯ ಚ ।**
**ಇತ್ಯಾಕರ್ಣ್ಯ ವಚಃ ಶಂಭೋಸ್ತಥ್ಯಂ ಸರ್ವಜನಪ್ರಿಯಂ　　　　॥ ೬೪ ॥**

---

ವುದಕ್ಕಾಗಿ, "ಎಲೈ ದೇವನೆ ನೀನು ಸರ್ವಜ್ಞನಾಗಿರುತ್ತೀಯೆ. ನಿನಗೆ ನಕ್ಕೀರನು ಭಕ್ತನಾಗಿರುವನು ಆದಾಗ್ಯೂ ನೀನೇ ಅವನಿಗೆ ಸೂತ್ರಗಳನ್ನು ಉಪದೇಶಮಾಡದಿರುವ ಕಾರಣವನ್ನು ನನಗೆ ಹೇಳು" ಎಂದು ಪ್ರಶ್ನೆ ಮಾಡಿದಳು.

೬೧–೬೫. ಆಗ ಜ್ಞಾನರೂಪದಿಂದ ಇರುವ ಸುಂದರೇಶ್ವರನು ದೇವಿಯ ಮಾತನ್ನು ಕೇಳಿ, ಮಧುರವಾದ ಮಂದಹಾಸದಿಂದ ಇರುವವನಾಗಿ, "ಶುಶ್ರೂಷೆ ಮಾಡುವವನಿಗೂ, ದ್ರವ್ಯವನ್ನು ಕೊಡುವವನಿಗೂ, ಅಸೂಯೆ ಇಲ್ಲದವನಿಗೂ, ಆಜ್ಞಾನುಸಾರ ನಡೆಯುವವನಿಗೂ, ವಿದ್ಯೆಯನ್ನು ಉಪದೇಶ ಮಾಡಬೇಕು. ಬೇರೆಯವನಿಗೆ ಉಪದೇಶ ಮಾಡಬಾರದು. ನಕ್ಕೀರನು ಬಹಳ ಅಸೂಯೆಯುಳ್ಳವನು. ಆದ್ದರಿಂದ ಅವನಿಗೆ ನಾನು ವಿದ್ಯೆಯನ್ನು ಉಪದೇಶ ಮಾಡಲಿಲ್ಲ. ಗುರುವು ಶಿಷ್ಯನನ್ನು ಚೆನ್ನಾಗಿ ಪರೀಕ್ಷಿಸಿ, ವಿದ್ಯೆಯನ್ನು ಉಪದೇಶ ಮಾಡಬೇಕು" ಎಂದು ಹೇಳಿದನು. ಪರಾಶಕ್ತಿಯಾಗಿರುವ ದೇವಿಯು ದೇವದೇವನು ಹೇಳಿದ ನಿಜವಾದ ಮತ್ತು ಎಲ್ಲರಿಗೂ ಹಿತವಾದ ಮಾತನ್ನು ಕೇಳಿ ಬಹಳ ಸಂತೋಷ

ಪರಾಶಕ್ತೇಃ ಪರಾಂ ಪ್ರೀತಿಂ ಪ್ರಾಪ್ಯ ತೂಷ್ಣೀಂ ಬಭೂವ ಹ ।
ಅದೃಶ್ಯತಾಮಥ ಪ್ರಾಪ್ತ ಸ್ಸಾಂಬಸ್ಸುಂದರನಾಯಕಃ ॥ ೬೫ ॥

ಅಹಮುಪ್ಯಥ ತಲ್ಲಿಂಗಮಭ್ಯರ್ಚ್ಯ ಮಲಯಂ ಗತಃ ।
ಸೂತ್ರಜ್ಞಾನಂ ಸಮಾಸಾದ್ಯ ನತ್ಕೀರಃ ಪ್ರೀತಮಾನಸಃ ॥ ೬೬ ॥

ಪುರಾ ಕವಿತ್ವಂ ಸ್ವೇನೋಕ್ತಮೀಶೋಕ್ತಂ ತಂ ನಿರೂಪ್ಯ ಚ ।
ನನಂದ ಶಾಂಕರಂ ವಾಕ್ಯಂ ನಾನಂದತ್ಸ್ವೇನ ತತ್ಕೃತಂ ॥ ೬೭ ॥

ಅಥಾನವದ್ಯಾಮೀಶೋಕ್ತಾಮಾರ್ಯಾಂ ಶಬ್ದಾರ್ಥಕೋಮಲಾಂ ।
ಪುನಃ ಪುನ ಸ್ಸಮಾಲೋಚ್ಯ ಸ್ವಮಜ್ಞಾನ ಮದೂಷಯತ್ ॥ ೬೮ ॥

ಲಿಂಗಮೂರ್ತಿಧರಂ ಶಂಭುಂ ಭಕ್ತಾನುಗ್ರಹತತ್ಪರಂ ।
ಪ್ರಣಿಪತ್ಯ ಪ್ರಸನ್ನಂ ತಮಸ್ತುವತ್ ಸ ಕೃತಾಂಜಲಿಃ ॥ ೬೯ ॥

---

ವನ್ನು ಹೊಂದಿ ಸುಮ್ಮನೆ ಇದ್ದಳು. ಅನಂತರದಲ್ಲಿ ಸುಂದರೇಶ್ವರನು ಜಗನ್ಮಾತೆಯೊಡನೆ ಅದೃಶ್ಯನಾದನು. ನಾನು ಆ ಸುಂದರೇಶ್ವರನ ಲಿಂಗವನ್ನು ಪೂಜಿಸಿ ಮಲಯಪರ್ವತಕ್ಕೆ ಹೋದೆನು.

೬೬–೬೮. ನತ್ಕೀರನು ಸೂತ್ರಜ್ಞಾನವನ್ನು ಹೊಂದಿ ಸಂತೋಷವುಳ್ಳವನಾದನು. ಈಶ್ವರನು ಹೇಳಿದ (ಕವಿತ್ವದ) ಪದ್ಯದ ಅರ್ಥವನ್ನು ವಿಚಾರ ಮಾಡುವಾಗ ತನ್ನ ಮಾತಿಗೆ ಉತ್ತರವಾಗಿ ಶಂಕರನು ಹೇಳಿದ ಮಾತನ್ನು ಜ್ಞಾಪಿಸಿಕೊಂಡು ಸಂತೋಷಪಟ್ಟನು. ಶಿವನು ತನಗೆ ಮಾಡಿದ ಆಗ್ರಹದ ವಿಷಯದಲ್ಲಿ ವ್ಯಸನಪಟ್ಟನು. ಶಬ್ದಾರ್ಥಗಳಿಂದ ಸುಂದರವಾದ, ಜಗದೀಶ್ವರನು ಅನುಗ್ರಹಿಸಿರುವ ಪದ್ಯವನ್ನು ಅನೇಕ ಸಾರಿ ವಿಮರ್ಶೆಮಾಡಿ, ತನ್ನ ಅಜ್ಞಾನವನ್ನು ನಿಂದಿಸಿಕೊಂಡನು.

೬೯–೭೨. ನತ್ಕೀರನು ಶಿವಲಿಂಗದ ಆಕಾರದಿಂದ ಇರುವ, ಭಕ್ತರನ್ನು ಅನುಗ್ರಹಿಸುತ್ತಿರುವ ಸುಂದರೇಶ್ವರನಿಗೆ ನಮಸ್ಕರಿಸಿ, ಸ್ತೋತ್ರಮಾಡಿದನು. "ದಯೆಯ ಆಕಾರವನ್ನು ಹೊಂದಿರುವ ಪೂಜ್ಯನಾದ ಕದಂಬವನಾಧಿಪನೇ,

**ಭಗವನ್ ಕರುಣಾಮೂರ್ತೇ ಕದಂಬವನನಾಯಕ ।**
**ಅಪಾರಾದಪರಾಧಾಬ್ಧೇ ರ್ಮಾಮುದ್ಧರ ಕೃಪಾನ್ಮಯಾ ॥ ೭೦ ॥**

**ತದ್ವಾಕ್ಯದೂಷಕಾನಾಂ ಚ ದುಷ್ಕೃತಂ ಮಹದಸ್ತಿ ಹಿ ।**
**ತದ್ದುಷ್ಕೃತಮಹಾಪಾಶಬದ್ಧಂ ಮಾಂ ಮೋಚಯ ಪ್ರಭೋ ॥ ೭೧ ॥**

**ಅಜ್ಞಾನಾತ್ಕೃತಮತ್ಯಲ್ಪ ಮಪರಾಧಂ ಜನೈಃ ಕೃತಂ ।**
**ಪುರುಷಾಸ್ಸದ್ಗುಣಾ ಲೋಕೇ ಕ್ಷಮಂತೇ ತತ್ತು ನಾದ್ಭುತಂ ॥ ೭೨ ॥**

**ಜ್ಞಾನೇನ ಕೃತಮತ್ಯುಗ್ರ ಮಪರಾಧಂ ಮಯಾ ಕೃತಂ ।**
**ಕ್ಷಮಸೇ ನಿರ್ಗುಣ ಸ್ತ್ವಂ ಯತ್ತದ್ದೇವಾತ್ಯದ್ಭುತಂ ಭುವಿ ॥ ೭೩ ॥**

**ಇತ್ಯಾದಿ ಸ್ತುತಿವಾಕ್ಯೈಶ್ಚ ತೋಷಯಿತ್ವಾ ಮಹೇಶ್ವರಂ ।**
**ಸಂಪ್ರಾಪ ವಿದುಷಾಂ ಸಂಘಂ ಸಂಘಮಂಟಪಮಧ್ಯಗಂ ॥ ೭೪ ॥**

---

ನೀನು ಹೇಳಿದ ಮಾತನ್ನು ನಿಂದಿಸುವವರ ಪಾಪವು ಬಹಳವಾಗಿರುವುದು. ಆ ಪ್ರಕಾರವಾದ ಪಾಪದಿಂದ ನನ್ನನ್ನು ಬಿಡಿಸಿ ರಕ್ಷಿಸು. ಲೋಕದಲ್ಲಿ ಜನರು ತಿಳಿಯದೆ, ಕೊಂಚಮಟ್ಟಿನ ಅಪರಾಧವನ್ನು ಮಾಡುವರು. ಗುಣವಂತರಾದವರು ಅದನ್ನು ಕ್ಷಮಿಸುವುದು ಆಶ್ಚರ್ಯವಲ್ಲ. ಕೆಲವರು ತಿಳಿದವರಾದರೂ ಬಹಳವಾದ ಅಪರಾಧವನ್ನು ಮಾಡುವರು. ನಿರ್ಗುಣನಾದ ನೀನು ಅದನ್ನು ಕ್ಷಮಿಸುವುದು ಬಹಳ ಆಶ್ಚರ್ಯಕರವಾದದ್ದು." ಎಂದು ಅರ್ಥವನ್ನು ಕೊಡುವ ಸ್ತುತಿ ವಾಕ್ಯಗಳಿಂದ ಮಹೇಶ್ವರನನ್ನು ಸ್ತುತಿಮಾಡಿದನಂತರ ನಕ್ಕೀರನು ಸಂಘಮಂಟಪದ ಮಧ್ಯದಲ್ಲಿರುವ ವಿದ್ವತ್ಸಂಘವನ್ನು ಹೊಂದಿದನು.

೭೩-೭೮. ಅವನು ಅಗಸ್ತ್ಯರುಷಿಯು ಉಪದೇಶಮಾಡಿದ ಸೂತ್ರಾರ್ಥ ಗಳೆಲ್ಲವನ್ನೂ ಕಪಿಲನೇ ಮೊದಲಾದವರಿಗೆ ವಿಸ್ತರಿಸಿ ಹೇಳಿದನು. ಕಪಿಲ, ಭರಣ ಇವರೇ ಮೊದಲಾದ ಕವಿಗಳು ನಕ್ಕೀರನು ಒಂದುಸಾರಿ ಹೇಳಿದ ಮಾತ್ರದಿಂದಲೇ ತಮ್ಮ ತೀಕ್ಷ್ಣವಾದ ಬುದ್ಧಿಯಿಂದ ಅವೆಲ್ಲವನ್ನೂ ಚೆನ್ನಾಗಿ ತಿಳಿದುಕೊಂಡರು.

ಸೂತ್ರಾಣಿ ಸೂಪದಿಷ್ಟಾನಿ ಮೈತ್ರಾವರುಣಿನಾತ್ಮನಃ ।
ನತ್ಕೀರೋ ವರ್ಣಯಾಮಾಸ ಕಪಿಲಾದಿವಿಪಶ್ಚಿತಾಂ ॥ ೭೫ ॥

ತಾನಿ ಸೂತ್ರಾಣಿ ಕಪಿಲಭರಣಾದ್ಯಾಃ ಕವೀಶ್ವರಾಃ ।
ಜಗೃಹುಸ್ಸಕೃದುಕ್ತಾನಿ ತೇನ ತೇ ತೀಕ್ಷ್ಣಯಾ ಧಿಯಾ ॥ ೭೬ ॥

ಅಥ ಲೋಕಾಶ್ಚ ಗೃಹ್ಣಂತಿ ಸೂತ್ರಂ ಸುಪ್ರಥಿತಂ ಭುವಿ ।
ಂಘುಸ್ಥೈಸ್ಸಕಲೈರ್ಮರ್ಹ್ಯಂ ಪುರಾ ಪ್ರೋಕ್ತಂ ಪುರಾರಿಣಾ ॥ ೭೭ ॥

ಕೃತಾಪರಾಧಂ ನತ್ಕೀರಂ ಲಕ್ಷ್ಯಲಕ್ಷದಕ್ಷಿಣಂ ।
ಮಯಾ ಯಃ ಕಾರಯಾಮಾಸ ನಮಸ್ತಸ್ಮೈ ಪಿನಾಕಿನೇ ॥ ೭೮ ॥

ಚತುರುತ್ತರಪಂಚಾಶಲ್ಲೀಲಾ ಶಂಭೋಃ ಪ್ರಕೀರ್ತಿತಾ ।
ಚತುರ್ವಿಧಮಹಾರ್ಥಂ ಚ ಪ್ರದಾತುಂ ಚತುರಾತ್ಮಿಯಂ ॥ ೭೯ ॥

---

ನನಗೆ ಈಶ್ವರನು ಮೊದಲು ದ್ರಾವಿಡಭಾಷಾ ಸೂತ್ರಗಳನ್ನು ಉಪದೇಶಮಾಡಿದನು. ನನ್ನಿಂದ ನತ್ಕೀರನ ಮೂಲಕವಾಗಿ ಸಂಘದ ಕವಿಗಳೆಲ್ಲರಿಗೂ ಸೂತ್ರಾರ್ಥವು ಉಪದಿಷ್ಟವಾಯಿತು. ಭೂಮಿಯಲ್ಲಿ ಹೀಗೆಯೇ ಅದು ಪ್ರಸಿದ್ಧವಾಗಿ ಎಲ್ಲರೂ ಸೂತ್ರಗಳನ್ನು ಅರ್ಥಗಳೊಡನೆ ತಿಳಿದುಕೊಂಡರು. ಶಿವನಿಗೆ ನತ್ಕೀರನು ಅಪರಾಧವನ್ನು ಮಾಡಿದನು. ಆದಾಗ್ಯೂ ನನ್ನ ಮೂಲಕವಾಗಿ ಅವನಿಗೆ ಉತ್ತಮವಾದ ಸ್ಥಿತಿಯು ಉಂಟಾಗುವಂತೆ ಅನುಗ್ರಹಿಸಿದ ಪರಮೇಶ್ವರನಿಗೆ ನಮಸ್ಕಾರ ಮಾಡುತ್ತೇನೆ.

೭೯. ನಾಲ್ಕು ವಿಧವಾದ ಪುರುಷಾರ್ಥಗಳನ್ನು ಅನುಗ್ರಹಿಸುವ ಶಕ್ತಿಯುಳ್ಳವನಾದ ಶಿವನು ಆಚರಿಸಿದ ಐವತ್ತನಾಲ್ಕನೆಯ ಲೀಲೆಯನ್ನು ವರ್ಣಿಸಿ ಹೇಳಿರುವೆನು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ನಕ್ಕೀರಸೂತ್ರೋಪದೇಶೋನಾಮ ಷಷ್ಟಿತಮೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಹಾತ್ಮ್ಯೆಯಲ್ಲಿ
ನಕ್ಕೀರ ಸೂತ್ರೋಪದೇಶವೆಂಬ ಹೆಸರುಳ್ಳ
ಅರವತ್ತನೆಯ ಅಧ್ಯಾಯ ಮುಗಿದುದು



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕಷಷ್ಠಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಸೂತ್ರವೃತ್ತಿಕೃತಾಂ ತೇಷಾಂ ಪರಸ್ಪರಜಯೈಷಿಣಾಂ ।
ಸಂಘಿನಾಂ ಕಲಹಶ್ಶಾಂತಸ್ತಾಂ ಲೀಲಾಂ ವರ್ಣಯಾಮಿ ವಃ ॥ ೧ ॥

ಪ್ರತ್ಯೇಕಂ ಸಂಘಿನಃ ಸರ್ವೇ ವ್ಯಾಖ್ಯಾಂ ಕರ್ತುಂ ವಿಶಾರದಾಃ ।
ಸುವ್ಯಕ್ತಾಂ ಸೂತ್ರವೃತ್ತಿಂ ಚ ಚಕ್ರುಸ್ಸೂಕ್ಷ್ಮಾರ್ಥವೇದಿನಃ ॥ ೨ ॥

ಪ್ರಬಂಧೋ ಮಾಮಕೋ ರಮ್ಯಃ ಪ್ರಬಂಧೋ ಮಾಮಕೋ ಮಹಾನ್
ಏವಂ ವಿಚಾರಂ ಕುರ್ವಾಣಾಃ ಪ್ರತಿಜ್ಞಾಮಿತಿ ಚಕ್ರಿರೇ ॥ ೩ ॥

---

### ಅರವತ್ತೊಂದನೆಯ ಅಧ್ಯಾಯವು

೧–೫. ಅಗಸ್ತ್ಯಋಷಿಯು ಹೇಳಿದನು :—ದ್ರಾವಿಡಭಾಷಾ ಸೂತ್ರಗಳಿಗೆ ಸಂಘದ ಕವಿಗಳು ಬೇರೆ ಬೇರೆಯಾಗಿ ವ್ಯಾಖ್ಯಾನ ಮಾಡಿದರು. ಪರಸ್ಪರವಾಗಿ ಆ ವ್ಯಾಖ್ಯಾನದಲ್ಲಿ ವಿವಾದವು ಉಂಟಾಯಿತು. ಸುಂದರೇಶ್ವರನು ಆ ವಿವಾದವನ್ನು ಪರಿಹರಿಸಿದ ಲೀಲೆಯನ್ನು ವರ್ಣಿಸುವೆನು. ಸಂಘದ ಕವಿಗಳೆಲ್ಲರೂ ಬೇರೆ ಬೇರೆಯಾಗಿ ಗ್ರಂಥವನ್ನು ಬರೆದು ವ್ಯಾಖ್ಯಾನ ಮಾಡುವುದರಲ್ಲಿ ಬುದ್ಧಿವಂತರಾಗಿ ಇರುವರು. ಇವರು ಸೂಕ್ಷ್ಮವಾದ ಅರ್ಥವನ್ನು ತಿಳಿದಿರುವ ಕಾರಣ ದ್ರಾವಿಡ

ಶ್ರೀಹಾಲಾಸ್ಯಪತಿಃ ಶಂಭುಃ ಸರ್ವಜ್ಞೋ ವೀತಮತ್ಸರಃ ।
ಅಸ್ಮಾಭಿಃ ಪ್ರಾರ್ಥನೀಯೋದ್ಯ ದರ್ಶಯಿತ್ವಾ ಪ್ರಬಂಧಕಾನ್ ॥ ೪ ॥

ತೇನ ಯೋ ರಮ್ಯ ಇತ್ಯುಕ್ತಃ ಸ ಪ್ರಬಂಧೋ ಮಹಾನಿತಿ ।
ಅಸ್ಮಾಭಿಶ್ಚ ಪರಿಗ್ರಾಹ್ಯೋ ಮಾತ್ಸರ್ಯಂ ಚ ವಿಹಾಯ ಚ ॥ ೫ ॥

ಏವಂ ನಿಶ್ಚಿತ್ಯ ಸರ್ವೇಽಪಿ ನಕ್ಕೀರಾದ್ಯಾಃ ಕವೀಶ್ವರಾಃ ।
ಪ್ರಾತರ್ನಿಶೋತ್ಸವಾಂತೇ ಚ ಪ್ರಾಪುಸ್ಸುಂದರನಾಯಕಂ ॥ ೬ ॥

ಪ್ರಬಂಧಪುಸ್ತಕಾನ್ಸರ್ವಾನ್ಸನ್ನಿಧೌ ಸನ್ನಿವೇಶ್ಯ ಚ ।
ಪ್ರಾರ್ಥಯಾಮಾಸುರಿತಿ ತೇ ಸಂಘಿನಃ ಸಕಲೇಶ್ವರಂ ॥ ೭ ॥

---

ಸೂತ್ರಗಳಿಗೆ ಸ್ಪಷ್ಟವಾದ ಅರ್ಥವನ್ನು ಕೊಡುವ ವೃತ್ತಿಯನ್ನು ಬರೆದರು. ಅನಂತರ ತಮ್ಮ ತಮ್ಮ ಗ್ರಂಥವು ಉತ್ತಮವೆಂದು ಅನರಪರಲ್ಲಿ ವಿವಾದವು ಹುಟ್ಟಿತು. ಆಗ ಅವರು ಹಾಲಾಸ್ಯ ಪ್ರಭುವಾದ ಶಂಭುವು ಸರ್ವಜ್ಞನಾಗಿರುವನು. ಅವನಿಗೆ ಪಕ್ಷಪಾತ ಮಾಡುವ ಸ್ವಭಾವವಿರುವುದಿಲ್ಲ. ನಮ್ಮ ಗ್ರಂಥಗಳನ್ನು ಅವನು ನೋಡಿ, ಯಾವುದು ಉತ್ತಮವಾಗಿರುವುದು ಎಂಬುದನ್ನು ತಿಳಿಸಲಿ. ಇದಕ್ಕಾಗಿ ಸುಂದರೇಶ್ವರನನ್ನು ನಾವು ಪ್ರಾರ್ಥನೆ ಮಾಡೋಣ. ಅವನು ಆರಿಸಿ ಕೊಟ್ಟ ಗ್ರಂಥವನ್ನು ಉತ್ತಮವೆಂದು ನಾವು ಅಂಗೀಕರಿಸತಕ್ಕದ್ದು. ಎಂದು ಎಲ್ಲರೂ ನಿಶ್ಚಯಮಾಡಿಕೊಂಡರು.

೬-೭. ನಕ್ಕೀರನೇ ಮೊದಲಾದ ಕವೀಶ್ವರರು ತಮ್ಮ ತಮ್ಮ ನಿಶ್ಚಯದಂತೆ ತಾವು ಬರೆದಿರುವ ಗ್ರಂಥಗಳನ್ನು ತೆಗೆದುಕೊಂಡು ಸುಂದರೇಶ್ವರನ ಪ್ರಾತಃಕಾಲದ ಉತ್ಸವವು ಮುಗಿಯುವ ಸಮಯಕ್ಕೆ ಸರಿಯಾಗಿ ಸುಂದರೇಶ್ವರನ ಸಮೀಪಕ್ಕೆ ಬಂದು ಸೇರಿದರು. ಮತ್ತು ಅವರು ಆ ಗ್ರಂಥಗಳನ್ನು ದೇವನ ಹತ್ತಿರದಲ್ಲಿ ಇರಿಸಿ, ಎಲ್ಲಕ್ಕೂ ಅಧಿಪತಿಯಾಗಿರುವ ದೇವದೇವನನ್ನು ಪ್ರಾರ್ಥಿಸಿದರು.

ಭಗವನ್ಕರುಣಾಸಿಂಧೋ ಕದಂಬವನನಾಯಕ ।
ಕಲಾನಿಧಿ ಕಲಾಮೌಲೇ ಶೃಣು ವಿಜ್ಞಪ್ತಿಮೀಶ ನಃ ॥ ೮ ॥

ವೃತ್ತಿಃ ದ್ರಾವಿಡಸೂತ್ರಸ್ಯ ಕೃತಾ ಸ್ಮಾಭಿಃ ಪೃಥಕ್ಪೃಥಕ್ ।
ವಿವಾದೋ ವೃತ್ತಿಭಿಸ್ತಾಭಿರಸ್ಮಾಕಂ ವಿದ್ಯತೇಽಧುನಾ ॥ ೯ ॥

ಮದೀಯಾವಿಶದಾ ವೃತ್ತಿಸ್ತ್ವದೀಯಾ ದೋಷಸಂಯುತಾ ।
ಏವಂ ಪರಸ್ಪರಂ ಸರ್ವೇ ವದಾವೋ ವಯಮಿಾಷ್ಯಯಾ ॥ ೧೦ ॥

ಏತೇಷಾಂ ಚ ಪ್ರಬಂಧಾನಾಂ ತಾರತಮ್ಯಂ ಚ ನಿಶ್ಚಿತುಂ ।
ತ್ವಮೇವ ಹಿ ಪ್ರವೀಣೋಽಸಿ ಸರ್ವಜ್ಞೋಽಸಿ ಸ್ವಭಾವತಃ ॥ ೧೧ ॥

ಸಂಘಸ್ಥಾನಾಂ ವಚಶ್ಶ್ರುತ್ವಾ ಸರ್ವಲೋಕೈಕನಾಯಕಃ ।
ಪ್ರಸನ್ನೋ ಭವದತ್ಯರ್ಥಂ ಸುಂದರೇಶಃ ಸದಾಶಿವಃ ॥ ೧೨ ॥

---

೮–೧೧. ಎಲೈ ದಯಾನಿಧಿಯಾದ, ಕದಂಬವನಾಧಿಪನಾದ, ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಸುಂದರೇಶ್ವರನೇ, ನೀನು ನಮ್ಮ ವಿಜ್ಞಾಪನೆಯನ್ನು ಕೇಳು. ನಾವೆಲ್ಲರೂ ದ್ರಾವಿಡ ಸೂತ್ರಗಳಿಗೆ ವೃತ್ತಿಯನ್ನು ಬೇರೆ ಬೇರೆಯಾಗಿ ಬರೆದು ಇರುತ್ತೇವೆ. ನಾವು ನಾವು ಬರೆದಿರುವ ಗ್ರಂಥಗಳಲ್ಲಿ ನಮ್ಮದು ಚೆನ್ನಾಗಿದೆ ಎಂದು ನಾವೆಲ್ಲರೂ ಹೇಳುತ್ತಾ ಇರುತ್ತೇವೆ. ಇವುಗಳಲ್ಲಿರುವ ಭೇದವನ್ನು ಸರ್ವಜ್ಞನಾದ ನೀನು ಮಾತ್ರವೇ ತಿಳಿಯತಕ್ಕದ್ದಾಗಿ ಇರುವುದು. , ಆದ್ದರಿಂದ ಅವುಗಳ ತಾರತಮ್ಯ ವನ್ನು ನೀನು ನಿಶ್ಚಯಮಾಡಿ ಹೇಳುವ ಬುದ್ಧಿವಂತನಾಗಿ ಇರುತ್ತೀಯೆ.

೧೨–೧೬. ಇಷ್ಟುಮಟ್ಟಿನ ಸರ್ವಜ್ಞತ್ವವು ನಿನ್ನ ಸ್ವಭಾವ ಗುಣವಾಗಿರು ವುದು. ಸರ್ವ ಲೋಕಗಳಿಗೂ ಒಬ್ಬನೇ ಪ್ರಭುವಾಗಿರುವ ಸುಂದರೇಶ್ವರನು ಸಂಘ ದಲ್ಲಿರುವ ಕವೀಶ್ವರರ ಪ್ರಾರ್ಥನೆಯನ್ನು ಕೇಳಿ, ಬಹಳ ಮಟ್ಟಿಗೆ ಪ್ರಸನ್ನನಾದನು.

ನಿರ್ಗಚ್ಛತಿ ಮಹಾಲಿಂಗಾತ್ ತಸ್ಮಾತ್ಸ್ವಾಯಂಭುವಾ ಚ್ಛಿವಃ ।
ಸರ್ವಾವಯವರುದ್ರಾಕ್ಷಮಾಲಾಂತರಿತವಿಗ್ರಹಃ ॥ ೧೩ ॥

ಭಸ್ಮಾಂಕಿತಲಲಾಟಾದಿ ಪರಿಶೋಭಿಕಲೇಬರಃ ।
ಉಷ್ಣೀಷಮಂಡಲೋದ್ಭಾಸಿ ಮೌಲಿಮಂಡಲಮಂಡಿತಃ ॥ ೧೪ ॥

ನಿರ್ಮಲಾಂಬರಸಂಭೂತಕಂಚುಕಾಂಚಿತವಿಗ್ರಹಃ ।
ಕವಿವೇಷಧರೋ ದೇವ ಸ್ಸರ್ವಾವಯವ ಸುಂದರಃ ॥ ೧೫ ॥

ಪ್ರಾಹ ಪ್ರಗಲ್ಭಯಾ ವಾಚಾ ಸಂಘಸ್ಥಾಂಶ್ಚ ಕವೀಶ್ವರಾನ್ ।
ಅಸ್ಮಿನ್ಪುರೇಽಸ್ತಿ ಸುಶ್ಲಾಘ್ಯೋ ವೈಶ್ಯಃ ಕಶ್ಚಿಚ್ಛಿವಪ್ರಿಯಃ ॥ ೧೬ ॥

ಧನಾಢ್ಯೋ ಧಾನ್ಯಶೀಲಶ್ಚ ಶಿವಭಕ್ತಿರತಸ್ಸದಾ ।
ದಾನಶೀಲೋತಿಧರ್ಮಿಷ್ಠ ಸ್ಸತ್ಯವಾದೀ ವಣಿಗ್ವರಃ ॥ ೧೭ ॥

---

ಆಗ ಅವನು ತನ್ನ ಶರೀರದ ಎಲ್ಲಾ ಅವಯವಗಳಿಗೂ ರುದ್ರಾಕ್ಷಮಾಲೆಯನ್ನು ಧರಿಸಿ, ಹಣೆಯಲ್ಲಿ ಭಸ್ಮವನ್ನು ಧರಿಸಿಕೊಂಡು, ಶಿರಸ್ಸಿನಲ್ಲಿ ರುಮಾಲನ್ನು ಹಾಕಿಕೊಂಡವನಾಗಿ, ಎಲ್ಲಾ ಅವಯವಗಳಲ್ಲಿಯೂ ಬಹಳ ಸುಂದರನಾದ ಕವಿಯ ವೇಷವನ್ನು ಧರಿಸಿ ಸ್ವಯಂಭೂ ಲಿಂಗದಿಂದ ಬಂದು ಸಂಘದ ಕವೀಶ್ವರರ ಸಂಗಡ ಪ್ರೌಢವಾದ ಮಾತನಾಡಿದನು.

೧೭–೨೧. ಈ ಮಧುರಾನಗರದಲ್ಲಿ ಶಿವಭಕ್ತನಾದ ಒಬ್ಬ ವೈಶ್ಯನಿರುವನು. ಅವನು ಧನಧಾನ್ಯಗಳಿಂದ ಐಶ್ವರ್ಯವಂತನಾಗಿ ದಾನಶೀಲನಾಗಿರುವನು. ಬಹಳ ಧರ್ಮಿಷ್ಠನು. ನಿಜವನ್ನು ಹೇಳುವನು. ಚೆನ್ನಾಗಿ ವ್ಯಾಪಾರ ಮಾಡುವ ತಿಳುವಳಿಕೆಯುಳ್ಳವನು ಈ ವೈಶ್ಯನಿಗೆ ಸೌಂದರ್ಯಾದಿ ಗುಣಗಳಿಂದ ಕೂಡಿರುವ ಯೌವ್ವನವತಿಯಾದ ಪತ್ನಿಯು ಇದ್ದಳು. ಅವರಿಬ್ಬರೂ ಮಕ್ಕಳನ್ನು

ತಸ್ಯಾನುರೂಪಾ ಸದ್ವೃತ್ತಿಸಂಪನ್ನಾ ಗುಣಶಾಲಿನೀ ।
ತರುಣೀ ವರಸೌಭಾಗ್ಯಸೌಂದರ್ಯಾದಿವಿರಾಜಿತಾ ॥ ೧೮ ॥

ಕಾಲೇ ಕಾಚಿದಭೂದ್ಭಾರ್ಯಾ ಕಮಲಾಯತಲೋಚನಾ ।
ದಂಪತ್ಯೋಃ ತಯೋರ್ನಿತ್ಯಂ ಪುತ್ರಾರ್ಥಮಭವತ್ತಪಃ ॥ ೧೯ ॥

ಚಿರಾತ್ತಪೋವಿಶೇಷೇಣ ಸ್ತ್ರೀಪುಂಸೋರತುಲೇನ ಚ ।
ಶಾಪಜಾತಃ ಸುಪುತ್ರೋಽಸ್ತಿ ಮೂಕಃ ಸ್ಕಂದಾಂಶ ಏವ ಸಃ ॥ ೨೦ ॥

ಪ್ರಬಂಧಾನಾಂ ತಾರತಮ್ಯಂ ತಂ ತು ಪೃಚ್ಛತ ಯಂ ಹೃದಾ ।
ಅಂಗೀಕರೋತಿ ಸ ಶ್ಲಾಘ್ಯಃ ಪ್ರಬಂಧೋ ನಾತ್ರ ಸಂಶಯಃ ॥ ೨೧ ॥

ಇತ್ಯುಕ್ತಮುಪ್ಯಪೃಚ್ಛಂಸ್ತೇ ಮೂಕಃ ಕಿಂ ವಕ್ತು ಮರ್ಹತಿ ।
ಕವಿವೇಷಧರಃ ಶಂಭುಃ ಶ್ರುತ್ವಾ ತದ್ವಚಸಂ ಮುಹುಃ ॥ ೨೨ ॥

---

ಪಡೆಯುವುದಕ್ಕಾಗಿ ತಪಸ್ಸನ್ನು ಮಾಡುತ್ತಿದ್ದರು. ಅವರು ಬಹಳ ಕಾಲದವರಿಗೂ ಆಚರಿಸಿದ ತಪಸ್ಸಿನ ಪ್ರಭಾವದಿಂದ ಒಬ್ಬ ಸುಪುತ್ರನು ಹುಟ್ಟಿರುವನು. ಆದರೆ ಅವನು ಶಾಪದಿಂದ ಮೂಕನಾಗಿರುವನು. ಅವನು ಸ್ಕಂದನ ಅಂಶದವನು. ನೀವು ಅವನನ್ನು ನಿಮ್ಮ ಪ್ರಬಂಧಗಳ ತಾರತಮ್ಯವನ್ನು ಕೇಳಿರಿ. ಅವನು ಮನಃಪೂರ್ವಕ ವಾಗಿ ಉತ್ತಮವೆಂದು ಒಪ್ಪಿಕೊಂಡ ಗ್ರಂಥವು ಶ್ಲಾಘ್ಯವಾಗಿರುವುದು. ಇದರಲ್ಲಿ ಸಂಶಯವಿಲ್ಲವು.

೨೨–೨೫. ಕವೀಶ್ವರರು ಸುಂದರೇಶ್ವರನ ಮಾತನ್ನು ಕೇಳಿ, " ಮೂಗನು ಮಾತನಾಡುವನೇನು " ಎಂದು ಪ್ರಶ್ನೆ ಮಾಡಿದರು. ಉಗ್ರನ ತಂದೆಯಾದ ಕವಿ ವೇಷದಿಂದ ಇರುವ ಸುಂದರೇಶ್ವರನು ಅವರ ಮಾತನ್ನು ಕೇಳಿ, " ಆ ವೈಶ್ಯಪುತ್ರನು

ಅಬ್ರವೀದುಗ್ರಜನಕಃ ಶಂಕರಃ ಸುಂದರೇಶ್ವರಃ ।
ಪ್ರಬಂಧಾನಾಂ ಶ್ರುತಾನಾಂ ಚ ಶ್ರುತೇ ಯಸ್ಮಿನ್ ಸ ವೈಶ್ಯಜಃ　　॥ ೨೩ ॥

ಪುಲಕಾಂಕಿತಸರ್ವಾಂಗಃ ಆಸೀನ್ನೇತ್ರಜಲಾಂಚಿತಃ ।
ತಂ ಪ್ರಬಂಧಂ ರಮ್ಯಮಿತಿ ಶ್ರುತ್ವಾ ಗಚ್ಛತ ಸತ್ವರಃ　　॥ ೨೪ ॥

ಪಶ್ಚಾದ್ವಿವಾದೋ ಯುಷ್ಮಾಭಿರ್ನೈವ ಕಾರ್ಯೋ ವಿರೋಧಕೃತ್ ।
ಇತ್ಯುಕ್ತ್ವಾ ಪ್ರೇಷಯಿತ್ವಾ ತಾಂಸ್ತಿರೋಧತ್ತೇ ಸದಾಶಿವಃ　　॥ ೨೫ ॥

ಸಂಘಸ್ಥಾಸ್ಸಕಲಾಸ್ಸಂತಃ ಸಮಾಶಾದ್ದೇವ ಏವ ಸಃ ।
ಇತಿ ನಿಶ್ಚಿತ್ಯ ಗತ್ವಾ ತೇ ಮೂಕಮಾಹೂಯ ಮಂಟಪೇ　　॥ ೨೬ ॥

ಅಲಂಕೃತ್ಯ ತಮಭ್ಯರ್ಚ್ಯ ಶ್ವೇತಪುಷ್ಪೈರ್ದುಕೂಲಕೈಃ ।
ಪ್ರಬಂಧಾನ್ಶ್ರಾವಯಾಮಾಸು ಸ್ಸ ಶ್ರುತ್ವಾ ಜೋಷ ಮಾಸ್ಥಿತಃ　　॥ ೨೭ ॥

---

ನಿಮ್ಮ ಗ್ರಂಥವನ್ನು ನೋಡಿ, ಅಥವಾ ಓದಿಸಿ ಕೇಳಿ ರೋಮಾಂಚವುಳ್ಳ ಶರೀರವುಳ್ಳವನಾಗಿ ಆನಂದಾಶ್ರುಗಳನ್ನು ಸುರಿಸುವನು. ಅಷ್ಟು ಆನಂದವನ್ನು ಉಂಟುಮಾಡುವ ಆ ಪ್ರಬಂಧವನ್ನು ಉತ್ತಮವೆಂದು ತಿಳಿಯಿರಿ. ಅನಂತರದಲ್ಲಿ ನೀವು ಪರಸ್ಪರವಾಗಿ ವಿವಾದವನ್ನು ಮಾಡಬೇಡಿ" ಎಂದು ಹೇಳಿ ಅದೃಶ್ಯನಾದನು.

೨೬–೨೭. ಸಂಘದ ಕವಿಗಳೆಲ್ಲರೂ "ದೇವದೇವನೇ ನಮಗೆ ಆಜ್ಞಾಪಿಸಿರುವನು!" ಎಂದು ನಿಶ್ಚಯಮಾಡಿಕೊಂಡು ಆ ಮೂಗನಾದ ವೈಶ್ಯಪುತ್ರನನ್ನು ಮಂಟಪಕ್ಕೆ ಕರೆದುಕೊಂಡು ಬಂದು, ಅವನಿಗೆ ಬಿಳಿಯ ಪುಷ್ಪಗಳಿಂದಲೂ ರೇಷ್ಮೆ ವಸ್ತ್ರಾದಿಗಳಿಂದಲೂ ಮರ್ಯಾದೆಮಾಡಿದ ನಂತರ ತಮ್ಮತಮ್ಮ ಪ್ರಬಂಧಗಳನ್ನು ಅವನ ಎದುರಿಗೆ ಓದಿದರು. ಅವನು ಅದನ್ನು ಕೇಳುತ್ತಾ ಸುಮ್ಮನಿದ್ದನು.

ಶ್ರುತೇ ಪ್ರಬಂಧೇ ನಾತ್ಕೀರೇ ಕಾಪಿಲೇ ಭಾರಣೇಪಿಚ ।
ಆನಂದಾಶ್ರೂಣಿ ಮುಂಚರ್ಣ ಸಃ ಪುಲಕಾಂಚಿತವಿಗ್ರಹಃ ॥ ೨೮ ॥

ಆನಂದಸಾಗರೇ ಮಗ್ನಃ ಕಲ್ಪವೃಕ್ಷ ಇವಾಭವತ್ ।
ಸಂಘಿನೋ ಮತ್ಸರಂ ತ್ಯಕ್ತ್ವಾ ತಾನ್ಪ್ರಬಂಧಾನುಪಾದದುಃ ॥ ೨೯ ॥

ತಾನೇವ ಪ್ರಥಯಾಮಾಸು ದ್ರಾವಿಡಾನಾಂ ಮುದೇ ಮುದಾ ।
ಇತಿ ಕವಿವರಜಾತಾನ್ಯೋನ್ಯವಿದ್ಯಾಪಲೇಪಂ-
ಶಮಯತಿ ಸಹಸಾ ಯಸ್ಸತ್ಕವೇರ್ವೇಷಧಾರೀ ।
ಸುಖಯತು ಸತತಂ ವಃ ಸುಂದರಸ್ಸೋಮಸೂರ್ಯಾ-
ನಲನಯನವಿಭಾಸ್ವದ್ವಕ್ತ್ರಶೋಭಸ್ಸ ಈಶಃ ॥ ೩೦ ॥

ಪಂಚಪಂಚಾಶಿಕಾ ಲೀಲಾ ಪಂಚ ಪಂಚಾಕ್ಷರಾತ್ಮನಃ ।
ಪಂಚೀಕೃತಾ ಮಯಾ ಸಾದ್ಯ ಪಂಚತ್ವಭಯನಾಶಿನೀ ॥ ೩೧ ॥

---

೨೮-೨೯. ನತ್ಕೀರನು ಮಾಡಿರುವ ಪ್ರಬಂಧವನ್ನೂ, ಕಪಿಲ ಮತ್ತು ಭರಣ ಇವರುಗಳ ಪ್ರಬಂಧವನ್ನೂ ಕೇಳಿದ ಕೂಡಲೆ ವೈಶ್ಯಪುತ್ರನ ಶರೀರದಲ್ಲಿ ರೋಮಾಂಚವೂ ಆನಂದಬಾಷ್ಪವೂ ಉಂಟಾಯಿತು ಅವನು ಬಹಳ ಸಂತೋಷವುಳ್ಳವನಾಗಿ, ಕಲ್ಪವೃಕ್ಷದಂತಿದ್ದನು. ಸಂಘದ ಕವೀಶ್ವರರು ಅಸೂಯೆಯಿಲ್ಲದೆ ಆ ಪ್ರಬಂಧಗಳನ್ನು ಆರಿಸಿ ತೆಗೆದುಕೊಂಡು ದ್ರಾವಿಡದೇಶದಲ್ಲಿ ಅವುಗಳನ್ನು ಬಹಳವಾಗಿ ಪ್ರಚಾರಕ್ಕೆ ತಂದರು.

೩೦. ಕವಿಶ್ರೇಷ್ಠರಿಗೆ ಅನ್ಯೋನ್ಯವಾಗಿ ಉಂಟಾಗಿರುವ ವಿದ್ಯಾವಿಷಯದ ಅಹಂಕಾರವನ್ನು ನಾಶಮಾಡುವುದಕ್ಕಾಗಿ ತಾನೂ ಕವಿಯ ವೇಷವನ್ನು ಧರಿಸಿ, ಅವರಿಗೆಲ್ಲರಿಗೂ ಸುಖವಾಗಿರುವಂತೆ ಅನುಗ್ರಹಿಸಿದ ಸೂರ್ಯಚಂದ್ರಾಗ್ನಿನೇತ್ರನಾಗಿ ಪ್ರಕಾಶಿಸುತ್ತಿರುವ ಸುಂದರೇಶ್ವರನು ನಮ್ಮೆಲ್ಲರಿಗೂ ಸುಖವನ್ನು ಉಂಟುಮಾಡಲಿ.

೩೧. ಬಹಳ ವಿಧವಾದ ಮಹಿಮೆಯುಳ್ಳ ಪಂಚಾಕ್ಷರ ಮಂತ್ರಾತ್ಮಕನಾಗಿರುವ ಸುಂದರೇಶ್ವರನು ಆಚರಿಸಿದ ಸಂಘದಕವಿಗಳಿಗೆ ಅನುಗ್ರಹಮಾಡಿದ ಐವತ್ತೈದನೆಯ ಲೀಲೆಯನ್ನು ವಿಸ್ತಾರವಾಗಿ ಹೇಳಿರುವೆನು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಪ್ರಬಂಧತಾರತಮ್ಯನಿರ್ಣಯೋ ನಾಮ ಏಕಷಷ್ಟಿತಮೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಪ್ರಬಂಧತಾರತಮ್ಯ ನಿರ್ಣಯವೆಂದು ಹೆಸರುಳ್ಳ ಅರವತ್ತೊಂದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ದ್ವಿಷಷ್ಟಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಪುರಾ ಚೋತ್ತರಹಾಲಾಸ್ಯೇ ಗಮನಂ ಸಂಘಿಭಿಃ ಸಹ ।
ಯಯಾ ಕರೋತ್ಸುಂದರೇಶಸ್ತಾಂ ಲೀಲಾಂ ಪ್ರವದಾಮಿ ವಃ ॥ ೧ ॥

ಅಥ ಚಂಪಕಪಾಂಡ್ಯೇ ತು ಶಿವಲೋಕಂ ಗತೇ ಸತಿ ।
ಪ್ರತಾಪಸೂರ್ಯ ಇತಿ ಚ ರಾಜಾ ಭೂತ್ಪಾಂಡ್ಯಮಂಡಲೇ ॥ ೨ ॥

ತತೋ ವಂಶಧ್ವಜೋ ರಾಜಾ ತತಸ್ತು ರಿಪುಮರ್ದನಃ ।
ಚೋಳವಂಶಾಂತಕಃ ಪಶ್ಚಾಚ್ಚೇರ ವಂಶಾಂತಕೋಽಪರಃ ॥ ೩ ॥

---

### ಅರವತ್ತೆರಡನೆಯ ಅಧ್ಯಾಯವು

೧–೬. ಅಗಸ್ತ್ಯಋಷಿಯು ಹೇಳಿದನು :—ಸುಂದರೇಶ್ವರನು ಸಂಘದ ಕವೀಶ್ವರರೊಡನೆ ಹಾಲಾಸ್ಯಕ್ಷೇತ್ರದ ಉತ್ತರಭಾಗಕ್ಕೆ ಹೋಗಿ ನೆಲಸಿದ ಲೀಲೆಯನು ಹೇಳುವೆನು. ಚಂಪಕಪಾಂಡ್ಯರಾಜನು ಶಿವಲೋಕಕ್ಕೆ ಹೋದನಂತರ ಪಾಂಡ್ಯ ದೇಶದಲ್ಲಿ ಪ್ರತಾಪಸೂರ್ಯನೆಂದು ಹೆಸರುಳ್ಳವನು ರಾಜನಾದನು. ಅವನ ಅನಂತರದಲ್ಲಿ ವಂಶಧ್ವಜನೂ, ಆಮೇಲೆ ರಿಪುಮರ್ದನನೆಂಬುವನೂ ರಾಜರಾದರು. ಹೀಗೆಯೇ ಕ್ರಮವಾಗಿ ಚೋಳವಂಶಾಂತಕ, ಚೇರವಂಶಾಂತಕ, ಪಾಂಡ್ಯವಂಶೇಶ,

ತತಸ್ತು ಪಾಂಡ್ಯವಂಶೇಶ ಸ್ತತೋ ವಂಶಶಿರೋಮಣಿಃ ।
ತತಃ ಪಾಂಡ್ಯೇಶ್ವರೋ ರಾಜಾ ಪಾಲಯಾಮಾಸ ವೈ ಮಹೀಂ ॥ ೪ ॥

ತತಃ ಕುಲಧ್ವಜೋ ರಾಜಾ ತತೋ ವಂಶವಿಭೂಷಣಃ ।
ಸೋಮಚೂಡಾಮಣಿಃ ಪಶ್ಚಾದ್ಭೂಪಚೂಡಾಮಣಿಸ್ತತಃ ॥ ೫ ॥

ಏವಂ ಕ್ರಮೇಣ ರಾಜಾನಃ ಪಾಲಯಿತ್ವಾ ಮಹೀಂ ಕ್ರಮಾತ್ ।
ಸುಂದರೇಶಪ್ರಸಾದೇನ ಸಾಯುಜ್ಯಂ ಪ್ರಾಪುರೈಶ್ವರಂ ॥ ೬ ॥

ಕದಾಚಿದಥ ಸಂಭೂಯ ನಕ್ಕೀರಾದ್ಯಾಃ ಕವೀಶ್ವರಾಃ ।
ಸಂಸ್ನಾಯ ಹೇಮಪದ್ಮಿನ್ಯಾಮಘಮರ್ಷಣತತ್ಪರಾಃ ॥ ೭ ॥

ಲೀನಾ ಭವನ್ ಬ್ರಹ್ಮಣಿ ತೇ ಬ್ರಹ್ಮಧ್ಯಾನಪರಾಯಣಾಃ ।
ಪಯೋಧಿ ರಾಕ್ರಮ್ಯ ಜಗಚ್ಚಾಂತೋರ್ಮಿ ರಭವತ್ತದಾ ॥ ೮ ॥

---

ವಂಶಶಿರೋಮಣಿ, ಎಂಬ ರಾಜರು ಪಾಂಡ್ಯದೇಶದಲ್ಲಿ ರಾಜರಾಗಿದ್ದರು. ಅವರ ಅನಂತರದಲ್ಲಿ ಸೋಮಚೂಡಾಮಣಿ, ಭೂಪಚೂಡಾಮಣಿ ಎಂದು ಹೆಸರುಳ್ಳ ಪಾಂಡ್ಯ ದೇಶದ ರಾಜರು ರಾಜ್ಯಪರಿಪಾಲನೆಯನ್ನು ಮಾಡಿದನಂತರ, ಸುಂದರೇಶ್ವರನ ಅನುಗ್ರಹದಿಂದ ಶಿವನ ಸಾಯುಜ್ಯವನ್ನು ಅವರು ಹೊಂದಿದರು.

೭–೧೨. ನಕ್ಕೀರನೇ ಮೊದಲಾದ ಕವೀಶ್ವರರು ಎಲ್ಲರೂ ಒಟ್ಟಿಗೆ ಸೇರಿ ಹೇಮ ಪದ್ಮಿನಿಯಲ್ಲಿ ಸ್ನಾನಮಾಡಿ, ಪರಮಾತ್ಮಸ್ವರೂಪವನ್ನು ಧ್ಯಾನಮಾಡುತ್ತಾ ಬ್ರಹ್ಮನಲ್ಲಿ ಲೀನರಾದರು. ಸಮುದ್ರವು ಜಗತ್ತೆಲ್ಲವನ್ನೂ ಆಕ್ರಮಿಸಿಕೊಂಡಿತು. ಅನಂತರದಲ್ಲಿ ತೆರೆಗಳ ಉಪಟಳವು ಕಡಿಮೆಯಾಯಿತು. ರಥಂತರಮನ್ವಂತರವು ಕಳೆದುಹೋಯಿತು. ಪದ್ಮಮನ್ವಂತರವು ಬಂದಿತು. ರುದ್ರಸಾವರ್ಣಿ ಎಂಬ ಮನುವು ಹುಟ್ಟಿದನು. ಆಗ ಪಾಂಡ್ಯದೇಶದಲ್ಲಿ ಕವೀಶ್ವರರು ಹುಟ್ಟಿದರು. ಅವರು ಬ್ರಹ್ಮನಂತೆ ಸರಸವಾದ

ರಾಥಂತರೋ ಗತಃ ಕಲ್ಪಃ ಪಾದ್ಮಃ ಪ್ರಾಪ್ತೋ ಮಹಾಮುನೇ
ಜಾತೇಥ:ರುದ್ರಸಾವರ್ಣೌ ಮನೌ ಪಾಂಡ್ಯಮಹೀತಲೇ ॥ ೯ ॥

ತಸ್ಮಿನ್ಕಾಲೇ ಸಮುತ್ಪನ್ನಾಃ ಕೆಂಜಾ ಇವ ಕವೀಶ್ವರಾಃ
ಸರಸಾಸ್ಸಂಘಫಲಕೇ ಯಥಾಪೂರ್ವಂ ಸಮಾಸತ ॥ ೧೦ ॥

ಅಥ ಪಾಂಡ್ಯಕುಲೇಶಶ್ಚ ರಾಜ್ಯಾಭೂತ್ಪಾಂಡ್ಯಮಂಡಲೇ ।
ತಸ್ಯಾನವದ್ಯಾವಾಣೀ ಚ ವರ್ತತೇ ವದನಾಂಬುಜೇ ॥ ೧೧ ॥

ತಸ್ಯಾಪಿ ಸಂಘಫಲಕಾ ತ್ವವಕಾಶಮುದಾದ್ವಿಜಾಃ ।
ಲಕ್ಷ್ಯಲಕ್ಷಣವೇತ್ತಾ ಚ ರಸಬಾವಜ್ಞಸತ್ಕವಿಃ ॥ ೧೨ ॥

ರಾಜ್ಯಭಾರವಹೇ ತಸ್ಮಿನ್ಸುರೇಶೇ ಪಾಂಡ್ಯಭೂಪತೌ ।
ವಿದ್ವಾನ್ಮಧ್ಯವನಾಧೀಶಃ ಪ್ರಬಂಧಾನೇಕಕೃತ್ಕವಿಃ ॥ ೧೩ ॥

---

ಕವನಗಳನ್ನು ಮಾಡುತ್ತಿದ್ದರು. ಆಗ ಪಾಂಡ್ಯದೇಶದಲ್ಲಿ ಪಾಂಡ್ಯಕುಲೇಶನೆಂಬುವನು ರಾಜನಾಗಿದ್ದನು. ಅವನು ಯಾವಾಗಲೂ ಬಹಳ ಚೆನ್ನಾಗಿ ಮಾತನಾಡುತ್ತಿದ್ದನು. ವಿದ್ಯಾಪೀಠದಲ್ಲಿ ಕವೀಶ್ವರರಿಗೆ ಅವಕಾಶವು ದೊರತಿರುವಂತೆ ಆ ರಾಜನಿಗೂ ಅವಕಾಶವು ಉಂಟಾಗಿತ್ತು. ಆ ರಾಜನು ಲಕ್ಷ್ಯ, ಲಕ್ಷಣಗಳನ್ನೂ ಮತ್ತು ರಸ, ಭಾವಗಳನ್ನೂ ತಿಳಿದು ಇರುವ ಒಳ್ಳೆಯ ಕವಿಯಾಗಿದ್ದನು.

೧೩-೧೭. ಆ ಪಾಂಡ್ಯಕುಲೇಶರಾಜನು ಮಧುರಾನಗರದಲ್ಲಿ ರಾಜ್ಯಭಾರ ಮಾಡುತ್ತಿರುವಾಗ ಮಧ್ಯವನಾಧೀಶ್ವರನೆಂದು ಹೆಸರುಳ್ಳ ಕವಿಯು ಅನೇಕ ಗ್ರಂಥಗಳನ್ನೂ ರಸ, ಭಾವ ಇವುಗಳ ತಾರತಮ್ಯವನ್ನೂ ಲಕ್ಷ್ಯ ಲಕ್ಷಣಗಳನ್ನೂ ಚೆನ್ನಾಗಿ ತಿಳಿದುಕೊಂಡು, ಇತರ ಗ್ರಂಥಗಳಲ್ಲಿ ಪಾಂಡಿತ್ಯವನ್ನು ಹೊಂದಿ, ಇರುವನು. ಅವನು

ರಸಭಾವವಿಶೇಷಜ್ಞೋ ಲಕ್ಷ್ಯಲಕ್ಷಣವಿತ್ಸುಧೀಃ ।
ಪ್ರಬಂಧವೇತ್ತಾ ಸರ್ವಜ್ಞೋ ವಿಶೇಷಗುಣವಿತ್ತಮಃ ॥ ೧೪ ॥

ಮಹಾಮಧುರವಾಕ್ಸರ್ವಸಮ್ಮತಸ್ಸತ್ಯವಾಕ್ಛುಚಿಃ ।
ಶಿವಭಕ್ತ್ಯಾತುಲಸ್ಸಮ್ಯಕ್ಛಿವಪೂಜಾಪರಾಯಣಃ ॥ ೧೫ ॥

ಆಸೀತ್ಕಪಿಲಸನ್ಮಿತ್ರಂ ಕವಿತ್ವಾತಿಶಯೇನ ಸಃ ।
ಕದಾಚಿತ್ಪಾಂಡ್ಯಮಭ್ಯೇತ್ಯ ಕುಲೇಶಂ ಸ ಕವೀಶ್ವರಃ ॥ ೧೬ ॥

ಶಬ್ದಾರ್ಥಸುಭಗಾನ್ಯಾಶು ಜಗೌ ಗೇಯಾನಿ ಕಾನಿಚಿತ್ ।
ಮಹಾಂತಿ ತಾನಿ ಗೇಯಾನಿ ಶ್ರುತ್ವಾಽಸೂಯಾಸಮನ್ವಿತಃ ॥ ೧೭ ॥

ರೋಷಯುಕ್ತೋ ಮಹೀಪಸ್ತಂ ಧಿಕ್ಕೃತ್ಯ ತ್ವವಮಾನಯತ್ ।
ರಾಜ್ಞಾ ಕೃತಂ ಸ್ವಾವಮಾನಂ ಮಧ್ಯಾರಣ್ಯೋ ವಿಲೋಕ್ಯ ಚ ॥ ೧೮ ॥

---

ಗುಣವಂತನಾಗಿ ಬಹಳ ಮಧುರವಾದ, ಮತ್ತು ಎಲ್ಲರಿಗೂ ಸಮ್ಮತವಾದ ಮಾತುಗಳನ್ನು ಹೇಳುತ್ತಾ, ಪರಿಶುದ್ಧನಾಗಿರುವನು. ಮತ್ತು ಶಿವನಲ್ಲಿ ಭಕ್ತಿಯುಳ್ಳವನಾಗಿ, ಶಿವನ ಪೂಜೆಯನ್ನು ಮಾಡುತ್ತಿರುವನು. ಇವನು ಕವನ ಮಾಡುವುದರಲ್ಲಿ ನಿಪುಣನಾಗಿ ಕಪಿಲಕವೀಶ್ವರನಿಗೆ ಸ್ನೇಹಿತನಾಗಿದ್ದನು. ಮಧ್ಯವನಾಧೀಶ್ವರಕವಿಯು ಒಂದು ಕಾಲದಲ್ಲಿ ಕುಲೇಶಪಾಂಡ್ಯರಾಜನ ಹತ್ತಿರಕ್ಕೆ ಬಂದು, ತಾನು ಬರೆದಿರುವ ಕೆಲವು ಪದ್ಯಗಳನ್ನು ಹೇಳಿದನು. ಅವುಗಳು ಬಹಳ ಚೆನ್ನಾಗಿದ್ದವು. ರಾಜನು ಅವುಗಳನ್ನು ಕೇಳಿದನು. ಆದರೆ ಅವನಿಗೆ ಅಸೂಯೆಯು ಹುಟ್ಟಿತು. ಅದರಿಂದ ರಾಜನು ಕವಿಯನ್ನು ತಿರಸ್ಕರಿಸಿ, ಅವಮಾನಮಾಡಿ ಕಳುಹಿಸಿದನು.

೧೮-೨೦. ಮಧ್ಯಾರಣ್ಯಕವಿಯು ರಾಜನಿಂದ ತನಗೆ ಆದ ಅವಮಾನದಿಂದ ವ್ಯಸನವುಳ್ಳವನಾಗಿ, ಹಾಲಾಸ್ಯವಾಸಿಯಾದ ಸುಂದರೇಶ್ವರನ ಹತ್ತಿರಕ್ಕೆ ಬಂದನು. ಅವನು ಈಶ್ವರನನ್ನು ಸ್ತೋತ್ರಮಾಡಿ, ನಮಸ್ಕಾರಮಾಡಿ ತನಗೆ ಆದ ಅವಮಾನವನ್ನು

ಖಿನ್ನಃ ಸನ್ಪ್ರಾಪ್ಯ ಹಾಲಾಸ್ಯವಾಸಿನಂ ಶಂಭುಮೀಶ್ವರಂ ।
ಸ್ತುತ್ವಾ ನತ್ವಾ ಸುಬಹುಶಸ್ತ್ವಾವಮಾನಂ ವ್ಯಜಿಜ್ಞಪತ್ ॥ ೧೯ ॥

ಸುಂದರೇಶ್ವರ ಸೋಮಾರ್ಧಭೂಷಣ ತ್ರ್ಯಂಬಕೇಶ್ವರ ।
ಭಕ್ತಸಂರಕ್ಷಣಪರ ಭಕ್ತಾಪದ್ಭಂಜನಾವ್ಯಯ ॥ ೨೦ ॥

ಬ್ರಹ್ಮವಿಷ್ಣ್ವಂಗಸಂಭೂತ ಕಪಾಲಾಸ್ಥಿವಿಭೂಷಣ ।
ಇದಾನೀಂ ಮಮ ವಿಜ್ಞಪ್ತಿಂ ಶೃಣು ಭೂತೇಶ್ವರೇಶ್ವರ ॥ ೨೧ ॥

ಅಹಮೇತ್ಯ ಮಹೀಪಾಲಂ ಮಧುರಾಪುರವಾಸಿನಂ ।
ಗೇಯಾನಿ ಕಾನಿಚಿತ್ಸಮ್ಯಗ್ಬ್ರುವೇ ಭೂಪಮನರ್ಗಲಂ ॥ ೨೨ ॥

ಧಿಕ್ಕೃತ್ಯ ಮಮ ಗೇಯಾನಿ ಶಬ್ದಾರ್ಥಸುಭಗಾನ್ಯಪಿ ।
ಮಾಂ ಚಾಸಂತೋಷ್ಯ ಭೂಪಾಲೋಽವದದ್ಗಚ್ಛೇತ್ಯಕಾರಣಂ ॥ ೨೩ ॥

---

ಹೇಳಿಕೊಂಡನು. "ಎಲೈ ಸುಂದರೇಶ್ವರನೆ, ಅರ್ಧಚಂದ್ರನನ್ನು ನೀನು ಆಭರಣವಾಗಿ ಧರಿಸಿರುತ್ತೀಯೆ. ಮೂರು ಕಣ್ಣುಗಳುಳ್ಳವನಾಗಿರುತ್ತೀಯೆ. ಮತ್ತು ಈಶ್ವರನಾಗಿ ಭಕ್ತರನ್ನು ರಕ್ಷಿಸುವುದರಲ್ಲಿ ನೀನು ಯಾವಾಗಲೂ ಆಸಕ್ತನು. ನೀನು ಭಕ್ತರ ವಿಪತ್ತನ್ನು ನಾಶಮಾಡುವುದರಲ್ಲಿ ಸಮರ್ಥನು. ಮತ್ತು ನೀನು ಪೂರ್ಣನಾಗಿರುವನು.

೨೧–೨೪. ಎಲೈ ದೇವನೆ, ನೀನು ಬ್ರಹ್ಮ, ವಿಷ್ಣು ಇವರುಗಳ ಶರೀರದ ಮೂಳೆಗಳನ್ನು ಆಭರಣವಾಗಿ ಧರಿಸಿರುತ್ತೀಯೆ. ಭೂತಗಳಿಗೆ ಅಧಿಪತಿಯಾಗಿರುವರು ನಿನ್ನ ಅಧೀನದಲ್ಲಿರುತ್ತಾರೆ. ಈ ಪ್ರಕಾರದ ಮಹಿಮೆಯುಳ್ಳ ನೀನು ನನ್ನ ವಿಜ್ಞಾಪನೆಯನ್ನು ಲಾಲಿಸು. ನಾನು ಮಧುರಾನಗರದಲ್ಲಿರುವ ರಾಜನ ಹತ್ತಿರಕ್ಕೆ ಹೋಗಿ, ನನ್ನ ಇಷ್ಟಬಂದಹಾಗೆ ಕೆಲವು ಪದ್ಯಗಳನ್ನು ಮಾಡಿ ಹೇಳಿದೆನು. ಅವುಗಳು ಶಬ್ದಾರ್ಥ ದೋಷಗಳು ಯಾವವೂ ಇಲ್ಲದೆ ಚೆನ್ನಾಗಿದ್ದರೂ, ರಾಜನು ನನ್ನನ್ನು ಧಿಕ್ಕಾರಮಾಡಿದನು. ಅವಮಾನಮಾಡಿ ಅಟ್ಟಿದನು. ಯಾವ ಕಾರಣವೂ ಇಲ್ಲದೆ

**ಅರ್ಥರಾಶಿರ್ಭವಾನ್ಸತ್ಯಂ ಶಬ್ದರಾಶಿರುಮಾ ಧ್ರುವಂ ।**
**ಯುವಾಮುಭತ್ಸ್ವಯದ್ರಾಜಾ ವೇತ್ಸಿ ಸರ್ವಂ ತ್ವಮೇವ ಹಿ ॥ ೨೪ ॥**

**ಶಿವಭಕ್ತಾವಮಾನಂ ಚ ಹ್ಯವಮಾನಂ ತವಾಧುನಾ ।**
**ಕರ್ತವ್ಯಂ ಯತ್ತ್ವಯಾ ತತ್ತ್ವಂ ಕುರು ಮೀನಾಕ್ಷಿನಾಯಕ ॥ ೨೫ ॥**

**ಇತಿ ಮಧ್ಯವನೇಶಸ್ಯ ದೀನಮಾರ್ತಿಯುತಂ ವಚಃ ।**
**ಶಂಭುಃ ಶ್ರುತ್ವಾ ತಾಡಿತವಚ್ಛರೀರೇ ಮನಸೋಂಬಯಾ ॥ ೨೬ ॥**

**ಮಧ್ಯಾರಣ್ಯೇಶ್ವರಸ್ಯಾಪಿ ತೋಷಾರ್ಥಂ ಕಪಿಲಸ್ಯ ಚ ।**
**ಸ್ವಭಕ್ತಾನಾಂ ಚ ತುಷ್ಟ್ಯರ್ಥಂ ಮೀನಾಕ್ಷೀರಮಣಃ ಪ್ರಭುಃ ॥ ೨೭ ॥**

**ಕುಲೇಶ್ವರೇ ಕೋಪಯುಕ್ತಃ ಪಾಂಡ್ಯೇಶೇ ಸುಂದರೇಶ್ವರಃ ।**
**ತಿರೋಧಾಯಾತ್ಮಲಿಂಗಂ ಚ ಮೂಲಭೂತಂ ಸ್ವಯಂಭುವಂ ॥ ೨೮ ॥**

---

ನನ್ನನ್ನು ಅವಮಾನಮಾಡಿರುವುದು ಶಬ್ದರೂಪದಿಂದ ಇರುವ ಮೀನಾಕ್ಷಿದೇವಿಗೂ, ಅರ್ಥರೂಪದಿಂದ ಇರುವ ನಿನಗೂ ಅವಮಾನ ಮಾಡಿದ್ದಾಗಿರುವುದು. ಇದೆಲ್ಲವನ್ನೂ ನೀನು ತಿಳಿದವನಾಗಿರುತ್ತೀಯೆ

೨೫–೩೦. ಶಿವಭಕ್ತರಿಗೆ ಆದ ಅವಮಾನವು, ನಿನಗೆ ಆದ ಅವಮಾನವೇ ಆದ್ದರಿಂದ ಈಗ ಮಾಡಬೇಕಾದ ಕರ್ತವ್ಯವನ್ನು ನೀನು ಮಾಡಬೇಕು." ಎಂದು ಮಧ್ಯಾರಣ್ಯಕವಿಯು ಹೇಳಿದ ಮಾತನ್ನು ಕೇಳಿ, ಸುಂದರೇಶ್ವರನು ಬಾಣದಿಂದ ಏಟು ತಿಂದವನ ಹಾಗೆ ಸಂಕಟಪಟ್ಟುಕೊಂಡನು. ಮಧ್ಯಾರಣ್ಯಕವಿಯು ಮತ್ತು ಕಪಿಲನೇ ಮೊದಲಾದ ಭಕ್ತರಾದ ಕವಿಗಳ ಸಂತೋಷಕ್ಕಾಗಿ ಕುಲೇಶ್ವರಪಾಂಡ್ಯರಾಜನ ವಿಷಯದಲ್ಲಿ ಸುಂದರೇಶ್ವರನು ಕೋಪವನ್ನು ಹೊಂದಿದನು. ಅನಂತರದಲ್ಲಿ ಸುಂದರೇಶ್ವರನು ಆತ್ಮಲಿಂಗದಲ್ಲಿ ಲೀನನಾದನು. ಮೂಲಭೂತವಾದ ಸ್ವಯಂಭೂ

ಸಮಷ್ಟಿಲಿಂಗಂ ಲಿಂಗಾನಾ ಮ್ಮಾಯಯಾತಿ ವಿಚಿತ್ರಯಾ ।
ಸ್ವಧಾಮೋತ್ತರದೇಶೇ ತು ದಕ್ಷಿಣೇ ತಟಿನೀತಟೇ ॥ ೨೯ ॥

ಕೃತ್ವಾ ಸಂಕಲ್ಪಮಾತ್ರೇಣ ಪ್ರಾಸಾದಮತಿಮಂಜುಳಂ ।
ತತ್ರ ಸಾನ್ನಿಧ್ಯಮಕರೋಲ್ಲಿಂಗಮೂರ್ತಿಃ ಸದಾಶಿವಃ ॥ ೩೦ ॥

ತ್ಯಕ್ತ್ವಾ ಸ್ಥಾನಂ ಸಂಘಿನೋಽಪಿ ತತ್ರಾಗಚ್ಛಞ್ಶಿವಾಜ್ಞಯಾ ।
ಅವಿಮುಕ್ತಂ ಕದಾಪ್ಯೇತಚ್ಛಿವಕ್ಷೇತ್ರಂ ಶಿವೇನ ಯತ್ ॥ ೩೧ ॥

ಪ್ರಾತರಂತರ್ಗತಾಃ ಶೈವಾಃ ಶಿವಪೂಜಾರ್ಥಮೀಶ್ವರಂ ।
ಮಹಾಲಿಂಗಮದೃಷ್ಟ್ವಾ ತೇ ಭಯಾವಿಷ್ಟಾಃ ಜನೈಃ ಸಹ ॥ ೩೨ ॥

ಕಿಮೇತದಿತಿ ಭೀತ್ಯಾ ಚ ಸಂಭೂಯ ಶಿವಪೂಜಕಾಃ ।
ರಾಜ್ಞೇ ನಿವೇದಯಾಮಾಸು ವೃತ್ತಾಂತಂ ಮೂಲಲಿಂಗಿನಃ ॥ ೩೩ ॥

---

ಲಿಂಗವು ಲಿಂಗಗಳೆಲ್ಲಕ್ಕೂ ಸಮಷ್ಟಿಯಾಗಿರುವ ಕಾರಣ, ತನ್ನ ಆತ್ಮಲಿಂಗದಲ್ಲಿದ್ದು ಕೊಂಡು ಬಹಳ ಆಶ್ಚರ್ಯಕರವಾದ ತನ್ನ ಮಾಯೆಯಿಂದ ತಾನು ವಾಸವಿರುವ ಪ್ರದೇಶಕ್ಕೆ ಉತ್ತರದಲ್ಲಿ, ನದಿಯ ದಕ್ಷಿಣ ತೀರದಲ್ಲಿ ಮನೋಹರವಾದ ದೇವಾಲಯ ವನ್ನು ತನ್ನ ಸಂಕಲ್ಪಮಾತ್ರದಿಂದ ನಿರ್ಮಿಸಿದನು. ಆ ದೇವಾಲಯದಲ್ಲಿ ಲಿಂಗರೂಪ ದಿಂದ ತನ್ನ ಸಾನ್ನಿಧ್ಯವನ್ನು ಅಂಗೀಕರಿಸಿದನು.

೩೧-೩೪. ಸಂಘದ ಕವೀಶ್ವರರು ಎಲ್ಲರೂ ತಾವು ಮೊದಲಿದ್ದ ಸ್ಥಾನವನ್ನು ಬಿಟ್ಟು ಶಿವನ ಆಜ್ಞೆಯಂತೆ ಅಲ್ಲಿಗೆ ಹೋಗಿ ಇದ್ದರು. ಮೊದಲಿನಿಂದಲೂ ಶಿವನು ಇದ್ದ ಶಿವಕ್ಷೇತ್ರವು ಯಾವಾಗಲೂ ಶಿವನ ಸಾನ್ನಿಧ್ಯವಿಲ್ಲದ್ದಾಯಿತು. ಬೆಳಗಾದ ಕೂಡಲೆ ಶಿವನನ್ನು ಪೂಜಿಸುವುದಕ್ಕಾಗಿ ಬಂದ ಭಕ್ತರೇ ಮೊದಲಾದವರು ಮೂಲ ಲಿಂಗವನ್ನೇ ಕಾಣದೆ, ಹೆದರಿದವರಾಗಿ ಜನಗಳೊಡನೆ ಗಾಬರಿಯಿಂದ ಕೂಡಿ, ಮೂಲ

**ತದದ್ಭುತಂ ನೃಪಃ ಶ್ರುತ್ವಾ ಕುಲೇಶೋऽಪಿ ಭಯಾನ್ವಿತಃ ।**
**ಚಿರಂ ತಿಷ್ಠತಿ ಶೋಕೇನ ನಿಶ್ಚಲಶ್ಚಿತ್ರಗೋ ಯಥಾ　　॥ ೩೪ ॥**

**ಅಪರಾಧಂ ಮಯಾ ತಸ್ಯ ಸುಂದರೇಶಸ್ಯ ಸದ್ವಿಭೋಃ ।**
**ಕುಲಶೇಖರಭೂಪಾದಿರಾಜ್ಞಾಂ ಕಾಲೇಷು ದುಷ್ಕೃತಂ　　॥ ೩೫ ॥**

**ಏತಾದೃಶಂ ನಾಸ್ತ್ಯಸತ್ಕಂ ಮನ್ಯೇತತ್ಸಮುಪಸ್ಥಿತಂ ।**
**ಅಪಕೀರ್ತಿರ್ನಿಷ್ಕೃತಿಕಾ ವಿಹಿತಾ ನಿರಯಪ್ರದಾ　　॥ ೩೬ ॥**

**ಶಿವದ್ರೋಹಃಕೃತಃ ಸಮ್ಯಕ್ಪ್ರಾಯಶ್ಚಿತ್ತವಿವರ್ಜಿತಃ ।**
**ದ್ರೋಹಾಚ್ಚ ಶಿವಭಕ್ತಾನಾಂ ಪ್ರಾಣಾನ್ಮುಂಚಾಮಿ ಶಾಂತಯೇ　　॥ ೩೭ ॥**

**ಪಾಪಸ್ಯಾಸ್ಯ ವಿಮೋಕ್ಷಾರ್ಥಮಿತಿ ನಿಶ್ಚಿತ್ಯ ಚೇತಸಿ ।**
**ಅಥಾಗತ್ಯ ಜನಾಃ ಕೇಚಿದಾಹುರ್ವೃತ್ತಾಂತಮುದ್ಭುತಂ　　॥ ೩೮ ॥**

---

ಲಿಂಗದ ವಿಷಯವಾದ ವರ್ತಮಾನವನ್ನು ರಾಜನ ಹತ್ತಿರಕ್ಕೆ ಹೋಗಿ ವಿಜ್ಞಾಪಿಸಿ ಕೊಂಡರು. ಕುಲೇಶಪಾಂಡ್ಯರಾಜನು ಅತ್ಯಾಶ್ಚರ್ಯಕರವಾದ ಆ ವರ್ತಮಾನವನ್ನು ಕೇಳಿ, ಭಯದಿಂದ ಚಿತ್ರದಲ್ಲಿ ಬರದಿರುವ ಬೊಂಬೆಯಂತೆ ನಿಶ್ಚಲನಾದನು.

೩೫-೩೭. "ನಾನು ಸುಂದರೇಶ್ವರನಿಗೆ ಅಪರಾಧವನ್ನು ಮಾಡಿದೆನು ಕುಲಶೇಖರಪಾಂಡ್ಯರಾಜನ ಕಾಲದಿಂದಲೂ ಈ ಪ್ರಕಾರವಾದ ಕೆಟ್ಟ ಕೆಲಸವು ಇರಲಿಲ್ಲ. ಈಗ ನನ್ನ ಕಾಲದಲ್ಲಿ ಇದು ಉಂಟಾಯಿತು. ಕೆಟ್ಟ ಹೆಸರು ಬಂದಿತು. ನರಕವು ಉಂಟಾಗುವ ಪಾಪಸಂಘಟನೆಯು ಈಗ ಪ್ರಾಪ್ತವಾಯಿತು. ಶಿವ ದ್ರೋಹವು ಪ್ರಾಯಶ್ಚಿತ್ತದಿಂದ ನಾಶವಾಗತಕ್ಕದ್ದಲ್ಲ. ಶಿವಭಕ್ತರ ವಿಷಯದಲ್ಲಿ ಆಚರಿಸಿದ ದ್ರೋಹವೂ ಹೀಗೆಯೇ ಇರತಕ್ಕದ್ದು. ಆದ್ದರಿಂದ ನಾನು ಪ್ರಾಣವನ್ನು ಬಿಡುವೆನು. ಇದರಿಂದ ಶಿವದ್ರೋಹಮಾಡಿದ ಪಾತಕವು ಶಾಂತವಾಗುವುದು" ಎಂದು ರಾಜನು ನಿಶ್ಚಯಮಾಡಿದನು.

೩೮-೪೧. ಆಗ ಕೆಲವು ಜನರು ಬಂದು ಪ್ರಾಣವನ್ನು ಬಿಡುವುದಕ್ಕೆ ಸಿದ್ಧನಾಗಿದ್ದ ರಾಜನನ್ನು ನೋಡಿ, "ಎಲೈ, ಮಧುರಾಧಿಪನಾದ ರಾಜನೆ, ಕೇಳು.

ಕುಲಶೇಖರಪಾಂಡ್ಯಸ್ಯ ಸ್ವಪ್ರಾಣಾಂಸ್ತ್ಯಕ್ತುಮಿಚ್ಛತಃ ।
ರಾಜರ್ಶೃಣುಷ್ವ ನೋ ವಾಕ್ಯಮದ್ಭುತಂ ಮಧುರಾಧಿಪ ॥ ೩೯ ॥

ದಕ್ಷಿಣೇ ತಟಿನೀತೀರೇ ಸುಮೇರುಶಿಖರೋಪಮಃ ।
ಇತಃ ಪೂರ್ವಂ ನ ದೃಷ್ಟಸ್ತು ಪ್ರಾಸಾದೋsದೃಶ್ಯತೇsಧುನಾ ॥ ೪೦ ॥

ಸುಂದರೇಶ್ವರಲಿಂಗಂ ಚ ತತ್ರ ಸಾನ್ನಿಧ್ಯಕೃದ್ವಭೌ ।
ಸಂಘಸ್ಥಾ ಅಪಿ ತತ್ರೈವ ನಿವಸಂತಿ ಶಿವಾಶ್ರಿತಾಃ ॥ ೪೧ ॥

ಇತ್ಯದ್ಭುತಕರೀಂ ವಾಚಮಾಕರ್ಣ್ಯ ಕುಲಶೇಖರಃ ।
ಅತ್ಯಂತಭೀತಭೀತಃ ಸನ್ಕಿಮೇತದಿತಿ ಚಿಂತಯನ್ ॥ ೪೨ ॥

ಪಾದಾಭ್ಯಾಮೇವ ತರಸಾ ಯಯೌ ಯತ್ರ ಮಹೇಶ್ವರಃ ।
ನ್ಯವಸನ್ಸಂಘಿನಃ ಸರ್ವೇ ತತ್ರ ವೇಗವತೀತಟೇ ॥ ೪೩ ॥

---

ಹೊಳೆಯ ದಕ್ಷಿಣ ತೀರದಲ್ಲಿ ಮೇರುಪರ್ವತದ ಶಿಖರದಂತೆ ಇರುವ ದೊಡ್ಡ ದೇವಾಲಯವು ಈಗ ಕಾಣುತ್ತಿರುವುದು. ಆ ದೇವಾಲಯದಲ್ಲಿ ಸುಂದರೇಶ್ವರ ಲಿಂಗವು ಇರುವುದು ಅದು ಯಾವಾಗಲೂ ಬಹಳ ಮಹಿಮೆಯುಳ್ಳದ್ದಾಗಿ ಇರುವುದು. ಸಂಘದ ಕವಿಗಳೆಲ್ಲರೂ ಶಿವನನ್ನು ಆಶ್ರಯಿಸಿಕೊಂಡು ಅಲ್ಲಿ ವಾಸ ಮಾಡುತ್ತಿರುವರು" ಎಂದು ಬಹಳ ಆಶ್ಚರ್ಯಕರವಾದ ವರ್ತಮಾನವನ್ನು ಹೇಳಿದರು.

೪೨-೪೫. ಕುಲಶೇಖರಪಾಂಡ್ಯನು ಈ ಪ್ರಕಾರವಾದ ಆಶ್ಚರ್ಯವನ್ನು ಉಂಟುಮಾಡುವ ಮಾತನ್ನು ಕೇಳಿ, ಬಹಳ ಹೆದರಿದವನಾಗಿ ಯೋಚಿಸುತ್ತಾ, ಮಹೇಶ್ವರನು ಸಂಘದ ಕವಿಗಳೊಡನೆ ವಾಸಮಾಡುತ್ತಿರುವ ವೇಗವತೀ ನದಿಯ ದಕ್ಷಿಣ ತೀರಕ್ಕೆ ಬೇಗ ಕಾಲು ನಡಿಗೆಯಿಂದಲೇ ಬಂದನು. ದೇವಾಲಯದ ಒಳಗಡೆಗೆ ಹೋಗಿ, ಮಂತ್ರಿಗಳೊಡನೆ ತನ್ನ ಕುಲದೇವನಾದ ಸುಂದರೇಶ್ವರನ ಮೂಲಲಿಂಗವನ್ನು ನೋಡಿದನು. ಆಗ ಅವನು ಬಹಳ ಭಕ್ತಿಯಿಂದ ರೋಮಾಂಚ

ಪ್ರಾಸಾದಾಭ್ಯಂತರಂ ಪ್ರಾಪ್ಯ ಮಂತ್ರಿವರ್ಯೈರ್ಮಹೀಪತಿಃ ।
ಸುಂದರೇಶ್ವರಲಿಂಗಂ ಚ ವಿಲೋಕ್ಯ ಕುಲದೈವತಂ ॥ ೪೪ ॥

ಪ್ರಣಮ್ಯಾತುಲಯಾ ಭಕ್ತ್ಯಾ ಪುಲಕಾಂಕಿತಕಳೇಬರಃ ।
ಸಾನಂದಜಲನೇತ್ರಃ ಸನ್ನಸ್ತೌಷೀದ್ಗದ್ಗದಸ್ವರಃ ॥ ೪೫ ॥

॥ ಕುಲಶೇಖರಪಾಂಡ್ಯ ಉವಾಚ ॥

ಮಹಾನೀಪಾರಣ್ಯಾಂತರಕನಕಪದ್ಮಾಕರತಟೀ-
ಮಹೇಂದ್ರಾನೀತಾಷ್ಟದ್ವಿಪಧೃತವಿಮಾನಾಂತರಗತಂ ।
ಮಹಾಲೀಲಾಭೂತಪ್ರಕಟಿತವಿಶಿಷ್ಟಾತ್ಮವಿಭವಂ-　　1
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೪೬ ॥

ನಮನ್ನಾಲೀಕಾಕ್ಷಾಂಬುಜಭವಶುನಾಸೀರಮುಕುಟೀ-
ನಮನ್ಮಾಣಿಕ್ಯಾಂಶುಸ್ಫುರದರುಣಪಾದಾಬ್ಜಯುಗಲಂ ॥　　2

---

ದಿಂದ ಕೂಡಿರುವ ಶರೀರವುಳ್ಳವನಾಗಿ ನಮಸ್ಕಾರ ಮಾಡಿದನು. ಆನಂದಭಾಷ್ಪವನ್ನು ಕಣ್ಣಿನಿಂದ ಸುರಿಸುತ್ತಾ, ಗದ್ಗದಸ್ವರದಿಂದ ಸುಂದರೇಶ್ವರನನ್ನು ಸ್ತುತಿಸಿದನು.

೪೬. ಎಲೈ ಮಹಾದೇವನೆ, ನೀನು ನಿನ್ನ ಮಹಿಮೆಯನ್ನು ಲೋಕಕ್ಕೆಲ್ಲಕ್ಕೂ ಪ್ರಕಟಿಸುತ್ತಾ ಮೀನಾಕ್ಷೀದೇವಿಯೊಡನೆ ವಿಹಾರ ಮಾಡುತ್ತಿರುವೆ. ನಿನ್ನ ವಾಸಸ್ಥಾನವಾದ ವಿಮಾನವು ಕದಂಬವನದ ಕಾಡಿನ ಮಧ್ಯದಲ್ಲಿ ಹೇಮಪದ್ಮಾಕರ ತೀರ್ಥದ ದಡದಲ್ಲಿರುವುದು. ಅದನ್ನು ಇಂದ್ರನು ತಾನಾಗಿ ಸಿದ್ಧಪಡಿಸಿ ಒಪ್ಪಿಸಿರುವನು. ಅಷ್ಟ ದಿಗ್ಗಜಗಳೂ ಆ ವಿಮಾನವನ್ನು ಹೊತ್ತುಕೊಂಡಿರುವವು. ಈ ವಿಮಾನದ ಮಧ್ಯದಲ್ಲಿ ಲೀಲೆಯಿಂದ ಆಕಾರವನ್ನು ಧರಿಸಿ ಮಹಿಮೆಯನ್ನು ಪ್ರಕಟಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವು.

೪೭ ಎಲೈ ದೇವನೆ, ವಿಷ್ಣು, ಬ್ರಹ್ಮ, ಇಂದ್ರ ಇವರೇ ಮೊದಲಾದ ದೇವತೆಗಳು ನಮಸ್ಕಾರ ಮಾಡುತ್ತಿರುವುದರಿಂದ ಅವರ ಕಿರೀಟದ ನವರತ್ನಗಳ

ಅಮಂದಾನಂದಾಬ್ಧಿಂ ಹರಿನಯನಪದ್ಮಾರ್ಚಿತಪದಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೪೭ ॥

ಮಹಾಮಾತಂಗಾಸೃಗ್ವರವಸನ ಮದ್ರೀಂದ್ರತನಯಾ-
ಮಹಾಭಾಗ್ಯಂ ಮತ್ತಾಂಧಕಕರಟಿಕಂಠೀರವವರಂ ।
ಮಹಾಭೋಗೀಂದ್ರೋದ್ಯತ್ಫಣಮಣಿಗಣಾಲಂಕೃತತನುಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೪೮ ॥

ಸಮೀರಾಹಾರೇಂದ್ರಾಂಗದ ಮಖಿಲಲೋಕೈಕಜನನಂ-
ಸಮೀರಾಹಾರಾತ್ಮಪ್ರವಣಜನಹೃತ್ಪದ್ಮನಿಲಯಂ ॥

---

ಕಾಂತಿಯು ನಿನ್ನ ಪಾದಕಮಲಗಳೆರಡರಲ್ಲಿಯೂ ಬಹಳ ಮಟ್ಟಿಗೆ ಪ್ರಕಾಶಿಸುತ್ತಾ ಇರುವುದು. ನೀನು ಎಲ್ಲವನ್ನೂ ಮೀರಿರುವ ಆನಂದರೂಪದಿಂದ ಇರುತ್ತಾ, ಅಪಾರವಾದ ಮಹಿಮೆಯಿಂದ ಇರುವ ನಿನ್ನ ಪಾದವನ್ನು ವಿಷ್ಣುವು ತನ್ನ ಕಮಲದಂತಿರುವ ಕಣ್ಣಿನಿಂದಲೇ ಪೂಜಿಸಿರುವನು. ಸುಂದರಳಾದ ಮೀನಾಕ್ಷೀ ದೇವಿಯೊಡನೆ ಯಾವಾಗಲೂ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವನ್ನು ಮಾಡುವೆನು.

೪೮. ದೇವದೇವನಾದ ಈ ಪ್ರಭುವು ದೊಡ್ಡದಾದ ಆನೆಯ ಚರ್ಮವನ್ನು ಹೊದ್ದಿರುವನು. ಪರ್ವತಗಳೆಲ್ಲಕ್ಕೂ ರಾಜನಾದ ಹಿಮವಂತನ ಪುತ್ರಿಯಾದ ಪಾರ್ವತೀದೇವಿಯು ಸಂಪಾದಿಸಿರುವ ಆಕಾರವನ್ನು ಹೊಂದಿರುವ ಪುಣ್ಯರಾಶಿಯಾಗಿರುವನು. ಈ ಮಹೇಶನು, ಮದದಿಂದ ಕೊಬ್ಬಿ ಲೋಕವನ್ನು ಆನೆಯಂತೆ ಹಾಳುಮಾಡುತ್ತಿದ್ದ ಅಂಧಕಾಸುರನಿಗೆ ಸಿಂಹದಂತೆ ಆಗಿ ಅವನನ್ನು ನಾಶಮಾಡಿದವನು. ಬಹಳ ಶ್ರೇಷ್ಠವಾದ ಸರ್ಪಗಳನ್ನು ಧರಿಸಿರುವ ಕಾರಣ ಅವುಗಳ ಹೆಡೆಯ ರತ್ನಗಳಿಂದ ಪ್ರಕಾಶಿಸುತ್ತಿರುವ ಶರೀರವುಳ್ಳವನಾಗಿ ಮೀನಾಕ್ಷೀ ದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರ ಮಾಡುವೆನು.

೪೯. (ಉತ್ತಮವಾದ) ವಾಯುವನ್ನು ಆಹಾರವಾಗಿ ಉಪಯೋಗಿಸುವ ಶ್ರೇಷ್ಠವಾದ ಸರ್ಪವನ್ನು ಭುಜಕೀರ್ತಿಯಾಗಿ ಮಾಡಿಕೊಂಡು ಇರುವ ಈ ದೇವನು ಪ್ರಪಂಚವೆಲ್ಲವನ್ನೂ ನಿರ್ಮಾಣ ಮಾಡುವ ಸಾಮರ್ಥ್ಯವುಳ್ಳವನಾಗಿರುವನು. ಈ

ಸುಮೀನಾಕ್ಷೀವಕ್ತ್ರಾಂಬುಜತರುಣಸೂರಂ ಸುಮನಸಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೪೯ ॥

ನತಾಘೌಘಾರಣ್ಯಾನಲ ಮನಿಲಭುಜ್ಞಾಥವಲಯಂ-
ಸುಧಾಂಶೋರರ್ಧಾಂಶಂ ಶಿರಸಿ ದಧತಂ ಜಹ್ನುತನಯಾಂ
ವದಾನ್ಯಾನಾಮಾದ್ಯಂ ವರವಿಬುಧವಂದ್ಯಂ ವರಗುಣಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೦ ॥

ಮಹಾದುಗ್ಧಾಂಭೋಧೌ ಮಥನಜವಸಂಭೂತಮಸಿತಂ-
ಮಹಾಕಾಲಂ ಕಂಠೇ ಸಕಲಭಯಭಂಗಾಯ ದಧತಂ ।

---

ಮಹಾದೇವನು ಪ್ರಾಣವಾಯುವನ್ನು ನಿಗ್ರಹ ಮಾಡಿಕೊಂಡು ಧ್ಯಾನವನ್ನು ಮಾಡುತ್ತಿರುವ ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ಅವರವರಿಗೆ ದರ್ಶನ ಕೊಡುವುದಕ್ಕಾಗಿ ಅಲ್ಲಿಯೇ ವಾಸವಾಗಿರುವನು. ಮೀನಾಕ್ಷೀದೇವಿಯ ಮುಖವು ಕಮಲದ ಹೂವಿನಂತೆ ಯಾವಾಗಲೂ ಆನಂದವನ್ನು ಹೊಂದುವ ಹಾಗೆ, ತಾನು ಅದಕ್ಕೆ ಕಾರಣವಾದ ಸೂರ್ಯನಾಗಿ ಪ್ರಕಾಶಿಸುತ್ತಿರುವನು. ಪರಿಶುದ್ಧವಾದ ಮನಸ್ಸುಳ್ಳವನಾಗಿ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರಮಾಡುವೆನು.

೫೦. ಎಲೈ ದೇವನೆ, ನೀನು ನಮಸ್ಕಾರಮಾಡಿದವರ ಪಾಪರಾಶಿಗಳೆಲ್ಲವನ್ನೂ ಕಾಡ್ಕಿಚ್ಚು ಕಾಡನ್ನು ನಾಶಮಾಡುವಂತೆ ನಾಶಮಾಡುತ್ತೀಯೆ. ವಾಯುವನ್ನು ಆಹಾರವಾಗಿ ಹೊಂದಿರುವ ಸರ್ಪವನ್ನು ಹಸ್ತಾಭರಣವನ್ನಾಗಿ ಮಾಡಿಕೊಂಡಿರುತ್ತೀಯೆ. ಅಮೃತಮಯವಾದ ಕಿರಣವುಳ್ಳ ಚಂದ್ರನ ಅರ್ಧವನ್ನೂ, ಗಂಗೆಯನ್ನೂ ಶಿರಸ್ಸಿನಲ್ಲಿ ಧರಿಸಿ, ಇರುತ್ತೀಯೆ. ಮಹಿಮೆಯುಳ್ಳವರೆಲ್ಲರಿಗೂ ಮೊದಲನೆಯವನಾಗಿ, ದೇವಶ್ರೇಷ್ಠರಿಂದಲೂ ನಮಸ್ಕಾರಗಳನ್ನು ಹೊಂದುತ್ತಾ, ಉತ್ತಮವಾದ ಸದ್ಗುಣಗಳಿಗೆ ಆಶ್ರಯನಾಗಿರುವ, ಮೀನಾಕ್ಷೀದೇವಿಯೊಡನೆ ವಿಹಾರ ಮಾಡುತ್ತಿರುವ, ಮಹಾದೇವನಾದ ನಿನಗೆ ನಮಸ್ಕಾರ ಮಾಡುವೆನು.

೫೧. ದೊಡ್ಡದಾದ ಕ್ಷೀರಸಮುದ್ರವನ್ನು ಅಮೃತದ ಆಸೆಗಾಗಿ ಕಡೆಯುವ ಕಾಲದಲ್ಲಿ ವೇಗದಿಂದ ಹುಟ್ಟಿ ಕಪ್ಪಾಗಿ ಇರುವ ವರ್ಣದಿಂದ ಪ್ರಪಂಚವೆಲ್ಲವನ್ನೂ ಸುಡುತ್ತಿರುವ ಮಹಾವಿಷವನ್ನು ಪ್ರಪಂಚದ ರಕ್ಷಣೆಗಾಗಿ ನುಂಗುವಾಗ ನಿನ್ನ

ಮಹಾಕಾರುಣ್ಯಾಬ್ಧಿಂ ಮದುಮಥನದೃಗ್ದೂರಚರಣಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೧ ॥

ದಶಾಸ್ಯಾಹಂಕಾರದ್ರುಮಕುಲಿಶಿತಾಂಗುಷ್ಠನಖರಂ
ನಿಶಾನಾಥಶ್ರೀಜಿನ್ನಿಜವದನಬಿಂಬಂ ನಿರವಧಿಂ ।
ವಿಶಾಲಾಕ್ಷಂ ವಿಶ್ವಪ್ರಭವಭರಣೋಪಾಯಕರಣಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೨ ॥

ಅನಾಕಾರಂ ಹಾರೀಕೃತ ಭುಜಗರಾಜಂ ಪುರಹರಂ-
ಸನಾಥಂ ಶರ್ವಾಣ್ಯಾ ಸರಸಿರುಹವಕ್ತ್ರಾಯತದೃಶಂ ।

---

ಕಂಠವು ಕಪ್ಪಾಯಿತು. ಎಲೈ ದೇವನೆ, ಎಲ್ಲರನ್ನೂ ರಕ್ಷಿಸಲು ವಿಷವನ್ನು ಕುಡಿದ ನೀನು ನೀಲಕಂಠನಾಗಿರುತ್ತೀಯೆ. ಪ್ರಪಂಚವೆಲ್ಲವನ್ನೂ ಸಂರಕ್ಷಿಸಲು ತಕ್ಕ ಮಟ್ಟಿನ ಅಪಾರವಾದ ದಯೆಯುಳ್ಳವನಾಗಿರುವ ನಿನ್ನ ಪಾದವನ್ನು ವಿಷ್ಣುವು ಕಂಡು ಹಿಡಿಯಲು ಅಶಕ್ತನಾಗಿರುವನು. ಈ ಪ್ರಕಾರದ ಮಹಿಮೆಯಿಂದ ಇರುತ್ತಾ ಸುಂದರಳಾದ ಮೀನಾಕ್ಷೀದೇವಿಯೊಡನೆ ವಿಹಾರಮಾಡುತ್ತಾ ಇರುವ ಮಹಾ ದೇವನಾದ ನಿನಗೆ ನಮಸ್ಕಾರ ಮಾಡುತ್ತೇನೆ.

೫೨. ಹತ್ತು ತಲೆಯುಳ್ಳವನಾದ ರಾವಣನ ಅಹಂಕಾರವೆಂಬ ಹೆಮ್ಮರಕ್ಕೆ ನಿನ್ನ ಪಾದಾಂಗುಷ್ಠದ ನಖವು (ಉಗುರು) ವಜ್ರಾಯುಧವಾಯಿತು. ಎಲೈ ದೇವನೆ, ಪರಿಪೂರ್ಣವಾದ ಚಂದ್ರಬಿಂಬದ ಕಾಂತಿಯನ್ನು ಮೀರಿರುವ ಬಹಳ ಮನೋಹರ ವಾದ ಮುಖದಿಂದ ನೀನು ಪ್ರಕಾಶಿಸುತ್ತಿರುವೆ. ಮತ್ತು ವಿಸ್ತಾರವಾದ ಕಣ್ಣುಗಳುಳ್ಳವ ನಾಗಿರುತ್ತೀಯೆ. ಪ್ರಪಂಚವನ್ನು ಸೃಷ್ಟಿಮಾಡಿ, ರಕ್ಷಿಸುವುದರಲ್ಲಿ ತಡೆಯಿಲ್ಲದಿರುವ ಉಪಾಯಗಳನ್ನು ಮಾಡುತ್ತಿರುವೆ. ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವು.

೫೩. ಎಲೈ ಪ್ರಭುವೆ, ನೀನು ನಿನ್ನ ನಿಜರೂಪದಿಂದ ಆಕಾರವಿಲ್ಲದವನಾಗಿರು ತ್ತೀಯೆ. ನಿನ್ನನ್ನು ಸೇವಿಸುವ ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಆಕಾರವನ್ನು ಧರಿಸಿರುವ ನೀನು, ಸರ್ಪರಾಜನನ್ನೇ ಹಾರವನ್ನಾಗಿ ಹಾಕಿಕೊಂಡು, ತ್ರಿಪುರವನ್ನು

ದಿನಾರಂಭಾದಿತ್ಯಾಯುತಶತನಿಭಾನಂದವಪುಷಂ
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೩ ॥

ಉಮಾಪೀನೋತ್ತುಂಗಸ್ತನತಟಲಸತ್ಕುಂಕುಮರಜ-
ಸ್ಸಮಹಾರಾತ್ಯಂತಾರುಣವಿಪುಲದೋರಂತರತಲಂ ।
ರಮಾವಾಣೀಂದ್ರಾಣೀರತಿವಿರಚಿತಾರಾಧನವಿಧಿಂ
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೪ ॥

ಧರಾಪಾಥಸ್ಸ್ವಾಹಾಸಹಚರಜಗತ್ಪ್ರಾಣ ಶಶಭೃತ್
ಸುರಾಧ್ವಾಪನರ್ಾಥಾಧ್ವರಕರಶರೀರಂ ಶಶಿಧರಂ
ಸುರಾಹಾರಾಸ್ವಾದಾತಿಶಯನಿಜವಾಚಂ ಸುಖಕರಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೫ ॥

---

ನಾಶಮಾಡಿ, ಪಾರ್ವತಿಯೊಡನೆ ವಿಹರಿಸುತ್ತಾ, ಕಮಲದ ಹೂವಿನ ದಳದಂತೆ ವಿಸ್ತಾರವಾದ ಕಣ್ಣುಗಳನ್ನು ಹೊಂದಿರುತ್ತೀಯೆ. ಲಕ್ಷ ಸಾವಿರ ಸೂರ್ಯರು ಏಕ ಕಾಲದಲ್ಲಿ ಉದಯಿಸಿದ ಕಾಂತಿಯನ್ನು ಹೊಂದಿ ಪ್ರಕಾಶಿಸುತ್ತಾ ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ದೇವದೇವನಾದ ನಿನಗೆ ನಮಸ್ಕಾರವು.

೫೪. ಪಾರ್ವತೀದೇವಿಯ ಸ್ಥೂಲವಾದ ಸ್ತನಗಳ ಪ್ರದೇಶದಲ್ಲಿರುವ ಕುಂಕುಮದ ಕಾಂತಿಯಿಂದ ಕೂಡಿರುವ ವಕ್ಷಸ್ಥಳದಿಂದ ಪ್ರಕಾಶಿಸುತ್ತಿರುವವನಾಗಿ, ಲಕ್ಷ್ಮೀ, ಸರಸ್ವತೀ, ಮತ್ತು ಶಚೀದೇವೀ ಇವರುಗಳಿಂದಲೂ ಭಕ್ತಿಯಿಂದ ಸೇವೆಯನ್ನು ಹೊಂದುತ್ತಿರುವ, ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವು.

೫೫. ಭೂಮಿ, ನೀರು, ಅಗ್ನಿ. ವಾಯು, ಚಂದ್ರ. ಆಕಾಶ, ಸೂರ್ಯ. ಯಾಗಮಾಡುವ ದೀಕ್ಷಿತ ಎಂಬ, ಎಂಟು ವಿಧವಾದ ಶರೀರದಿಂದ ಪ್ರಪಂಚವನ್ನು ವ್ಯಾಪಿಸಿಕೊಂಡು ಇರುತ್ತಾ, ಚಂದ್ರಶೇಖರನಾಗಿ ಅಮೃತಕ್ಕಿಂತಲೂ ಮಧುರವಾದ ಮಾತನಾಡುತ್ತಾ, ಎಲ್ಲರಿಗೂ ಸುಖವನ್ನುಂಟು ಮಾಡುತ್ತಿರುವ, ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವು.

ಧರಾಪೀಠಂ ಧಾರಾಧರಕಲಶ ಮಾಕಾಶವಪುಷಂ-
ಧರಾಭೃದ್ದೋರ್ದಂಡಂ ತಪನಶಶಿವೈಶ್ವಾನರದೃಶಂ ॥
ವಿರಾಜನ್ನಕ್ಷತ್ರಪ್ರಸವಮುದರೀಭೂತಜಲಧಿಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೬ ॥

ಸುಪರ್ಣಾಂಭೋಜಾಸನದೃಗತಿದೂರಾಂಘ್ರಿಮುಕುಟಂ-
ಸುಪರ್ಣಾಹಾರಸ್ರಕ್ಸ್ಫುರವಿಟಪಿಶಾಖಾಯುತಭುಜಂ ।
ಅಪರ್ಣಾಪಾದಾಬ್ಜಾಹತಿಚಲಿತಚಂದ್ರಾರ್ಧಿತಜಟಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೫೭ ॥

---

೫೬. ಎಲೈ ದೇವನೆ, ಮಹಾಲಿಂಗರೂಪದಲ್ಲಿರುವ ನಿನ್ನ ಆಕೃತಿಗೆ ಭೂಮಿಯು ಪೀಠವಾಗಿರುವುದು. ಮೇಘವು ಕಲಶವಾಗಿರುವುದು. ಅಂತರಿಕ್ಷವೇ ಶರೀರವಾಗಿಯೂ, ಪರ್ವತಗಳೇ ಭುಜಗಳಾಗಿಯೂ ಇರುವುವು. ಸೂರ್ಯ, ಚಂದ್ರಾಗ್ನಿಗಳು ಕಣ್ಣುಗಳಾಗಿರುವರು. ನಕ್ಷತ್ರಗಳೇ ಪುಷ್ಪವಾಗಿರುವುವು. ಸಮುದ್ರವು ಉದರವಾಗಿರುವುದು. ಈ ಪ್ರಕಾರದ ಮಹಾಲಿಂಗದ ಆಕಾರದಿಂದ ಪ್ರಕಾಶಿಸುತ್ತಾ ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವು.

೫೭. ಎಲೈ ದೇವನೆ, ಗರುಡನನ್ನು ವಾಹನವನ್ನಾಗಿ ಹೊಂದಿದ ವಿಷ್ಣುವು ನಿನ್ನ ಪಾದವನ್ನು ದರ್ಶನಮಾಡಲು ಸಾಧ್ಯವಾಗಲಿಲ್ಲ. ಪದ್ಮವನ್ನು ಪೀಠವನ್ನಾಗಿ ಹೊಂದಿದ ಬ್ರಹ್ಮನು ನಿನ್ನ ಶಿರಸ್ಸನ್ನು ದರ್ಶನಮಾಡಲಾಗಲಿಲ್ಲ. ಇವರಿಬ್ಬರಿಂದಲೂ ನೋಡಲಾಗದಿರುವ ಪಾದವೂ, ಶಿರಸ್ಸೂ ಉಳ್ಳವನಾಗಿ, ಸರ್ಪವನ್ನು ಹಾರವಾಗಿ ಧರಿಸಿರುವೆ. ನಿನ್ನ ಭುಜಗಳು ಕಲ್ಪವೃಕ್ಷಗಳಂತೆ ಕೇಳಿದವರ ಇಷ್ಟಾರ್ಥಗಳನ್ನು ಕೊಡುತ್ತಿರುವವು. ಪಾರ್ವತೀದೇವಿಯೊಡನೆ ನೀನು ನಡಸಿರುವ ಪ್ರಣಯಕಲಹದಲ್ಲಿ ದೇವಿಯ ಪಾದಕಮಲದ ಸ್ಪರ್ಶದಿಂದ ವ್ಯತ್ಯಸ್ತನಾದ ಚಂದ್ರನನ್ನು ಧರಿಸಿದ ಜಟೆಯುಳ್ಳವನಾಗಿರುತ್ತೀಯೆ. ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವು.

ಮುಖಾರಾತಿಂ ಮಂದಸ್ಮಿತಮಧುರಬಿಂಬಾಧರಲಸ-
ನ್ಮುಖಾಂಭೋಜಂ ಮುಗ್ಧಾಮೃತಕಿರಣಚೂಡಾಮಣಿಧರಂ ।
ನಖಾಕೃಷ್ಟೇಭತ್ವಕ್ಪರಿವೃತಶರೀರಂ ಪಶುಪತಿಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ　　॥ ೫೮ ॥

ಸಹಸ್ರಾಬ್ಜೈಕೋನೇ ನಿಜನಯನಮುದ್ಧೃತ್ಯ ಯಜತೇ-
ಸಹಸ್ರಾಖ್ಯಾಪೂರ್ತ್ಯೈ ಸರಸಿಜದೃಶೇ ಯೇನ ಕೃಪಯಾ ।
ಸಹಸ್ರಾರಂ ದತ್ತಂ ತಪನನಿಯುತಾಭಂ ರಥಪದಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ　　॥ ೫೯ ॥

---

೫೮ ಎಲೈ ದೇವನೆ, ನೀನು ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿರುತ್ತೀಯೆ. ಮಂದಹಾಸದಿಂದ ಹೊಳೆಯುತ್ತಿರುವ ಸುಂದರವಾದ ಮುಖವನ್ನು ಹೊಂದಿ, ಅಂದವಾಗಿ ಕಾಣುವ ಅಮೃತ ಕಿರಣನಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುತ್ತೀಯೆ. ಪಾದನಖಪರ್ಯಂತವಾಗಿಯೂ, ಆನೆಯ ಚರ್ಮವನ್ನು ಹೊದ್ದುಕೊಂಡು ಪ್ರಕಾಶಿಸುತ್ತಿರುವೆ. ನಿನ್ನನ್ನು ಪಶುಪತಿಯೆಂದು ಎಲ್ಲರೂ ತಿಳಿದಿರುವರು. ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹಾರಮಾಡುತ್ತಿರುವ ಈ ಪ್ರಕಾರವಾದ ಮಹಿಮೆಯುಳ್ಳ ಮಹಾದೇವನಾದ ನಿನಗೆ ನಮಸ್ಕಾರಮಾಡುವೆನು.

೫೯. ವಿಷ್ಣುವು ನಿನ್ನನ್ನು ಪೂಜಿಸುವುದಕ್ಕಾಗಿ ಒಂದು ಸಾವಿರ ಕಮಲಗಳನ್ನು ಸಿದ್ಧಮಾಡಿಕೊಂಡು ಪೂಜೆ ಮಾಡುವುದಕ್ಕೆ ಉಪಕ್ರಮಿಸಿದಾಗ ಒಂದು ಕಮಲವು ಕಡಿಮೆಯಾಯಿತು. ಅವನು ಆಗ ತನ್ನ ಕಣ್ಣನ್ನು ಆ ಹೂವಿಗೆ ಬದಲಾಗಿ ಒಪ್ಪಿಸಿ, ಪೂಜೆಯನ್ನು ಮುಗಿಸಿದ ಕಾರಣ, ಅವನಿಗೆ ಕಮಲದಳಾಯತಾಕ್ಷನೆಂದು ಹೆಸರನ್ನು ಕೊಟ್ಟು, ಅನೇಕ ಸೂರ್ಯರಂತೆ ಹೊಳೆಯುತ್ತಿರುವ ಸಾವಿರ ಅಲಗುಗಳಿಂದ ಕೂಡಿದ ಚಕ್ರಾಯುಧವನ್ನು ಉಚಿತವಾಗಿ ಅವನಿಗೆ ನೀನು ಅನುಗ್ರಹಿಸಿರುತ್ತೀಯೆ. ಈ ಪ್ರಕಾರದ ಮಹಿಮೆಯುಳ್ಳವನಾಗಿ, ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವನ್ನು ಮಾಡುವೆನು.

ರಥಾವನ್ಯಾಮ್ನಾಯೌಶ್ವನುಜರಥಕಾರಂ ರಣಪಟುಂ-
ರಥಾಂಗಾದಿತ್ಯೇಂದುಂ ರಥಪದಧರಾಸ್ತ್ರಂ ರಥಿವರಂ ।
ರಥಾಧಾರೇಷ್ವಾಸಂ ರಥಧರಗುಣಂ ರಮ್ಯಫಲದಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೬೦ ॥

ಧರಾಕರ್ಷಾಪಾಸ್ತಪ್ರಚುರಭುಜಕಂಡೂಯನಜಲಂ-
ಧರಾಹಾರ್ಯದ್ವೈಧೀಕರಣಹೃತಲೋಕತ್ರಯಭಯಂ ।
ಸ್ಮರಾಕಾರಾಹಾರಾವೃತಚಟುಲಫಾಲಾನಲಕಣಂ-
ಮಹಾದೇವಂ ವಂದೇ ಮಧುರಶಫರಾಕ್ಷೀಸಹಚರಂ ॥ ೬೧ ॥

---

೬೦. ಎಲೈ ದೇವನೆ, ನೀನು ಪುರಗಳನ್ನು ನಾಶಮಾಡುವುದಕ್ಕಾಗಿ ಯುದ್ಧಕ್ಕೆ ಹೊರಟ ಕಾಲದಲ್ಲಿ ನಾಲ್ಕು ವೇದಗಳು ರಥದ ಕುದುರೆಗಳಾದವು. ಬ್ರಹ್ಮನು ಸಾರಥಿಯಾದನು. ಚಂದ್ರ ಸೂರ್ಯರು ರಥದ ಚಕ್ರಗಳಾದರು. ಚಕ್ರಾಯುಧ ವನ್ನು ಧರಿಸಿರುವ ವಿಷ್ಣುವು ಅಸ್ತ್ರವಾದನು. ಮೇರುಪರ್ವತವು ಧನುಸ್ಸಾಗಿತ್ತು. ವಾಸುಕಿಯೇ ಮೊದಲಾದ ಸರ್ಪಗಳು * ಮೌರ್ವಿಯಾಗಿದ್ದವು. ಯುದ್ಧಮಾಡುವ ವೀರನಾದ ಮತ್ತು ಶ್ರೇಷ್ಠನಾದ ರಥಿಕನಾಗಿರುವ ನೀನು ಪ್ರಪಂಚಕ್ಕೆ ಹಿತವಾದ ಫಲವನ್ನು ಉಂಟುಮಾಡಿರುತ್ತೀಯೆ. ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹಾರಮಾಡುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವನ್ನು ಮಾಡುತ್ತೇನೆ.

೬೧. ಎಲೈ ದೇವನೆ, ಭೂಮಿಯೆಲ್ಲವನ್ನೂ ನಾಶಮಾಡುವುದರಿಂದ ತನ್ನ ಭುಜಗಳ ಕಡಿತವನ್ನು ಕಡಿಮೆ ಮಾಡಿಕೊಳ್ಳುತ್ತಿರುವ ಜಲಂಧರಾಸುರನನ್ನು ಬಲಾತ್ಕಾರದಿಂದ ನಿಗ್ರಹಮಾಡಿ, ಮೂರು ಲೋಕಗಳಿಗೂ ಉಂಟಾಗಿದ್ದ ಭಯವನ್ನು ಪರಿಹರಿಸುವ ನೀನು, ನಿನ್ನ ಚಂಚಲವಾದ ನೇತ್ರಾಗ್ನಿಯಲ್ಲಿ ಮನ್ಮಥನ ಆಕಾರವನ್ನು ಆಹಾರವಾಗಿಮಾಡಿ, ಪ್ರಕಾಶಿಸುತ್ತಿರುತ್ತೀಯೆ. ಈ ಪ್ರಕಾರದ ಮಹಿಮೆಯುಳ್ಳವ ನಾಗಿ ಸುಂದರಿಯಾದ ಮೀನಾಕ್ಷೀದೇವಿಯೊಡನೆ ವಿಹರಿಸುತ್ತಿರುವ ಮಹಾದೇವನಾದ ನಿನಗೆ ನಮಸ್ಕಾರವನ್ನು ಮಾಡುತ್ತೇನೆ.

---

* ಮೌರ್ವಿ=ಬಿಲ್ಲಿಗೆ ಬಾಣ ಬಿಡಲು ಅನುಕೂಲವಾಗುವಂತೆ ಕಟ್ಟುವ ಹಗ್ಗ.

ಸೋಮಸುಂದರನಾಥಸ್ಯ ಸ್ತೋತ್ರಂ ಭಕ್ತ್ಯಾ ಪಠಂತಿ ಯೇ ।
ಶ್ರಿಯಾ ಪರಮಯಾ ಯುಕ್ತಾ ಶ್ಶಿವಮಂತೇ ಭಜಂತಿ ತೇ ॥ ೬೨ ॥

ಸುಂದರೇಶ್ವರಮೀಶಾನಂ ಸುಮೀನಾಕ್ಷೀಸುನಾಯಕಂ ।
ಕುಲೇಶ್ವರ ಮಹೀಪಾಲ ಇತಿ ಸ್ತೋತ್ರೈರತೋಷಯತ್ ॥ ೬೩ ॥

ಅಥ ವಾಚಾಶರೀರಿಣ್ಯಾ ಶಂಕರಃ ಸುಂದರೇಶ್ವರಃ ।
ಸ್ತೋತ್ರಪ್ರಿಯಃ ಪ್ರಿಯಾದಾಹ ಭೂಪತಿಂ ಪುರತಸ್ಥಿತಂ ॥ ೬೪ ॥

ಕುಲೇಶ್ವರ ಮಹೀಪಾಲ ವಿದ್ವನ್ಪಾಂಡ್ಯಕುಲೇಶ್ವರ ।
ಶೃಣ್ವೇತತ್ಸ್ಥಾನಮಾಹಾತ್ಮ್ಯಂ ಮಯೋಕ್ತಮವಧಾನತಃ ॥ ೬೫ ॥

ಶ್ರೀಹಾಲಾಸ್ಯಂ ಮಮ ಕ್ಷೇತ್ರಮಘತೂಲಮಹಾನಲಂ ।
ಮಲ್ಲಿಂಗ ಮಭಿತಸ್ತದ್ವದ್ಯೋಜನತ್ರಯಮಾತ್ರಕಂ ॥ ೬೬ ॥

---

೬೨–೬೪. ಕುಲಶೇಖರಪಾಂಡ್ಯರಾಜನು ಹೇಳಿರುವ ಸೋಮಸುಂದರೇಶ್ವರನ ಸ್ತೋತ್ರವನ್ನು ಭಕ್ತಿಯಿಂದ ಹೇಳುವವರು ಬಹಳ ಉತ್ತಮವಾದ ಐಶ್ವರ್ಯವನ್ನು ಹೊಂದಿದವರಾಗಿ ಕೊನೆಯಲ್ಲಿ ಶಿವನನ್ನು ಹೊಂದುವರು. ಕುಲಶೇಖರಪಾಂಡ್ಯ ರಾಜನು ಸುಂದರೇಶ್ವರನನ್ನು ಈ ಪ್ರಕಾರದಿಂದ ಸ್ತೋತ್ರಮಾಡುತ್ತಾ ಇರುವುದನ್ನು ಕೇಳಿ, ಸ್ತೋತ್ರಪ್ರಿಯನಾದ ಸುಂದರೇಶ್ವರನು ತನ್ನ ಪ್ರೀತಿಗೆ ಪಾತ್ರನಾದ ರಾಜನು ತನ್ನ ಮುಂದೆ ನಿಂತಿರುವುದನ್ನು ನೋಡಿ, ಆಕಾಶವಾಣಿಯಿಂದ ಉತ್ತರವನ್ನು ಹೇಳಿದನು.

೬೫–೬೬. ವಿದ್ವಾಂಸನಾಗಿಯೂ, ಪಾಂಡ್ಯದೇಶದ ರಾಜನಾಗಿಯೂ ಇರುವ ಕುಲೇಶ್ವರ ರಾಜನೆ, ನಾನು ಈ ಸ್ಥಳದ ಮಹಿಮೆಯನ್ನು ಹೇಳುತ್ತೇನೆ. ನೀನು ಎಚ್ಚರದಿಂದ ಕೇಳು. ಈ ಹಾಲಾಸ್ಯಕ್ಷೇತ್ರವು ಪಾಪಗಳನ್ನು ನಾಶಮಾಡುವುದರಲ್ಲಿ ಬಹಳ ಉತ್ತಮವಾದದ್ದು. ನನ್ನ ರೂಪಾಂತರವಾದ ಸುಂದರೇಶ್ವರ ಲಿಂಗದ

ಪವಿತ್ರಾಣಾಂ ಪವಿತ್ರಂ ಚ ಸ್ಥಾನಾನಾಂ ಚ ಪರಾತ್ಪರಂ ।
ಜೀವನ್ಮುಕ್ತಿಪುರಂ ಚೇತಿ ಪ್ರಥಿತಂ ಭುವನತ್ರಯೇ ॥ ೬೭ ॥

ಅತ್ರೈವ ಸಂತಿ ಲಿಂಗಾನಿ ಅನಂತಾನಿ ಮಹಾಂತಿ ಚ ।
ಸ್ವಾಯಂಭುವಾನಿ ಲಿಂಗಾನಿ ಮಾನವಾಕರ್ಷಕಾಣಿ ಚ ॥ ೬೮ ॥

ತೇಷಾಂ ಮಧ್ಯೇ ಚತುಃಷಷ್ಟಿಲಿಂಗಾನ್ಯತಿವರಾಣಿ ಚ ।
ತತ್ರಾಪ್ಯಷ್ಟೌ ಚ ಲಿಂಗಾನಿ ವಿದ್ಯಂತೇತ್ಯುತ್ತಮಾನಿ ಚ ॥ ೬೯ ॥

ಮಮ ಲಿಂಗಂ ಸ್ವಯಂಭೂತಂ ಲಿಂಗಾನಾಮುತ್ತಮೋತ್ತಮಂ ।
ತಾನಿ ಕ್ರಮೇಣ ವಕ್ಷ್ಯಾಮಿ ದಿಕ್ಪಾಲಸ್ಥಾಪಿತಾನಿ ಚ ॥ ೭೦ ॥

ತಲ್ಲಿಂಗಸ್ಯ ಪುರೋಭಾಗೇ ಸ್ವಯಂಭೂತೋತ್ತಮಸ್ಯ ಚ ।
ಇಂದ್ರೇಶ್ವರಮಿತಿ ಖ್ಯಾತಂ ಲಿಂಗಮಸ್ತಿ ಚಿರಂತನಂ ॥ ೭೧ ॥

---

ಸುತ್ತಲೂ ಯೋಜನ ಪರಿಯಂತರವೂ ಬಹಳ ಪವಿತ್ರವಾದ, ಉತ್ತಮವಾದ ಸ್ಥಾನಗಳು ಇರುವುದರಿಂದ ಈ ಕ್ಷೇತ್ರವು ಜೀವನ್ಮುಕ್ತಿಪುರವೆಂದು ಮೂರು ಲೋಕದಲ್ಲಿಯೂ ಪ್ರಸಿದ್ಧಿಯನ್ನು ಹೊಂದಿರುವುದು.

೬೮-೭೧. ಈ ಪ್ರದೇಶದಲ್ಲಿ ಮಹಿಮೆಯುಳ್ಳ ಶಿವಲಿಂಗಗಳು ಬಹಳವಾಗಿ ಇರುವುವು. ಇವೆಲ್ಲವೂ ಸ್ವಯಮುದ್ಭವಿಸಿರುವ ಮತ್ತು ಮನೋಹರವಾಗಿರುವವುಗಳು. ಇವುಗಳಲ್ಲಿ ಅರುವತ್ತುನಾಲ್ಕು ಶಿವಲಿಂಗಗಳು ಉತ್ತಮವಾದವುಗಳು. ಅವುಗಳಲ್ಲಿಯೂ ಎಂಟು ಶಿವಲಿಂಗಗಳು ಬಹಳ ಶ್ರೇಷ್ಠವಾದವುಗಳು. ಈ ಹಾಲಾಸ್ಯ ಕ್ಷೇತ್ರದಲ್ಲಿರುವ ಈ ಸ್ವಯಂಭೂಲಿಂಗವು ಉತ್ತಮೋತ್ತಮವಾಗಿರುವುದು. ಇತರ ಶಿವಲಿಂಗಗಳನ್ನು ದಿಕ್ಪಾಲಕರು ಕ್ರಮವಾಗಿ ಅಲ್ಲಲ್ಲಿ ಪ್ರತಿಷ್ಠೆಮಾಡಿರುವರು. ಅವುಗಳನ್ನು ಕ್ರಮವಾಗಿ ಹೇಳುತ್ತೇನೆ. ಸ್ವಯಂಭೂತೋತ್ತಮ ಲಿಂಗವಾದ ಸುಂದರೇಶ್ವರ ಶಿವಲಿಂಗದ ಮುಂದುಗಡೆಯಲ್ಲಿ ಇಂದ್ರೇಶ್ವರನೆಂದು ಪ್ರಸಿದ್ಧವಾದ ಪುರಾತನವಾದ ಶಿವಲಿಂಗವು ಇರುವುದು.

ಆಗ್ನೀಶ್ವರಾಖ್ಯಂ ಲಿಂಗಂ ಚ ಅಗ್ನಿದಿಕ್‌ಸ್ಥಮಘಾಪಹಂ ।
ಪಾದಯೋಜನಮಾತ್ರೇಣ ದೂರೇ ವಿಶ್ರುತವೈಭವಂ ॥ ೭೨ ॥

ಯಮೇಶ್ವರಂ ಕ್ರೋಶಲಿಂಗಂ ಯಾಮ್ಯೇ ಕ್ರೋಶಚತುಷ್ಟಯೇ ।
ನೈಋರ್ತೇ ನಿಋರ್ತೀಶಂ ಚ ಕ್ರೋಶದ್ವಯ ಸುದೂರಕೇ ॥ ೭೩ ॥

ಕ್ರೋಶಮಾತ್ರೇ ಮಹಾಲಿಂಗಂ ವರುಣೇಶ್ವರನಾಯಕಂ ।
ವಾಯ್ವೇಶ್ವರಂ ಚ ವಾಯವ್ಯೇ ಕ್ರೋಶದ್ವಯಸುದೂರತಃ ॥ ೭೪ ॥

ಕುಬೇರೇಶ್ವರಲಿಂಗಂ ಚ ವೇಗವತ್ಯಾಸ್ತಟೇ ಶುಭೇ
ಯಾಮ್ಯೇ ಪಾಪಾಪಹಂ ನಿತ್ಯಮಿದಮೇವ ಮಮ ಪ್ರಿಯಂ ॥ ೭೫ ॥

ಈಶಾನೇಶ್ವರಲಿಂಗಂ ಚ ವೇಗವತ್ಯಾಸ್ತಟೋತ್ತರೇ ।
ಕ್ರೋಶತ್ರಯೇ ಮಹಾಲಿಂಗಂ ದರ್ಶನಾದೇವ ಮುಕ್ತಿದಂ ॥ ೭೬ ॥

---

೭೨–೭೬. ಇದರ ಆಗ್ನೇಯ ದಿಕ್ಕಿನಲ್ಲಿ ಅಗ್ನೀಶ್ವರನೆಂದು ಪಾಪನಾಶಕವಾದ ಶಿವಲಿಂಗವು ಇರುವುದು. ಇದು ಇಲ್ಲಿಂದ ನಾಲ್ಕನೆ ಒಂದುಭಾಗ ಯೋಜನ ದೂರದಲ್ಲಿದ್ದುಕೊಂಡು ಮಹಿಮೆಯುಳ್ಳದ್ದಾಗಿರುವುದು. ಸುಂದರೇಶ್ವರ ಶಿವಲಿಂಗದ ದಕ್ಷಿಣ ದಿಕ್ಕಿನಲ್ಲಿ ನಾಲ್ಕು ಕ್ರೋಶ ದೂರದಲ್ಲಿ ಯಮೇಶ್ವರನೆಂದು ಹೆಸರಿನ ಶಿವಲಿಂಗವು ಇರುವುದು. ನೈರುತ್ಯದಿಕ್ಕಿನಲ್ಲಿ ಎರಡು ಕ್ರೋಶದೂರದಲ್ಲಿ ನಿರುರುತೀಶ್ವರನೆಂದು ಹೆಸರುಳ್ಳ ಶಿವಲಿಂಗವು ಇರುವುದು. ಒಂದು ಕ್ರೋಶದೂರದಲ್ಲಿ ವರುಣೇಶ್ವರನೆಂದು ಪ್ರಸಿದ್ಧವಾದ ಮಹಾಲಿಂಗವು ಇರುವುದು. ವಾಯುವ್ಯದಿಕ್ಕಿನಲ್ಲಿ ಎರಡು ಕ್ರೋಶ ದೂರದಲ್ಲಿ ವಾಯ್ವೇಶ್ವರನೆಂದು ಹೆಸರುಳ್ಳ ಶಿವಲಿಂಗವಿರುವುದು. ಉತ್ತರದಿಕ್ಕಿನಲ್ಲಿ ಕುಬೇರೇಶ್ವರನೆಂದು ಹೆಸರುಳ್ಳ ಶಿವಲಿಂಗವಿರುವುದು. ಈ ಲಿಂಗವು ಮಂಗಳಕರವಾದ ವೇಗವತೀನದಿಯ ದಕ್ಷಿಣದಡದಲ್ಲಿದ್ದುಕೊಂಡು ನನಗೆ ಪ್ರಿಯವಾಗಿ ಪವಿತ್ರವಾಗಿರುವುದು. ವೇಗವತೀನದಿಯ ಉತ್ತರದಡದಲ್ಲಿ ಮೂರು ಕ್ರೋಶಗಳನಂತರ, ಇರುವ ಈಶಾನೇಶ್ವರಲಿಂಗವು ದರ್ಶನ ಮಾತ್ರದಿಂದ ಮುಕ್ತಿಯನ್ನು ಉಂಟು ಮಾಡುವುದು.

ಮತ್ಸಖೇನ ಕುಬೇರೇಣ ಮದ್ಭಕ್ತ್ಯತಿಶಯೇನ ಚ ।
ಸ್ಥಾಪಿತಂ ಲಿಂಗಮೇತಚ್ಚ ಮಲ್ಲಿಂಗಸ್ಯ ಪ್ರಮಾಣತಃ ॥ ೭೭ ॥

ಚಿರಕಾಲಸ್ಥಾಪಿತತ್ವಾಲ್ಲಿಂಗಮೇತಚ್ಚಿರಂತನಂ ।
ಪ್ರಾಸಾದೇನ ಸಹಾದೃಶ್ಯ ಮಭೂನ್ಮನ್ವಂತರೇ ಪುರಾ ॥ ೭೮ ॥

ಸ ಪ್ರಾಸಾದಶ್ಚ ಮಲ್ಲಿಂಗಮಾವಿರಾಸೀನ್ಮದಿಚ್ಛಯಾ ।
ಏಷಾ ಸ್ಥಲೀ ಚ ಸುಮಹತ್ಪುಣ್ಯದಾಘೌಘನಾಶಿನೀ ॥ ೭೯ ॥

ತಸ್ಮಾದಸ್ಯ ಹಿ ಸಾನ್ನಿಧ್ಯಂ ಲೀಲಯಾದ್ಯ ಕೃತಂ ಮಯಾ ।
ಮಲ್ಲಿಂಗೋತ್ತರದೇಶೇ ತು ಯದೇತತ್ಸ್ಥಾನಮುತ್ತಮಂ ॥ ೮೦ ॥

ತದುತ್ತರಶ್ರೀಹಾಲಾಸ್ಯಮಿತಿ ಲೋಕೇ ಪ್ರಥಾಂ ಯಯೌ ।
ಕೃತಮಾಲಾನದೀತೋಯೇ ಸ್ನಾತ್ವಾ ತದ್ದಕ್ಷಿಣೇ ತಟೇ ॥ ೮೧ ॥

ದೃಷ್ಟ್ವೋತ್ತರಶ್ರೀಹಾಲಾಸ್ಯನಾಥಾಖ್ಯಂ ಲಿಂಗಮಿಷ್ಟದಂ ।
ಭವಂತ್ಯಮರ್ತ್ಯಾ ಮರ್ತ್ಯಾಶ್ಚ ದರ್ಶನಾದ್ಧೂತಪಾತಕಾಃ ॥ ೮೨ ॥

---

೭೭-೮೨ ನನ್ನ ಸ್ನೇಹಿತನಾದ ಕುಬೇರನು ನನ್ನಲ್ಲಿ ಬಹಳ ಭಕ್ತಿಯಿಂದ ಈ ಲಿಂಗವನ್ನು ಶಿವಲಿಂಗಪ್ರಮಾಣಕ್ಕನುಸಾರವಾಗಿ ಪ್ರತಿಷ್ಠೆಮಾಡಿರುವನು. ಬಹಳ ಕಾಲ ಕಳೆದಕಾರಣ ಇದು ಪುರಾತನವಾದ ಶಿವಲಿಂಗವಾಗಿರುವುದು. ಇದು ಹಿಂದಿನ ಮನ್ವಂತರದಲ್ಲಿ ಈ ಪ್ರಾಸಾದದೊಡನೆ ಅದೃಶ್ಯವಾಗಿ ಇತ್ತು. ನನ್ನ ಇಚ್ಛಾನುಸಾರವಾಗಿ ಈ ಶಿವಲಿಂಗವು ಈಗ ಪ್ರಕಟವಾಯಿತು. ಈ ಕ್ಷೇತ್ರವೂ ಬಹಳ ಪುಣ್ಯವನ್ನು ಉಂಟುಮಾಡುವುದು. ಮತ್ತು ಪಾಪನಾಶಕವಾದದ್ದಾಗಿರುವುದು. ಈ ಕಾರಣದಿಂದ ನಾನು ಇಲ್ಲಿ ನನ್ನ ಸಾನ್ನಿಧ್ಯವನ್ನು ಅಂಗೀಕರಿಸಿರುವೆನು. ಈ ಪ್ರದೇಶಕ್ಕೆ ಉತ್ತರ ಭಾಗದಲ್ಲಿರುವ ಪವಿತ್ರವಾದ ಪ್ರದೇಶಕ್ಕೆ ಉತ್ತರ ಹಾಲಾಸ್ಯವೆಂದು ಪ್ರಸಿದ್ಧಿಯು ಉಂಟಾಗಿರುವುದು. ಕೃತಮಾಲಾನದಿಯ ನೀರಿನಲ್ಲಿ ಸ್ನಾನಮಾಡಿ, ಅದರ ದಕ್ಷಿಣ ದಡದಲ್ಲಿರುವ ಉತ್ತರ ಹಾಲಾಸ್ಯೇಶ್ವರನೆಂದು ಹೆಸರುಳ್ಳ, ಇಷ್ಟಾರ್ಥವನ್ನು ಕೊಡುವ ಶಿವಲಿಂಗವನ್ನು ದರ್ಶನಮಾಡುವವರು ಪಾಪಗಳನ್ನು ಪರಿಹರಿಸಿಕೊಂಡು ದೇವತೆಗಳಾಗಿ ಸುಖದಿಂದ ಇರುವರು.

ಏತತ್‌ಸ್ಥಾನಂ ವಿಶೇಷಾಚ್ಚ ಹೃದ್ಯಮೇನಾಭವನ್ಮಮ ।
ಕದಂಬಕಾನನಾಂತಸ್ಥಂ ವಿಶ್ವಕರ್ಮವಿನಿರ್ಮಿತಂ　　　　॥ ೮೩ ॥

ವಿಬುಧೇಶವಿಮಾನಂ ಚ ವಿಹಾಯ ನ ಗತೋಽಸ್ಮ್ಯಹಂ ।
ಜಗದಾದೌ ಸ್ವಯಂಭೂತಂ ಪಾತಾಲಾಧಃ ಪ್ರವೇಶಿತಂ　　　　॥ ೮೪ ॥

ಮಲ್ಲಿಂಗಂ ಜಗದಂತೇಽಪಿ ನಾಂತಮೇತಿ ಋತಂ ಋತಂ ।
ಭೂತಭವ್ಯಭವತ್ಕಾಲತ್ರಯೇಽಸ್ಯವ್ಯಯಮದ್ಭುತಂ　　　　॥ ೮೫ ॥

ಮಲ್ಲಿಂಗಂ ದೇಶಕಾಲಾದೌ ಸಮುದ್ಭವತಿ ಸರ್ವಗಂ ।
ಮದೀಯಮಾಯಯೇದಾನೀಮಗಮತ್ತದದೃಶ್ಯತಾಂ　　　　॥ ೮೬ ॥

ಭೂಯಾತ್ತಸ್ಯಾಥ ದೃಶ್ಯತ್ವಂ ಮಮ ದೋಷೋ ನ ಹಿ ತ್ವಯಿ ।
ಮದ್ಭಕ್ತಮಧ್ಯಾರಣ್ಯೇಶಗೇಯಂ ಶಬ್ದಾರ್ಥಸುಂದರಂ　　　　॥ ೮೭ ॥

---

೮೩–೮೭. ಈ ಪ್ರದೇಶವು ಬಹಳಮಟ್ಟಿಗೆ ನನಗೆ ಸಂತೋಷವನ್ನುಂಟು ಮಾಡಿರುವುದು. ಆದರೆ ಕದಂಬ ಕಾನನದ ಮಧ್ಯದಲ್ಲಿರುವ, ವಿಶ್ವಕರ್ಮನು ನಿರ್ಮಿಸಿದ ಇಂದ್ರ ವಿಮಾನವನ್ನು ನಾನು ತ್ಯಾಗ ಮಾಡಿರುವುದಿಲ್ಲ. ನಾನು ಅಲ್ಲಿಯೂ ನನ್ನ ಸಾನ್ನಿಧ್ಯವನ್ನು ಉಂಟುಮಾಡಿರುವೆನು. ಸುಂದರೇಶ್ವರ ಲಿಂಗವು ಪ್ರಪಂಚದ ಮೊದಲಿನಿಂದಲೂ ಇರತಕ್ಕದ್ದು. ಪಾತಾಳದ ಕೊನೆಯವರಿಗೂ ವ್ಯಾಪಿಸಿ ಕೊಂಡು ಇರುವುದು. ಮತ್ತು ತಾನಾಗಿಯೇ ಉದ್ಭವಿಸಿರುವುದು. ಜಗತ್ತೆಲ್ಲವೂ ನಾಶವಾಗುವಾಗಲೂ ಇದು ನಾಶವಾಗುವುದಿಲ್ಲ. ಇದು ಸತ್ಯವಾದ ಮಾತಾಗಿರುವುದು. ಮೂರು ಕಾಲಗಳಲ್ಲಿಯೂ ಪರಿಪೂರ್ಣ ಭಾವದಿಂದ ಇರುತ್ತಾ ಆಶ್ಚರ್ಯಕರವಾದ ಈ ಶಿವಲಿಂಗವು ದೇಶಕಾಲಗಳಿಗಿಂತಲೂ ಮೊದಲಿನಿಂದಲೂ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡು ಪ್ರಕಟವಾಗಿರುವುದು. ನಾನು ಈಗ ನನ್ನ ಮಾಯೆಯಿಂದ ಅದು ಅದೃಶ್ಯವಾಗಿರುವಂತೆ ಮಾಡಿರುವೆನು. ಈಗ ಅದು ಮೊದಲಿನ ಹಾಗೆಯೇ ಎಲ್ಲರಿಗೂ ಗೋಚರವಾಗಿರುವ ಸ್ಥಿತಿಯನ್ನು ಹೊಂದುವುದು. ಈ ವಿಷಯದಲ್ಲಿ ನನ್ನ ಪ್ರಮಾದವು ಯಾವುದೂ ಇಲ್ಲವು.

ಅಕಾರಣಾದ್ಧಿಕ್ಕೃತಂ ಚ ಭವತೇತಿ ಸುಕೋಪಿತಃ ।
ತಸ್ಯಾವಮಾನಾದಪಿ ಚ ಸಮಾನರಹಿತಂ ತವ ॥ ೮೮ ॥

ಇತಿ ಶ್ರುತ್ವಾ ಶಂಭುವಾಕ್ಯಂ ಕುಲೇಶಃ ಪಾಂಡ್ಯಭೂಪತಿಃ ।
ಅತ್ಯಂತಭೀತಹೃದಯ ಅಭೂತ್ಕಂಪಿತವಿಗ್ರಹಃ ॥ ೮೯ ॥

ಅಥ ನಾನಾವಿಧೈಃಸ್ತೋತ್ರೈಃ ಸ್ತುತ್ವಾ ನತ್ವಾ ಪುನಃ ಪುನಃ ।
ಶಂಭುಂ ವಿಜ್ಞಾಪಯಾಮಾಸ ಕಾರುಣ್ಯಾಮೃತಸಾಗರಂ ॥ ೯೦ ॥

ಶ್ರೀಹಾಲಾಸ್ಯಪತೇ ಶಂಭೋ ಮೀನಾಕ್ಷೀರಮಣ ಪ್ರಭೋ ।
ಸಾಂಬ ಶಂಭೋ ಮಹಾದೇವ ಸುಂದರೇಶ್ವರ ಶಂಕರ ॥ ೯೧ ॥

ಅಪರಾಧಂ ಕ್ಷಮಸ್ವಾದ್ಯ ಮಯಾ ಚಾಜ್ಞಾನತಃ ಕೃತಂ ।
ಯಥಾ ಪೂರ್ವಂ ಪ್ರಸನ್ನಸ್ತ್ವಂ ಲಿಂಗಂ ದರ್ಶಯ ಮ್ಯೇವ್ಯಯಂ ॥ ೯೨ ॥

---

೮೮-೯೦. ನನ್ನ ಭಕ್ತನಾದ ಮಧ್ಯಾರಣ್ಯಕವಿಯು ಮಾಡಿರುವ ಪದ್ಯದಲ್ಲಿ ಶಬ್ದಾರ್ಥಗಳು ಮನೋಹರವಾಗಿದ್ದಾಗ್ಯೂ ನೀನು ನಿಷ್ಕಾರಣವಾಗಿ ಅವನಿಗೆ ಅವಮಾನ ಮಾಡಿದ ಕಾರಣ ನನಗೆ ನಿನ್ನಲ್ಲಿ ಕೋಪವೂ ಉಂಟಾಯಿತು. ಅವನನ್ನು ಅವಮಾನ ಮಾಡಲು ನಿನಗೆ ಸಮಾನಾದವರು ಇತರರು ಇಲ್ಲವೆಂಬ ನಿನ್ನ ಅಹಂಕಾರವು ನನ್ನ ಕೋಪಕ್ಕೆ ಕಾರಣವಾಯಿತು." ಎಂದು ಸುಂದರೇಶ್ವರನು ಹೇಳಿದ ಮಾತನ್ನು ಕೇಳಿದ ಕುಲೇಶಪಾಂಡ್ಯರಾಜನು ಬಹಳವಾಗಿ ಹೆದರಿದ ಮನಸ್ಸುಳ್ಳವನಾಗಿ ನಡಗುತ್ತಾ ನಿಂತುಕೊಂಡನು. ಅನಂತರದಲ್ಲಿ ಅನೇಕ ವಿಧವಾದ ಸ್ತೋತ್ರಗಳನ್ನು ಮಾಡಿ, ಬಹಳ ದಯೆಯುಳ್ಳವನಾದ ಸುಂದರೇಶ್ವರನನ್ನು ಅನೇಕ ಸಾರಿ ನಮಸ್ಕರಿಸಿದನು.

೯೧-೯೨. ಸಂಪದ್ಯುಕ್ತನಾದ ಹಾಲಾಸ್ಯಕ್ಷೇತ್ರಕ್ಕೆ ಅಧಿಪತಿಯಾಗಿರುವ ದೇವನೆ, ಮೀನಾಕ್ಷೀದೇವಿಯ ಸಂಗಡ ವಿಹರಿಸುತ್ತಿರುವ ಪ್ರಭುವೇ, ಎಲೈ ಶಂಭುವೆ, ಮಹಾದೇವನೆ, ಶಂಕರನೆ, ನಾನು ಅಜ್ಞಾನದಿಂದ ಆಚರಿಸಿದ ಅಪರಾಧವನ್ನು ಕ್ಷಮಿಸು.

**ಲೋಕಾನಾಂ ಚ ಹಿತಾರ್ಥಾಯ ಭಕ್ತಾನಾಮಪಿ ಸಿದ್ಧಯೇ ।**
**ಶಿವೇಶಾನೇತಿ ಭಗವಾನ್ಪ್ರಾರ್ಥಿತೋ ಭಕ್ತವತ್ಸಲಃ ॥ ೯೩ ॥**

**ಪ್ರಸನ್ನೋಽಸ್ಮೀತ್ಯಥ ಪ್ರಾಹ ವಾಚೈವಮಶರೀರಯಾ ।**
**ತ್ವಂ ಗಚ್ಛ ಸೇವಯಸ್ವೇತಿ ಮಹಾಲಿಂಗಂ ಯಥಾ ಪುರಾ ॥ ೯೪ ॥**

**ಆತ್ಮಲಿಂಗೇ ತಿರೋಧಾನಂ ಕೃತಮಾತ್ಮೀಯಮಾಯಯಾ ।**
**ತ್ಯಕ್ತ್ವಾ ಪ್ರತ್ಯಕ್ಷಿತಂ ತಚ್ಚ ಮಹಾಲಿಂಗಂ ಸದಾಶಿವಃ ॥ ೬೫ ॥**

**ತಸ್ಮಿಁಲಿಂಗೇ ಯಥಾಪೂರ್ವಂ ಸಾನ್ನಿಧ್ಯಮಕರೋಚ್ಛಿವಃ ।**
**ರಾಜಾಪಿ ಮಧ್ಯಕಾಂತಾರನಾಥಂ ಚ ಸಹ ಸಂಘಿಭಿಃ ॥ ೯೬ ॥**

**ಸ್ವಾಂತಃಪುರೇ ಸಮಾಹೂಯ ಪೂಜಯಾಮಾಸ ತಂ ಚ ತಾನ್ ।**
**ಪ್ರದಾಯ ತಸ್ಮೈ ತೇಭ್ಯಶ್ಚ ವಸ್ತ್ರಾಣ್ಯಾಭರಣಾನಿ ಚ ॥ ೯೭ ॥**

---

ನೀನು ಮೊದಲಿನ ಹಾಗೆಯೇ ಇದ್ದುಕೊಂಡು ಶಿವಲಿಂಗವು ನಮಗೆಲ್ಲರಿಗೂ ಗೋಚರವಾಗುವ ಹಾಗೆ ಅನುಗ್ರಹವನ್ನು ಮಾಡು. ಪರಿಪೂರ್ಣನಾದ ಶಿವನೆ, ಈಶ್ವರನೆ, ನೀನು ಭಕ್ತರ ಹಿತಕ್ಕಾಗಿಯೂ, ಲೋಕಗಳ ಸುಖಕ್ಕಾಗಿಯೂ ಮೊದಲಿನ ಹಾಗೆಯೇ ಇರಬೇಕು ". ಎಂದು ರಾಜನು ಬೇಡಿಕೊಂಡನು.

೯೪–೯೫. ಆಗ ಭಕ್ತವತ್ಸಲನಾದ ಪರಮೇಶ್ವರನು, ಪ್ರಸನ್ನನಾಗಿ " ಎಲೈ ರಾಜನೆ, ನೀನು ಮೊದಲಿನ ಹಾಗೆಯೇ ಸೇವೆಯನ್ನು ಮಾಡು. ನೀನು ಹೋಗು ಎಂದು ಅಶರೀರ ವಾಕ್ಕಿನಿಂದ ಹೇಳಿ, (ತನ್ನ ಲಿಂಗದಲ್ಲಿ) ಹೊಸದಾಗಿ ಎಲ್ಲರಿಗೂ ಕಾಣುತ್ತಿದ್ದ ಶಿವಲಿಂಗದಲ್ಲಿ ತನ್ನ ಸಾನ್ನಿಧ್ಯ ಬಿಟ್ಟು, ಮೊದಲಿನಿಂದಲೂ ಇದ್ದ ಶಿವಲಿಂಗದಲ್ಲಿ ಸಾನ್ನಿಧ್ಯವನ್ನು ಅಂಗೀಕರಿಸಿ ಇದ್ದನು.

೯೬–೧೦೦ ಪಾಂಡ್ಯರಾಜನು ಮಧ್ಯಾರಣ್ಯೇಶ್ವರ ಕವಿಯನ್ನೂ ಅವನ ಸಹಪಾಠಿಗಳಾದ ಇತರ ಕವಿಗಳನ್ನೂ ಕರಸಿ, ಅವರೆಲ್ಲರಿಗೂ ಮರ್ಯಾದೆಯಿಂದಪೂಜಿಸಿ, ಧನ, ಕನಕ, ಆಭರಣ, ವಸ್ತ್ರ, ಭೂಮಿ, ದಾಸಿಯರು, ದಾಸರು, ಇವೇ ಮೊದಲಾದುವುಗಳನ್ನು ಕೊಟ್ಟು ಸಂತೋಷಪಡಿಸಿದನು. ಅನಂತರದಲ್ಲಿ " ಕವೀಶ್ವರರಾದ

ಕ್ಷೇತ್ರಾಣಿ ಸಸ್ಯಪೂರ್ಣಾನಿ ವಾಹನಾನಿ ವರಾಣ್ಯಪಿ ।
ಧನಾನಿ ಯೋಷಿದ್ರತ್ನಾನಿ ಸುವರ್ಣಾನ್ಯಖಿಲಾನಿ ಚ ॥ ೯೮ ॥

ಪ್ರಾರ್ಥಯಾಮಾಸ ಭೂಪಾಲಸ್ಸಮಸ್ತಾನ್ಸತ್ಕವೀಶ್ವರಾನ್ ।
ಮಯಾ ಮೋಹಾತ್ಕೃತಂ ಯಚ್ಚ ಮಧ್ಯಾರಣ್ಯೇಶ್ವರಂ ಪ್ರತಿ ॥ ೯೯ ॥

ತತ್ಸರ್ವಮಾಗಃ ಕ್ಷಂತವ್ಯಂ ಯುಷ್ಮಾಭಿಶ್ಚ ದಯಾಲುಭಿಃ ।
ಇತ್ಯುಕ್ತ್ವಾ ದಂಡವದ್ಭೂಮೌ ಪ್ರಣನಾಮ ಚ ತಾನ್ನೃಪಃ ॥ ೧೦೦ ॥

ಪ್ರಾರ್ಥಯಾಮಾಸ ಭೂಪಾಲಸ್ತೇಷಾಮಾಶಿಷಮಿಷ್ಟದಂ ।
ಕವೀಶ್ವರೈಶ್ಚ ತೈಃ ಸಾರ್ಧಂ ಪ್ರಾಪ್ಯ ಹಾಲಾಸ್ಯನಾಯಕಂ ॥ ೧೦೧ ॥

ದೃಷ್ಟ್ವಾ ಸ್ತುತ್ವಾ ಯಥಾ ಪೂರ್ವಂ ದತ್ವಾ ವಸ್ತ್ವಂತರಾಣಿ ಚ ।
ನಮಸ್ಕೃತಾಶ್ಚ ತೇ ತೇನ ತಂ ಪ್ರತ್ಯೂಚುಃ ಕವೀಶ್ವರಾಃ ॥ ೧೦೨ ॥

---

ನೀವೆಲ್ಲರೂ ಮಧ್ಯಾರಣ್ಯ ಕವಿಗೆ ನಾನು ತಿಳಿಯದೆ ಮಾಡಿದ ಅಪರಾಧವನ್ನು ಕ್ಷಮಿಸಿರಿ. ಮತ್ತು ನೀವೆಲ್ಲರೂ ನನ್ನ ವಿಷಯದಲ್ಲಿ ದಯೆಯುಳ್ಳವರಾಗಿ ಇರಬೇಕು ಎಂದು ಅವರನ್ನು ಬೇಡಿಕೊಂಡು ರಾಜನು ದಂಡಾಕಾರವಾಗಿ ನಮಸ್ಕಾರ ಮಾಡಿದನು. ಅವರ ಆಶೀರ್ವಾದವನ್ನೂ ಕೇಳಿಕೊಂಡನು

೧೦೧-೧೦೫. ಕವೀಶ್ವರರೆಲ್ಲರೂ ಹಾಲಾಸ್ಯೇಶ್ವರನ ಹತ್ತಿರಕ್ಕೆ ಬಂದರು. ಅವರು ಪ್ರಭುವಾದ ಸುಂದರೇಶ್ವರನ ದರ್ಶನವನ್ನು ಮಾಡಿ, ಮೊದಲಿನಂತೆಯೇ ಸ್ತೋತ್ರಗಳನ್ನು ಹೇಳಿ, ನಮಸ್ಕಾರಮಾಡಿ, ಬಹಳ ಪದಾರ್ಥಗಳನ್ನು ಒಪ್ಪಿಸಿ, "ಎಲೈ ರಾಜನೆ, ನಿನ್ನ ಮೃದುವಾದ ಮಾತುಗಳಿಂದ ನಮ್ಮ ಕೋಪವು ಶಾಂತವಾಯಿತು. ಎಲ್ಲಾ ವಿಧವಾದ ಐಶ್ವರ್ಯವೂ ಉಂಟಾಗಲಿ. ಎಲೈ ಕುಲಶೇಖರರಾಜನೆ, ಸುಂದರೇಶ್ವರನು ನಿನಗೆ ಬೇಕಾದ ಇಷ್ಟಗಳೆಲ್ಲವನ್ನೂ ನಡಸಿಕೊಡಲಿ. ನಿನ್ನ ಇಷ್ಟದಂತೆ ಭೋಗಗಳನ್ನು ಅನುಭವಿಸಿದನಂತರ ನೀನು ಶಿವನಲ್ಲಿ ಸಾಯುಜ್ಯವನ್ನು ಹೊಂದು ?" ಎಂದು ರಾಜನಿಗೆ ಆಶೀರ್ವಾದ ಮಾಡಿದರು. ರಾಜನು ಅವರ

ಅಸ್ಮಾಕಂ ಕೋಪವಹ್ನಿಶ್ಚ ಭವದ್ವಾಗಮೃತೇನ ಚ ।
ಶಶಾಮ ಸರ್ವಮೈಶ್ವರ್ಯಂ ತವಾಸ್ತು ಕುಲಶೇಖರ ॥ ೧೦೩ ॥

ಸುಂದರೇಶೋಽಪಿ ಸರ್ವಾಂಶ್ಚ ವರಾಂಸ್ತುಭ್ಯಂ ಪ್ರಯಚ್ಛತು ।
ತವ ಸಾಯುಜ್ಯಮುಕ್ತಿಶ್ಚ ಭೂಯಾದಂತೇ ನೃಪೇತಿ ಚ ॥ ೧೦೪ ॥

ಇತ್ಯಾಕರ್ಣ್ಯ ಮಹೀಪಾಲಸ್ತೇಷಾಮಾಶಿಷ ಮಿಷ್ಟದಂ ।
ಲಬ್ಧ್ವಾ ತಸ್ಯಾನುಗ್ರಹೇಣ ಪುತ್ರಂ ನಾಮ್ನಾರಿಮರ್ದನಂ ॥ ೧೦೫ ॥

ಸಂಘಸ್ಥೈಃ ಸಹಿತೋ ಭೂತ್ವಾ ಮಧ್ಯಾರಣ್ಯೇಶ್ವರೇಣ ಚ ।
ಅನುಭೂಯ ಸುಖಾನ್ಯೇವ ಕುಲೇಶ ಶ್ಚಿರಮೇಧತೇ ॥ ೧೦೬ ॥

ತದಾ ಪ್ರಭೃತಿ ತತ್ಕ್ಷೇತ್ರಂ ದಕ್ಷಿಣೇ ತಟಿನೀತಟೇ ।
ತದುತ್ತರಶ್ರೀಹಾಲಾಸ್ಯಮಿತಿ ಲೋಕೇಷು ಪಪ್ರಥೇ ॥ ೧೦೭ ॥

ಮಧ್ಯಾರಣ್ಯೇಶ್ವರಾರ್ಥಂ ಮದನಮಥನಕೃದ್ಯತ್ಕರೋತಿ ಪ್ರಸನ್ನಃ-
ತತ್ಸರ್ವಂ ಕರ್ಮಭಕ್ತ್ಯಾ ಪಠತಿ ಲಿಖತಿ ಯಃ ಶೃಣ್ವತೇ ಸಾದರಶ್ಚ ।

---

ಆಶೀರ್ವಾದದಿಂದ ಸಂತೋಷವಾಗಿ ಇದ್ದನು. ಸುಂದರೇಶ್ವರನ ಅನುಗ್ರಹದಿಂದ ಅರಿಮರ್ದನನೆಂದು ಹೆಸರುಳ್ಳ ಮಗನನ್ನು ಹೊಂದಿದನು. ಸಂಘದ ಕವೀಶ್ವರರು ಮತ್ತು ಮಧ್ಯಾರಣ್ಯಕವಿಯು ಇವರೊಡನೆ ರಾಜನು ಅನೇಕ ವಿಧವಾದ ಸುಖಗಳನ್ನು ಅನುಭವಿಸುತ್ತಿದ್ದನು.

೧೦೬–೧೦೮. ಆ ಕಾಲ ಮೊದಲುಗೊಂಡು ಕೃತಮಾಲಾನದಿಯ ದಕ್ಷಿಣ ತೀರದಲ್ಲಿರುವ ಕ್ಷೇತ್ರವು ಉತ್ತರ ಹಾಲಾಸ್ಯಕ್ಷೇತ್ರವೆಂದು ಲೋಕದಲ್ಲಿ ಪ್ರಸಿದ್ಧ ವಾಯಿತು. ಕಾಮನನ್ನು ನಿಗ್ರಹಿಸಿದ ಪರಮೇಶ್ವರನು ಮಧ್ಯಾರಣ್ಯೇಶ್ವರ ಕವಿ ಗೋಸ್ಕರ ಪ್ರಸನ್ನನಾಗಿ ಆಚರಿಸಿದ ಲೀಲೆಯನ್ನು ಭಕ್ತಿಯಿಂದ ಓದುವವರೂ,

ಪುತ್ರೈರ್ಮಿತ್ರೈಃ ಕಲತ್ರೈರ್ವಿವಿಧಪರಿಜನೈರ್ಭುಜ್ಯಭೋಗಾನ್ಸಮಸ್ತಾನ್-
ಭೂಮೌ ಭೂತಾದಿನಾಥಂ ಭಜತಿ ಪುನರಯಂ ಭೂತನಾಥೇ ಸುಖೇನ॥೧೦೮॥

ಯಾ ಷಟ್ಪಂಚಾಶಿಕಾ ಲೀಲಾ ಶಂಭೋಃ ಸೌಂದರ್ಯಶೇವಧೇಃ ।
ಸಾ ಪ್ರೋಕ್ತಾ ಸರ್ವಸೌಭಾಗ್ಯಸಂಪದಾರೋಗ್ಯದಾಯಿನೀ ॥ ೧೦೯ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಉತ್ತರಹಾಲಾಸ್ಯಪ್ರಾದುರ್ಭಾವೋ ನಾಮ
ದ್ವಿಷಷ್ಟಿತಮೋಽಧ್ಯಾಯಃ

---

ಬರೆಯುವವರೂ, ಕೇಳುವವರೂ , ಪುತ್ರ ಮಿತ್ರರು ಇವರೇ ಮೊದಲಾದರೊಡನೆ ಬಹಳ ವಿಧವಾದ ಭೋಗಗಳನ್ನು ಬಹಳ ಮಟ್ಟಿಗೆ ಅನುಭವಿಸಿ, ಅನಂತರದಲ್ಲಿ ಸುಖದಿಂದ ಭೂತನಾಥನಾದ ಪರಮೇಶ್ವರನಲ್ಲಿ ಐಕ್ಯರಾಗುವರು.

೧೦೯. ಸೌಂದರ್ಯದ ಪರಾಕಾಷ್ಠೆಯನ್ನು ಹೊಂದಿರುವ ಪರಮೇಶ್ವರನು ಆಚರಿಸಿರುವ, ಎಲ್ಲಾ ವಿಧವಾದ ಸೌಭಾಗ್ಯ, ಸಂಪತ್ತು, ಆರೋಗ್ಯ, ಇವೇ ಮೊದಲಾದವುಗಳನ್ನು ಉಂಟುಮಾಡುವ ಐವತ್ತಾರನೆಯ ಲೀಲೆಯು ಮುಗಿದಿರುವುದು. ಇದನ್ನು ನಿಮಗಾಗಿ ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಉತ್ತರಹಾಲಾಸ್ಯಪ್ರಾದುರ್ಭಾವವೆಂದು ಹೆಸರುಳ್ಳ ಅರವತ್ತೆರಡನೆಯ
ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ತ್ರಿಷಷ್ಟಿತಮೋಽಧ್ಯಾಯಃ

|| ಅಗಸ್ತ್ಯ ಉವಾಚ ||

ಕೈವರ್ತಕನ್ಯಕಾ ಪಾಣಿಗ್ರಹಣಂ ಕುರುತೇ ಯಯಾ ।
ಶ್ರೀಹಾಲಾಸ್ಯಪತಿಃ ಶಂಭುಸ್ತಾಂ ಲೀಲಾಂ ವೋ ವದಾಮ್ಯಹಂ || ೧ ||

ಹಾಲಾಸ್ಯವಾಸೀ ಭಗವಾನಂಬಿಕಾಪತಿರೀಶ್ವರಃ ।
ಪ್ರಾಹ ದೇವ್ಯೈ ಸುಮೀನಾಕ್ಷ್ಯೈ ವಿಜ್ಞಾನಂ ವೇದಶೀರ್ಷಜಂ || ೨ ||

ಅಪ್ಯಶ್ವಂತೀ ಲೀಲಯಾ ಚ ಸ್ವಾಲಸ್ಯಂ ಚ ತಥಾಕರೋತ್ ।
ಮದುಕ್ತಂ ನಾಶ್ರುಣೋಃ ಸಮ್ಯಕ್ಪುತ್ರಲಾಲನಲೀಲಯಾ || ೩ ||

---

### ಅರವತ್ತಮೂರನೆಯ ಅಧ್ಯಾಯವು

೧-೫. ಅಗಸ್ತ್ಯಋಷಿಯು ಹೇಳಿದನು :— ಶ್ರೀ ಹಾಲಾಸ್ಯ ಪತಿಯಾದ ಸುಂದರೇಶ್ವರನು ಬೆಸ್ತರ ಹುಡುಗಿಯನ್ನು ವಿವಾಹಮಾಡಿಕೊಂಡ ಲೀಲೆಯನ್ನು ಹೇಳುವೆನು. ಸುಂದರೇಶ್ವರನು ಮೀನಾಕ್ಷೀದೇವಿಗೆ ವೇದಾಂತ ಶಾಸ್ತ್ರದ ಜ್ಞಾನವನ್ನು ಉಪದೇಶ ಮಾಡುತ್ತಿದ್ದನು. ಆಗ ಆ ದೇವಿಯು ತನ್ನ ಮಕ್ಕಳನ್ನು ಆಟವಾಡಿಸುತ್ತಾ ಇರುವ ಲೀಲೆಯಿಂದ ಇದ್ದ ಕಾರಣ ಪರಮೇಶ್ವರನು ಉಪದೇಶಮಾಡುತ್ತಿರುವುದನ್ನು ಸರಿಯಾಗಿ ತಿಳಿದುಕೊಳ್ಳಲಿಲ್ಲ. ಆದ್ದರಿಂದ ನಾನು ಹೇಳುತ್ತಿರುವುದನ್ನು ಕೇಳದೆ,

ಕೈವರ್ತಸ್ಯ ಚ ರಕ್ಷಾರ್ಥಂ ಕಸ್ಯಚಿದ್ಭಕ್ತಿಶಾಲಿನಃ ।
ಸ್ವಾಮೀ ಸುಧರ್ಮನಾಮ್ನಶ್ಚ ವ್ಯಾಜೀಕೃತ್ಯ ಮಹೇಶ್ವರಃ ॥ ೪ ॥

ಅಶಪತ್ಸ್ವಪ್ರಿಯಾಂ ಚಾಪಿ ನಿಷ್ಕಾರಣ ಮಹೋ ದ್ವಿಜಾಃ ।
ಯನ್ಮದುಕ್ತಂ ತ್ವಾಗಮಾರ್ಥಂ ವಿಜ್ಞಾತಾ ತ್ವಂ ಮಹೇಶ್ವರಿ ॥ ೫ ॥

ನ ಶೃಣೋಷಿ ಸುಭಕ್ತ್ಯಾ ತ್ವಂ ತಸ್ಮಾದ್ಗರ್ವಯುತಾಸಿ ಹಿ ।
ನಿಕೃಷ್ಟಜಾತ್ಯಾಂ ಜಾಯೇಥಾ ಇತಿ ಶಂಭುಸ್ಸ ಶಪ್ತವಾನ್ ॥ ೬ ॥

ತದಾ ವಿನಾಯಕೋಽಭ್ಯೇತ್ಯ ಕುಪಿತಃ ಶುಂಡಯಾ ಜವಾತ್ ।
ಚಿಕ್ಷೇಪಾದಾಯ ಜಲಧೌ ಸರ್ವಾನ್ ಸಚ್ಛಾಸ್ತ್ರಪುಸ್ತಕಾನ್ ॥ ೭ ॥

ಕ್ರುದ್ಧೇ ಸತಿ ಮಹಾದೇವೇ ಮಹಾಸೇನ ಸ್ಸಮಾಗತಃ ।
ಶಪ್ತಾಂ ದೃಷ್ಟ್ವಾ ಮಾತರಂ ಚ ಕುಪಿತೋ ನಿತರಾಮಪಿ ॥ ೮ ॥

---

ಭಕ್ತನಾದ ಸುಧರ್ಮನೆಂದು ಹೆಸರುಳ್ಳ ಯಾವನೋ ಒಬ್ಬ ಬೆಸ್ತರವನನ್ನು ರಕ್ಷಿಸುವುದಕ್ಕಾಗಿ ದೇವಿಯು ವ್ಯಗ್ರಳಾಗಿರುವಳೆಂದು ಪರಮೇಶ್ವರನು ತಿಳಿದುಕೊಂಡನು. ಬಹಳ ಧರ್ಮಿಷ್ಠನಾದರೂ ಅವನು ಯಾವುದೋ ಒಂದು ನೆವದಿಂದ ನಿಷ್ಕಾರಣವಾಗಿ ತನ್ನ ಪ್ರೀತಿಗೆ ಪಾತ್ರಳಾದ ದೇವಿಯನ್ನು ಶಪಿಸಿದನು.

೬–೯. "ಎಲೈ ಮಹೇಶ್ವರಿಯೆ, ನಾನು ಹೇಳುತ್ತಿರುವ ಶಾಸ್ತ್ರಾರ್ಥವನ್ನು ನೀನು ಕೇಳಲಿಲ್ಲ. ಮತ್ತು ತಿಳಿದುಕೊಳ್ಳಲಿಲ್ಲ. ನೀನು ಆದರದಿಂದ ತಿಳಿಯದೇ ಇರಲು ನಿನ್ನ ಅಹಂಕಾರವೇ ಇದಕ್ಕೆ ಕಾರಣವಾಗಿರುವುದು. ಆದ್ದರಿಂದ ನೀನು ಕೀಳು ಜಾತಿಯಲ್ಲಿ ಜನ್ಮವನ್ನು ಹೊಂದು." ಎಂದು ಪರಮೇಶ್ವರನು ದೇವಿಗೆ ಶಾಪವನ್ನು ಕೊಟ್ಟನು. ಇದನ್ನು ಕೇಳಿದ ವಿನಾಯಕನು ದೇವದೇವನಾದ ಪರಮೇಶ್ವರನ ಹತ್ತಿರಕ್ಕೆ ಬಂದು ತನ್ನ ಸೊಂಡಲಿನಿಂದ ಶಾಸ್ತ್ರಗ್ರಂಥಗಳೆಲ್ಲವನ್ನೂ ತೆಗೆದುಕೊಂಡು ಬೇಗನೆ ಸಮುದ್ರಕ್ಕೆ ಹಾಕಿದನು. ಮಹಾದೇವನಿಗೆ ಕೋಪವು ಬಂದಿರುವುದನ್ನು ತಿಳಿದು ಷಣ್ಮುಖನು ಬಂದು ನೋಡಿ, ತಾಯಿಗೆ ಶಾಪವನ್ನು ಕೊಟ್ಟ ಕಾರಣ

ವಿಜ್ಞಾನೇ ಶ್ರೂಯಮಾಣೇ ಹಿ ಸರ್ವೇಷಾಂ ಪ್ರಾಣಿನಾಂ ಧ್ರುವಂ ।
ಅಲಸ್ಯಂ ಜಾಯತೇ ಕಿಂಚಿದ್ವೃಥಾ ಶಪಸಿ ಮಾತರಂ ॥ ೯ ॥

ಇತ್ಯುಕ್ತ್ವೋತ್ಪಾಟಯಾಮಾಸ ಪುಸ್ತಕಂ ಶಿವಹಸ್ತಗಂ ।
ತಂ ದೃಷ್ಟ್ವಾ ಕುಪಿತಸ್ತೋಽಪಿ ಶಂಭುಃ ಕೋಪಾಕುಲಸ್ತದಾ ॥ ೧೦ ॥

ಮೂಕೋ ಭವೇತಿ ತಂ ಕೋಪಾಚ್ಛಶಾಪಾತ್ಮಜಮುಷ್ಯಥ ।
ಕಸ್ಯಚಿದ್ವೈಶ್ಯವರ್ಯಸ್ಯ ಮಧುರಾಪುರವಾಸಿನಃ ॥ ೧೧ ॥

ರುದ್ರಶರ್ಮಾಭಿಧೋ ಜಜ್ಞೇ ಶಾಪೇನ ಶಿಖಿವಾಹನಃ ।
ತಚ್ಛಾಪಕಾಲೇ ನಂದೀ ಚ ಸಮೀಪಂ ಚಾಗತೋ ವಿಭೋಃ ॥ ೧೨ ॥

ತಂ ದೃಷ್ಟ್ವಾ ಕೋಪಯುಕ್ತೋಽಸೌ ಸ್ವಲೀಲಾಪೂರಣಾಯ ಹಿ ।
ಶಶಾಪ ನಂದಿನಂ ಚಾಬ್ಧೌ ಮತ್ಸ್ಯೋ ಭವ ಭವಾನಿತಿ ॥ ೧೩ ॥

---

ಕೋಪದಿಂದ "ವೇದಾಂತ ಜ್ಞಾನೋಪದೇಶ ಸಮಯದಲ್ಲಿ ಎಲ್ಲಾ ಪ್ರಾಣಿಗಳಿಗೂ ಸೋಮಾರಿತನವು ಬರುವುದು, ಸ್ವಭಾವವಾಗಿರುವುದು. ಹೀಗಿರುವಲ್ಲಿ ನಿಷ್ಕಾರಣವಾಗಿ ನಮ್ಮ ತಾಯಿಗೆ ನೀನು ಶಾಪವನ್ನು ಕೊಟ್ಟಿರುತ್ತೀಯೆ" ಎಂದು ತಂದೆಯನ್ನು ಆಕ್ಷೇಪಿಸಿ, ಅವನ ಹಸ್ತಗತವಾದ ಪುಸ್ತಕವನ್ನು ಕಿತ್ತುಕೊಂಡನು.

೧೦–೧೩. ಇದರಿಂದ ಮಹೇಶ್ವರನಿಗೆ ಕೋಪವು ಇನ್ನೂ ಹೆಚ್ಚಾಯಿತು. ಆಗ ಅವನು "ಷಣ್ಮುಖನನ್ನು ಮೂಗನಾಗಿ ಜನ್ಮವನ್ನು ಹೊಂದು" ಎಂದು ಮಗನಿಗೂ ಶಾಪವನ್ನು ಕೊಟ್ಟನು. ಆಗ ಮಧುರಾನಗರದಲ್ಲಿ ವಾಸವಾಗಿರುವ ವೈಶ್ಯನಿಗೆ ಮಗನಾಗಿ ಷಣ್ಮುಖನು ಶಿವನ ಶಾಪದಿಂದ ರುದ್ರಶರ್ಮನೆಂಬ ಹೆಸರಿನಿಂದ ಹುಟ್ಟಿದನು. ಈಶ್ವರನಿಗೆ ಕೋಪವು ಇನ್ನೂ ಹಾಗೆಯೇ ಇರುವಾಗ ನಂದಿಯು ಶಿವನ ಹತ್ತಿರಕ್ಕೆ ಬಂದನು. ಅವನನ್ನು ನೋಡಿ ಈಶ್ವರನು ತನ್ನ ಲೀಲೆಯು ಸಂಪೂರ್ಣವಾಗಿ ನಡೆಯುವುದಕ್ಕಾಗಿ "ನೀನು ಸಮುದ್ರದಲ್ಲಿ ಮೀನಿನ ರೂಪದಿಂದ ಜನ್ಮವನ್ನು ಹೊಂದು" ಎಂದು ನಂದೀಶ್ವರನಿಗೂ ಶಾಪವನ್ನು ಕೊಟ್ಟು ಶಾಪಕೊಡಲು ಕಾರಣವಾದ ಕೋಪದ ವೇಗವನ್ನು ಪೂರ್ಣಮಾಡಿದನು.

ಮತ್ಸ್ಯೋ ಭೂತ್ವಾ ಮಹಾನಂದೀ ಸೇತುಬಂಧಸಮೀಪತಃ ।
ಚಚಾರ ಸಾಗರೇ ಚಾನ್ಯಾನ್ ಕ್ಷುದ್ರಮತ್ಸ್ಯಾನ ಭಕ್ಷಯನ್ ॥ ೧೪ ॥

ವಿಘ್ನೇಶೇನ ಪುರಾಕ್ಷಿಪ್ತಾನ್ಯಬಲೀಕೃತ್ಯ ಪುಸ್ತಕಾನ್ ।
ವರ್ತತೇ ವಾರಿಧೌ ನಂದೀ ಧ್ಯಾತ್ವೇಶಂ ಶಾಪಮುಕ್ತಯೇ ॥ ೧೫ ॥

ಕಸ್ಯಚಿದ್ಭಾಗ್ಯಯುಕ್ತಸ್ಯ ಶಂಭುಭಕ್ತಿಯುತಸ್ಯ ಚ ।
ಸ್ವಧರ್ಮನಿರತಸ್ಯಾಥ ಸಮುದ್ರತಟವಾಸಿನಃ ॥ ೧೬ ॥

ಸ್ವಾಂಗೇನ ಪಾರ್ವತೀ ದೇವೀ ಧೀವರಸ್ಯ ಸುತಾಭವತ್ ।
ಜಾಲೇ ಪ್ರಸಾರಿತೇಽಬ್ಧೌ ತು ಮತ್ಸ್ಯಾರ್ಥಂ ಧೀವರೇಣ ತು ॥ ೧೭ ॥

ದಕ್ಷಿಣಾವರ್ತಕಃ ಶಂಖೋ ಮತ್ಸ್ಯೈಸ್ಸಾಕಮವಾಪ್ತವಾನ್ ।
ತಂ ಹಸ್ತೇನ ಗೃಹೀತ್ವಾ ತು ಧೀವರೋ ಮುಮುದೇ ಪುನಃ ॥ ೧೮ ॥

---

೧೪-೧೫. ನಂದೀಶ್ವರನು ರಾಮಸೇತುವಿನ ಹತ್ತಿರದಲ್ಲಿಯೇ ಸಾಗರದಲ್ಲಿ ದೊಡ್ಡ ಮೀನಿನ ಆಕಾರದಿಂದ ಇರುತ್ತಾ ಕ್ಷುದ್ರವಾದ ಜಲಚರಪ್ರಾಣಿಗಳನ್ನೂ, ಮೀನುಗಳನ್ನೂ ತಿನ್ನುತ್ತಾ ಇದ್ದನು. ವಿನಾಯಕನು ಸಮುದ್ರಕ್ಕೆ ಹಾಕಿದ ಶಾಸ್ತ್ರ ಗ್ರಂಥಗಳೆಲ್ಲವನ್ನೂ ತಿಂದು, ನಂದೀಶ್ವರನು ಸಮುದ್ರದ ಮಧ್ಯದಲ್ಲಿಯೇ ತನಗೆ ಶಾಪದಿಂದ ಬಿಡುಗಡೆಯಾಗುವುದಕ್ಕಾಗಿ ಶಿವನನ್ನು ಧ್ಯಾನಮಾಡುತ್ತಿದ್ದನು.

೧೬-೨೦. ಪಾರ್ವತೀದೇವಿಯು ಅವನು ಶಿವನಲ್ಲಿ ಬಹಳ ಭಕ್ತಿಯುಳ್ಳವನಾಗಿದ್ದ ಕಾರಣ ಅದೃಷ್ಟಶಾಲಿಯಾಗಿ, ತನ್ನ ಧರ್ಮವನ್ನು ಆಚರಿಸುತ್ತಾ, ಸಮುದ್ರ ತೀರದಲ್ಲಿ ವಾಸಮಾಡುತ್ತಿದ್ದ ಆ ಬೆಸ್ತರವನ ಮಗಳಾಗಿ ಹುಟ್ಟಲು ನಿಶ್ಚಯ ಮಾಡಿದಳು. ಆ ಬೆಸ್ತರವನು ಸಮುದ್ರದಲ್ಲಿ ಮೀನನ್ನು ಹಿಡಿಯಲು ಬಲೆಯನ್ನು ಹಾಕಿದಾಗ ಮೀನಿನ ಜೊತೆಯಲ್ಲಿ ದಕ್ಷಿಣಾವರ್ತ ಶಂಖವು ಅವನಿಗೆ ದೊರೆಯಿತು. ಅವನು ತನ್ನ ಹಸ್ತದಲ್ಲಿ ಅದನ್ನು ಇರಿಸಿಕೊಂಡು ಸಂತೋಷಪಡುತ್ತಿರುವಾಗ ಅದು ಆ ಕ್ಷಣದಲ್ಲಿಯೇ, ಬಹಳ ಸುಂದರಿಯಾದ ಒಂದು ಹೆಣ್ಣು

**ಅತಿರೂಪವತೀ ಕನ್ಯಾ ಅಭವತ್ತತ್ಕ್ಷಣಾತ್ಕಿಲ ।**
**ತಾಮಾದಾಯ ಮುದಾ ಕನ್ಯಾಂ ಸ್ವಪತ್ನ್ಯೈ ದತ್ತವಾನ್ಸ ಚ॥ ॥ ೧೯ ॥**

**ಸಾ ಗೃಹೀತ್ವಾ ಚ ತಾಂ ಕನ್ಯಾಂ ಪುತ್ರೀ ದತ್ತಾಂಬಯಾ ಮಮ ।**
**ಅಪುತ್ರಾಯಾಃ ಕೃಪಾಮೇತ್ಯ ಹ್ಯನೇನಾಹಂ ಕೃತಾರ್ಥತಾಂ ॥ ೨೦ ॥**

**ಪ್ರಾಪ್ತಾಸ್ಮೀತಿ ಸುಸಂತೋಷಾದಾಲಿಂಗ್ಯ ಪುಲಕಾಂಚಿತಾ ।**
**ಗೋಕ್ಷೀರದಾನಾನ್ಮೃದ್ವಂಗೀ ವರ್ಧಯಾಮಾಸ ನಿತ್ಯಶಃ ॥ ೨೧ ॥**

**ವರ್ಧಿತಾ ಚ ತಯಾ ಕನ್ಯಾ ಪಿತೃಭ್ಯಾಂ ಲಾಲಿತಾ ಗೃಹೇ ।**
**ರೂಪಸೌಭಾಗ್ಯಸಂಪನ್ನಾ ದಶಾಹಾದ್ಯೌವನಾನ್ವಿತಾ ॥ ೨೨ ॥**

**ದೃಷ್ಟ್ವಾ ವಿಸ್ಮಯಮಾಪನ್ನಾಸ್ಸರ್ವೇ ತಾಮಸ್ತುವರ್ ಜನಾಃ ।**

---

ಮಗುವಿನ ಆಕಾರವನ್ನು ಹೊಂದಿತು. ಅವನು ಆ ಮಗುವನ್ನು ಸಂತೋಷದಿಂದ ತನ್ನ ಹೆಂಡತಿಯ ವಶಕ್ಕೆ ಕೊಟ್ಟನು. ಅವಳು " ಮಕ್ಕಳಿಲ್ಲದ ನನಗೆ ಪರಮೇಶ್ವರಿಯು ಹೆಣ್ಣು ಮಗಳನ್ನು ಅನುಗ್ರಹಿಸಿದಳು. ಈಮಗುವಿನಿಂದ ನಾನು ಕೃತಾರ್ಥಳಾಗುವೆನು " ಎಂದು ಸಂತೋಷದಿಂದ ಆ ಮಗುವನ್ನು ತಬ್ಬಿಕೊಂಡು ರೋಮಾಂಚಿತ ಶರೀರಳಾಗಿ ಬಹಳ ಪ್ರೀತಿಯಿಂದ ಹಸುವಿನ ಹಾಲನ್ನು ಆ ಮಗುವಿಗೆ ಹಾಕಿ ಪೋಷಿಸುತಾ ಇದ್ದಳು.

೨೧–೨೨. ಬಹಳ ಸುಕುಮಾರವಾದ ಅಂಗವುಳ್ಳ ಆ ಮಗುವು ತಂದೆತಾಯಿಗಳ ಲಾಲನೆಯಿಂದ ದಿನೇ ದಿನೇ ವೃದ್ಧಿಯನ್ನು ಹೊಂದುತ್ತಾ ಬಹಳ ಸೌಂದರ್ಯ ವುಳ್ಳದ್ದಾಗಿ ಹತ್ತು ದಿನಗಳಲ್ಲಿಯೇ ಯೌವನವನ್ನು ಹೊಂದಿತು. ಯೌವನವು ಬಂದಾಗ ಇರುವ ಬುದ್ಧಿ ಮತ್ತು ಶರೀರಾಭಿವೃದ್ಧಿಗಳನ್ನು, ಹತ್ತು ದಿನಗಳಲ್ಲಿಯೇ ಹೊಂದಿ ಇರುವ ಆ ಬಾಲೆಯನ್ನು ನೋಡಿದ ಜನರೆಲ್ಲರೂ ಆಶ್ಚರ್ಯದಿಂದ ಅವಳನ್ನು ಶ್ಲಾಘಿಸುತ್ತಿದ್ದರು.

ತಯಾ ವಿನಾ ಸ್ಥಾತುಮಶಕ್ತ ಈಶಃ ।
ಕೈವರ್ತರೂಪಂ ಸಹಸಾ ಚ ಧೃತ್ವಾ ।
ಸಮಾಯಯೌ ತಸ್ಯ ಚ ಜಾಲಿಕಸ್ಯ-
ಸನ್ಮಂಗಳಂ ಮಂದಿರಮಂಬಿಕಾಯುತಂ ॥ ೨೩ ॥

ಕಸ್ಮೈ ಚ ದೇಯಾ ತನಯಾಭಿವೃದ್ಧಾ-
ಸಾಶ್ಚರ್ಯರೂಪಾ ಯುವತೀ ಮಯಾ ಚ ।
ಇತಿ ಚಿಂತಾಪರೇ ತಸ್ಮಿನ್ಜಾಲಿಕೇ ಚ ಗೃಹಂ ಗತೇ ॥ ೨೪ ॥

ಹೇ ಜಾಲಿಕ ತ್ವಂ ತನಯಾಂ ಚ ಮಹ್ಯಂ
ದೇಹಿ ತ್ವದಿಯಾಮನವದ್ಯರೂಪಾಂ ॥
ಅಹಂ ಚ ತತ್ಪಾಣಿವರಂ ಗೃಹೀತುಂ-
ಸಮಾಗತ ಸ್ಸದ್ವಲಯಾಭಿರಾಮಂ ॥ ೨೫ ॥

---

೨೩–೨೫. ಪರಮೇಶ್ವರನಿಗೆ ಮಂಗಳಮೂರ್ತಿಯಾದ ಪಾರ್ವತೀ ದೇವಿಯನ್ನು ಬಿಟ್ಟು ಇರಲು ಆಗಲಿಲ್ಲ. ಆದ್ದರಿಂದ ಅವನು ಕೂಡಲೆ ತಾನೂ ಬೆಸ್ತರವನ ಆಕಾರವನ್ನು ಧರಿಸಿದನು. ಜಗನ್ಮಾತೆಯಾದ ಪಾರ್ವತಿಯು ಇರುವ ಮಂಗಳಕರವಾದ ಮನೆಯನ್ನು ಹುಡುಕಿಕೊಂಡು ಬೆಸ್ತರವನ ಮನೆಗೆ ಈಶ್ವರನು ಬಂದನು. ಆ ಕಾಲಕ್ಕೆ ಸರಿಯಾಗಿ ಬೆಸ್ತರವನು "ಪ್ರಾಯದಿಂದ ಇರುವ, ಬಹಳ ಸುಂದರಿಯಾದ, ನನ್ನ ಈ ಮಗಳನ್ನು ಯಾರಿಗೆ ದಾನಮಾಡಿ ವಿವಾಹವನ್ನು ನೆರವೇರಿಸಲಿ" ಎಂದು ಯೋಚಿಸುತ್ತಾ ಇದ್ದನು. ಇವನು ಯೋಚನೆಯನ್ನು ಮಾಡುತ್ತಿರುವ ಸಮಯಕ್ಕೆ ಸರಿಯಾಗಿ ಬೆಸ್ತರವನ ವೇಷದಿಂದ ಇರುವ ಪರಮೇಶ್ವರನು "ಎಲೈ ಬಲೆಗಾರನೆ. ನಿನ್ನ ಮಗಳು ಬಹಳ ರೂಪವತಿಯಾಗಿರುವಳು. ನನಗೆ ಅವಳನ್ನು ಕೊಟ್ಟು ಮದುವೆಯನ್ನು ಮಾಡು. ನಾನು ಕಡಗವೇ ಮೊದಲಾದ ಆಭರಣದಿಂದ ಮನೋಹರವಾದ ಅವಳ ಪಾಣಿಯನ್ನು ಗ್ರಹಣಮಾಡುವ ಉದ್ದೇಶದಿಂದ ವಿವಾಹಕ್ಕಾಗಿಯೇ ಬಂದಿರುತ್ತೇನೆ" ಎಂದು ಹೇಳಿದನು.

ಇತ್ಯುಕ್ತವಂತಂ ಕಮನೀಯಗಾತ್ರಂ-
ವಿಲೋಕ್ಯ ವಿಶ್ವಾಧಿಕಮೀಶ್ವರಂ ತಂ ।
ಪಪ್ರಚ್ಛ ಕಸ್ತ್ವಂ ಕುತ ಆಗತೋಽಸಿ-
ಕಾ ಶಕ್ತಿರಿತ್ಯೇವ ಸ ಜಾಲಿಕಶ್ಚ ॥ ೨೬ ॥

ಶ್ರುತ್ವಾ ವಚಸ್ತಸ್ಯ ತು ಜಾಲಿಕಸ್ಯ-
ಸ ಸುಂದರೇಶಃ ಕರುಣಾನಿವಾಸಃ ।
ಕ್ರಮೇಣ ತತ್ಸರ್ವಮುವಾಚ ವಾಚಾ-
ದಂತಪ್ರಭಾನಿರ್ಜಿತಚಂದ್ರಿಕಸ್ಸನ್ ॥ ೨೭ ॥

ಅಹಂ ತು ದಾಶಾನ್ವಯನಾಯಕಸ್ಯ-
ಮಹಾನ್ಕುಮಾರೋ ಮಧುರಾನಿವಾಸೀ ॥
ತಸ್ಯಾ ನಗರ್ಯಾಶ್ಚ ಸಮಾಗತೋಽಸ್ಮಿ-
ಸಮಸ್ತಸೌಭಾಗ್ಯಸಮನ್ವಿತಾಯಾಃ ॥ ೨೮ ॥

---

೨೬–೩೦ ಕನ್ಯಾತಂದೆಯಾದ ಬೆಸ್ತರವನು, ಬಹಳ ಸುಂದರನಾಗಿ ಶಕ್ತಿವಂತನಾಗಿ, ಪ್ರಪಂಚಕ್ಕೆಲ್ಲಕ್ಕೂ ಮೀರಿ ಇರುವ ಹಾಗೆ ಕಾಣುತ್ತಿದ್ದ ಅವನನ್ನು ನೋಡಿ, “ನೀನು ಯಾರು? ಎಲ್ಲಿಂದ ಇಲ್ಲಿಗೆ ಬಂದಿರುತ್ತೀಯೆ? ನಿನ್ನ ಸಾಮರ್ಥ್ಯವೇನು?” ಎಂದು ಕೇಳಿದನು. ಅದನ್ನು ಕೇಳಿ ದಯಾನಿಧಿಯಾದ ಸುಂದರೇಶ್ವರನು ತನ್ನ ಹಲ್ಲಿನ ಕಾಂತಿಯಿಂದ ಬೆಳದಿಂಗಳನ್ನು ತಿರಸ್ಕರಿಸುತ್ತಿರುವವನಾಗಿ “ನಾನು ಮಧುರಾನಗರದಲ್ಲಿ ವಾಸಮಾಡುವವನು. ಆ ಬೆಸ್ತರ ಯಜಮಾನನಾದ ಹಿರಿಯ ಮಗನು. ಬಹಳ ಐಶ್ವರ್ಯದಿಂದ ತುಂಬಿರುವ ಆ ನಗರದಿಂದ ಇಲ್ಲಿಗೆ ಬಂದಿರುತ್ತೇನೆ. ಸಮುದ್ರದಲ್ಲಿರುವ ಪ್ರಾಣಿಗಳು ಎಷ್ಟೇ ದೊಡ್ಡವುಗಳಾಗಿದ್ದರೂ ಅವುಗಳನ್ನು ಹಿಡಿಯುವ ಶಕ್ತಿಯು ನನಗೆ ಇರುವುದು. ನಾನು ಪ್ರಪಂಚವೆಲ್ಲವನ್ನೂ ಸೃಷ್ಟಿ ಮಾಡಿ, ರಕ್ಷಿಸಿ, ನಾಶಮಾಡುವಂತೆ ಇತರರು ಯಾರೂ ಮಾಡಲಾರರು. ನನಗೆ ಜನನ ಮರಣಗಳು ಇಲ್ಲ. ನಾನು ಎಲ್ಲಕ್ಕೂ ಅಧಿಪತಿಯಾಗಿದ್ದೇನೆ. ನಿನ್ನ ಮಗಳನ್ನು

ಮಮಾಸ್ತಿ ಶಕ್ತಿರ್ಮಹತೀ ಮಹಾತ್ಮನ್-
ಮಹಾಂತಿ ರೂಪಾಣಿ ಪರಿಗ್ರಹೀತುಂ ॥
ಸ್ರಷ್ಟುಂ ಜಗತ್ಸರ್ವಮಥಾಪಿ ರಕ್ಷಿತುಂ-
ಸಂಹರ್ತುಮಂತೇ ಸದೃಶೋ ಮಯಾ ನ ಹಿ ॥ ೨೯ ॥

ನಿತ್ಯೋಽಹಮೀಶೋ ವ್ಯತಿವರ್ಜಿತಶ್ಚ-
ತ್ವತ್ಕನ್ಯಕಾಯಾ ಅನುರೂಪರೂಪಃ ।
ತ್ವತ್ಕನ್ಯಕಾಯಾ ಗುಣರೂಪಸಂಪದಂ
ಶ್ರುತ್ವಾ ಗತ ಸ್ತೇಂತಿಕಮದ್ಯ ಧೀವರ ॥ ೩೦ ॥

ಇತಿ ಬ್ರುವಂತಂ ಭಗವಂತ ಮೀಶಂ-
ಸಮೀಕ್ಷ್ಯ ಸೌಂದರ್ಯನಿಧಿಂ ಮಹೇಶಂ ॥
ದಾತುಂ ಚ ತಸ್ಮೈ ಕಮನೀಯವೇಷಾಂ-
ಕನ್ಯಾಂ ವಿನಿಶ್ಚಿತ್ಯ ಮನಸ್ಯಥಾಬ್ರವೀತ್ ॥ ೩೧ ॥

ತರ್ಹಿ ವಾಕ್ಯಂ ನ ವಿಶ್ವಸ್ಯಂ ತ್ವತ್ಕೃತ್ಯಂ ದರ್ಶಯಾಶು ನಃ ।
ಇತ್ಯುಕ್ತೇ ಸತಿ ಕೈವರ್ತೇ ತಥಾಸ್ತ್ವಿತ್ಯವದ ಸ್ಮದಾ ॥ ೩೨ ॥

---

ಮದುವೆಯಾಗಲು ತಕ್ಕ ರೂಪವಂತನಾದ ವರನಾಗಿ ನಾನು ಇರುತ್ತೇನೆ. ನಿನ್ನ ಮಗಳ ಗುಣ, ಸೌಂದರ್ಯ, ಐಶ್ವರ್ಯ, ಇವೆಲ್ಲವನ್ನೂ ಕೇಳಿ ಈಗ ನಿನ್ನ ಹತ್ತಿರಕ್ಕೆ ನಾನು ಬಂದಿದ್ದೇನೆ. " ಎಂದು ಉತ್ತರವನ್ನು ಹೇಳಿದನು.

೩೧–೩೨. ಕನ್ಯೆಯ ತಂದೆಯಾದ ಬೆಸ್ತರವನು ಅವನ ಮಾತುಗಳನ್ನು ಕೇಳಿದನು. ವರನಾಗಿ ಬಂದಿರುವವನು ಬಹಳ ಸುಂದರನಾಗಿ ಪೂಜೆಗೆ ಅರ್ಹನಾಗಿರುವಂತೆ ತಿಳುವಳಿಕೆಯು ಉಂಟಾಯಿತು. ಅದರಿಂದ ಬಹಳ ರೂಪವತಿಯಾದ ತನ್ನ ಮಗಳನ್ನು ಅವನಿಗೆ ಕೊಡುವುದಕ್ಕೆ ನಿಶ್ಚಯಮಾಡಿ, " ನಿನ್ನ ಮಾತಿನಂತೆ ನೀನು ಕೆಲಸವನ್ನು ಮಾಡಿ ತೋರಿಸು " ಎಂದು ಹೇಳಿದನು. ಅದನ್ನು ಕೇಳಿ " ಹಾಗೆ ಆಗಲಿ " ಎಂದು ಅವನು ಉತ್ತರವನ್ನು ಕೊಟ್ಟನು.

ಮಧುರಾಪುರವಾಸೀ್ಯಶೋ ಧೀವರಾಣಾಮಧೀಶ್ವರಃ ।
ಮಹಾಮಾಯಾಮಯಂ ಜಾಲಂ ಗುಣತ್ರಯವಿಚಿತ್ರಿತಂ ॥ ೩೩ ॥

ಆದದೇ ಸ್ವಯಮೀಶಾನಸ್ಸ್ವಗಣಸ್ಕಂದಧಾರಿತಂ ।
ತ್ವದೀಯೈರ್ಧೀವರೈಃ ಸರ್ವೈಃ ಪಿತೃಸ್ಯೈತಾಮಹಾದಿಭಿಃ ॥ ೩೪ ॥

ಅಶಕ್ತಂ ಚ ಗೃಹೀತುಂ ಮೇ ಮಹಾಜಾಲಂ ಹಿ ಧೀವರ ।
ಇದಂ ಪ್ರಸಾರಿತುಂ ಜಾಲಂ ಮಮ್ಯೈವಾಸ್ತಿ ಬಲಂ ಮಹತ್ ॥ ೩೫ ॥

ಮತ್ಸ್ಯಾ ಮಹಾಂತಃ ಕುತ್ರ ಸ್ಯುರ್ಗ್ರಹೀಷ್ಯಾಮಿ ಬಲಾದ್ಬಹೂನ್ ।
ಶುಶ್ರಾವಾಜ್ಞ ಇವಾದ್ರೀಶಕನ್ಯಕಾಪತಿರೀಶ್ವರಃ ॥ ೩೬ ॥

ಬ್ರುವಂತು ಯೂಯಂ ಮುದಧೌ ಮಧ್ಯಸ್ಥಾನಪಿ ಚಾನಯೇ ।
ತೇ ತು ಜಾಲಂ ಮಹಾಂತಂ ತಂ ನ ಶೇಕುಶ್ಚಲಿತಂ ಚ ಹಿ ॥ ೩೭ ॥

---

೩೩–೩೬. ಮಧುರಾನಗರದ ನಿವಾಸಿಯಾದ ಆ ಬೆಸ್ತರವನು ಬೆಸ್ತರೆಲ್ಲರಿಗೂ ಅಧಿಪತಿಯಾದ ಕಾರಣ, ತನ್ನ ಗುಂಪಿನವರು ಮಾಡಿರುವ ದೊಡ್ಡದಾದ ಮೂರು ಹಗ್ಗದಿಂದ ಮಾಡಿರುವ ಗಟ್ಟಿಯಾದ ಬಲೆಯನ್ನು ತನ್ನ ಗುಂಪಿನವರ ಹೆಗಲ ಮೇಲೆ ಇರಿಸಿಕೊಂಡು "ಎಲೈ ಧೀವರನೆ, ನಿಮ್ಮ ತಂದೆ, ಅಜ್ಜ, ಇವರು ಯಾರೂ ಈ ಬಲೆಯನ್ನು ಹಿಡಿಯಲಾರರು. ಇದನ್ನು ಬೀಸುವುದಕ್ಕೆ ತಕ್ಕಷ್ಟು ಶಕ್ತಿಯು ನನಗೆ ಮಾತ್ರ ಇರುವುದು. ದೊಡ್ಡ ಮೀನುಗಳು ಎಲ್ಲಿರುವುವು. ನಾನು ಅವುಗಳನ್ನು ನನ್ನ ಶಕ್ತಿಯಿಂದ ಹಿಡಿಯುವೆನು. ಸಮುದ್ರದ ಮಧ್ಯದಲ್ಲಿ ಅವುಗಳು ಇದ್ದರೂ ಆ ಮೀನುಗಳನ್ನು ನಾನು ಹಿಡಿದು ತರುವೆನು. ನೀವೆಲ್ಲರೂ ನನಗೆ ಹೇಳಿರಿ" ಎಂದು ಪಾರ್ವತೀಪತಿಯಾದ ಪರಮೇಶ್ವರನು ಏನನ್ನೂ ತಿಳಿಯದವನಂತೆ, ಅವರನ್ನು ಕೇಳಿದನು.

೩೭–೪೦. ಆಗ ಅವರೆಲ್ಲರೂ ಆ ಬಲೆಯನ್ನು ನೋಡಿದರು. ಅದನ್ನು ಅಲ್ಲಾಡಿಸುವುದಕ್ಕೂ ಅವರಿಂದ ಆಗದೆ ಹೋಯಿತು. ಆಗ ಅವರೆಲ್ಲರೂ "ಸಮುದ್ರದಲ್ಲಿ ಮೀನುಗಳು ಇರುವುವು. ಅವುಗಳಲ್ಲಿ ಬಹಳ ಭಯಂಕರವಾದ ಒಂದು ಮೀನು

ತೇ ತ್ವಾಹುಸ್ನಾಗರೇ ಸಂತಿ ಮತ್ಸ್ಯಾಸ್ತೇಷು ತು ಕಶ್ಚನ ।
ಭೀಷಣಃ ಪರ್ವತಾಕಾರಃ ಕಬಲೀಕೃತ್ಯ ಪುಸ್ತಕಾನ್ ॥ ೩೮ ॥

ದಂಷ್ಟ್ರಾಭಿರ್ವಜ್ರತುಲ್ಯಾಭಿ ಶ್ಚೂರ್ಣೀಕೃತ್ಯ ಗಿರೀನಪಿ ।
ಸಮುದ್ರಚಾರಿಣೋ ನಾವಶ್ಚೂರ್ಣೀಕೃತ್ಯ ಚ ಭಂಜಯನ್ ॥ ೩೯ ॥

ಮದೋದ್ಧತ ಸ್ಸಂಚರತಿ ವಾಯುವೇಗಸಮನ್ವಿತಃ ।
ಗೃಹೀತವಾನ್ಯದಿ ತ್ವಂ ತು ದಾಸ್ಯಾಮಿ ತವ ಕನ್ಯಕಾಂ ॥ ೪೦ ॥

ಮದಿಯಾಂ ಸತ್ಯಮೇವೇಹ ವದಿಷ್ಯಾಮೀತಿ ಸೋಽಬ್ರವೀತ್ ।
ತೈರೇವಮುಕ್ತೇ ತೇನಾಪಿ ಜಾಲಿಕೇನ ಸ ಈಶ್ವರಃ ॥ ೪೧ ॥

ಸ್ವಕೀಯಾಂ ವಾಗುರಾಂ ಚಾಪಿ ಗೃಹೀತ್ವಾ ಸ್ಕಂಧದೇಶತಃ ।
ತೈರ್ಜಾಲಿಕಗಣೈಶ್ಚಾಯಂ ಸಿಂಧುತೀರಂ ಗತಃ ಕ್ಷಣಾತ್ ॥ ೪೨ ॥

---

ಇರುವುದು. ಅದು ಪುಸ್ತಕಗಳೆಲ್ಲವನ್ನೂ ತಿಂದು ಇರುವುದು. ಬೆಟ್ಟದಷ್ಟು ಗಾತ್ರವಾಗಿರುವುದು. ಅದು ವಜ್ರದಂತೆ ಬಹಳ ಗಟ್ಟಿಯಾದ ಕೋರೆಯ ಹಲ್ಲುಗಳಿಂದ ಬೆಟ್ಟಗಳನ್ನೂ ಪುಡಿಮಾಡುವುದು. ಸಮುದ್ರದಲ್ಲಿ ತಿರುಗಾಡುವ ಹಡಗುಗಳೆಲ್ಲವನ್ನೂ ಮುರಿದುಹಾಕುತ್ತಿರುವುದು. ಹೀಗೆ ತುಂಟತನವನ್ನು ಮಾಡುತ್ತಾ ಆ ಮತ್ಸ್ಯವು ಕೊಬ್ಬಿನಿಂದ ತಾನೇ ತಾನಾಗಿ ವಾಯುವೇಗದಿಂದ ಸಮುದ್ರದಲ್ಲಿ ಸಂಚರಿಸುತ್ತಿರುವುದು. ನೀನು ಆ ಮೀನನ್ನು ಹಿಡಿದುಕೊಂಡು ಬಂದರೆ, ನಿನಗೆ ಆ ಹುಡುಗಿಯನ್ನು ಕೊಡುವುದು. ಇದು ಸತ್ಯವು. " ಎಂದು ಅವನು ಹೇಳಿದನು.

೪೧–೪೫. ಅವರ ಮಾತನ್ನೂ ಕನ್ಯಾತಂದೆಯು ಹೇಳಿದ ಮಾತನ್ನೂ ಕೇಳಿದ ನಂತರ ಮಧುರಾನಗರದ ಬೆಸ್ತರವನು, ತನ್ನ ಬಲೆಯನ್ನು ಹೆಗಲ ಮೇಲೆ ಹಾಕಿಕೊಂಡು ಆ ಬೆಸ್ತರನ್ನೂ ತನ್ನ ಸಂಗಡ ಕರೆದುಕೊಂಡು ಆ ಕ್ಷಣದಲ್ಲಿಯೇ ಸಮುದ್ರತೀರಕ್ಕೆ ಹೋದನು. ಅವರೆಲ್ಲರೂ ರಾಮಸೇತುವಿನ ಹತ್ತಿರದಲ್ಲಿ ಸಮುದ್ರ ಮಧ್ಯದಲ್ಲಿ ವೇಗವಾಗಿ ಓಡುತ್ತಿರುವ ಆ ಮೀನನ್ನು ನೋಡಿ, ಆಶ್ಚರ್ಯಪಡುತ್ತಾ

ರಾಮಸೇತುಸಮೀಪೇ ಚ ಸಿಂಧುಮಧ್ಯಸ್ಥಮಾಶುಗಂ ।
ಮತ್ಸ್ಯಂ ಚ ದರ್ಶಯಾಮಾಸುರಯಮೇವೇತಿ ವಿಸ್ಮಿತಾಃ ॥ ೪೩ ॥

ಚಿಕ್ಷೇಪ ವಾಗುರಾಂ ತಸ್ಮಿನ್ಸಲಧೌ ಜಾಲಿಕೇಶ್ವರಃ ।
ತದ್ವಾಗುರಾಂತರಂ ಪ್ರಾಪ ನಂದೀ ಶಂಕರವಲ್ಲಭಃ ॥ ೪೪ ॥

ಅಥ ತಂ ಪ್ರಾಪಯಾಮಾಸ ಕ್ಷಣಾತ್ತೀರಂ ಸದಾಶಿವಃ ।
ಶಾಪಜಾತಂ ಮತ್ಸ್ಯವೇಷಂ ಪಶ್ಯಧ್ವಮಿತಿ ಪಾಣಿನಾ ॥ ೪೫ ॥

ಪಸ್ಪರ್ಶಾಲೋಕ್ಯ ಭಗವಾನ್ಕೃಪಯಾ ವಿಸ್ಮಿತಶ್ಶಿವಃ ।
ತಸ್ಯ ವೀಕ್ಷಣಪಸ್ಪರ್ಶಾನ್ಮತ್ಸ್ಯದೇಹಂ ವಿಹಾಯ ಚ ॥ ೪೬ ॥

ಸ್ವಕೀಯಂ ದಿವ್ಯರೂಪಂ ಚ ದಧೌ ನಂದೀಂದುಶೇಖರಃ ।
ಈಶಸ್ಪರ್ಶನಮಾತ್ರೇಣ ನತ್ವಾ ತುಷ್ಟಾವ ಸಾಂಜಲಿಃ ॥ ೪೭ ॥

---

"ಇದನ್ನು ನೀನು ಹಿಡಿಯಬೇಕು' ಎಂದು ತೋರಿಸಿದರು. ಆಗ ಬಲೆಗಾರರಲ್ಲಿ ನಿಪುಣನಾದ ಅವನು ತನ್ನ ಬಲೆಯನ್ನು ಸಮುದ್ರದಲ್ಲಿ ಒಡ್ಡಿದನು. ಶಿವನ ಪ್ರೀತಿ ಪಾತ್ರನಾದ ನಂದಿಯು ಆ ಬಲೆಯೊಳಕ್ಕೆ ಬಂದು ಸೇರಿದನು. ಕೂಡಲೆ ಅದನ್ನು ತೀರಕ್ಕೆ ಈಶ್ವರನು ಎಳೆದನು. ಅನಂತರ ಆ ಮೀನನ್ನು ನೋಡಿರಿ, ಎಂದು ಹೇಳುತ್ತಾ ಶಾಪದಿಂದ ಮೀನಿನ ಆಕಾರವನ್ನು ಹೊಂದಿರುವ ಆ ನಂದಿಕೇಶ್ವರನನ್ನು ದಯೆಯಿಂದ ಕೂಡಿದವನಾಗಿ ಪರಮೇಶ್ವರನು ತನ್ನ ಹಸ್ತದಿಂದ ಸ್ಪರ್ಶಮಾಡಿದನು.

೪೬–೪೮. ಪರಮೇಶ್ವರನು ನೋಡಿ, ಸ್ಪರ್ಶಮಾಡಿದ ಕೂಡಲೆ ನಂದಿಕೇಶ್ವರನು ಶಾಪದಿಂದ ಉಂಟಾಗಿದ್ದ ಮೀನಿನ ಆಕಾರವನ್ನು ಬಿಟ್ಟು ತನ್ನ ಶಿವಸಾರೂಪ್ಯವನ್ನು ಹೊಂದಿದನು. ಅವನು ಪರಮೇಶ್ವರನನ್ನು ಸ್ತೋತ್ರ ಮಾಡಿ ನಮಸ್ಕಾರ ಮಾಡಿದನು. ಕನ್ಯಾತಂದೆಯಾದ ಬೆಸ್ತರವನು ಅವನ (ಕೈ ಚಳಕವನ್ನು) ಹಸ್ತ ಕೌಶಲವನ್ನು ನೋಡಿ, ಅವನನ್ನು ತನ್ನ ಮನೆಗೆ ಕರೆದುಕೊಂಡು

ದೃಷ್ಟ್ವಾ ತದ್ಧಸ್ತಕೌಶಲ್ಯಂ ಕನ್ಯಾಮಸ್ಮೈ ಸ ಧೀವರಃ ।
ವಿಧಿನೋಕ್ತಪ್ರಕಾರೇಣ ದದೌ ಕಲ್ಯಾಣರೂಪಿಣೀಂ ॥ ೪೮ ॥

ಆಹೂಯ ಸ್ವಗೃಹಂ ಪೂಜ್ಯಂ ಸ್ತ್ರಿಯಾ ಸಾಕಂ ಸುಮಂಟಪೇ ।
ಶಂಕರೋಽಪಿ ಚ ತಾಂ ಕನ್ಯಾಮುದ್ವಾಹ್ಯ ಸ ಪರಾತ್ಪರಃ ॥ ೪೯ ॥

ಧೀವರಾಯ ಚ ಕೈಲಾಸಪದಂ ದತ್ವಾ ಸ್ತ್ರಿಯಾ ಸಹ ।
ಸ್ವಕಾಜ್ಞಯಾ ಸಮಾನೀತಂ ವಿಮಾನಂ ಸ್ವಗಣೈಶ್ಶಿವಃ ॥ ೫೦ ॥

ದತ್ವಾ ವಿಮಾನಂ ಸಾರೂಪ್ಯಂ ಸರ್ವಾಲಂಕಾರಮಂಡಿತಂ ।
ಕೈಲಾಸಂ ಪ್ರಾಪಯಾಮಾಸ ವಾದ್ಯಘೋಷೈ ಸ್ಸ ಈಶ್ವರಃ ॥ ೫೧ ॥

ದೃಶ್ಯಮಾನೋ ಜನೈಸ್ಸರ್ವೈಸ್ತಯಾ ಗೌರ್ಯಾ ಸಮಾಯಯೌ ।
ಪುಸ್ತಕಾಂಶ್ಚ ಸಮಾದಾಯ ನಂದೀ ಶಂಕರವಲ್ಲಭಃ ॥ ೫೨ ॥

---

ಬಂದು ವಿವಾಹಮಂಟಪದಲ್ಲಿ ಅವನನ್ನು ಕೂರಿಸಿ, ತನ್ನ ಸ್ತ್ರೀ ಸಮೇತನಾಗಿ ಸರ್ವ ಮಂಗಳ ರೂಪದಿಂದ ಇರುವ ಆ ಕನ್ಯೆಯನ್ನು ದಾನಮಾಡಿ, ಶಾಸ್ತ್ರಕ್ರಮವಾಗಿ ತನ್ನ ಮಗಳ ವಿವಾಹವನ್ನು ನೆರವೇರಿಸಿದನು.

೪೯-೫೨, ಸರ್ವಶ್ರೇಷ್ಠನಾದ ಶಂಕರನು ಆ ಕನ್ಯೆಯನ್ನು ಮದುವೆಮಾಡಿ ಕೊಂಡು ತನ್ನ ಆಜ್ಞೆಯಿಂದ ತನ್ನ ಗಣಗಳ ಮೂಲಕವಾಗಿ ವಿಮಾನವನ್ನು ತರಿಸಿ ಅದರಲ್ಲಿ ಕನ್ಯಾಪಿತನಾದ ಆ ಬೆಸ್ತರವನನ್ನು ಅವನ ಸ್ತ್ರೀಯ ಜೊತೆಯಲ್ಲಿ ಕೂರಿಸಿ, ಅನೇಕ ವಿಧವಾದ ವಾದ್ಯಧ್ವನಿಗಳಿಂದ ಉತ್ಸವ ಮಾಡಿಸುತ್ತಾ, ಅವನಿಗೆ ಸಾರೂಪ್ಯ ಮುಕ್ತಿಯನ್ನು ಅನುಗ್ರಹಿಸಿದನು. ಮತ್ತು ಬಹಳ ಅಂದವಾಗಿರುವ ಕೈಲಾಸ ಪರ್ವತಕ್ಕೆ ಕಳುಹಿಸಿದನು. ಅಲ್ಲಿರುವ ಜನರೆಲ್ಲರೂ ನೋಡುತ್ತಿರುವಾಗಲೇ ಗೌರೀ ದೇವಿಯೊಡನೆ ತಾನೂ ಹೊರಟು ಬಂದನು. ಶಿವನ ಪ್ರೀತಿಪಾತ್ರನಾದ ನಂದಿಕೇಶ್ವರನು ಪುಸ್ತಕಗಳೆಲ್ಲವನ್ನೂ ತೆಗೆದುಕೊಂಡು ಪಾರ್ವತೀ ಸಹಿತನಾದ ಪರಮೇಶ್ವರನನ್ನು ಅನುಸರಿಸಿ ಬಂದನು.

ಅನ್ವಗಾದಂಬಿಕಾಯುಕ್ತಂ ಸುಂದರೇಶಂ ಸದಾಶಿವಂ ।
ಏತತ್ಸ್ವಪ್ನೋಥ ವಾ ಮಾಯಾ ದೃಷ್ಟಮಸ್ಮಾಭಿರದ್ಭುತಂ ॥ ೫೩ ॥

ಇತಿ ತೇ ಜಾಲಿಕಾಶ್ಚಾನ್ಯೇ ಶಂಸಂತೋ ವಿಸ್ಮಿತಾಃ ಸ್ಥಿತಾಃ ।
ವೃಷಾರೂಢೋ ವಿಮಾನಸ್ಥಃ ಸ್ವಗಣೈಃ ಪರಿಸೇವಿತಃ ॥ ೫೪ ॥

ಶ್ರೀಮದುತ್ತರಕೋಶಾಖ್ಯಂ ಸ್ಥಾನಂ ಪ್ರಾಪ್ಯ ಸ ಈಶ್ವರಃ ।
ಅಥ ವೇದಾಂತವಿಜ್ಞಾನಂ ಶ್ರೋತುಂ ಕೌತೂಹಲಾನ್ವಿತಾ ॥ ೫೫ ॥

ದೇವೇಶಂ ಪ್ರಾರ್ಥಯಾಮಾಸ ದೇವೀ ದಿವ್ಯವಪುರ್ಧರಾ ।
ತಥಾಸ್ತ್ವಿತಿ ಚ ತತ್ರಸ್ಥಃ ಶ್ರೀಮತ್ಸುಂದರನಾಯಕಃ ॥ ೫೬ ॥

ದೇವ್ಯಾಃ ಕ್ರಮಾದಾಗಮಾರ್ಥಾನ್ಮೋಕ್ಷದಾ ನಬ್ರವೀನ್ಮುದಾ ।
ಭಕ್ತಾಶ್ಚ ಯೋಗಿನಶ್ಚಾಪಿ ಪ್ರಾರ್ಥಯಾಮಾಸು ರೀಶ್ವರಂ ॥ ೫೭ ॥

---

೫೩–೫೬. ಅಲ್ಲಿ ಇರುವ ಬೆಸ್ತರೆಲ್ಲರೂ ಇದು ಸ್ವಪ್ನವೋ, ಮಾಯೆಯೋ ಎಂದು ಆಶ್ಚರ್ಯಪಡುತ್ತಾ ಎಲ್ಲವನ್ನೂ ನೋಡುತ್ತಿದ್ದರು. ವೃಷಭವನ್ನು ಹತ್ತಿ ಕೊಂಡು ವಿಮಾನದಲ್ಲಿರುವ ಪರಮೇಶ್ವರನು ತನ್ನ ಗಣಗಳ ಸೇವೆಯನ್ನು ಸ್ವೀಕರಿಸುತ್ತಾ, ಸಂಪದ್ಯುಕ್ತವಾದ ಉತ್ತರ ಹಾಲಾಸ್ಯಕ್ಷೇತ್ರವನ್ನು ಬಂದು ಸೇರಿದನು. ಅನಂತರದಲ್ಲಿ ಉತ್ತಮವಾದ ಶರೀರವನ್ನು ಧರಿಸಿರುವ ಪಾರ್ವತಿಯು, ವೇದಾಂತ ಶಾಸ್ತ್ರವನ್ನು ಕೇಳಲು ಕುತೂಹಲವುಳ್ಳವಳಾಗಿ ದೇವದೇವನನ್ನು ಪ್ರಾರ್ಥಿಸಿದಳು. ಸುಂದರೇಶ್ವರನು ಆ ಪ್ರಾರ್ಥನೆಗೆ ಅನುಸಾರವಾಗಿ ಶಾಸ್ತ್ರಾರ್ಥವನ್ನು ಎಲ್ಲವನ್ನೂ ಕ್ರಮವಾಗಿ ದೇವಿಗೆ ಉಪದೇಶ ಮಾಡಿದನು.

೫೭–೫೯. ಆಗ ಭಕ್ತರೂ, ಯೋಗಿಗಳೂ "ಎಲೈ ದೇವನೆ, ನಮಗೆ ಜ್ಞಾನವನ್ನು ಉಪದೇಶಮಾಡು" ಎಂದು ಪ್ರಾರ್ಥಿಸಿದರು. ಆಗ ಶಿವನು ಅವರಿಗೆ ಅರವತ್ತುನಾಲ್ಕು ಕಲೆಗಳನ್ನೂ, ವೇದಾರ್ಥಗಳನ್ನೂ ಉಪದೇಶ ಮಾಡಿ ಅವರಿಗೆ

ಜ್ಞಾನೋಽಪದೇಶಮಸ್ಮಾಕಮಪಿ ದೇವವರ ಪ್ರಭೋ ।
ಇತಿ ತೈರರ್ಥಿತಃ ಶಂಭುಶ್ಚತುಃಷಷ್ಟಿಕಲಾ ಅಪಿ ॥ ೫೮ ॥

ಉಪದಿಶ್ಯ ಚ ವೇದಾರ್ಥಾನದದೌ ಸೌಯುಜ್ಯರೂಪಿಣೀಂ ।
ಮುಕ್ತಿಂ ತೇಭ್ಯಃ ಪಾರ್ವತೀಂ ಚ ವ್ಯಾಜೀಕೃತ್ಯ ಶಿವೋ ಗುರುಃ ॥ ೫೯ ॥

ಕಂಚಿತ್ಕಾಲಂ ತತ್ರ ನೀತ್ವಾ ಗೌರ್ಯಾ ಸಹ ಮಹೇಶ್ವರಃ ।
ಪುನಸ್ಸ್ವಸ್ಥಾನಮಗಮಚ್ಛ್ರೀಮದ್ಧಾಲಾಸ್ಯಸಂಜ್ಞಿಕಂ ॥ ೬೦ ॥

ಸಪ್ತಪಂಚಾಶಿಕಾ ಲೀಲಾ ಸಂಪ್ರೋಕ್ತಾ ಸುಂದರಪ್ರಭೋಃ ।
ಸಾ ದುಃಖಸಂಘಸಂಹರ್ತ್ರೀ ಸರ್ವಕಾಮಪ್ರದಾಯಿನೀ ॥ ೬೧ ॥

---

* ಸಾಯುಜ್ಯವೆಂಬವ ಮುಕ್ತಿಯನ್ನು ಅನುಗ್ರಹಿಸಿದನು. ಪಾರ್ವತೀದೇವಿಗೆ ಲೋಕಗಳೆಲ್ಲಕ್ಕೂ ಗುರುವಾದ ಶಿವನು ಉಪದೇಶಮಾಡುವ ನೆವದಿಂದ ಇವರಿಗೆ ಅನುಗ್ರಹವನ್ನು ಮಾಡಿದನು.

೬೦–೬೧. ಸುಂದರೇಶ್ವರನು ಕೆಲವು ಕಾಲದವರಿಗೆ ಉತ್ತರ ಹಾಲಾಸ್ಯ ಕ್ಷೇತ್ರದಲ್ಲಿ ಗೌರೀದೇವಿಯೊಡನೆ ಇದ್ದು, ಅನಂತರ ಹಾಲಾಸ್ಯಕ್ಷೇತ್ರಕ್ಕೆ ಬಂದನು· ಅಗಸ್ತ್ಯಋಷಿಯು ಹೇಳಿದನು :— ದುಃಖಗಳನ್ನು ನಾಶಮಾಡಿ, ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವ ಸುಂದರೇಶ್ವರನು ಆಚರಿಸಿದ ಐವತ್ತೇಳನೆಯ ಲೀಲೆಯನ್ನು ವಿವರಿಸಿ ಹೇಳಿರುವೆನು.

---

ಮುಕ್ತಿಯು ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ, ಎಂದು ನಾಲ್ಕು ವಿಧವು. ದೇವನಿರುವ ಲೋಕದಲ್ಲಿ ವಾಸವು ದೊರಕುವುದು ಸಾಲೋಕ್ಯ· ದೇವನ ಹತ್ತಿರದಲ್ಲಿರುವುದು ಸಾಮೀಪ್ಯ. ದೇವನ ಆಕಾರದಂತೆ ಇರುವ ಆಕಾರವನ್ನು ಹೊಂದುವುದು ಸಾಮೀಪ್ಯ. ದೇವನಲ್ಲಿ ಬೇದವಿಲ್ಲದಂತೆ ಲೀನವಾಗುವುದು (ನೀರು ಹಾಲು ಬೆರದಂತೆ) ಸಾಯುಜ್ಯ.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಕೈವರ್ತಕನ್ಯಾಪಾಣಿಗ್ರಹಣಂನಾಮ ತ್ರಿಷಷ್ಟಿತಮೋಽಧ್ಯಾಯಃ**

---

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಕೈವರ್ತಕನ್ಯಾ ಪಾಣಿಗ್ರಹಣವೆಂದು ಹೆಸರುಳ್ಳ ಅರವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಚತುಷ್ಷಷ್ಟಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಶ್ರೀಮದ್ವಾತಪುರೇಶಸ್ಯ ಜ್ಞಾನದೀಕ್ಷಾಂ ಯಯ್ಯಾಕರೋತ್ ।
ಸರ್ವಾನುಗ್ರಹಕೃಚ್ಛಂಭುಸ್ತಾ ಲೀಲಾಥ ಮಯೋಚ್ಯತೇ ॥ ೧ ॥

ಅಭೂಚ್ಛ್ರೀಮದ್ವಾತಪುರೇ ಕಶ್ಚಿದ್ಭೂದೇವ ಸತ್ತಮಃ ।
ತಸ್ಯ ಪುತ್ರೋ ವಿಶ್ರುತಶ್ಚ ಶ್ರೀಮದ್ವಾತಪುರೇಶ್ವರಃ ॥ ೨ ॥

ಸೋಧೀತ್ಯ ವಿಧಿವದ್ವೇದಾನರ್ಥಂ ವಿಜ್ಞಾಯ ತತ್ತ್ವತಃ ।
ಧರ್ಮಶಾಸ್ತ್ರಾಣಿ ಸರ್ವಾಣಿ ಪುರಾಣಾನ್ಯಧಿಗಮ್ಯ ಚ ॥ ೩ ॥

---

### ಅರವತ್ತನಾಲ್ಕನೆಯ ಅಧ್ಯಾಯವು

೧-೬. ಅಗಸ್ತ್ಯಋಷಿಯು ಹೇಳಿದನು:—ಎಲ್ಲರಿಗೂ ಅನುಗ್ರಹವನ್ನು ಮಾಡುವ ಈಶ್ವರನು ವಾತಪುರೇಶ್ವರನೆಂಬುವನಿಗೆ ಜ್ಞಾನದೀಕ್ಷೆಯನ್ನು ಅನುಗ್ರಹಿಸಿದ ಲೀಲೆಯನ್ನು ಹೇಳುವೆನು. ಸಂಪದ್ಯುಕ್ತವಾದ ವಾತಪುರದಲ್ಲಿ ವಾಸಮಾಡುತ್ತಿದ್ದ ಬ್ರಾಹ್ಮಣನಿಗೆ ವಾತಪುರೇಶ್ವರನೆಂಬ ಮಗನು ಇದ್ದನು. ಅವನು ಶಾಸ್ತ್ರಕ್ರಮದಿಂದ ವೇದಾಧ್ಯಯನವನ್ನು ಮಾಡಿ, ವೇದಗಳ ಅರ್ಥವನ್ನು ಸರಿಯಾಗಿ ತಿಳಿದು ಕೊಂಡಿದ್ದನು. ಮತ್ತು ಅವನು ಧರ್ಮಶಾಸ್ತ್ರಗಳು, ಎಲ್ಲಾ ಪುರಾಣಗಳು, ಶಿಕ್ಷೆಯೇ

ಶಿಕ್ಷಾದ್ಯಂಗಾನಿ ತರ್ಕಾಂಶ್ಚ ಮೀಮಾಂಸಾದ್ವಯಮೇವ ಚ ।
ಆಯುರ್ವೇದಂ ಧನುರ್ವೇದಂ ನಾಟ್ಯಶಾಸ್ತ್ರಮಧೀತ್ಯ ಚ　　॥ ೪ ॥

ಅನೇಕಾನ್ಯರ್ಥಶಾಸ್ತ್ರಾಣಿ ಪ್ರಾಪ್ಯೇಭಾಶ್ವವಿಚೇಷ್ಟಿತಂ ।
ಕಲಾಸು ಮಂತ್ರಶಾಸ್ತ್ರೇಷು ಕೃತಾಭ್ಯಾಸೋ ವಿಚಕ್ಷಣಃ　　॥ ೫ ॥

ನಾನಾದೇಶೋದ್ಭವಾ ಭಾಷಾ ಲಿಪೀರ್ಜ್ಞಾತ್ವಾ ವಿಚಕ್ಷಣಃ ।
ರಾಜ್ಞಾಂ ಚ ನೀತಿಶಾಸ್ತ್ರಾಣಿ ಸರ್ವತ್ರ ನಿಪುಣೋಽಭವತ್　　॥ ೬ ॥

ಸ ಷೋಡಶಾಬ್ದರೂಪಶ್ರೀಸ್ಸರ್ವಜ್ಞತ್ವಮವಾಪ್ಯ ಚ ।
ರಾಜ್ಞಾ ಸಂಪ್ರಾರ್ಥಿತಸ್ಸೋಽಥ ಮಂತ್ರಿತ್ವೇನ ನಿಯೋಜಿತಃ　　॥ ೭ ॥

ಮಂತ್ರಿಣಾಮಗ್ರಣೀ ರಾಸೀನ್ಮಂತ್ರಸಾಮರ್ಥ್ಯಯೋಗತಃ ।
ಗಜಾನಾಂ ತುರಗಾನಾಂ ಚ ಯೋಧಾನಾಂ ಚ ನಿರೂಪಣೇ　　॥ ೮ ॥

---

ಮೊದಲಾದ ಎಲ್ಲಾ ವೇದಾಂಗಗಳು, ತರ್ಕಶಾಸ್ತ್ರ, ಪೂರ್ವಮೀಮಾಂಸಾಶಾಸ್ತ್ರ, ಉತ್ತರಮೀಮಾಂಸಾಶಾಸ್ತ್ರ, ಆಯುರ್ವೇದ, ಧನುರ್ವೇದ, ನಾಟ್ಯಶಾಸ್ತ್ರ, ಅನೇಕ ವಿಧವಾದ ಅರ್ಥಶಾಸ್ತ್ರ, ಇವುಗಳೆಲ್ಲವನ್ನೂ ಓದಿ ತಿಳುವಳಿಕೆಯುಳ್ಳವನಾಗಿ ಇದ್ದನು. ವಾತಪುರೀಶ್ವರನಿಗೆ ಆನೆ, ಕುದುರೆಗಳಂತೆ ಆಟವಾಡುವುದು, ಕಲಾಶಾಸ್ತ್ರ, ಮಂತ್ರ ಶಾಸ್ತ್ರ, ಇವುಗಳಲ್ಲಿ ಜ್ಞಾನವೂ, ಅನೇಕ ದೇಶಭಾಷಾಜ್ಞಾನ, ಲಿಪಿಜ್ಞಾನ ನೀತಿಶಾಸ್ತ್ರದಲ್ಲಿ ಪಾಂಡಿತ್ಯ, ಇವುಗಳು ಚೆನ್ನಾಗಿದ್ದದ್ದರಿಂದ ಅವನು ಬುದ್ಧಿವಂತನೆನಿಸಿ ಕೊಂಡಿದ್ದನು.

೭–೮. ಇವನು ಹದಿನಾರುವರ್ಷ ವಯಸ್ಸಿನಲ್ಲಿಯೇ ರೂಪವಂತನಾಗಿ, ಐಶ್ವರ್ಯವನ್ನು ಹೊಂದಿ, ತಿಳುವಳಿಕೆಯುಳ್ಳವನಾಗಿರುವುದರಿಂದ ಪಾಂಡ್ಯರಾಜನು ಇವನನ್ನು ಮಂತ್ರಿಯಾಗಿರಬೇಕೆಂದು ಪ್ರಾರ್ಥಿಸಿ, ಮಂತ್ರಿಯ ಪದವಿಯನ್ನು ಕೊಟ್ಟಿದ್ದನು. ಅದಕ್ಕೆ ಸರಿಯಾಗಿ ವಾತಪುರೀಶ್ವರನು ಮಂತ್ರಿತ್ವ ಮಾಡುವ ಕೆಲಸದಲ್ಲಿ ನಿಪುಣನಾಗಿ ಮಂತ್ರಿಗಳೆಲ್ಲರಿಗೂ ಮೊದಲನೆಯವನಾಗಿದ್ದನು

ನಿಯುಕ್ತೋ ಭೂಮಿಪಾಲೇನ ಸ ಧತ್ತೇ ಮಹತೀಂ ಧುರಂ ।
ದ್ವೀಪಾಂತರೇಭ್ಯೋ ಹ್ಯಾಯಾತಾನ್ಪದಾರ್ಥಾಂಶ್ಚ ನಿರೂಪಯನ್ ॥ ೯ ॥

ನೃಪತೇರ್ನಿತರಾಂ ಪ್ರೀತಿಮಕರೋತ್ ಸ ನಿರಂತರಂ ।
ತಸ್ಯ ಕ್ಷೇತ್ರಧನಾದೀನಿ ದತ್ವಾ ಹ್ಯಾಕಲ್ಪವಸ್ತ್ರಕಾನ್ ॥ ೧೦ ॥

ನಿರಂತರಂ ಪ್ರೂಜ್ಯ ತೋಷ ಮಕರೋಗರಿಮರ್ದನಃ ।
ತೇನ ಸನ್ಮಂತ್ರಿಣಾ ಸಾಕಂ ಪಾಂಡ್ಯಭೂಪ್ರೋsರಿಮರ್ದನಃ । ॥ ೧೧ ॥

ಅನುಭೂಯ ಸುಖಾನ್ಯೇವ ವರ್ತತೇ ವರವೇಶ್ಮನಿ ।
ಶ್ರೀಮದ್ವಾತಪುರೇಶೋಽಪಿ ಪ್ರಭು ಸ್ಸನ್ನಪಿ ಸರ್ವದಾ ॥ ೧೨ ॥

ಪೂರ್ವೈರಾಚರಿತಂ ಮಾರ್ಗಂ ಪಾಪಭೀರುಶ್ಚ ನಾತ್ಯಜತ್ ।
ಸ್ವವರ್ಗ್ಯಾಂಶ್ಚ ದ್ವಿಜಾನನ್ಯಾನ್ಸರ್ವಾನರ್ಥೈರತೋಷಯತ್ ॥ ೧೩ ॥

---

ಆನೆಗಳನ್ನೂ, ಕುದುರೆಗಳನ್ನೂ, ಯೋಧರನ್ನೂ ಶೇಖರಿಸುವ ಕೆಲಸವನ್ನು ರಾಜನು ಈ ಮಂತ್ರಿಗೆ ನಿಯಮಿಸಿದ್ದನು ಇದರಿಂದ ಇವನಿಗೆ ರಾಜಕಾರ್ಯವು ಯಾವಾಗಲೂ ಬಹಳವಾಗಿತ್ತು. ಇವನು ಬೇರೆ ದ್ವೀಪಗಳಿಂದ ತರಿಸಿದ ಪದಾರ್ಥಗಳನ್ನು ಶೇಖರ ಮಾಡುತ್ತಿದ್ದ ಕಾರಣ ರಾಜನಿಗೆ ಇವನಲ್ಲಿ ಪ್ರೀತಿಯು ಬಹಳವಾಗಿ ಹೆಚ್ಚುತಿತ್ತು.

೧೦–೧೪. ಅರಿಮರ್ದನಪಾಂಡ್ಯರಾಜನು ಅವನಿಗೆ ಭೂಮಿ, ದ್ರವ್ಯ, ಆಭರಣ, ವಸ್ತ್ರ, ಇವೇ ಮೊದಲಾದವುಗಳನ್ನು ಉಚಿತವಾಗಿ ಕೊಡುತ್ತಾ, ಅವನಿಗೆ ಸಂತೋಷ ವನ್ನುಂಟುಮಾಡುತ್ತಿದ್ದನು. ಒಳ್ಳೆಯ ಮಂತ್ರಿಯಾದ ಅವನೊಡನೆ ರಾಜನು ಸುಖ ವನ್ನು ಅನುಭವಿಸುತ್ತಾ ತನ್ನ ಅರಮನೆಯಲ್ಲಿ ಸಂತೋಷದಿಂದ ಇದ್ದನು. ವಾತ ಪುರೀಶ್ವರನು ಯಾವಾಗಲೂ ಪ್ರಭುವಾಗಿರುತ್ತಾ ತನಗಿಂತ ಪೂರ್ವಿಕರು ಆಚರಿಸಿರುವ ಪದ್ಧತಿಯನ್ನು ಮೀರದೆ ಕೆಟ್ಟ ಕೆಲಸವನ್ನು ಮಾಡುವುದರಲ್ಲಿ ಹೆದರತಕ್ಕವನಾಗಿದ್ದನು. ತನ್ನ ಜಾತಿಯವರನ್ನೂ, ಇತರ ಜಾತಿಯವರನ್ನೂ ಮತ್ತು ಎಲ್ಲರನ್ನೂ ದುಡ್ಡು

ಧರ್ಮವೇದಾಕರೋನ್ನಿತ್ಯಂ ವಿತ್ತಶಾಠ್ಯವಿವರ್ಜಿತಃ ।
ಅನ್ವಹಂ ಭೋಜಯಾಮಾಸ ಶಿವಭಕ್ತಾಂಶ್ಚ ಭಕ್ತಿತಃ ॥ ೧೪ ॥

ಉಪಹಾರೈಸ್ಸುಂದರೇಶ ಮತರ್ಪಯ ದನಾರತಂ ।
ವರ್ಷೈಃ ಕತಿಪಯೈಸ್ತಸ್ಯ ಮಂತ್ರಸಾಮರ್ಥ್ಯಯೋಗತಃ ॥ ೧೫ ॥

ಅನಂತಾನ್ಯರ್ಥಜಾತಾನಿ ಜಾತಾನಿ ಪೃಥಿವೀಪತೇಃ ।
ಏವಂ ಗಚ್ಛತಿ ಕಾಲೇ ತು ಕದಾಚಿತ್ತುರಗಾಧಿಪಾಃ ॥ ೧೬ ॥

ಪ್ರಾಪ್ಯ ಭೂಪಂ ಪ್ರಣಮ್ಯಾಥ ಪ್ರಾಹುಸ್ತೇ ತುರಗಸ್ಥಿತಿಂ ।
ರಾಜನ್ ಮ್ರಿಯಂತೇ ತುರಗಾಃ ಕೇಚಿದ್ವ್ಯಾಧಿಪ್ರಪೀಡಿತಾಃ ॥ ೧೭ ॥

ಕೇಚಿಜ್ಜರಾರ್ತಿಸಂಯುಕ್ತಾಃ ವರ್ತಂತೇಽನ್ಯೇಽಪಿ ದುಸ್ಸ್ಥಿತಾಃ ।
ನೂತನಾಸ್ತುರಗಾ ರಾಜ ನ್ಕ್ರೇತವ್ಯಾ ರ್ಝಡಿತಿ ತ್ವಯಾ ॥ ೧೮ ॥

---

ಕೊಡುವುದರಿಂದ ಸಂತೋಷಪಡಿಸುತ್ತಿದ್ದನು. ಅವನು ಯಾವಾಗಲೂ ಧರ್ಮ ಜ್ಞಾನಕ್ಕೆ ಆಶ್ರಯನಾಗಿದ್ದರೂ, ಜಂಭದಿಂದಲೂ, ದುಂದುಗಾರಿಕೆಯಿಂದಲೂ ದ್ರವ್ಯವನ್ನು ಕಳೆಯುತ್ತಿರಲಿಲ್ಲ. ಪ್ರತಿದಿನವೂ ಶಿವಭಕ್ತರಿಗೆ ಭಕ್ತಿಯಿಂದ ಅನ್ನದಾನ ವನ್ನು ಮಾಡುತ್ತಿದ್ದನು

೧೫–೧೬. ವಾತಪುರೀಶ್ವರನು ಸುಂದರೇಶ್ವರನಿಗೆ ಕಾಣಿಕೆಯನ್ನು ಯಾವಾಗಲೂ ಒಪ್ಪಿಸುತ್ತಿದ್ದನು. ಇವನು ಮಂತ್ರಿಯಾಗಿರುವ ಕಾರಣ ಇವನ ಮಂತ್ರಿತ್ವದಿಂದ ಕೆಲವು ವರ್ಷಗಳಲ್ಲಿ ರಾಜನಿಗೆ ದ್ರವ್ಯವು ಬಹಳ ಮಟ್ಟಿಗೆ ಹೆಚ್ಚಿತು. ಹೀಗೆಯೇ ಕೆಲವು ದಿನಗಳು ಕಳೆದವು. ಒಂದು ದಿನ ಕುದುರೆಗಳಿಗೆ ಯಜಮಾನರಾದವರು ಎಲ್ಲರೂ ರಾಜನ ಹತ್ತಿರಕ್ಕೆ ಬಂದು ನಮಸ್ಕರಿಸಿ ಕುದುರೆಗಳ ಸ್ಥಿತಿಯನ್ನು ವಿವರಿಸಿ ಹೇಳಿದರು.

೧೭–೨೦. “ಎಲೈ ರಾಜನೆ, ನಿನ್ನ ಕುದುರೆಗಳಲ್ಲಿ ಕೆಲವಕ್ಕೆ ರೋಗವು ಬಂದು ಅವುಗಳು ಮೃತವಾದುವು. ಇನ್ನು ಕೆಲವು ಕುದುರೆಗಳಿಗೆ ರೋಗವು ಬಂದು

ಅಶ್ವಾ ಅತಿಸಹಾಯಾಶ್ಚ ಪರರಾಷ್ಟ್ರಜಯೈಷಿಣಾಂ ।
ರಾಜ್ಞಾಂ ತಸ್ಮಾಚ್ಚ ತೇ ಗ್ರಾಹ್ಯಾ ಯತ್ನಾದ್ದ್ವೀಪಾಂತರಾದಪಿ ॥ ೧೯ ॥

ಇತಿ ತೇಷಾಂ ವಚಶ್ಶ್ರುತ್ವಾ ರಾಜಾ ವಾತಪುರೇಶ್ವರಂ ।
ಆಹೂಯ ಕಥಯಾಮಾಸ ತುರಗಾನಯನೇಚ್ಛಯಾ ॥ ೨೦ ॥

ಮಂತ್ರಿನ್ವಾತಪುರೇಶ ತ್ವಂ ದೃಷ್ಟಿರ್ಮಮ ಯಥಾರ್ಥತಃ ।
ಅತ ಸ್ತ್ವಯಾದ್ಯ ಪಶ್ಯಾಮಿ ರಾಜಕಾರ್ಯಾಣಿ ಸರ್ವದಾ ॥ ೨೧ ॥

ಅಶ್ವಾಧ್ಯಕ್ಷಾ ಅಕಥಯ ನ್ಶ್ರಿಯಂತೇ ತುರಗಾ ಇತಿ ।
ಯಥೇಷ್ಟಂ ಧನಮಾದಾಯ ಮದೀಯಾತ್ಕೋಶಮಂದಿರಾತ್ ॥ ೨೨ ॥

---

ಇರುವುದರಿಂದ ಅವುಗಳು ಸರಿಯಾದ ಸ್ಥಿತಿಯಲ್ಲಿ ಇಲ್ಲವು ಆದ್ದರಿಂದ ನೀನು ಬೇರೆಯ ಕುದುರೆಗಳನ್ನು ಹೊಸದಾಗಿ ತರಿಸಬೇಕು. ಶತ್ರುಗಳ ದೇಶವನ್ನು ಆಕ್ರಮಿಸುವಾಗ ಕುದುರೆಗಳಿಂದ ಬಹಳಮಟ್ಟಿನ ಸಹಾಯವು ಆಗುವುದು. ಆದ್ದರಿಂದ ಕುದುರೆಗಳನ್ನು ಪ್ರಯತ್ನಪಟ್ಟಾದರೂ ದ್ವೀಪಾಂತರದಿಂದ ತರಿಸಬೇಕು." ಎಂದು ಹೇಳಿದರು. ಅವರ ಮಾತನ್ನು ಕೇಳಿ ರಾಜನು ವಾತಪುರೀಶ್ವರನನ್ನು ಕರೆದು ಕುದುರೆಗಳನ್ನು ತರಿಸಬೇಕೆಂದು ಉದ್ದೇಶಮಾಡಿ ಹೇಳಿದನು.

೨೧–೨೨. "ಎಲೈ ವಾತಪುರೀಶ್ವರನೆ, ನೀನು ನನಗೆ ರಾಜ್ಯಕಾರ್ಯಗಳನ್ನು ನಡೆಸುವುದರಲ್ಲಿ ಬಹಳ ಸಹಾಯಕನಾಗಿರುತ್ತೀಯೆ. ನಾನು ನಿನ್ನ ಸಹಾಯದಿಂದ ರಾಜಕಾರ್ಯಗಳನ್ನು ಮಾಡುತ್ತಿರುವೆನು. ಈಗ ಅಶ್ವಶಾಲೆಯ ಅಧ್ಯಕ್ಷರು ಕುದುರೆಗಳೆಲ್ಲವೂ ನನ್ನ ಅಶ್ವಶಾಲೆಯಲ್ಲಿ ನಾಶವಾಗುತ್ತಿವೆ, ಎಂದು ಹೇಳುತ್ತಿರುವರು. ಆದ್ದರಿಂದ ನೀನು ನನ್ನ ಭಂಡಾರದಿಂದ ಬೇಕಾದಷ್ಟು ದ್ರವ್ಯವನ್ನು ತೆಗೆದುಕೊಂಡು, ಕುದುರೆಗಳನ್ನು ವ್ಯಾಪಾರಮಾಡುವವರು ಇರುವ ಸ್ಥಳದಿಂದ ಕುದುರೆಗಳನ್ನು ತರಿಸು.

ಯತ್ರ ಕ್ರೀಣಂತಿ ತುರಗಾನಶ್ವವಾಣಿಜ್ಯಕಾರಿಣಃ ।
ತತ್ರ ತೀರೇ ಸಮುದ್ರಸ್ಯ ವ್ರಜ ತ್ವ ಮವಿಲಂಬಿತಂ ॥ ೨೩ ॥

ವರಾನ್ನಿ ್ರೀಣೀಹಿ ತುರಗಾಂಚ್ಛಾ ಸ್ತ್ರ ್ರಚೋದಿತಲಕ್ಷಣಾನ್ ।
ತ್ವಂ ಹಿ ವಿಶ್ವಾಸಪಾತ್ರಂ ಮೇ ಕಾರ್ಯಕರ್ತಾ ತ್ವಮೇವ ಹಿ ॥ ೨೪ ॥

ತಸ್ಮಾತ್ಕುರುಷ್ವ ಮತ್ಕಾರ್ಯಮೇತತ್ಸಚಿವಪುಂಗವ ।
ಇತಿ ರಾಜವಚಃ ಶ್ರುತ್ವಾ ಪ್ರಾಪ್ಯ ಕೋಶಗೃಹಾಂತರೇ ॥ ೨೫ ॥

ಶ್ರೀಮದ್ವಾತಪುರೇಶಶ್ಚ ಕೋಶಾಧ್ಯಕ್ಷೈಃ ಸಮನ್ವಿತಃ ।
ಗಣಕೈರ್ಲೇಖಯಿತ್ವಾ ಥಾನಶೇಷಾನ ಗ್ರಹೀತ್ಸಧೀಃ ॥ ೨೬ ॥

ಅರ್ಥಜಾತಾನ್ಬಹೂದ್ದ್ಬ್ರಷ್ಟ್ವಾ ಶಿವಧರ್ಮಾರ್ಥಸಂಗ್ರಹೇ ।
ಇದಾನೀಂ ಸಮಯಶ್ಚೇತಿ ಚಿಂತಯಂಸ್ತೋಷಯ ಹೃದಿ ॥ ೨೭ ॥

---

೨೩–೨೬. ಸಮುದ್ರ ತೀರದಲ್ಲಿ ಕುದುರೆಗಳ ವ್ಯಾಪಾರವು ನಡೆಯುವುದು. ನೀನು ಅಲ್ಲಿಗೆ ಬೇಗ ಹೋಗು. ಅಶ್ವಶಾಸ್ತ್ರದಲ್ಲಿ ಹೇಳಿರುವ ಲಕ್ಷಣಗಳುಳ್ಳ ಕುದುರೆಗಳನ್ನು ಕ್ರಯಕ್ಕೆ ತೆಗದುಕೊಂಡು, ಬೇಗನೆ ಈ ನಗರಕ್ಕೆ ಕಳುಹಿಸು ನೀನು ಸರಿಯಾಗಿ ಕೆಲಸ ಮಾಡುವವನೆಂದು ನಾನು ನಿನ್ನಲ್ಲಿ ಬಹಳಮಟ್ಟಿಗೆ ನಂಬಿಕೆಯುಳ್ಳವನಾಗಿರುವೆನು. ಮಂತ್ರಿಗಳಲ್ಲಿ ಬುದ್ಧಿವಂತನಾದ ನೀನು ಈ ಕಾರ್ಯವನ್ನು ನೆರವೇರಿಸು." ಎಂದು ಹೇಳಿದ ರಾಜನ ಅಪ್ಪಣೆಯಂತೆ, ವಾತಪುರೀಶ್ವರನು ರಾಜನ ಭಂಡಾರಕ್ಕೆ ಹೋಗಿ ಅಲ್ಲಿರುವ ಅಧಿಕಾರಿಗಳಿಂದ ಲೆಖ್ಖಾಚಾರಮಾಡಿಸಿ, ಬರಸಿ, ದ್ರವ್ಯವನ್ನು ಎಲ್ಲವನ್ನೂ ತೆಗದುಕೊಂಡನು.

೨೭–೩೦. ರಾಜನ ದ್ರವ್ಯವು ಬಹಳಮಟ್ಟಿಗೆ ಸಿಕ್ಕಿದ ಕಾರಣ ವಾತಪುರೀಶ್ವರನಿಗೆ ಶಿವಧರ್ಮಗಳನ್ನು ಉತ್ತಮವಾದ ರೀತಿಯಿಂದ ಆಚರಿಸುವ ಸಮಯವು ಪ್ರಾಪ್ತವಾಯಿತೆಂದು ಮನಸ್ಸಿನಲ್ಲಿ ಯೋಚನೆಯು ಉಂಟಾಯಿತು. ಹಣದ ಪೆಟ್ಟಿಗೆಗಳೆಲ್ಲಕ್ಕೂ ಮುದ್ರೆ ಹಾಕಿಸಿ, ಭದ್ರಪಡಿಸಿ, ತನ್ನ ಮನೆಯಲ್ಲಿ ಸರಿಯಾಗಿ

ತೈರರ್ಥೈಃ ಪೇಟಿಕಾಃ ಪೂರ್ಯ ಬಧ್ವಾ ಮುದ್ರಾನ್ವಿತಾಶ್ಚ ತಾಃ ।
ಅರ್ಥಜಾತಂ ಸಮಸ್ತಂ ಚ ಸ್ವಗೃಹೇ ಸ್ಥಾಪ್ಯ ರಕ್ಷಕಾನ್ ॥ ೨೮ ॥

ಸ್ಥಾಪ್ಯ ಹಾಟಕಪದ್ಮಿನ್ಯಾಂ ಕೃತಸ್ನಾನೋ ಮುದಾನ್ವಿತಃ ।
ನಿತ್ಯಕರ್ಮಾಣಿ ನಿರ್ವೃತ್ಯ ಭೂತಿರುದ್ರಾಕ್ಷಧಾರಕಃ ॥ ೨೯ ॥

ತತ್ತೀರಸ್ಥಂ ವಿಘ್ನರಾಜಂ ಗಂಧಾದ್ಯೈಃ ಪರಿಪೂಜ್ಯ ಚ ।
ನಾರಿಕೇಲಾದಿನೈವೇದ್ಯೈಃ ಪ್ರೀಣಯಿತ್ವಾ ಚ ತಂ ಪುರಾ ॥ ೩೦ ॥

ಷಡಾನನಂ ಚ ಸಂಪೂಜ್ಯ ಪ್ರಾರ್ಥಯಿತ್ವಾ ಮನಸ್ಸ್ಥಿತಾನ್ ।
ಅಥ ಗೌರೀಂ ಸುಮೀನಾಕ್ಷೀಂ ಭಕ್ತಾನುಗ್ರಹತತ್ಪರಾಂ ॥ ೩೧ ॥

ಭಕ್ತ್ಯಾ ಪ್ರಣಮ್ಯ ಪ್ರಸ್ತುತ್ಯ ವಿಜ್ಞಾಪ್ಯ ಸ್ವಹೃದಿ ಸ್ಥಿತಂ ।
ಏಭಿರರ್ಥೈರ್ಧರ್ಮಮೇವ ಕರಿಷ್ಯೇ ನೃಪರಕ್ಷಕಃ ॥ ೩೨ ॥

ವ್ಯರ್ಥವ್ಯಯಂ ತು ಶುಷ್ಕೇ ಚ ನ ಕರಿಷ್ಯಾಮಿ ದೇವ್ಯತಃ ।
ಪಾಹಿ ಮಾಮಪಿ ರಾಜಾನಂ ಕಾರ್ಯಸಿದ್ಧಿಂ ಕುರುಷ್ವ ಮೇ ॥ ೩೩ ॥

---

ರಕ್ಷಿಸಿದನು. ಅನಂತರದಲ್ಲಿ ಹೇಮಪದ್ಮಾಕರ ತೀರ್ಥದಲ್ಲಿ ಸ್ನಾನಮಾಡಿ, ಭಸ್ಮ ರುದ್ರಾಕ್ಷಗಳನ್ನು ಧರಿಸಿ, ನಿತ್ಯಕರ್ಮಗಳನ್ನು ಮಾಡಿಕೊಂಡನು. ಮೊದಲು ಗಣಪತಿಯನ್ನು ಗಂಧಾದಿಗಳಿಂದ ಪೂಜಿಸಿ, ತೆಂಗಿನ-ಕಾಯಿಯೇ ಮೊದಲಾದ ನೈವೇದ್ಯಗಳಿಂದ ತೃಪ್ತಿಪಡಿಸಿದನು. ಅನಂತರ ಷಣ್ಮುಖನನ್ನು ಪೂಜಿಸಿ, ತನ್ನ ಮನಸ್ಸಿನ ಇಷ್ಟಗಳೆಲ್ಲವನ್ನೂ ಬೇಡಿಕೊಂಡನು.

೩೧–೩೩. ಅವನು ಭಕ್ತರೆಲ್ಲರಿಗೂ ಅನುಗ್ರಹ ಮಾಡುತ್ತಿರುವ ಮೀನಾಕ್ಷೀ ದೇವಿಯನ್ನು ಭಕ್ತಿಯಿಂದ ಪೂಜಿಸಿ, ಸ್ತೋತ್ರಮಾಡಿ, ನಮಸ್ಕಾರಮಾಡಿ, "ಎಲೈ ದೇವಿಯೆ, ನಾನು ರಾಜನ ದ್ರವ್ಯದಿಂದ ಧರ್ಮವನ್ನು ಆಚರಿಸುತ್ತೇನೆ. ದುಂದುಗಾರಿಕೆಯ ವೆಚ್ಚವನ್ನು ಮಾಡುವುದಿಲ್ಲ. ರಾಜನನ್ನು ರಕ್ಷಿಸುವ ದೇವಿಯಾದ ನೀನು ನನ್ನ ಕಾರ್ಯಸಿದ್ಧಿಯನ್ನುಂಟುಮಾಡು. ರಾಜನನ್ನೂ ನನ್ನನ್ನೂ ಸಹ ರಕ್ಷಿಸು." ಎಂದು ಬೇಡಿಕೊಂಡು ಅನುಜ್ಞೆಯನ್ನು ಹೊಂದಿ ಹೊರಟನು.

ಇತಿ ಸಂಪ್ರಾರ್ಥ್ಯ ನತ್ವಾ ಚ ಲಬ್ಧ್ವಾನುಜ್ಞಾಂ ವಿನಿರ್ಯಯೌ ।
ಅಥ ಸುಂದರನಾಥಾಖ್ಯಂ ಲಿಂಗರೂಪಧರಂ ಶಿವಂ ॥ ೩೪ ॥

ಪ್ರದಕ್ಷಿಣಪ್ರಣಾಮೈಶ್ಚ ಗಂಧಪುಷ್ಪಾದಿಭಿಸ್ತಥಾ ।
ಸಮಾರಾಧ್ಯ ಪ್ರಾರ್ಥಯತ್ತ ಮಿತಿ ವಾತಪುರೇಶ್ವರಃ ॥ ೩೫ ॥

ಸರ್ವಜ್ಞ ಕರುಣಾಸಿಂಧೋ ಸರ್ವಲೋಕೈಕನಾಯಕ ।
ಸಮಸ್ತಜಗದುತ್ಪತ್ತಿಸ್ಥಿತಿಸಂಹಾರಕಾರಣ ॥ ೩೬ ॥

ಗಮನಂ ಸಫಲಂ ಮೇಽಸ್ತು ತವಾನುಗ್ರಹತಃ ಪ್ರಭೋ ।
ಅನಂತಮರ್ಥಜಾತಂ ಚ ಮಮಾಧೀನಂ ಮಹೀಪತೇಃ ॥ ೩೭ ॥

ತ್ವದ್ಭಕ್ತೇಭ್ಯಶ್ಚ ತುಭ್ಯಂ ಚ ದಾಸ್ಯಾಮಿ ತ್ವದನುಜ್ಞಯಾ ।
ರಾಜಕಾರ್ಯಂ ತ್ವಮೇವೇಶ ಮುಕ್ತ್ವಾ ಮಾಂ ರಕ್ಷ ಬಂಧಕಾತ್ ॥ ೩೮ ॥

---

೩೪–೩೮. ಅವನು ಶಿವಲಿಂಗ ರೂಪದಿಂದ ಇರುವ ಸುಂದರನಾಥನೆಂದು ಹೆಸರಿನಿಂದ ಪ್ರಸಿದ್ಧನಾದ ಶಿವನನ್ನು ಪ್ರದಕ್ಷಿಣ ನಮಸ್ಕಾರಗಳಿಂದಲೂ, ಗಂಧ ಪುಷ್ಪಾದಿಗಳಿಂದಲೂ ಪೂಜಿಸಿದನು. ವಾತಪುರೀಶ್ವರನು, ಸರ್ವಜ್ಞನಾದ "ಎಲೈ ಪರಮೇಶ್ವರನೇ ನೀನು ಸರ್ವಜ್ಞನಾಗಿರುವೆ. ದಯಾಶಾಲಿಯಾಗಿರುವೆ. ಲೋಕ ಗಳೆಲ್ಲಕ್ಕೂ ಅಧಿಪನಾಗಿ ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಗಳನ್ನು ಆಚರಿಸುತ್ತಿರುವೆ. ನಾನು ಈಗ ಹೋಗುವ ಕೆಲಸವು ನಿರ್ವಿಘ್ನವಾಗಿ ನೆರವೇರಲಿ, ಎಂದು ಅನುಗ್ರಹಿಸು. ರಾಜನ ಅಸಂಖ್ಯಾತವಾದ ದ್ರವ್ಯವು ನನಗೆ ಸಿಕ್ಕಿರುವುದು. ಇದನ್ನು ನಿನ್ನ ಆಜ್ಞೆ ಯಂತೆ ನಿನ್ನ ಸೇವೆಗೂ, ನಿನ್ನ ಭಕ್ತರ ಸೇವೆಗೂ ಖರ್ಚುಮಾಡುತ್ತೇನೆ. ನೀನು ರಾಜಕಾರ್ಯವನ್ನೂ ನೆರವೇರಿಸು. ನನಗೆ ತೊಂದರೆಯುಂಟಾಗದಂತೆ ರಕ್ಷಿಸು" ಎಂದು ಪ್ರಾರ್ಥಿಸಿಕೊಂಡು ಹೊರಟನು.

ಇತ್ಯುಕ್ತ್ವಾ ಗಂತುಮುದ್ಯುಕ್ತೇ ಶ್ರೀಮದ್ವಾತಪುರೇಶ್ವರೇ ।
ತದಾ ತ್ವಭಿಮುಖೇ ಕಶ್ಚಿದಭ್ಯೇತ್ಯ ದ್ವಿಜಸತ್ತಮಃ ॥ ೩೯ ॥

ಭೂತಿಂ ಗೃಹಾಣೇತಿ ದದೌ ರಕ್ಷಾಂ ಸಮ್ಯಕ್ ಸ ಚಾಗ್ರಹೀತ್ ।
ಪ್ರೀತೋ ನಿಮಿತ್ತಲಾಭೇನ ಸಿದ್ಧಿಂ ಕರಗತಾಂ ಸ್ಮರನ್ ॥ ೪೦ ॥

ಪ್ರಾಙ್ಮುಖಃ ಪ್ರಯಯೌ ಧೀಮಾನ್ಪ್ರಾಕ್ಸಮುದ್ರತಟಂ ಪ್ರತಿ ।
ಅಸಂಖ್ಯಾತಾರ್ಥಜಾತೇನ ಸೇನಯಾ ಚ ಸಮನ್ವಿತಃ ॥ ೪೧ ॥

ಗಚ್ಛನ್ವಿಶ್ರಮ್ಯ ವಿಶ್ರಮ್ಯ ಪ್ರಾಪ ಮಾರ್ಗವಶೇನ ತು ।
ಶ್ರೀಮಹಾತೀರ್ಥಮಿತ್ಯುಕ್ತಂ ಶಂಭೋಃ ಸ್ಥಾನಮನುತ್ತಮಂ ॥ ೪೨ ॥

ಪ್ರವೇಶಾನಂತರಂ ತಸ್ಯ ಶ್ರೀಮದ್ವಾತಪುರೇಶಿತುಃ ।
ಪಾವಕಾಂತಸ್ಥ ಜತುವತ್ ದ್ರವೀಭೂತಮಭೂನ್ಮನಃ ॥ ೪೩ ॥

ತದ್ವೈವಂ ಚಿಂತಯಾಮಾಸ ಕೃಪಯೇಶಸ್ಯ ಶಾಂತಧೀಃ ।
ಈಶಸ್ಥಾನಾನಿ ದೃಷ್ಟಾನಿ ಬಹೂನಿ ಜಗತೀತಲೇ ॥ ೪೪ ॥

೪೦-೪೩ ವಾತಪುರೀಶ್ವರನು ಹೀಗೆಂದು ಹೇಳಿ, ಹೊರಡಲು ಸಿದ್ಧನಾಗುವ ವೇಳೆಗೆ ಸರಿಯಾಗಿ ಒಬ್ಬ ಬ್ರಾಹ್ಮಣನು ಅವನ ಎದುರಿಗೆ ಬಂದು ಭಸ್ಮವನ್ನು ಕೊಟ್ಟನು ಅದನ್ನು ಅವನು ರಕ್ಷಣೆ ಮಾಡುವ ಪದಾರ್ಥವೆಂದು ತಿಳಿದು ಆದರದಿಂದ ತೆಗೆದು ಕೊಂಡನು ಸರಿಯಾದ ಶಕುನವು ಉಂಟಾದ ಕಾರಣ ಅವನು ಕಾರ್ಯಸಿದ್ಧಿಯು ಆಗುವುದೆಂದು ತಿಳಿದು ಪೂರ್ವದಿಕ್ಕಿನಲ್ಲಿರುವ ಸಮುದ್ರತೀರಕ್ಕೆ ಹೊರಟನು. ವಾತಪುರೀಶ್ವರನು ತನ್ನ ದ್ರವ್ಯವೆಲ್ಲವನ್ನೂ ತೆಗೆದುಕೊಂಡನು. ಅದನ್ನು ರಕ್ಷಿಸುವ ಸೇನೆಯೊಡನೆ, ಪ್ರಯಾಣ ಮಾಡುತ್ತಾ ಬಂದನು. ಅಲ್ಲಲ್ಲಿ ವಿಶ್ರಾಂತಿಯನ್ನು ಹೊಂದುತ್ತಿದ್ದನು. ದಾರಿಯಲ್ಲಿ ಸಿಕ್ಕಿದ ಮಹಾತೀರ್ಥವೆಂದು ಪ್ರಸಿದ್ಧವಾದ ಶಿವ ಕ್ಷೇತ್ರವನ್ನು ಹೊಂದಿದನು. ಅವನು ಆ ಕ್ಷೇತ್ರವನ್ನು ಹೊಂದಿದ ಕೂಡಲೆ ಅಗ್ನಿಯಿಂದ ಅರಗು ಕರಗುವಂತೆ ಅವನ ಮನಸ್ಸು ರಾಗದ್ವೇಷಗಳಿಲ್ಲದ್ದಾಗಿ ಉಪಶಾಂತವಾಯಿತು.

೪೪-೪೯. ಆಗ ಅವನು ಪರಮೇಶ್ವರನ ದಯೆಯಿಂದ ಸಮಾಧಾನವಾದ ಬುದ್ಧಿಯುಳ್ಳವನಾಗಿ " ಪ್ರಪಂಚದಲ್ಲಿ ಶಿವನು ತನ್ನ ಸಾನ್ನಿಧ್ಯವನ್ನು ಅನುಗ್ರಹಿಸಿರುವ

**ಅಸ್ಮಿನ್ದೃಷ್ಟೇ ಸತಿ ಸ್ಥಾನೇ ಮನ್ಮನೋ ದ್ರವತಿ ದ್ರುತಂ ।**
**ಸ್ಥಾಸ್ಯಾಮ್ಯತ್ರೈವ ನಾನ್ಯತ್ರ ಗಮಿಷ್ಯಾಮಿ ಶಿವಾಪ್ತಯೇ ॥ ೪೫ ॥**

**ಇತಿ ನಿಶ್ಚಿತ್ಯ ಮನಸಾ ಶ್ರೀಮದ್ವಾತಪುರೇಶ್ವರಃ ।**
**ಸಹಾಯಭೂತಾನಾಹೂಯ ಯೋಧಾಂಶ್ಚ ಧನವಾಹಕಾನ್ ॥ ೪೬ ॥**

ನ್ಯಾನ್ಸರ್ವಾನ್ಪರಿಜನಾ ನಾಪ್ತಾನತ್ಯಂತಮಾತ್ಮನಃ ।
**ಏವಮಾಹ ಮಹೇಶ ಶ್ರೀಪಾದಧ್ಯಾನಪರಾಯಣಃ ॥ ೪೭ ॥**

**ಅತ್ರೈವಾಷಾಢಮಾಸೇ ತು ಆಯಾಸ್ಯಂತಿ ತುರಂಗಮಾಃ ।**
**ಕ್ರೀತ್ವಾಹಮಾಗಮಿಷ್ಯಾಮಿ ಶ್ರಾವಣೇ ತಾನ್ನ ಸಂಶಯಃ ॥ ೪೮ ॥**

**ಸುಂದರೇಶಃ ಕಿಂ ವಿದಧ್ಯಾದಿತಿ ನ ಜ್ಞಾಯತೇ ಮಯಾ ।**
**ವದಂತ್ವೇವಂ ಭವಂತೋಽಪಿ ರಾಜ್ಞೇ ಪಾಂಡೇಶ್ವರಾಯ ಚ ॥ ೪೯ ॥**

---

ಕ್ಷೇತ್ರಗಳು ಬಹಳವಾಗಿರುವವು. ಅವುಗಳನ್ನು ನಾನು ನೋಡಿರುತ್ತೇನೆ. ಈ ಕ್ಷೇತ್ರವನ್ನು ನೋಡಿದ ಕೂಡಲೆ ಮನಸ್ಸು ಬಹಳಮಟ್ಟಿಗೆ ಉಪಶಾಂತಿಯನ್ನು ಹೊಂದಿರುವುದು ಆದ್ದರಿಂದ ನಾನು ಇಲ್ಲಿಯೇ ವಾಸಮಾಡುವೆನು. ಶಿವನನ್ನು ಪ್ರತ್ಯಕ್ಷಮಾಡಿಕೊಳ್ಳುವುದಕ್ಕಾಗಿ ಬೇರೆಯ ಕಡೆಗೆ ಹೋಗುವುದಿಲ್ಲ " ಎಂದು ನಿಶ್ಚಯಮಾಡಿದನು. ಶಿವನನ್ನು ಧ್ಯಾನಮಾಡುವುದರಲ್ಲಿ ಆಸಕ್ತನಾದ ಅವನು ತನ್ನ ಸಹಾಯಕ್ಕಾಗಿ ಬಂದಿದ್ದ ಜನರು, ದ್ರವ್ಯದ ರಕ್ಷಣೆಗಾಗಿ ಬಂದಿದ್ದವರು, ಮತ್ತು ತನ್ನ ಆಪ್ತರಾದವರು ಇನ್ನೂ ಇತರ ಜನರು ಇವರೆಲ್ಲರನ್ನೂ ಕರೆದು " ಆಷಾಢಮಾಸದಲ್ಲಿ ಇಲ್ಲಿಗೆ ಕುದುರೆಗಳು ಬರುತ್ತವೆ. ನಾನು ಅವುಗಳನ್ನು ಕೊಂಡುಕೊಂಡು ಶ್ರಾವಣಮಾಸ ದಲ್ಲಿ ಬರುತ್ತೇನೆ. ಆದರೆ ಸುಂದರೇಶ್ವರನು ಏನು ಮಾಡುವನೋ ತಿಳಿಯುವುದಿಲ್ಲ. ಈಗ ನಾನು ಹೇಳಿದ ಮಾತನ್ನು ಪಾಂಡ್ಯರಾಜನಿಗೆ ತಿಳಿಸಿರಿ " ಎಂದು ಹೇಳಿ ಅವರನ್ನು ಮಧುರಾನಗರಕ್ಕೆ ಹಿಂತಿರುಗಿ ಹೋಗುವುದಕ್ಕಾಗಿ ಕಳುಹಿಸಿದನು.

ಇತ್ಯುಕ್ತ್ವಾ ಪ್ರೇಷಯನ್ಮಂತ್ರೀ ತಾನ್ಗಂತುಂ ಮಧುರಾಪುರೀಂ ।
ಸಹಾಯಭೂತಾಸ್ತೇ ಸರ್ವೇ ಶ್ರುತ್ವಾ ಮಂತ್ರಿವಚೋಮುದಾ ॥ ೫೦ ॥

ತದಾ ಕುರ್ಮ ಇತಿ ಪ್ರೋಚ್ಯ ಮಧುರಾಮಾಯಯುಶ್ಚ ತೇ ।
ಜನವತ್ಸ್ವಾಮಿನಂ ನಂತುಮಥ ವಾತಪುರೇಶ್ವರಃ ॥ ೫೧ ॥

ಸ್ನಾತ್ವಾ ಶ್ರೀಮತ್ತಟಾಕೇ ಚ ಭಸ್ಮೋದ್ಧೂಲಿತವಿಗ್ರಹಃ ।
ಪ್ರಾಸಾದಂ ಪಾವನಂ ದಿವ್ಯಂ ಶಾಂಭವಂ ಗಂತುಮುದ್ಯತಃ ॥ ೫೨ ॥

ತದಾಲಯೇ ತದಾ ತಸ್ಯ ಕೃಪಯಾ ದರ್ಶನಂ ಗತಃ ।
ಜನವನ್ನಾಥರೂಪಸ್ಸನ್ದಯಾಳು ಸ್ಸುಂದರೇಶ್ವರಃ ॥ ೫೩ ॥

ದದರ್ಶ ಕುಂದಮಾಲೇ ತು ಗುರುಮೂರ್ತಿಧರಂ ಹರಂ ।
ಅನೇಕಶಿಷ್ಯಮಧ್ಯಸ್ಥಮಸಂತಾನಂದದಾಯಕಂ ॥ ೫೪ ॥

---

೫೦-೫೩. ಇವರಿಗೆ ಸಹಾಯಕರಾದ ಅವರೆಲ್ಲರೂ ಸಂತೋಷದಿಂದ ಮಂತ್ರಿಯಾದ ಅವನ ಮಾತನ್ನು ಕೇಳಿ, ಹಾಗೆಯೇ ಮಾಡುತ್ತೇವೆ, ಎಂದು ಹೇಳಿ ಮಧುರಾನಗರಕ್ಕೆ ಬಂದರು. ವಾತಪುರೀಶ್ವರನು ಇತರ ಜನರಂತೆ ಪ್ರಭುವಾದ ಪರಮೇಶ್ವರನನ್ನು ಸೇವಿಸುವುದಕ್ಕಾಗಿ ಕೆರೆಯಲ್ಲಿ ಸ್ನಾನಮಾಡಿ, ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಶ್ರೇಷ್ಠವಾದ ಶಿವನ ದೇವಾಲಯಕ್ಕೆ ಹೋಗಲುದ್ಯುಕ್ತನಾದನು. ಆಗ ದಯಾಳುವಾದ ಸುಂದರೇಶ್ವರನು ಇತರ ಜನಗಳ ಹಾಗೆ ಇರುವ ಶ್ರೀಮಂತನ ಆಕಾರದಿಂದ ಅವನಿಗೆ ದರ್ಶನವನ್ನು ಕೊಟ್ಟನು.

೫೪-೫೬. ವಾತಪುರೀಶ್ವರನು ಮಾಘಮಲ್ಲಿಗೆ ಗಿಡದ ಬುಡದಲ್ಲಿ ಗುರುವಿನ ಆಕಾರವನ್ನು ಧರಿಸಿ, ಇರುವವನನ್ನೂ ನೋಡಿದನು. ಅವನು ಬಹಳ ಜನ ಶಿಷ್ಯರ ಮಧ್ಯದಲ್ಲಿರುತ್ತಾ, ಬಹಳ ಸಂತೋಷವನ್ನು ಅವರಿಗೆ ಉಂಟುಮಾಡುವವನಾಗಿದ್ದನು. ಸ್ಪಷ್ಟವಾದ ವರ್ಣೋಚ್ಚಾರಣೆಯುಳ್ಳ, ಸರಿಯಾದ ಸ್ವರದಿಂದ ಇರುವ ಕ್ರಮದಿಂದ ವೇದಾಧ್ಯಯನವನ್ನು ಮಾಡಿಸುತ್ತಾ ಇದ್ದನು. ಅವನನ್ನು ನೋಡಿದ ಕೂಡಲೆ ಶಿವನನ್ನು ನೋಡಿದಹಾಗೆ ವಾತಪುರೀಶ್ವರನಿಗೆ ಆಶ್ಚರ್ಯವಾಯಿತು. ಆಗ ಸುಂದರೇ

**ಅಧ್ಯಾಪನಂ ಚ ಕುರ್ವಂತಂ ಸುವ್ಯಕ್ತಂ ಸುಸ್ವರಂ ಯಥಾ |**
**ತಂ ದೃಷ್ಟ್ವಾ ವಿಸ್ಮಿತಃ ಶಂಭುಂ ಶ್ರೀಮದ್ವಾತಪುರೇಶ್ವರಃ || ೫೫ ||**

**ತದ್ಗತ್ರದೃಷ್ಟ್ಯಾ ಪರಯಾ ಸುಂದರೇಶ ಇತಿ ಸ್ಮರನ್ |**
**ಅಗ್ರೇ ಪ್ರಣಾಮಂ ಕರೋತ್ಪ್ರಣತಾರ್ತಿಹರಂ ಶಿವಂ || ೫೬ ||**

**ಸ ಶಂಭುರಪಿ ಭಕ್ತಾನಾಮನುಗ್ರಹಸುದಕ್ಷಿಣಃ |**
**ವಿಧಾಯ ಚಾಕ್ಷುಷೀಂ ದೀಕ್ಷಾಮಾಗಚ್ಛೇತ್ಯವದಚ್ಚ ತಂ || ೫೭ ||**

**ಕೃತಾಂಜಲಿಃ ಪ್ರಾಪ ಸೋಽಪಿ ಪ್ರಹ್ವೋ ಗುರ್ವಂತಿಕಂ ಶನೈಃ |**
**ತಸ್ಯಾಚಾರಂ ಚ ಭಕ್ತಿಂ ಚ ದೃಷ್ಟ್ವಾ ಪ್ರೀತಿಂ ಗತೋ ಗುರುಃ || ೫೮ ||**

**ಸೂಕ್ಷ್ಮಂ ಪಂಚಾಕ್ಷರಂ ಸ್ಥೂಲಂ ತಸ್ಮೈ ಚೋಪದಿದೇಶ ಸಃ |**
**ಸುಜ್ಞಾನಂ ಸುಕವಿತ್ವಂ ಚ ಹೃದಿ ವಾಚಿ ಪ್ರವರ್ತತೇ || ೫೯ ||**

---

ಶ್ವರನು ಅನುಗ್ರಹಿಸಿದ ಜ್ಞಾನದೃಷ್ಟಿಯಿಂದ "ಈ ಗುರುವಾಗಿರುವವನು ಸುಂದರೇಶ್ವರನು." ಎಂದು ತಿಳಿದುಕೊಂಡನು. ನಮಸ್ಕಾರಮಾಡಿದವರ ಕಷ್ಟಗಳನ್ನು ಪರಿಹರಿಸುವ ಅವನಿಗೆ ಮೊದಲು ನಮಸ್ಕಾರಮಾಡಿದನು. ಆಗ ಭಕ್ತರಿಗೆ ಅನುಗ್ರಹ ಮಾಡುವುದರಲ್ಲಿ ಬಹಳ ಸರಳವಾದ ಸ್ವಭಾವವುಳ್ಳ ಅವನು ದೃಷ್ಟಿಯಿಂದಲೇ ಅವನನ್ನು ನೋಡಿದನು. ಚಾಕ್ಷುಷದೀಕ್ಷೆಯಿಂದ ವಾತಪುರೀಶ್ವರನಿಗೆ ಅವನು ಅನುಗ್ರಹವನ್ನು ಮಾಡಿದನು. ಅನಂತರದಲ್ಲಿ ಅವನನ್ನು ತನ್ನ ಸಮೀಪಕ್ಕೆ ಬರುವಂತೆ ಕರೆದನು.

೫೭-೬೨. ವಾತಪುರೀಶ್ವರನು ವಿನಯದಿಂದ ನಮ್ರನಾಗಿ ಮೆಲ್ಲಗೆ ಗುರುವಿನ ಹತ್ತಿರಕ್ಕೆ ಬಂದನು. ಅವನ ನಡತೆಯನ್ನೂ, ಭಕ್ತಿಯನ್ನೂ ನೋಡಿದ ಗುರುವು ಅವನಲ್ಲಿ ಪ್ರೀತಿಯಿಂದ ಸೂಕ್ಷ್ಮಪಂಚಾಕ್ಷರ, ಮತ್ತು ಸ್ಥೂಲ ಪಂಚಾಕ್ಷರ ಮಂತ್ರಗಳನ್ನು ಅವನಿಗೆ ಉಪದೇಶಮಾಡಿದನು. ಇದರ ಮಹಿಮೆಯಿಂದ ಅವನಿಗೆ ಮನಸ್ಸಿನಲ್ಲಿ ಸರಿಯಾದ ತಿಳುವಳಿಕೆಯೂ, ಮಾತಾಡುವುದರಲ್ಲಿ ಕವನಮಾಡುವ ಶಕ್ತಿಯೂ

ಸಂಸಾರವಾಸನಾ ನಷ್ಟಾ ತಸ್ಯ ವಾತಪುರೇಶಿತುಃ ।
ಅಧ್ಯಾಪಿ ತಾನ್ಮಹೇಶೇನ ವೇದಾನುಚ್ಚರತಾ ಸ್ವರೈಃ ॥ ೬೦ ॥

ದ್ವಿಜಪುತ್ರಾನ್ಸಮಾಲೋಕ್ಯ ಮುದ್ಯಾತಿಷ್ಠತ್ತದಂತಿಕೇ ।
ಗುರುಶ್ಚೈನಂ ಪುನರ್ವೀಕ್ಷ್ಯ ಶಿವೋ ವಾತಪುರೇಶ್ವರಂ ॥ ೬೧ ॥

ಮತ್ಕಾರ್ಯಂ ಕಿಂಚಿದಸ್ತೀಹ ಮದಂತೇವಾಸಿಭಿಸ್ಸಹ ।
ವತ್ಸಾತ್ರ ತಿಷ್ಠೇತ್ಯುಕ್ತ್ವಾ ತಂ ಶಿಷ್ಯೈರಂತರ್ಧಿಮಾಪ ಸಃ ॥ ೬೨ ॥

ತಮದೃಷ್ಟ್ವಾ ಗುರುಂ ಚಾಯಂ ಸುಂದರೇಶಮನುಸ್ಮರನ್ ।
ಶ್ರೀವಾಚಕೈರನೇಕೈಶ್ಚ ಗುರುಮೇವಾಸ್ತುವಚ್ಛಿವಂ ॥ ೬೩ ॥

ತತ್ರೈವ ಘಟಿಕಾಃ ಕಾಶ್ಚಿನ್ನೀತ್ವಾ ಖೇದಸಮನ್ವಿತಃ ।
ಭುಕ್ತಿನಿದ್ರೇ ವರ್ಜಯಿತ್ವಾ ಭ್ರಾಂತವತ್ಪರಿತೋ ಭ್ರಮನ್ ॥ ೬೪ ॥

---

ಹೆಚ್ಚುತ್ತಾ ಬಂದವು. ಆ ವಾತಪುರೀಶ್ವರನಿಗೆ ಸಂಸಾರವನ್ನು ಮಾಡಬೇಕೆಂಬ ಇಚ್ಛೆಯು (ಭೋಗಾಭಿಲಾಷೆಯು) ಕಡಮೆಯಾಯಿತು. ವಾತಪುರೀಶ್ವರನು ವೇದಾಧ್ಯಯನವನ್ನು ಹೇಳಿಸುತ್ತಿರುವ ಗುರುವಿನ ಮತ್ತು ಸರಿಯಾದ ಸ್ವರದಿಂದ ವೇದವನ್ನು ಹೇಳುತ್ತಿರುವ ಬ್ರಾಹ್ಮಣರ ಹುಡುಗರ ಹತ್ತಿರದಲ್ಲಿ ಸಂತೋಷದಿಂದ ನೋಡುತ್ತಾ ನಿಂತುಕೊಂಡನು. ಆಗ ಗುರುವು ವಾತಪುರೀಶ್ವರನನ್ನು ಪುನಃ ನೋಡಿ, “ ಎಲೈ ಮಗುವೆ, ನನಗೆ ಕೊಂಚ ಕೆಲಸವಿರುವುದು ನೀನು ಈ ನನ್ನ ಶಿಷ್ಯರೊಡನೆ ಇಲ್ಲಿ ಇರು ” ಎಂದು ಹೇಳಿ ಶಿಷ್ಯರೊಡನೆ ಅದೃಶ್ಯನಾದನು.

೬೩–೬೬. ಆಗ ಅವನು ಗುರುವನ್ನು ಕಾಣದೆ, ಸುಂದರೇಶ್ವರನನ್ನು ಸ್ಮರಿಸುತ್ತಿದ್ದನು. ಮಂತ್ರಗಳನ್ನು ಅನೇಕ ಸಾರಿ ಜಪಿಸುತ್ತಾ ಆ ಗುರುವನ್ನು ಬಹಳಮಟ್ಟಿಗೆ ಸ್ತೋತ್ರಮಾಡಿದನು. ಅವನು ಹೀಗೆಯೆ ಅಲ್ಲಿ ಕೆಲವು ಘಳಿಗೆಗಳನ್ನು ಕಳೆದನಂತರ ಖಿನ್ನನಾಗಿ ನಿದ್ರಾಹಾರಗಳನ್ನು ಬಿಟ್ಟು, ಹುಚ್ಚನಂತೆ ಸುತ್ತಲೂ ತಿರುಗುತಿದ್ದನು. ಶಿವನಲ್ಲಿ ಬಹಳಮಟ್ಟಿಗೆ ಭಕ್ತಿಯುಳ್ಳ ಜನರೆಲ್ಲರೂ ಅವನ ಸುತ್ತಲೂ

ಶ್ರೀವಾಚಕಾನಿ ರಮ್ಯಾಣಿ ಶ್ರುತ್ವಾ ತೇನೋದಿತಾನಿ ಚ ।
ಶಿವೇತ್ಯಂತಂ ಭಕ್ತಿಯುಕ್ತಸ್ತಂ ಯೇ ಪರಿವೃತಾ ಜನಾಃ ॥ ೬೫ ॥

ತಾನ್ಸ್ವಕ್ತಾಂಶ್ಚ ಸಮಾಲೋಕ್ಯ ಸ ಸರ್ವಾಣಿ ಧನಾನಿ ಚ ।
ತೇಭ್ಯೋ ದದೌ ಮಹಾಪ್ರೀತ್ಯಾ ಶಿವಮೇವ ಸ್ಮರನ್ಹೃದಿ ॥ ೬೬ ॥

ಜನವನ್ನಾಥ ಶಂಭೋಶ್ಚ ಶ್ರೀಕಾರ್ಯಾಣಿ ಬಹೂನಿ ಚ ।
ಕಾರಯಾಮಾಸ ತೈರ್ಭಕ್ತ್ಯಾ ಭಾವಿಕಾರ್ಯಮಚಿಂತಯನ್ ॥ ೬೭ ॥

ಧನಾನಿ ಪ್ರೇಷಯಾಮಾಸ ಸುಂದರೇಶಿತುರಪ್ಯಸೌ ।
ಶ್ರೀಕಾರ್ಯಾರ್ಥಂ ಭಕ್ತಿಯುಕ್ತೈಃ ಸ್ವಜನೈರಾಪ್ತಸಜ್ಜನೈಃ ॥ ೬೮ ॥

ದಿನೈಃ ಕತಿಪಯೈಃ ಕ್ಷೀಣ ಮರ್ಥಜಾತಂ ಮಹೀಭುಜಃ ।
ಗಾಯನ್ ಶ್ರೀವಾಚಕಾನ್ಯೇವ ನಿಶ್ಶಂಕಂ ಚರತಿ ಸ್ಮ ಸಃ ॥ ೬೯ ॥

---

ಇರುತ್ತಾ ಶಿವನಲ್ಲಿ ಭಕ್ತಿಯಿಂದಕೂಡಿರುವ ಮತ್ತು ಮನೋಹರವಾದ, ಅವನು ಹೇಳುವ ಮಂತ್ರಗಳನ್ನು ಕೇಳುತ್ತಿದ್ದರು. ಅವನು ಅವರೆಲ್ಲರನ್ನೂ ನೋಡುತ್ತಿದ್ದನು. ಅವನು ಶಿವನಲ್ಲಿ ಭಕ್ತಿಯುಳ್ಳವರಾಗಿರುವ ಅವರಿಗೆ, ಶಿವನನ್ನು ಮನಸ್ಸಿನಲ್ಲಿ ಧ್ಯಾನಮಾಡಿ, ಪ್ರೀತಿಯಿಂದ ಬಹಳ ದ್ರವ್ಯವನ್ನು ದಾನಮಾಡಿದನು.

೬೭–೭೦. ವಾತಪುರೀಶ್ವರನು ಶಂಭುನಾಥ ದೇವಾಲಯಕ್ಕೆ ಸಂಬಂಧಪಟ್ಟ ಅನೇಕ ಕೆಲಸಗಳನ್ನು ಭಕ್ತಿಯಿಂದ ಮಾಡಿಸಿದನು. ಆದರೆ ಮುಂದೆ ಆಗುವ ಕಾರ್ಯದ ಗತಿಯು ಅವನಿಗೆ ತಿಳಿಯಲಿಲ್ಲ. ಮತ್ತು ಸುಂದರೇಶ್ವರ ಸೇವೆಗಾಗಿ ತನಗೆ ಆಪ್ತರಾದ ಸತ್ಪುರುಷರ ಮೂಲಕವಾಗಿ ಭಕ್ತಿಯಿಂದ ಬಹಳ ದ್ರವ್ಯವನ್ನು ಕಳುಹಿಸಿದನು. ಇದರಿಂದ ಕೆಲವು ದಿನಗಳಲ್ಲಿಯೇ ಕುದುರೆಗಳನ್ನು ಕೊಂಡುಕೊಳ್ಳುವುದಕ್ಕಾಗಿ ತಂದಿದ್ದ ದೊರೆಯ ದ್ರವ್ಯವೆಲ್ಲವೂ (ಖರ್ಚಾಯಿತು) ಮುಗಿದುಹೋಯಿತು. ಆಗ ಅವನು ಮಂತ್ರವನ್ನು ಮಾತ್ರವೇ ಉಚ್ಚರಿಸುತ್ತಾ ಯಾವ ಯೋಚನೆಯೂ ಇಲ್ಲದವನಾಗಿ,

**ತಸ್ಮಿನ್ಕಾಲೇ ತು ಸಚಿವಾ ಇತರೇ ಪಾಂಡ್ಯಭೂಪತೇಃ ।**
**ಸೂಚಯಂತಿ ಚ ವೃತ್ತಾಂತಂ ರಾಜ್ಞೇ ವಾತಪುರೇಶಿತುಃ ॥ ೭೦ ॥**

**ಕ್ರುದ್ಧಸ್ತಚ್ಛ್ರವಣಾದ್ರಾಜಾ ಲೇಖಯಾಮಾಸ ಪತ್ರಿಕಾಂ ।**
**ಕೋಶಾಗಾರಸ್ಥಮಖಿಲಂ ಗೃಹೀತಂ ಭವತಾ ಧನಂ ॥ ೭೧ ॥**

**ಕ್ರಯಾಯ ತುರಗಾಣಾಂ ಚ ನಾಯಯುಸ್ತೇ ಹಿ ಸತ್ವರಂ ।**
**ಕ್ರೀತ್ವೋತ್ತಮಾಂಶ್ಚ ತುರಗಾಂಸ್ತ್ವಮಾಗಚ್ಛ ಮಮಾಂತಿಕಂ ॥ ೭೨ ॥**

**ಲಿಖಿತಾಂ ಪತ್ರಿಕಾಮೇವಂ ದೂತೇನಾ ಪ್ರೇಷಯದ್ದ್ರುತಂ ।**
**ಗತ್ವಾ ದೂತಸ್ತತ್ರ ತಸ್ಮೈ ದರ್ಶಯಾಮಾಸ ಪತ್ರಿಕಾಂ ॥ ೭೩ ॥**

**ಅಥ ವಾತಪುರೇಶಶ್ಚ ವಾಚಯಿತ್ವಾ ಚ ಪತ್ರಿಕಾಂ ।**
**ಕರ್ತವ್ಯಂ ಕಾರ್ಯಮಜ್ಞಾಯ ಸ್ಥಾವೇಕತ್ರ ನಿಶ್ಚಲಃ ॥ ೭೪ ॥**

---

ತಿರುಗುತ್ತಿದ್ದನು. ಆಗ ಇತರ ಮಂತ್ರಿಗಳೆಲ್ಲರೂ ಈ ವಾತಪುರೀಶ್ವರನು ಮಾಡಿರುವ ಕೆಲಸವನ್ನೂ ಅವನ ವರ್ತಮಾನವೆಲ್ಲವನ್ನೂ ಪಾಂಡ್ಯರಾಜನಿಗೆ ಸಂಕ್ಷೇಪವಾಗಿ ತಿಳಿಸಿದರು.

೭೧-೭೪. ಅದನ್ನು ಕೇಳಿದ ರಾಜನಿಗೆ ಕೋಪವು ಬಂದಿತು. ಆದ್ದರಿಂದ ರಾಜನು "ನೀನು ಅರಮನೆಯ ಭಂಡಾರದ ದ್ರವ್ಯವೆಲ್ಲವನ್ನೂ ತೆಗೆದುಕೊಂಡು ಕುದುರೆಗಳನ್ನು ಕ್ರಯಕ್ಕೆ ತರುವುದಕ್ಕಾಗಿ ಹೋಗಿರುತ್ತೀಯೆ. ಇದುವರಿಗೂ ಕುದುರೆಗಳು ಯಾವುವೂ ಬರಲಿಲ್ಲ. ಈಗ ನೀನು ಉತ್ತಮವಾದ ಕುದುರೆಗಳನ್ನು ಬೇಗನೆ ಕೊಂಡುಕೊಂಡು ನನ್ನ ಹತ್ತಿರಕ್ಕೆ ಬರಬೇಕು." ಎಂದು ಕಾಗದವನ್ನು ಬರಸಿ, ಅದನ್ನು ದೂತರ ಮೂಲಕವಾಗಿ ಅವನ ಹತ್ತಿರಕ್ಕೆ ಕಳುಹಿಸಿದನು. ವಾತಪುರೀಶ್ವರನಿಗೆ ಆ ಪತ್ರಿಕೆಯನ್ನು ಓದಿದನಂತರ ಏನುಮಾಡುವುದಕ್ಕೂ ತೋರದೆ ಇದ್ದ ಕಾರಣ ಸುಮ್ಮನೆ ಅವನು ಒಂದು ಕಡೆಯಲ್ಲಿ ಕಲ್ಲಿನಂತೆ ನಿಂತುಬಿಟ್ಟನು.

ಸುಂದರೇಶಂ ಹೃದಿ ಧ್ಯಾತ್ವಾ ಮೀನಾಕ್ಷೀಮಪಿ ಭಕ್ತಿತಃ ।
ಜನವನ್ನಾಥ ಮಭ್ಯೇತ್ಯ ಸ್ತುತ್ವಾ ಭಕ್ತ್ಯಾ ಪ್ರಣಮ್ಯ ಚ　　॥ ೭೫ ॥

ಭೀತಭೀತಃ ಪ್ರಾರ್ಥಯತ್ತಂ ಸಾಂಜಲಿ ಸ್ಸಾಶ್ರುಲೋಚನಃ ।
ಜನವನ್ನಾಥ ಸರ್ವಜ್ಞ ಮಮ ವಿಜ್ಞಾಪನಾಂ ಶೃಣು　　॥ ೭೬ ॥

ತುರಗಾನಾನಯೇತ್ಯುಕ್ತ್ವಾ ಪ್ರೇಷಯತ್ಪತ್ರಿಕಾಂ ನೃಪಃ ।
ವಾಜಿನೋ ನೈವ ವಿದ್ಯಂತೇ ಕ್ರೇತಾ ನಾರ್ಥೈಸ್ತದೀಯಕೈಃ　　॥ ೭೭ ॥

ಅರ್ಥಾ ಅಪಿ ಮಯಾ ದತ್ತಾ ಸ್ವಭಕ್ತೇಭ್ಯೋ ವಿಶೇಷತಃ ।
ಸುಂದರೇಶಸ್ಯ ತವ ಚ ಶ್ರೀಕಾರ್ಯಾರ್ಥಂ ಚ ಮಂದಿರೇ　　॥ ೭೮ ॥

ಕಿಂ ಕರ್ತವ್ಯಂ ಮಯಾಜ್ಞೇನ ಪಾಹಿ ಮಾಂ ತ್ವಂ ಕಟಾಕ್ಷತಃ ।
ದತ್ತವಾನಸಿ ಭೂತಿಂ ಚ ತ್ವಾಮೇವ ಶರಣಂ ಗತಃ　　॥ ೭೯ ॥

---

೭೫-೭೯. ಅವನು ಆಗ ಸುಂದರೇಶ್ವರನನ್ನೂ, ಮೀನಾಕ್ಷೀದೇವಿಯನ್ನೂ ಹೃದಯದಲ್ಲಿ ಭಕ್ತಿಯಿಂದ ಧ್ಯಾನಮಾಡಿದನು ಮಹಾತೀರ್ಥವಾಸಿಯಾದ ಸುಂದರ ನಾಥನಿಗೆ ಭಕ್ತಿಯಿಂದ ನಮಸ್ಕಾರಮಾಡಿದನು. ಅವನು ಸ್ತೋತ್ರಗಳನ್ನು ಹೇಳಿ, ಬಹಳ ಹೆದರಿದವನಾಗಿ, ಕಣ್ಣಿನಲ್ಲಿ ನೀರು ಸುರಿಸುತ್ತಾ "ಎಲೆ ಸರ್ವಜ್ಞನಾದ ಸುಂದರನಾಥನೆ. ನನ್ನ ವಿಜ್ಞಾಪನೆಯನ್ನು ಕೇಳು. ರಾಜನು ಕುದುರೆಗಳನ್ನು ತರುವಂತೆ ಕಾಗದವನ್ನು ಬರದಿರುವನು ಈಗ ಕುದುರೆಗಳೂ ಇಲ್ಲ. ಅವುಗಳನ್ನು ಕೊಂಡು ಕೊಳ್ಳುವುದಕ್ಕೆ ದ್ರವ್ಯವೂ ಇರುವುದಿಲ್ಲ. ನಿನ್ನ ಭಕ್ತರಿಗಾಗಿ ದ್ರವ್ಯವೆಲ್ಲವನ್ನೂ ಅತಿಶಯವಾಗಿ ದಾನಮಾಡಿರುತ್ತೇನೆ. ಮತ್ತು ಸುಂದರೇಶ್ವರನ ಮತ್ತು ನಿನ್ನ ದೇವಾ ಲಯದ ಕಾರ್ಯಕ್ಕಾಗಿಯೂ ವೆಚ್ಚಮಾಡಿರುತ್ತೇನೆ. ಏನೂ ತಿಳಿಯದಿರುವ ನಾನು, ಈಗ ಏನುಮಾಡಲಿ, ನನ್ನನ್ನು ನೀನು ಕಟಾಕ್ಷದಿಂದ ನೋಡಿ ರಕ್ಷಿಸು. ನೀನು ನನಗೆ ಭಸ್ಮವನ್ನು ಅನುಗ್ರಹಿಸಿ ಇರುತ್ತೀಯೆ. ಆದ್ದರಿಂದ ನಾನು ಸರ್ವಾತ್ಮನಾದ ನಿನ್ನನ್ನು ಶರಣುಹೊಂದಿರುತ್ತೇನೆ." ಎಂದು ಬೇಡಿಕೊಂಡನು.

ತತ್ರಾಂತರೇ ಖಾದಭವದ್ವಾಣೀ ತಸ್ಯಾರ್ತಿಹಾರಿಣೀ ।
ಸೋಽಪಚಾರಂ ವಿಲಿಖ್ಯಾದ್ಯ ಪತ್ರಿಕಾಂ ಪೃಥಿವೀಪತೇಃ ॥ ೪೦ ॥

ಪ್ರೇಷಯ ತ್ವಂ ಸ್ಥಿರೋ ಭೂತ್ವಾ ಮಾಭೈಷೀ ರಹಮಸ್ಮಿ ತೇ ।
ಇತಿ ವಾತಪುರೇಶಶ್ಚ ತಾಮಾಕರ್ಣ್ಯ ಗಿರಂ ಮುದಾ ॥ ೪೧ ॥

ವಿಲಿಖ್ಯ ಪ್ರೇಷಯಾಮಾಸ ಪತ್ರಿಕಾಂ ದೂತಹಸ್ತತಃ ।
ಆನಯಿಷ್ಯಾಮಿ ತುರಗಾನ್ಪಂಚಷಡ್ದಿವಸೈರ್ನೃಪ ॥ ೪೨ ॥

ಕಲ್ಪ್ಯಂತಾಂ ಮಂದುರಾಶ್ಶೀಘ್ರಂ ಖನ್ಯಂತಾಂ ಚ ಸರಾಂಸಿ ಚ ।
ಅಲಂಕ್ರಿಯಂತಾಂ ವೀಥ್ಯಶ್ಚ ಮಧುರಾಪುರ ಮಧ್ಯಗಾಃ ॥ ೪೩ ॥

ವಾಚ ಶ್ಶ್ರುಣುಷ್ವ ನೇದಾನೀಂ ಸೂಚಕಾನಾಂ ಮಹೀಪತೇ ।
ಯಥಾ ಪುರಾ ಮಾಂ ವಿಶ್ವಸ್ಯ ತಿಷ್ಠ ಸೀತಃಪರಂ ತಥಾ ॥ ೪೪ ॥

---

೪೦. ಆಗ “ಎಲೈ ವಾತಪುರೀಶ್ವರನೆ, ನೀನು ಮರ್ಯಾದೆಯಾಗಿ ರಾಜನಿಗೆ ಕಾಗದವನ್ನು ಬರೆದು ಕಳುಹಿಸು. ಹೆದರಬೇಡ, ಧೈರ್ಯವಾಗಿರು. ನಾನು ನಿನ್ನನ್ನು ರಕ್ಷಿಸುವವನಾಗಿರುತ್ತೇನೆ.” ಎಂದು ಅಶರೀರವಾಣಿಯು ಅವನಿಗೆ ಕೇಳಿಸಿತು. ಅದರಿಂದ ಅವನಿಗೆ ಮನಸ್ಸು ಸಮಾಧಾನವಾಯಿತು.

೪೧–೪೫. ಆಗ ವಾತಪುರೀಶ್ವರನು ಸಂತೋಷದಿಂದ ಆ ಮಾತನ್ನು ಕೇಳಿ, “ಎಲೈ ಪ್ರಭುವೆ, ನಾನು ಕುದುರೆಗಳನ್ನು ಇನ್ನು ಐದು, ಆರು, ದಿನಗಳಲ್ಲಿ ತಂದು ಕೊಡುವೆನು. ನೀನು ಅಶ್ವಶಾಲೆಯನ್ನು ಬೇಗನೆ ಸಿದ್ಧಪಡಿಸು. ಕೊಳಗಳನ್ನು ಕುದುರೆಗಳಿಗಾಗಿ ಕಟ್ಟಿಸು. ಮಧುರಾನಗರದ ಬೀದಿಗಳನ್ನು ಅಲಂಕಾರಮಾಡಿಸು. ಈಗ ನೀನು ಚಾಡಿ ಹೇಳುವವರ ಮಾತನ್ನು ಕೇಳಬೇಡ. ಮೊದಲು ನನ್ನಲ್ಲಿ ಇದ್ದ

ತಥಾಹಿ ಭವತಸ್ಸ್ವಾಮಿಂಸ್ತತ್ರ ಸಂತಿ ಮನೋರಥಾಃ ।
ಪತ್ರಿಕಾಂ ಚೇತಿ ಸಂಪ್ರೇಷ್ಯ ಶಿವಚಿಂತನತತ್ಪರಃ ॥ ೮೫ ॥

ಚಾಂಚಲ್ಯಮಗಮನ್ಮಂತ್ರೀ ಜ್ಞಾನಭಕ್ತಿಯುತೋಪಿ ಸಃ ।
ಚಿಂತಾಕುಲೇ ಶಯಾನೇ ಚ ತಸ್ಮಿನ್ವಾತಪುರೇಶ್ವರೇ ॥ ೮೬ ॥

ಕೃಪಯಾ ಪರಯಾ ಯುಕ್ತಿ ಸ್ವಪ್ನೇ ಶಂಭು ಸ್ತಮಬ್ರವೀತ್ ।
ವತ್ಸ ವಾತಪುರೇಶ ತ್ವಂ ಯಥಾ ಭಕ್ತಸ್ತಥಾ ಮಯಿ ॥ ೮೭ ॥

ಭಕ್ತೋ ನಾನ್ಯೋಽಸ್ತಿ ಲೋಕೇಷು ಪೂರ್ಣಕಾಮೋ ಭವಿಷ್ಯಸಿ ।
ಅಥ ತ್ವಂ ತ್ವರಿತೋ ಗಚ್ಛ ಮುದಾ ಪಾಂಡ್ಯನೃಪಂ ಪ್ರತಿ ॥ ೮೮ ॥

ಅಶ್ವಾನಪಿ ಪ್ರದಾಸ್ಯಾಮಿ ರಾಜ್ಞೋ ದಾತುಂ ಮನೋಜವಾನ್ ।
ಸ್ವಾತಂತ್ರ್ಯಮಪಿ ತೇ ಭೂಯಾತ್ಸದಾ ಸಂತೋಷಕಾರಣಂ ॥ ೮೯ ॥

---

ವಿಶ್ವಾಸವನ್ನೇ ಈಗಲೂ ಇರಿಸಿದ್ದಲ್ಲಿ ನಿನ್ನ ಇಷ್ಟಗಳೆಲ್ಲವೂ ಸರಿಯಾಗಿ ನೆರವೇರುವವು." ಎಂದು ಅರಿಮರ್ದನ ಪಾಂಡ್ಯರಾಜನಿಗೆ ಕಾಗದವನ್ನು ಬರೆದು ದೂತನ ಮೂಲಕವಾಗಿ ಕಳುಹಿಸಿದನು.

೮೬–೮೯. ಕಾಗದವನ್ನು ರಾಜನಿಗೆ ಕಳುಹಿಸಿದನಂತರ ಅವನು, ಶಿವನನ್ನು ಧ್ಯಾನಮಾಡುವುದರಲ್ಲಿ ಆಸಕ್ತನಾಗಿದ್ದನು. ರಾಜನಿಗೆ ಮಂತ್ರಿತ್ವವನ್ನು ಮಾಡುವ ಬುದ್ಧಿಯ ವೇಗವು ಕಡಿಮೆಯಾಗಲಿಲ್ಲ. ಶಿವಜ್ಞಾನ ಮತ್ತು ಶಿವಭಕ್ತಿಯುಳ್ಳವನಾಗಿದ್ದರೂ ಅವನಿಗೆ ಬುದ್ಧಿಚಾಂಚಲ್ಯವು ಉಂಟಾಯಿತು. ಬಹಳ ಯೋಚನೆಯಿಂದ ಅವನು ಮಲಗಿದ್ದಾಗ ಶಿವನು ಅವನಲ್ಲಿ ಬಹಳ ದಯೆಯುಳ್ಳವನಾಗಿ "ಎಲೈ ಮಗುವೆ, ವಾತಪುರೀಶ್ವರನೆ, ನೀನು ಸಂತೋಷವಾಗಿ ನನ್ನಲ್ಲಿ ಭಕ್ತಿಯಿಂದ ಇರುವ ಪ್ರಕಾರ ಇತರರು ಯಾರೂ ಇರುವುದಿಲ್ಲ. ಆದ್ದರಿಂದ ನಿನ್ನ ಆಸೆಯೆಲ್ಲವೂ, ಪೂರ್ಣವಾಗಿ ನೆರವೇರುವುದು. ನೀನು ಬೇಗನೆ ಪಾಂಡ್ಯರಾಜನ ಸಮೀಪಕ್ಕೆ ಹೋಗು. ಮನೋವೇಗದಿಂದ ಇರುವ ಕುದುರೆಗಳನ್ನು ರಾಜನಿಗೆ ನಾನು ಕೊಡುತ್ತೇನೆ. ನಿನಗೆ ಸಂತೋಷವುಂಟಾಗಿ ಮುಂದೆ ಇನ್ನೂ ಸ್ವಾತಂತ್ರ್ಯಉಂಟಾಗುವುದು." ಎಂದು ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ ಹೇಳಿದನು.

ಇತಿ ಪ್ರತ್ಯಕ್ಷವದ್ದೃಷ್ಟ್ವಾ ಸ್ವಪ್ನಂ ವಾತಪುರೇಶ್ವರಃ ।
ಸಮುತ್ಥಾಯ ಮಹಾಧೀಮಾನ್ ಭಸ್ಮೋದ್ಧೂಲಿತವಿಗ್ರಹಃ ॥ ೯೦ ॥

ನತ್ವಾಥ ಜವನನ್ನಾಥಂ ಮಧುರಾಮಾಯಯೌ ಜವಾತ್ ।
ಆಸ್ಥಾನೇ ಸಚಿವೈಸ್ಸಾರ್ಧಮಾಸೀನಂ ಪಾಂಡ್ಯಭೂಪತಿಂ ॥ ೯೧ ॥

ದದರ್ಶೋಲ್ಲಾಸವದನಂ ತಂ ದೃಷ್ಟ್ವಾ ಸೋಽಪಿ ಹಿಪ್ರಿಯೋ ।
ಉತ್ಸಾರ್ಯ ಸಚಿವಾನ್ ಸರ್ವಾನಥ ರಾಜಾರಿಮರ್ದನಃ ॥ ೯೨ ॥

ಪಪ್ರಚ್ಛ ಪರಯಾ ಪ್ರೀತ್ಯಾ ಮಂತ್ರಿಣಂ ದೀರ್ಘದರ್ಶಿನಂ ।
ಅರ್ಥೈಃ ಕಿಯದ್ಭಿಃ ಕ್ರೀತಾಶ್ಚ ಭವತಾ ಚ ತುರಂಗಮಾಃ ॥ ೯೩ ॥

ಜಾತಾಃ ಕೇಭ್ಯಶ್ಚ ದೇಶೇಭ್ಯಃ ಕಿಯಂತ ಸ್ಸಂಖ್ಯಯಾ ವದ ।
ಕಾನಿ ಕಾನಿ ಚ ವಿದ್ಯಂತೇ ತೇಷು ಸಲ್ಲಕ್ಷಣಾನಿ ಚ ॥ ೯೪ ॥

---

೯೦-೯೪. ವಾತಪುರೀಶ್ವರನು ಶಿವನೇ ಪ್ರತ್ಯಕ್ಷವಾಗಿ ಬಂದು ಹೇಳಿರುವ ಸ್ವಪ್ನವನ್ನು ನೋಡಿದನು. ಅವನು ಬಹಳ ಬುದ್ಧಿವಂತನಾದ ಕಾರಣ, ಭಸ್ಮದಿಂದ ಶರೀರವೆಲ್ಲವನ್ನೂ ಉದ್ಧೂಳನೆ ಮಾಡಿಕೊಂಡು, ಸುಂದರನಾಥನಿಗೆ ನಮಸ್ಕಾರ ಮಾಡಿ, ಮಧುರಾನಗರಕ್ಕೆ ಬೇಗನೆ ಬಂದನು. ಸಭೆಯಲ್ಲಿ ಮಂತ್ರಿಗಳೊಡನೆ ಪಾಂಡ್ಯರಾಜನು ಪ್ರಕಾಶಿಸುತ್ತಾ ಸಂತೋಷದಿಂದ ಇರುವುದನ್ನು ನೋಡಿದನು. ರಾಜನು ಇವನನ್ನು ನೋಡಿ, ಸಂತೋಷಪಟ್ಟನು. ಉಳಿದ ಮಂತ್ರಿಗಳೆಲ್ಲರೂ ಹೊರಟ ನಂತರ ದೂರಾಲೋಚನೆಯುಳ್ಳ ಈ ಮಂತ್ರಿಯನ್ನು "ಎಷ್ಟು ದುಡ್ಡನ್ನು ಕೊಟ್ಟು ಕುದುರೆಗಳನ್ನು ಕ್ರಯಮಾಡಿರುತ್ತೀಯೆ. ಕುದುರೆಗಳು ಯಾವ ಯಾವ ದೇಶದಲ್ಲಿ ಹುಟ್ಟಿದವುಗಳು. ಅವುಗಳು ಎಷ್ಟು ಇರುತ್ತವೆ. ಅವುಗಳು ಯಾವ ಯಾವ ಉತ್ತಮ ಲಕ್ಷಣಗಳಿಂದ ಕೂಡಿರುತ್ತವೆ. ಉತ್ತಮವಾದ ಲಕ್ಷಣಗಳಿರುವ ಕುದುರೆಗಳೆಷ್ಟು. ಇವುಗಳೆಲ್ಲವನ್ನೂ ಹೇಳು" ಎಂದು ರಾಜನು ಬಹಳ ಪ್ರೀತಿಯಿಂದ ಪ್ರಶ್ನೆ ಮಾಡಿದನು.

ಸಲ್ಲಕ್ಷಣೈರ್ಲಕ್ಷಿತೇಷು ಕಿಯಂತಸ್ತೇಷು ಮಧ್ಯಮಾಃ ।
ಇತಿ ಪೃಚ್ಛತಿ ಭೂಪಾಲೇ ಪ್ರಾಹ ಮಂತ್ರೀ ಶಿವಂ ಸ್ಮರನ್ ॥ ೯೫ ॥

ಕ್ರೀತಾ ಅರ್ಥೈರಸಂಖ್ಯಾತೈರ್ನಾನಾದೇಶಸಮುದ್ಭವಾಃ ।
ಅಶ್ವಾ ಅನಂತಾ ಅಭವಂ ಸ್ತಲ್ಲಕ್ಷಣಸಮನ್ವಿತಾಃ ॥ ೯೬ ॥

ಯುವಾನೋ ಜವನಾಸ್ಸಂತಿ ತ್ವದ್ಧಿತಾಸ್ತೇಷು ಸದ್ಧಯಾಃ ।
ಅನಂತಾಶ್ಚರ್ಯಯುಕ್ತಾನಾಮನಂತಾನಾಂ ಚ ಸಂಖ್ಯಯಾ ॥ ೯೭ ॥

ಅಶ್ವಾನಾಂ ವೈಭವಂ ವಕ್ತುಮಶಕ್ತೋऽಹಂ ಮಹೀಪತೇ ।
ದೃಷ್ಟೇಷು ತೇಷು ವಿಶದಾ ತೇಷಾಮುತ್ಕೃಷ್ಟತಾ ಭವೇತ್ ॥ ೯೮ ॥

ನಾಮ್ನಾ ಚಾಶ್ವಪತಿರ್ಭೂಯಾಸ್ತ್ವಂ ಚ ಪಾಂಡ್ಯಪತೇ ಪ್ರಭೋ ।
ಮದೀಯಮಪಿ ಸಾಮರ್ಥ್ಯಮಹಂ ವಕ್ತುಂ ನ ಚ ಕ್ಷಮಃ ॥ ೯೯ ॥

---

೯೫-೯೮. ವಾತಪುರೇಶ್ವರನು ರಾಜನ ಪ್ರಶ್ನೆಯನ್ನು ಕೇಳಿ, ಶಿವನನ್ನು ಸ್ಮರಿಸುತ್ತಾ "ನಾನು ಅನೇಕ ದೇಶಗಳಲ್ಲಿ ಹುಟ್ಟಿದ ಕುದುರೆಗಳನ್ನು ಬಹಳವಾಗಿ ಕೊಂಡುಕೊಂಡಿರುತ್ತೇನೆ. ಕ್ರಯದ ದ್ರವ್ಯವು ಬಹಳವಾಗಿರುವುದು. ಉತ್ತಮವಾದ ಲಕ್ಷಣಗಳುಳ್ಳ ಕುದುರೆಗಳು ಬಹಳವಾಗಿರುವುವು. ಅವುಗಳಲ್ಲಿ ಯೌವ್ವನದಲ್ಲಿರುವ ಮತ್ತು ವೇಗಶಾಲಿಯಾದ ಉತ್ತಮವಾದ ಕುದುರೆಗಳಿರುವುವು ಬಹಳ ಆಶ್ಚರ್ಯಕರವಾಗಿಯೂ ಬಹಳವಾಗಿಯೂ ಇರುವ ಆ ಕುದುರೆಗಳ ಮಹಿಮೆಯನ್ನು ಹೇಳಲು ಸಾಮರ್ಥ್ಯವಿಲ್ಲ. ನೀನು ಅವುಗಳನ್ನು ನೋಡಿದ ನಂತರ ನಿನಗೆ ಉಂಟಾಗುವ ಆನಂದವು ಬಹಳವಾಗುವುದು ಅವುಗಳೆಲ್ಲವೂ ನಿನ್ನ ಹತ್ತಿರಕ್ಕೆ ಬಂದನಂತರ ನೀನು ಅಶ್ವಪತಿಯೆಂದು ಪ್ರಸಿದ್ಧನಾಗುತ್ತೀಯೆ. ಎಲೈ ಪ್ರಭುವೆ, ಕುದುರೆಗಳನ್ನು ತರಿಸುವುದಕ್ಕಾಗಿ ಉಪಯೋಗಿಸಿರುವ ನನ್ನ ಶಕ್ತಿಯನ್ನು ಹೇಳಲು ನನಗೇ ಸಾಮರ್ಥ್ಯವು ಸಾಲದು." ಎಂದು ಉತ್ತರವನ್ನು ಹೇಳಿದನು.

೯೯-೧೦೩. ರಾಜನು ಮಂತ್ರಿಯಾದ ಅವನ ಮಾತನ್ನು ಕೇಳಿ, ಸಂತೋಷವನ್ನು ಹೊಂದಿದನು. ಅನೇಕ ವಿಧವಾದ ವಸ್ತ್ರಾಭರಣಗಳನ್ನು ಅವನಿಗೆ ಕೊಟ್ಟು

ಇತ್ಯುಕ್ತೇ ಸಚಿವೇ ತಸ್ಮಿನ್ಸಂತುಷ್ಟಹೃದಯೋ ನೃಪಃ ।
ಚಿತ್ರೈರಾಭರಣೈರ್ವಸ್ತ್ರೈಸ್ತಂ ಸಂಭಾವ್ಯ ಚ ಸದ್ಗಿರಾ ॥ ೧೦೦ ॥

ಉಕ್ತ್ವಾ ಗಚ್ಛೇತಿ ಭವನಂ ದದೌ ಸ್ವಾಜ್ಞಾಂ ಚ ಮಂತ್ರಿಣೇ ।
ಸೋಽಪಿ ಶೀಘ್ರಂ ವಿನಿರ್ಗತ್ಯ ಸುಂದರಾನ್ನೃಪಮಂದಿರಾತ್ ॥ ೧೦೧ ॥

ಹೇಮಪದ್ಮಾಕರಂ ಪ್ರಾಪ್ಯ ಸ್ನಾತ್ವಾ ಸಂಧ್ಯಾಮುಪಾಸ್ಯ ಚ ।
ಭಸ್ಮನೋದ್ಧೂಲ್ಯ ರುದ್ರಾಕ್ಷಮಾಲಾಶ್ಚಾಪಿ ಸುಧಾರ್ಯ ಚ ॥ ೧೦೨ ॥

ತತ್ತೀರಸ್ಥಂ ವಿಘ್ನರಾಜಂ ಸ್ತುತ್ವಾ ನತ್ವಾ ಷಡಾನನಂ ।
ಸ್ವಮನೋರಥಸಿದ್ಧ್ಯರ್ಥಂ ಸುಂದರೇಶ್ವರಸುಂದರೀಂ ॥ ೧೦೩ ॥

ಮನೋಜ್ಞಾಂ ಮೀನನಯನಾಂ ಸಂಪ್ರಾರ್ಥ್ಯ ಪ್ರಣಿಪತ್ಯ ಚ ।
ಶ್ರೀಹಾಲಾಸ್ಯಪತಿಂ ಶಂಭುಂ ಸರ್ವಜ್ಞಂ ಸರ್ವಕಾಮದಂ ॥ ೧೦೪ ॥

---

ಒಳ್ಳೆಯ ಮಾತುಗಳನ್ನು ಹೇಳಿ ಅವನು ಮನೆಗೆ ಹೋಗಲು ಅಪ್ಪಣೆಯನ್ನು ಕೊಟ್ಟು ಕಳುಹಿಸಿದನು. ವಾತಪುರೇಶ್ವರನು ಸುಂದರವಾದ ಅರಮನೆಯಿಂದ ಬೇಗನೆ ಹೊರಕ್ಕೆ ಹೊರಟು, ಹೇಮಪದ್ಮಾಕರದಲ್ಲಿ ಸ್ನಾನಮಾಡಿ, ಭಸ್ಮ ರುದ್ರಾಕ್ಷಗಳನ್ನು ಧರಿಸಿ, ಸಂಧ್ಯಾವಂದನಾದಿಗಳನ್ನು ಆಚರಿಸಿದನು. ಅನಂತರದಲ್ಲಿ ವಿಘ್ನರಾಜ, ಷಡಾನನ, ಇವರುಗಳಿಗೆ ನಮಸ್ಕರಿಸಿ ಸುಂದರೇಶ್ವರನ ಸುಂದರಿಯಾದ ಮೀನನಯನಾದೇವಿಗೆ ನಮಸ್ಕಾರಮಾಡಿ, ಸ್ತೋತ್ರಮಾಡಿ, ತನ್ನ ಕಾರ್ಯವು ನೆರವೇರುವಂತೆ ಪ್ರಾರ್ಥನೆ ಮಾಡಿಕೊಂಡನು.

೧೦೪–೧೦೬. ಅನಂತರದಲ್ಲಿ ಅವನು ಹಾಲಾಸ್ಯೇಶ್ವರನಾದ, ಸರ್ವಜ್ಞನಾಗಿರುವ ಭಕ್ತರ ಇಷ್ಟಾರ್ಥಗಳನ್ನು ಕೊಡುವ ಶಿವನನ್ನು ಭಕ್ತಿಯಿಂದ ಪ್ರದಕ್ಷಿಣೆ ನಮಸ್ಕಾರ ಪೂರ್ವಕವಾಗಿ ಸೇವಿಸಿ, ತನ್ನ ಇಷ್ಟವು ಸಿದ್ಧವಾಗುವಂತೆ ಪ್ರಾರ್ಥನೆ

ಭಕ್ತ್ಯಾ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಚ ಮುಹುರ್ಮುಹುಃ ।
ಭಕ್ತ್ಯಾ ವಿಜ್ಞಾಪಯಾಮಾಸ ಮಂತ್ರೀ ಸ್ವೇಷ್ಟಸುಸಿದ್ಧಯೇ ॥ ೧೦೫ ॥

ವಿಜ್ಞಾಪನಾಂತೇ ಖಾದ್ವಾಣೀ ವರದಸ್ಯ ಮಹೇಶಿತುಃ ।
ಪ್ರಾದುರಾಸೀತ್ಸುಸ್ವರಾ ಚ ಖೇದೋ ಮಾಸ್ತು ತವೇತಿ ಚ ॥ ೧೦೬ ॥

ಇತ್ಯಮಾತ್ಯಸ್ಸಮಾಕರ್ಣ್ಯ ವಾಚಮಾಕಾಶಸಂಭವಾಂ ।
ಮುದಾ ಪ್ರದಕ್ಷಿಣೀಕೃತ್ಯ ನತ್ವಾ ಪ್ರೀತ್ಯಾ ಗೃಹಂ ಗತಃ ॥ ೧೦೭ ॥

ರಾಜ್ಞೇ ತ್ವಶ್ವಮುಖ್ಯಾಂಶ್ಚ ಪ್ರದಾಸ್ಯತಿ ಮಹೇಶ್ವರಃ ।
ಮಮಾಪ್ಯನುಗ್ರಹಂ ಸದ್ಯಃ ಕರಿಷ್ಯತಿ ದಯಾನಿಧಿಃ ॥ ೧೦೮ ॥

ಇತಿ ನಿಶ್ಚಿತ್ಯ ಮನಸಿ ಭಕ್ತ್ಯಾ ವಾತಪುರೇಶ್ವರಃ ।
ಭೋಜಯಿತ್ವಾ ಶಂಭುಭಕ್ತಾನ್ಬಾಂಧವಾನಿತರಾನ್ದ್ವಿಜಾನ್ ॥ ೧೦೯ ॥

ಸ್ವಯಂ ಭುಕ್ತ್ವಾಥ ನಿಶ್ಶಂಕೋ ನಿರ್ವಿಕಾರ ಸ್ಸುಖಂ ಸ್ಥಿತಃ।
ಮನೋಹರಂ ಮಂಚಮಧ್ಯ ಮಧ್ಯಾಸ್ತೇ ಮಂತ್ರಿಣಾಂ ವರಃ ॥ ೧೧೦ ॥

---

ಮಾಡಿಕೊಂಡನು. ವಾತಪುರೇಶ್ವರನ ವಿಜ್ಞಾಪನೆಯ ಕೊನೆಯಲ್ಲಿ " ನೀನು ವ್ಯಸನ ಪಡಬೇಡ " ಎಂದು ಸರಿಯಾದ ಸ್ವರವುಳ್ಳ ಆಕಾಶವಾಣಿಯು ಅವನಿಗೆ ಕೇಳಿಸಿತು.

೧೦೭–೧೧೦. ಆ ಮಾತನ್ನು ಕೇಳಿದ ಮಂತ್ರಿಯು ಸಂತೋಷದಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ತನ್ನ ಮನೆಗೆ ಬಂದನು. " ಮಹೇಶ್ವರನು ರಾಜನಿಗೆ ಕುದುರೆಗಳನ್ನು ಕೊಡುವನು ದಯಾನಿಧಿಯಾದ ಅವನೇ ನನಗೂ ಅನುಗ್ರಹವನ್ನು ಮಾಡುವನು " ಎಂದು ಮಂತ್ರಿಯಾದ ವಾತಪುರೇಶ್ವರನು ಮನಸ್ಸಿನಲ್ಲಿ ದೃಢವಾಗಿ ನಂಬಿಕೊಂಡನು. ಅವನು ಶಿವಭಕ್ತರಿಗೂ, ಮತ್ತು ಇತರ ಬ್ರಾಹ್ಮಣರಿಗೂ, ಬಂಧುಗಳಿಗೂ ಭೋಜನಮಾಡಿಸಿದನು. ತಾನೂ ಊಟಮಾಡಿ ಕೊಂಡು ಯಾವ ಯೋಚನೆಯೂ ಇಲ್ಲದವನಾಗಿ ಅಂದವಾಗಿರುವ ಮಂಚದಲ್ಲಿ ಕೂತುಕೊಂಡು ಸುಖದಿಂದ ಕಾಲವನ್ನು ಕಳೆಯುತ್ತಿದ್ದನು.

ತದ್ವರ್ಗ್ಯಾರ್ದ್ವಿಜವರ್ಯಾಸ್ತು ತಮಭ್ಯೇತ್ಯ ಸ ಸಾಧ್ವಸಾಃ ।
ಪ್ರಸಾರ್ಯ ಪುರತಃ ಪಾಣೀನ್ಪ್ರಾಹುರೇವ ಮುಪಹ್ವರೇ ॥ ೧೧೧ ॥

ಸಾಧು ಮಾರ್ಗಂ ಪರಿತ್ಯಜ್ಯ ರಾಜಸೇವಾಂ ಕರೋಷಿ ಚ ।
ರಾಜ್ಞೋ ಮಂತ್ರ್ಯಭವಃ ಪಶ್ಚಾದ್ರಾಜದ್ರೋಹಃ ಕೃತಸ್ತ್ವಯಾ ॥ ೧೧೨ ॥

ರಾಜಾಪಿ ತಂ ನ ಜಾನಾತಿ ಶ್ರೀಹಾಲಾಸ್ಯೇಶ ರಾಜ್ಞಯಾ ।
ಜ್ಞಾತೇ ಸತಿ ಮಹೀಪಾಲೇ ತ್ವಪರಾಧಂ ತ್ವಯಾ ಕೃತಂ ॥ ೧೧೩ ॥

ತ್ವಾಂ ಚ ಬಂಧುಜನಾನಸ್ಮಾನ್ಬಾಧತೇ ಸ ನ ಸಂಶಯಃ ।
ಇತಿ ಖೇದೈರುಕ್ತವತ್ಸು ಬಾಂಧವೇಷ್ವಖಿಲೇಷು ಚ ॥ ೧೧೪ ॥

ನಿಸ್ಸಂಗಸ್ತೇಷು ಮಂತ್ರೀ ಚ ಪ್ರಾಹೈವಂ ಧೈರ್ಯಸಂಯುತಃ ।
ಜ್ಞಾತಜ್ಞೇಯೇನ ಚ ಮಯಾ ಕಿಂ ಕಾರ್ಯಂ ಭವತಾಮಿಹ ॥ ೧೧೫ ॥

---

೧೧೧–೧೧೪. ಹೀಗೆ ಇರುವಾಗ ಅವನ ಬಂಧುಗಳು ಅವನ ಹತ್ತಿರಕ್ಕೆ ಬಂದರು. ಅವರು ಹೆದರಿಕೆಯಿಂದ ಕೂಡಿದವರಾಗಿ ಅವನ ಮುಂದುಗಡೆಯಲ್ಲಿ ಕೈಗಳನ್ನು ನೀಡಿಕೊಂಡು ರಹಸ್ಯವಾಗಿ " ನೀನು ರಾಜನ ಸೇವೆಯನ್ನು ಮಾಡುತ್ತಾ ಇದ್ದೀಯೆ. ಸತ್ಪುರುಷರಾದ ಯೋಗಿಗಳ ಹಾಗೆ ನಿಷ್ಕಾಮಕರ್ಮವನ್ನು ಮಾಡುತ್ತಿರುವವನಾಗಿಲ್ಲ. ಅಲ್ಲದೆ ರಾಜನಿಗೆ ಮಂತ್ರಿಯಾಗಿದ್ದುಕೊಂಡು ಈಗ ರಾಜನಿಗೆ ದ್ರೋಹವನ್ನು ಮಾಡಿರುತ್ತೀಯೆ. ಇದು ರಾಜನಿಗೆ ತಿಳಿದಿಲ್ಲ. ಇದರಿಂದ ನೀನು ವ್ಯವಹಾರ ಮತ್ತು ದೇವತಾ ಧ್ಯಾನ, ಎರಡರಲ್ಲಿಯೂ, ಇರುತ್ತೀಯೆ. ಹಾಲಾಸ್ಯ ಪ್ರಭುವಿನ ಆಜ್ಞೆಯಿಂದ ರಾಜನಿಗೆ ಈ ದ್ರೋಹವು ತಿಳಿದಾಗ ನಿನ್ನ ಅಪರಾಧಕ್ಕೆ ನಮ್ಮನ್ನೆಲ್ಲರನ್ನೂ ಮತ್ತು ನಿನ್ನನ್ನೂ ಕೂಡ ರಾಜನು ಶಿಕ್ಷೆ ಮಾಡುವನು. ಇದರಲ್ಲಿ ಕೊಂಚವೂ ಸಂಶಯವಿಲ್ಲ" ಎಂದು ವ್ಯಸನಪಡುತ್ತಾ ಹೇಳಿದರು.

೧೧೫–೧೧೬. ಮಂತ್ರಿಯಾದ ಅವನು ಅವರ ಮಾತನ್ನು ಕೇಳಿ, ಅದಕ್ಕೆ ಗಮನ ಕೊಡಲಿಲ್ಲ. " ಪ್ರಪಂಚದಲ್ಲಿ ತಿಳಿಯಬೇಕಾದದ್ದನ್ನು ನಾನು ತಿಳಿದು

**ಅಸ್ಮಾಕಮಪಿ ಕೇ ಯೂಯಂ ಯುಷ್ಮಾಕಮಹಮೇವ ಕಃ ।**
**ಸಂಸಾರವಾಸನಾ ನಷ್ಟಾ ಜಗನ್ನಾಥಸೇವಯಾ ॥ ೧೧೬ ॥**

**ರಾಜ್ಞೇ ದ್ರೋಹೋ ನ ಕರ್ತವ್ಯಃ ಇತಿ ಬುದ್ಧ್ವಾ ಸಮಾಗತಃ ।**
**ಉಪಾಯೇನಾನೃಣೋ ಭೂತ್ವಾ ಗಮಿಷ್ಯಾಮಿ ಯಥೇಚ್ಛಯಾ ॥ ೧೧೭ ॥**

**ಇತಿ ತದ್ಗಿರಮಾಕರ್ಣ್ಯ ಪ್ರಯಯುಸ್ತಸ್ಯ ಬಾಂಧವಾಃ ।**
**ಬಂಧುತಾಯಾಶ್ಚ ತಸ್ಯಾಪಿ ಮಿಥೋ ನಿಸ್ಸಂಗತಾ ಭವತ್ ॥ ೧೧೮ ॥**

**ಪಯಸಾಂ ಪದ್ಮಪತ್ರಾಣಾಂ ಸ್ವಭಾವೇನ ಯಥಾ ತಥಾ ।**
**ಅಥಾಪರೇದ್ಯುಃ ಪಾಂಡ್ಯೋಽಪಿ ದೂತೈರಾಹೂಯ ಮಂತ್ರಿಣಂ ॥ ೧೧೯ ॥**

**ಅಶ್ವಾಃ ಕದಾ ಗಮಿಷ್ಯಂತೀ ತ್ಯಪೃಚ್ಛದತಿಕೌತುಕಾತ್ ।**
**ಇತ್ಯಬ್ರವೀತ್ತದಾ ಸೋಽಪಿ ಸುಂದರೇಶಂ ಹೃದಿ ಸ್ಮರನ್ ॥ ೧೨೦ ॥**

---

ಕೊಂಡಾಗಿರುವುದು ನನ್ನಿಂದ ನಿಮಗೆ ಯಾವ ಕಾರ್ಯವಾಗಬೇಕಾಗಿರುವುದು. ನನಗೆ ನೀವು ಯಾರು? ನಿಮಗೆ ನಾನು ಯಾರು? ಮಹಾತೀರ್ಥೇಶ್ವರನಾದ, ಜಗನ್ನಾಥೇಶ್ವರನ ಸೇವೆಯಿಂದ ಸಂಸಾರವಾಸನೆಯು ನನಗೆ ತಪ್ಪಿ ಹೋಯಿತು. ನಾನು ಶಿವನ ಪ್ರೀತಿಗಾಗಿ ಮಾಡಿರುವ ಧ್ಯಾನಾದಿಗಳು ನಿಷ್ಕಾಮಕರ್ಮವಾಗಿರುವುವು, ಆದ್ದರಿಂದಲೇ ರಾಜನಿಗೆ ದ್ರೋಹವನ್ನು ಮಾಡಬಾರದೆಂದು ನಾನು ಇಲ್ಲಿಗೆ ಬಂದಿರುವೆನು. ಉಪಾಯದಿಂದ ರಾಜನ ಋಣಬಾಧೆಯನ್ನು ಕಳೆದುಕೊಂಡು, ನನ್ನ ಇಚ್ಛೆ ಬಂದ ಹಾಗೆ ಹೊರಟು ಹೋಗುತ್ತೇನೆ" ಎಂದು ಧೈರ್ಯದಿಂದ ಉತ್ತರವನ್ನು ಹೇಳಿದನು

೧೧೭–೧೨೪. ಅವನ ಮಾತನ್ನು ಕೇಳಿ ಅವರೆಲ್ಲರೂ ಹೊರಟು ಹೋದರು. ಅದರಿಂದ ಅವನಿಗೆ ಬಂಧುಗಳ ಸಂಬಂಧವು ದಿನೇ ದಿನೇ ಕಡಿಮೆಯಾಯಿತು. ಇವನು ಮಾತ್ರ ಬಂಧುಗಳ ಮಧ್ಯದಲ್ಲಿದ್ದರೂ ಯಾರ ಸಂಗಡಲೂ ಸ್ನೇಹ,

ಅಶ್ವಾ ಅಪ್ಯದ್ಯ ವಾ ಶ್ವೋ ವಾ ಪರಶ್ವೋ ವಾ ಮಹೀಪತೇ ।
ಅವಶ್ಯಮಾಗಮಿಷ್ಯಂತಿ ಪುರೀಂ ಸಮ್ಯಗಲಂಕುರು ॥ ೧೨೧ ॥

ಇತ್ಯುಕ್ತೇ ಸಚಿವೇ ತಸ್ಮಿನ್ಪಾಂಡ್ಯರಾಡರಿಮರ್ದನಃ ।
ಧ್ವಜೈಶ್ಚ ಚಾಮರೈಶ್ಛತ್ರೈರ್ವಿತಾನೈಸ್ತೋರಣೈರಪಿ ॥ ೧೨೨ ॥

ಪೂಗೈಶ್ಚ ಕದಲೀಭಿಶ್ಚ ಪೂರ್ಣಕುಂಭೈಸ್ಸದೀಪಕೈಃ ।
ಸೇಚನೈಃ ಪುಷ್ಪಮಾಲಾಭಿ ರಲಂಕಾರಮಕಾರಯತ್ ॥ ೧೨೩ ॥

ಪುರಸ್ಥಾಸ್ತೇ ವರ್ಣಿನಶ್ಚಾ ಪ್ಯಶ್ವಾನ್ದ್ರಷ್ಟುಂ ಕುತೂಹಲಾಃ ।
ಮುದಾ ಯುಕ್ತಾಶ್ಚ ವರ್ತಂತೇ ಪ್ರಭಾತೇ ಕೃತಕೃತ್ಯಕಾಃ ॥ ೧೨೪ ॥

---

ದ್ವೇಷಗಳಿಲ್ಲದವನಾಗಿ, ನೀರಿನಲ್ಲಿರುವ ತಾವರೆ ಎಲೆಯಂತೆ ಇದ್ದನು. ಕೆಲವು ದಿನಗಳ ನಂತರ ಪಾಂಡ್ಯರಾಜನು ಮಂತ್ರಿಯಾದ ಇವನನ್ನು ದೂತರಿಂದ ಕರಸಿಕೊಂಡು "ಕುದುರೆಗಳು ಯಾವಾಗ ಬರುವುವು" ಎಂದು ಪ್ರಶ್ನೆ ಮಾಡಿದನು. ಆಗ ವಾತಪುರೀಶ್ವರನು ಸುಂದರೇಶ್ವರನನ್ನು ಧ್ಯಾನಮಾಡುತ್ತಾ "ಎಲೈ ರಾಜನೆ ಕುದುರೆಗಳು ಇವತ್ತೋ, ನಾಳೆಯೊ, ನಾಡಿದ್ದೊ, ಖಂಡಿತವಾಗಿ ಬರುವುವು. ನಗರವೆಲ್ಲವನ್ನೂ ನೀನು ಅಲಂಕರಿಸು." ಎಂದು ಹೇಳಿದನು. ಅರಿಮರ್ದನ ಪಾಂಡ್ಯರಾಜನು ಅವನ ಮಾತನ್ನು ಕೇಳಿ, ತನ್ನ ನಗರವನ್ನು ಎಲ್ಲಾ ಕಡೆಯಲ್ಲಿಯೂ ಚಪ್ಪರಗಳು, ಧ್ವಜ, ಚಾಮರ, ತೋರಣ, ಇವುಗಳಿಂದ ಅಲಂಕಾರ ಮಾಡಿಸಿದನು. ಮತ್ತು ನಗರದ ಎಲ್ಲಾ ಕಡೆಗಳಲ್ಲಿಯೂ ದೀಪಗಳನ್ನು ಹಾಕಿಸಿದನು. ಹೂವಿನ ಹಾರಗಳನ್ನು ಕಟ್ಟಿಸಿದನು. ಪೂರ್ಣಕುಂಭಗಳನ್ನು ಇರಿಸಿದನು. ಬಾಳೆಯ ಕಂಬಗಳನ್ನು ಕಟ್ಟಿಸಿ, ನೀರನ್ನು ಹಾಕಿಸಿ, ಅಲಂಕಾರಮಾಡಿರುವ ಆ ನಗರದಲ್ಲಿ ಇರುವ ಜನರೆಲ್ಲರೂ ಕುದುರೆಗಳನ್ನು ನೋಡುವುದಕ್ಕಾಗಿ ತಮ್ಮ ಪ್ರಾತಃಕಾಲದ ಕೃತ್ಯಗಳನ್ನು ಮಾಡಿಕೊಂಡು ಅಲ್ಲಲ್ಲಿ ಗುಂಪುಗುಂಪಾಗಿ ಸೇರಿದರು. ಅವರು ಕುದುರೆಗಳನ್ನು ನೋಡುವ ಕುತೂಹಲದಿಂದ ತುಂಬಿದ ಮನಸ್ಸುಳ್ಳವರಾಗಿದ್ದರು.

॥ ಅಗಸ್ತ್ಯ ಉವಾಚ ॥

ಪ್ರೋಕ್ತಾಷ್ಟೋತ್ತರಪಂಚಾಶಲ್ಲೀಲಾ ಶಂಭೋರ್ಮಯಾಧುನಾ ।
ಸರ್ವಪಾಪಕ್ಷಯಕರೀ ಶ್ರೋತೄಣಾಂ ಪಠತಾಮಪಿ ॥ ೧೨೫ ॥

ಶಿವಭಕ್ತಿಪ್ರದಾ ಪುಂಸಾಂ ಭುಕ್ತಿಮುಕ್ತಿಪ್ರದಾಯಿನೀ ।
ಪ್ರಸಾದಜನನೀ ಪುಂಸಾಂ ಸುಂದರೇಶಮಹೇಶಿತುಃ ॥ ೧೨೬ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವಾತಪುರೀಶ್ವರಜ್ಞಾನದೀಕ್ಷಾಕರಣಂ ನಾಮ
ಚತುಷಷ್ಟಿತಮೋಽಧ್ಯಾಯಃ

---

೧೨೫-೧೨೬. ಅಗಸ್ತ್ಯಋಷಿಯು ಹೇಳಿದನು :—ಕೇಳುವವರಿಗೂ ಓದುವವರಿಗೂ ಪಾಪಗಳನ್ನು ನಾಶಮಾಡುವ, ಶಿವಭಕ್ತಿಯನ್ನು ಉಂಟುಮಾಡುವ, ಭುಕ್ತಿ ಮುಕ್ತಿಗಳನ್ನು ಅನುಗ್ರಹಿಸುವ, ಮತ್ತು ಸುಂದರೇಶ್ವರನ ಪ್ರಸಾದವನ್ನು ಉಂಟುಮಾಡುವ ಐವತ್ತೆಂಟನೆಯ ಲೀಲೆಯನ್ನು ಹೇಳಿರುವೆನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ವಾತಪುರೀಶ್ವರ ಜ್ಞಾನದೀಕ್ಷಾಕರಣವೆಂದು ಹೆಸರುಳ್ಳ
ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಪಂಚಷಷ್ಟಿತಮೋಽಧ್ಯಾಯಃ

|| ಅಗಸ್ತ್ಯ ಉವಾಚ ||

ಮಾಯಾಶ್ವವಿಕ್ರಯಂ ಶಂಭುರ್ಭೂಪಾಲಾಯ ಯಯಾ ಕರೋತ್ ।
ಮಯೋಚ್ಯತೇಥ ಸಾ ಲೀಲಾ ಶ್ರೂಯತಾಂ ಜನವಿಸ್ಮಯಾ || ೧ ||

ಅದ್ಯ ಶ್ವೋ ವಾ ಪರಶ್ವೋ ವಾ ಪ್ರಾಗಮಿಷ್ಯಂತಿ ವಾಜಿನಃ ।
ಇತಿ ವಿಶ್ವಸ್ಯ ತದ್ವಾಕ್ಯಂ ಮಹಾನ್ಪಾಂಡ್ಯಮಹೀಪತಿಃ || ೨ ||

ತಟಾಕಾನಿ ಸಮುತ್ಪಾದ್ಯ ಸಂಪೂರ್ಣಾನಿ ಚ ಸಜ್ಜಲೈಃ ।
ಹರ್ಷೇಣ ಮಹತಾ ಯುಕ್ತೋ ನಿನಾಯ ಚ ದಿನತ್ರಯಂ || ೩ ||

---

### ಅರವತ್ತೈದನೆಯ ಅಧ್ಯಾಯವು

೧-೪. ಅಗಸ್ತ್ಯಋಷಿಯು ಹೇಳಿದನು :—ಸುಂದರೇಶ್ವರನು ಜನರೆಲ್ಲರಿಗೂ ಆಶ್ಚರ್ಯವು ಉಂಟಾಗುವ ಹಾಗೆ ಮಾಯೆಯಿಂದ ಇರುವ ಕುದುರೆಗಳನ್ನು ರಾಜನಿಗೆ ವಿಕ್ರಯ ಮಾಡಿದ ಲೀಲೆಯನ್ನು ಹೇಳುವೆನು! ಕೇಳಿರಿ. ಪಾಂಡ್ಯರಾಜನು ಇವತ್ತು ನಾಳೆ, ಅಥವಾ ನಾಡಿದ್ದರಲ್ಲಿ ಕುದುರೆಗಳು ಬರುತ್ತವೆ, ಎಂದು ಅವನ ಮಾತನ್ನು ನಂಬಿಕೊಂಡು ಇದ್ದನು. ಅದರಿಂದ ಕೆರೆಗಳನ್ನು ಕಟ್ಟಿಸಿ, ಅವುಗಳಲ್ಲಿ ನೀರು ತುಂಬಿರುವಂತೆ ಮಾಡಿ, ಮೂರು ದಿನಗಳವರೆಗೂ ಸಂತೋಷದಿಂದ

ಚತುರ್ಥೇ ದಿವಸೇ ಪ್ರಾಪ್ತೇ ನಾಯಯುಸ್ತುರಗಾ ಅಪಿ ।
ಮಂತ್ರೀ ಚ ನಾತ್ಯಜದ್ಧೈರ್ಯಂ ಶಿವವಾಕ್ಯಂ ಸುವಿಶ್ವಸನ್ ॥ ೪ ॥

ಕೋಪಾನಲೋಽಪಿ ಭೂಪಸ್ಯ ಸಹಿತಸ್ಸಚಿವಾನಿಲೈಃ ।
ತಸ್ಮಿನ್ಕಾಲೇ ಸಮಾಯಾತಃ ಶ್ರೀಮಾನ್ವಾತಪುರೇಶ್ವರಃ ॥ ೫ ॥

ರಾಜ್ಞೋ ನಿಕಟಮೀಶಂ ಚ ಸ್ಮರನ್ದ್ರಷ್ಟುಂ ಚ ಭೂಪತಿಂ ।
ದೃಷ್ಟಮಾತ್ರೇಣ ಭೂಪೋಽಪಿ ಮಹಾಕೋಪಾಕುಲಸ್ತದಾ ॥ ೬ ॥

ಶ್ರೀಮದ್ವಾತಪುರೇಶಂ ಚ ಕ್ಷಿಪ್ರಂ ದಗ್ಧುಮಿವೋದ್ಯತಃ ।
ಅಥ ರಾಜಾ ಸಮೀಪಸ್ಥಾನ್ದಂಡಹಸ್ತಾನ್ ಸ್ವಕಿಂಕರಾನ್ ॥ ೭ ॥

ನಿರ್ಬಂಧಮಖಿಲಂ ಕರ್ತುಮಮಾತ್ಯಂ ಪ್ರತ್ಯಚೋದಯತ್ ।
ಗೃಹೀತಂ ವೈ ಧನಂ ಸರ್ವಂ ನಾಯಾತಾಸ್ತುರಗಾ ಇತಿ ॥ ೮ ॥

---

ಕಾಲವನ್ನು ಕಳೆದನು. ನಾಲ್ಕನೆಯ ದಿನವು ಬಂದರೂ ಕುದುರೆಗಳು ಬರಲಿಲ್ಲ. ಮಂತ್ರಿಯಾದ ವಾತಪುರೀಶ್ವರನು ಶಿವನು ಹೇಳಿದ ಮಾತನ್ನು ಸ್ಮರಿಸುತ್ತಾ, ಧೈರ್ಯದಿಂದ ಇದ್ದನು.

೫-೮. ಇತರ ಮಂತ್ರಿಗಳು ಈ ವಾತಪುರೀಶ್ವರನ ವಿಷಯದಲ್ಲಿ ಚಾಡಿ ಹೇಳುತ್ತಲೇ ಇದ್ದರು. ಇದಕ್ಕೆ ಸರಿಯಾಗಿ ಕುದುರೆಗಳು ಬರಲಿಲ್ಲವಾದ ಕಾರಣ ರಾಜನಿಗೆ ಇವನ ವಿಷಯದಲ್ಲಿ ಉಂಟಾಗಿದ್ದ ಕೋಪವು ಬಹಳ ಹೆಚ್ಚಾಗಿತ್ತು. ಆ ಸಮಯಕ್ಕೆ ಸರಿಯಾಗಿ ಮಂತ್ರಿಯಾದ ವಾತಪುರೇಶ್ವರನು ಶಿವನನ್ನು ಸ್ಮರಿಸುತ್ತಾ ರಾಜನನ್ನು ನೋಡುವುದಕ್ಕಾಗಿ ಬಂದನು. ಇವನನ್ನು ನೋಡಿದ ಕೂಡಲೆ ರಾಜನ ಕೋಪವು ಬಹಳ ಹೆಚ್ಚಾಯಿತು. ಆದರಿಂದ ಅವನನ್ನು ಹಿಂಸೆಮಾಡಲುಪಕ್ರಮಿಸಿದನು. ಆಗ ರಾಜನು ತನ್ನ ಹತ್ತಿರದಲ್ಲಿ ದಂಡಪಾಣಿಗಳಾಗಿ ನಿಂತಿದ್ದ ತನ್ನ ಸೇವಕರನ್ನು ಕರೆದು "ನೀವು ಮಂತ್ರಿಯಾದ ವಾತಪುರೇಶ್ವರನನ್ನು ನಿರ್ಬಂಧ ಮಾಡಿರಿ. ಅವನು ಧನವನ್ನು ತೆಗೆದುಕೊಂಡಿರುವನು. ಅವನ ಮಾತಿನಂತೆ ಕುದುರೆಗಳು ಬರಲಿಲ್ಲ." ಎಂದು ಹೇಳಿ, ಆ ಮಂತ್ರಿಯನ್ನು ತೊಂದರೆಪಡಿಸಲು ಅವರನ್ನು ನಿಯಮಿಸಿದನು.

ಕ್ರುದ್ಧಾಸ್ತೇ ಸಚಿವಂ ಪ್ರಾಪ್ಯ ಸಮಾಕೃಷ್ಯ ಜವೇನ ತಂ ।
ರಾಜಾಜ್ಞಯಾ ಬೃಹಂತಂ ಚ ಪಾಷಾಣಂ ತಸ್ಯ ಪೃಷ್ಠಕೇ ॥ ೯ ॥

ವಹೇತಿ ಪ್ರಥವಸ್ತೇಽಪಿ ಸ್ನಧುಸ್ತಸ್ಯ ಮಹಾತ್ಮನಃ ।
ತಂ ದಧೌ ಸರ್ವಸತ್ವೇನ ಶಿವಮೇವ ಹೃದಿ ಸ್ಮರನ್ ॥ ೧೦ ॥

ತದ್ಭಾವಂ ಚ ನ ಜಾನಾತಿ ಶಿವೇ ನಿಶ್ಚಲಧೀ ಸ್ಸುಧೀಃ ।
ಅಯಂ ದಧಾತಿ ಭಾರಂ ಚ ಪಾಷಾಣಂ ಬಲಸಂಯುತಃ ॥ ೧೧ ॥

ಶಾರದಾನುಮುಖ್ಯೈರ್ದಂಡೈಃ ಪಾದೌ ಪಾಣೀ ಚ ತಸ್ಯ ತೇ ।
ಅಪೀಡಯನ್ನಿತಿ ಸ ತು ಶಿವೇತ್ಯಾಕ್ರಂದಿತಂ ವ್ಯಧಾತ್ ॥ ೧೨ ॥

ಪಿಠರೇ ಸ್ಥಾಪಯಾಮಾಸುರತಿಭಾರಂ ಶಿಲಾಃ ಪುನಃ ।
ಯತ್ನೇನಾ ರೋಪಿತಂ ತೈಶ್ಚ ಮಂತ್ರೀವಾತಪುರೇಶ್ವರಃ ॥ ೧೩ ॥

೯–೧೦. ಆಗ ರಾಜನ ದೂತರು ಕೋಪವುಳ್ಳವರಾಗಿ ಮಂತ್ರಿಯ ಹತ್ತಿರಕ್ಕೆ ಬಂದು ಅವನನ್ನು ವೇಗದಿಂದ ಹಿಡಿದುಕೊಂಡರು. ರಾಜನ ಅಪ್ಪಣೆಯಂತೆ ಕಲ್ಲನ್ನು ಅವನ ಬೆನ್ನಿಗೆ ಹೊರಿಸಿ ನಿಲ್ಲಿಸಿದರು. ಮಹಿಮೆಯುಳ್ಳ ಅವನಿಗೆ ಅದರಿಂದ ಯಾವ ವ್ಯಥೆಯೂ ಆಗಲಿಲ್ಲ. ಆದರೂ ಅದರ ಭಾರವನ್ನು, ತನ್ನ ಶಕ್ತಿಯಿಂದ, ಶಿವನನ್ನು ಸ್ಮರಿಸುತ್ತಾ ಅವನು ತಡೆದುಕೊಂಡು ಇದ್ದನು

೧೧–೧೩. ಜ್ಞಾನಿಯಾದ ಅವನು ಶಿವನನ್ನು ಧ್ಯಾನಮಾಡುತ್ತಿರುವುದರಿಂದ ತನಗೆ ಶಿಕ್ಷೆಯನ್ನು ಮಾಡುತ್ತಿರುವರು ಎಂದು ತಿಳಿಯಲಿಲ್ಲ. ರಾಜದೂತರು "ಇವನು ಶಕ್ತಿಯುಳ್ಳವನಾಗಿರುವ ಕಾರಣ ಈ ಕಲ್ಲಿನ ಭಾರವನ್ನು ತಡೆದಿರುವನು ಇಷ್ಟು ಮಾತ್ರದಿಂದ ಇವನಿಗೆ ಶಿಕ್ಷೆಯು ಸಾಲದು." ಎಂದು ಹಗ್ಗದಿಂದ ಕೈಕಾಲುಗಳನ್ನು ಕಟ್ಟಿ, ಮುಳ್ಳುಕೋಲು, ಬಾರುಕೋಲು, ಚಾವಟಿಗಳಿಂದ ಅವನನ್ನು ಹೊಡೆದರು. ಅದರಿಂದ ಅವನಿಗೆ ಬಹಳ ಹಿಂಸೆಯಾಗಿ ಶಿವ, ಶಿವ, ಎಂದು ಘಟ್ಟಿಯಾಗಿ ಕಿರುಚುತ್ತಾ ಅಳುವುದಕ್ಕೆ ಪ್ರಾರಂಭಿಸಿದನು. ಆದರೂ ದೂತರು ಭಾರವಾದ ಕಲ್ಲನ್ನು ಪ್ರಯತ್ನ ಪಟ್ಟು ಎತ್ತಿ ಅವನ ಬೆನ್ನಿನ ಮೇಲೆ ಹೊರಿಸಿ ನಿಲ್ಲಿಸಿದರು.

ಏವಂ ಪೀಡಾಂ ಬಹುವಿಧಾಮನುಭೂಯ ಪುನಃ ಪುನಃ ।
ಇತಿ ಖಿನ್ನಸ್ತ್ರಿದ್ಧಿನಂ ಚ ಶಿವಂ ಧ್ಯಾಯನ್ನಿನಾಯ ಸಃ ॥ ೧೪ ॥

ಮಂತ್ರೀ ಕಾರಾಗೃಹಮಪಿ ಪ್ರಾಪ ರಾಜಾಜ್ಞಯಾ ಭಟೈಃ ।
ಕಾರ್ಯಾಧ್ಯಕ್ಷಾ ಅಪಿ ಜನಾಸ್ತಮತ್ಯಂತಮಭರ್ತ್ಸಯನ್ ॥ ೧೫ ॥

ತದ್ಭರ್ತ್ಸನ ಮಶಕ್ತಸ್ಸ ಶ್ರೋತುಮಾರ್ಯಾ ಮಥಾಬ್ರವೀತ್ ।
ತೇ ಶಂಕರ ಸದ್ಯಸ್ತುರಗಾ ನಾಯಾತಾ ಇತಿ ಭರ್ತ್ಸಯಂತಿ ಭಟಾಃ ॥
ನ ಸಹೇ ತ್ಯಕ್ಷ್ಯೇ ಪ್ರಾಣಾಂ ಸ್ತ್ರಾಹಿ ತ್ರಾತಾ ತ್ವಂ ಕ್ಷಣಾ ದ್ರಕ್ಷ ॥ ೧೬ ॥

ಆರ್ಯಾಮೇವಂ ಸ ಬಹುಶಃ ಪ್ರೋಚ್ಚರನ್ಪುಣ್ಯಕೃದ್ವರಃ ।
ನಿಶಾಮಪಿ ನಿನಾಯಾಥ ಸೂರ್ಯೇ ಸಮುದಿತೇ ಸತಿ ॥ ೧೭ ॥

---

೧೪–೧೬. ಮಂತ್ರಿಯಾದ ವಾತಪುರೇಶ್ವರನು ಇದೇ ರೀತಿಯಾದ, ಅನೇಕ ವಿಧವಾದ ಹಿಂಸೆಗಳನ್ನು ಪದೇಪದೇ ಅನುಭವಿಸುತ್ತಾ, ದುಃಖದಿಂದ ಆ ದಿನವೆಲ್ಲವನ್ನೂ ಶಿವನ ಸ್ಮರಣೆಯಿಂದ ಕಳೆದನು. ಮಂತ್ರಿಯಾದರೂ ಇವನನ್ನು ರಾಜದೂತರು (ಕಾರಾಗೃಹದಲ್ಲಿ) ಸೆರೆಯ ಮನೆಯಲ್ಲಿರಿಸಿದರು. ಅಲ್ಲಿಯ ಮುಖ್ಯಾಧಿಕಾರಿಗಳು ಇವನನ್ನು ಬಹಳ ತೊಂದರೆಕೊಟ್ಟು, ಶಿಕ್ಷೆ ಮಾಡಿದರು. ಅಲ್ಲಿ ಅವನು ಹಿಂಸೆಯನ್ನು ತಡೆಯಲಾರದೆ ತಾನು ಧ್ಯಾನಮಾಡುತ್ತಿರುವ ಶಿವನಿಗೆ ತನಗೆ ಆಗಿರುವ ತೊಂದರೆಯನ್ನು ತಿಳಿಸಲು "ಎಲೈ ಶಂಕರನೆ, ಕುದುರೆಗಳು ಬರಲಿಲ್ಲವೆಂದು ಈ ಕ್ಷಣದಲ್ಲಿ ನನ್ನನ್ನು ನಿರ್ಬಂಧದಲ್ಲಿ ಇರಿಸಿ, ಈ ರಾಜಸೇವಕರು ಬಹಳ ಹಿಂಸೆಯನ್ನು ಮಾಡುತ್ತಿರುವರು. ಈ ಹಿಂಸೆಯನ್ನು ನಾನು ತಡೆಯಲಾರೆನು. ಪ್ರಾಣವನ್ನು ಬಿಡುತ್ತೇನೆ. ನೀನೇ ರಕ್ಷಕನಾಗಿರುವವನು. ಆದ್ದರಿಂದ ನನ್ನನ್ನು ಈ ಕ್ಷಣದಲ್ಲಿ ರಕ್ಷಿಸು." ಎಂದು ಅರ್ಥವನ್ನು ಕೊಡುವ ಪದ್ಯವನ್ನು ಮಾಡಿ ಹೇಳಿದನು.

೧೭–೨೦. ಪುಣ್ಯವಂತರಲ್ಲಿ ಶ್ರೇಷ್ಠನಾದ ಅವನು ಈ ಪದ್ಯವನ್ನು ಅನೇಕ ಸಾರಿ ಹೇಳುತ್ತಾ ರಾತ್ರಿಯೆಲ್ಲವನ್ನೂ ಕಳೆದನು. ಬೆಳಗಾದನಂತರ ಸೆರೆಮನೆಯ ಹೊರಗಡೆಯಲ್ಲಿ ನಿಂತುಕೊಂಡು ಸುಂದರೇಶ್ವರ ದೇವಾಲಯದ ಚಿನ್ನದ ಕಲಶವನ್ನು

ಕಾರಾಗ್ರಹಾತ್ಸ ನಿರ್ಗತ್ಯ ಸುಂದರೇಶವಿಮಾನಗಂ ।
ಶಾತಕುಂಭಮಯಂ ಕುಂಭಂ ಪಶ್ಯನ್ ರಕ್ಷೇತಿ ಚಾಬ್ರವೀತ್ ॥ ೧೮ ॥

ಅಥ ಶ್ರೀವಾಚಕೈರ್ನವ್ಯೈಃ ಪ್ರಸ್ತೌತಿ ಪರಮೇಶ್ವರಂ ।
ಪರಮೇಶೋಽಪಿ ತಂ ದೃಷ್ಟ್ವಾ ಪ್ರೀತೋ ಭೂತ್ವಾ ಕೃಪಾನಿಧಿಃ ॥ ೧೯ ॥

ನಂದ್ಯಾದಿಗಣನಾಥೇಭ್ಯಃ ಅಶ್ವಾನ್ಕರ್ತುಂ ಶಿವೋ ಗಣಾನ್ ।
ದದಾವನುಜ್ಞಾಂ ಸಹಸಾ ಜೀವನ್ಮುಕ್ತಿಪುರೇಶ್ವರಃ ॥ ೨೦ ॥

ಗಣನಾಥಾಜ್ಞಯಾ ಪಶ್ಚಾದ್ಗಣಾಸ್ಸರ್ವೇ ಮುದಾನ್ವಿತಾಃ ।
ಸರ್ವಾನ್ ಸೃಗಾಲಾನ್ ಭೂಮಿಸ್ಥಾ ನದಧುಸ್ತುರಗಾನ್ ಕ್ಷಣಾತ್ ॥ ೨೧ ॥

ಸಾದಿವೇಷಧರಾ ಸ್ಸಂತಸ್ತುರಗಾನುತ್ತಮೋತ್ತಮಾನ್ ।
ಗಣಾಶ್ಚಾರುರುಹು ಸ್ಸರ್ವೇ ಮಾಯಾಮಾನುಷವಿಗ್ರಹಾಃ ॥ ೨೨ ॥

ಅನಾದಯನ್ಕಾಹಲಾಂಶ್ಚ ವಾದ್ಯಾನ್ಬಹುವಿಧಾನ್ಗಣಾಃ ।
ಉದಜೃಂಭತ ಧೂಳಿಶ್ಚ ಗಗನೇsತಿತರಾಂ ತದಾ ॥ ೨೩ ॥

---

ನೋಡುತ್ತಾ "ನನ್ನನ್ನು ರಕ್ಷಿಸು." ಎಂದು ಹೇಳಿದನು. ಮತ್ತು ಶಿವನನ್ನು ಮಂತ್ರಗಳಿಂದ ಸ್ತುತಿಮಾಡಲು ಪರಮೇಶ್ವರನು ಅವನ ಸ್ತುತಿಯನ್ನು ಕೇಳಿ ದಯೆಯುಳ್ಳವನಾಗಿ ಸಂತೋಷದಿಂದ ನಂದಿಯೇ ಮೊದಲಾದ ಗಣನಾಥರನ್ನು ಕರೆದು, ಕುದುರೆಗಳನ್ನು ನಿರ್ಮಾಣ ಮಾಡಲು ಆಜ್ಞೆಯನ್ನು ಮಾಡಿದನು.

೨೧–೨೩. ಶಿವನ ಗಣನಾಥರು ಅವನ ಆಜ್ಞೆಯಂತೆ ಭೂಮಿಯಲ್ಲಿರುವ ನರಿಗಳೆಲ್ಲವನ್ನೂ ಆ ಕ್ಷಣದಲ್ಲಿ ಕುದುರೆಗಳಾಗುವಂತೆ ಮಾಡಿದರು. ಮತ್ತು ಅವರೆಲ್ಲರೂ ಮಾಯೆಯಿಂದ ಮನುಷ್ಯರ ಆಕಾರವನ್ನು ಹೊಂದಿ ಬಹಳ ಉತ್ತಮವಾದ ಆ ಕುದುರೆಗಳನ್ನು ಹತ್ತಿಕೊಂಡು ಸವಾರರಾಗಿ ಬಂದರು. ಕಹಳೆಯೇ ಮೊದಲಾದ ಬಹಳ ವಾದ್ಯಗಳನ್ನು ಅವರು ಧ್ವನಿಮಾಡಿದರು. ಆಗ ಭೂಮಿಯಿಂದ ಎದ್ದ ಧೂಳಿಯು ಅಂತರಿಕ್ಷದಲ್ಲಿ ಎಲ್ಲಾ ಕಡೆಯಲ್ಲಿಯೂ ಬಹಳವಾಗಿ ವ್ಯಾಪಿಸಿತು.

ಆಗಮಿಷ್ಯಂತಿ ತುರಗಾಸ್ಸಾದಿವರ್ಯೈರಧಿಷ್ಠಿತಾಃ ।
ಖುರಧೂಲಿಶ್ಚ ಸಂಜಾತಾ ಖೇದಿಶಶ್ಚೇತಿ ತಾಂ ಜನಾಃ ॥ ೨೪ ॥

ಅವದಂಸ್ತಸ್ಯ ವೃತ್ತಾಂತಂ ಮಂತ್ರಿಣಃ ಕೃಪಯಾನ್ವಿತಾಃ ।
ಇಮಂ ವೃತ್ತಾಂತ ಮಜ್ಞಾತ್ವಾ ಮಂತ್ರೀ ವಾತಪುರೇಶ್ವರಃ ॥ ೨೫ ॥

ಅಂತಃ ಖಿನ್ನೋ ರುದನ್ನಾರ್ಯಾಂ ಏವಮಾಹ ಶಿವಂ ಪ್ರತಿ ।
" ಜನವನ್ನಾಥ ತ್ವತ್ಕಂ ವಚನಂ ವಿಶ್ವಸ್ಯ ಸುದೃಢ ಏವಾಸ್ಮಿ ।
ಪ್ರಾದುರ್ಭವ ಸದ್ಯಸ್ತ್ವಂ ತುರಗೈರ್ಮಾಂ ಸತ್ಯವಾದಿನಂ ಕುರ್ವರ್ ॥ ೨೬ ॥

ತದಾ ಪ್ರೀತಜನಾಃ ಕೇಚಿದಾಗತ್ಯ ವ್ಯಾಹರನ್ಸ್ಪರಃ ।
ಮಂತ್ರಿವರ್ಯ ಮಹಾಭಾಗ ಸಮಾಯಾಂತಿ ತುರಂಗಮಾಃ ॥ ೨೭ ॥

ರಾಜ್ಞೇಜ್ಞಾಪಯ ಸದ್ಯಸ್ತ್ವಂ ಜಹಿ ದುಃಖಂ ಮಹಾಮತೇ ।
ತೇಷಾಂ ತದ್ವಚನಂ ಶ್ರುತ್ವಾ ನಿತರಾಂ ಪ್ರೀತಮಾನಸಃ ॥ ೨೮ ॥

---

೨೪–೨೮. ಆಗ ಮಧುರಾನಗರದ ಜನರೆಲ್ಲರೂ " ಸವಾರರಿಂದ ಕೂಡಿರುವ ಕುದುರೆಗಳು ಬರುತ್ತಿರುವವು. ಗೊರಸಿನ ಧೂಳಿಯು ಅಂತರಿಕ್ಷವನ್ನೂ, ದಿಕ್ಕುಗಳನ್ನೂ ವ್ಯಾಪಿಸಿರುವುದು. " ಎಂದು ಸೆರೆಮನೆಯಲ್ಲಿದ್ದ ಮಂತ್ರಿಗೆ ವರ್ತಮಾನವನ್ನು ದಯೆಯಿಂದ ತಿಳಿಸಿದರು. ಆದರೂ ಅವನಿಗೆ ಈ ವರ್ತಮಾನವು ತಿಳಿಯದೆ ದುಃಖದಿಂದ ಅಳುತ್ತಾ ಶಿವನನ್ನು ಕುರಿತು " ಜಗನ್ನಾಥನಾದ ಶಂಭುವೇ, ನಿನ್ನ ಮಾತಿನಲ್ಲಿ ನನಗೆ ಬಹಳ ನಂಬಿಕೆಯು ಇರುವುದು. ನೀನು ಪ್ರತ್ಯಕ್ಷವಾಗಿ ಈಗಲೇ ಕುದುರೆಗಳನ್ನು ಕಳುಹಿಸಿ, ನನ್ನನ್ನು ಸತ್ಯ ಹೇಳುವವನನ್ನಾಗಿ ಮಾಡು " ಎಂದು ಅರ್ಥವನ್ನು ಬೋಧಿಸುವ ಪದ್ಯವನ್ನು ಹೇಳಿದನು. ಅಲ್ಲಿ ಕೆಲವು ಜನರು ಸಂತೋಷವುಳ್ಳವರಾಗಿ " ಎಲೈ ಮಂತ್ರಿಶ್ರೇಷ್ಠನೆ, ಕುದುರೆಗಳು ಬರುತ್ತಾ ಇವೆ. ನೀನು ದೊರೆಗೆ ತಿಳಿಸು. ನೀನು ದುಃಖಪಡುತ್ತಿರುವುದನ್ನು ಬಿಡು " ಎಂದು ಹೇಳಿದರು. ಅವರ ಮಾತನ್ನು ಕೇಳಿದ್ದರಿಂದ ಅವನಿಗೆ ಸಂತೋಷವುಂಟಾಯಿತು

ತಥಾ ಚಕ್ರೇ ಮುದಾ ಸೋಽಪಿ ಮುಕ್ತಃ ಪೀಡಾಕರೈರ್ಭಟೈಃ ।
ಮಂತ್ರಿಣೋ ವಚನಂ ಶ್ರುತ್ವಾ ಪಾಂಡ್ಯೋಽಪಿ ಮುದಿತೋ ಭೃಶಂ ॥ ೨೯ ॥

ಬಾಹ್ಯಾಲಿಮಂಟಪಂ ಪ್ರಾಪ್ಯ ಸಮಸ್ತಸಚಿವಾನ್ವಿತಃ ।
ವರದೇಶಚಮತ್ಕಾರೈ ರ್ವೀಜ್ಯಮಾನ ಸ್ಸುಚಾಮರೈಃ ॥ ೩೦ ॥

ಧೃತೋತ್ಕೃಷ್ಟಲಸದ್ಭೂಷೋ ವಿನೋದಾನವಲೋಕಯನ್ ।
ಕಾಲಕ್ಷೇಪಂ ಚ ಕುರ್ವಾಣಶ್ಚಿರಂ ತತ್ರೈವ ತಸ್ಥಿವಾನ್ ॥ ೩೧ ॥

ತುರಗಾನಾಯಯುಃ ಕ್ಷಿಪ್ರಂ ಸುಂದರೇಶಸ್ಯಲೀಲಯಾ ।
ತದಾ ಪಾಂಡ್ಯಸ್ತು ಕುಪಿತಃ ಕಿಂಕರಾನೇವಮಬ್ರವೀತ್ ॥ ೩೨ ॥

ಮಾಯಾವೀ ಹ್ಯಕರೋನ್ಮಾಯಾಂ ನೈವಾಶ್ವಾಗಮನಂ ತ್ವರಂ ।
ವಿಪ್ರಲಾಪ್ಯೇಷ ಸಚಿವೋ ಗಾಢಂ ತಂ ಪ್ರಹರಿಷ್ಯಥ ॥ ೩೩ ॥

---

೨೯–೩೧. ಆಗ ಅವನು ರಾಜಭಟರಿಂದ ಬಿಡುಗಡೆಯನ್ನು ಹೊಂದಿ, ರಾಜನಿಗೆ "ಕುದುರೆಗಳು ಬರುತ್ತಾ ಇವೆ." ಎಂದು ಹೇಳಿದನು. ರಾಜನು ಮಂತ್ರಿಯಾದ ವಾತಪುರೇಶ್ವರನ ಮಾತನ್ನು ಕೇಳಿ, ಬಹಳ ಸಂತೋಷವುಳ್ಳವನಾಗಿ, ಇತರ ಮಂತ್ರಿಗಳೆಲ್ಲರನ್ನೂ ಕರಸಿಕೊಂಡು, ಹೊರಗಡೆಯಲ್ಲಿ ಹಾಕಿಸಿರುವ ಮಂಟಪಕ್ಕೆ ಬಂದನು ರಾಜನಿಗೆ ಆ ದೇಶದ ಚಮತ್ಕಾರಕ್ಕನುಸರಿಸಿ, ಚಾಮರಗಳನ್ನು ಹಾಕುತ್ತಿದ್ದರು. ರಾಜನು ಉತ್ತಮವಾದ ಆಭರಣಗಳನ್ನು ಧರಿಸಿದವನಾಗಿ ಅನೇಕ ವಿಧವಾದ ವಿನೋದಗಳನ್ನು ನೋಡುತ್ತಾ ಆ ಮಂಟಪದಲ್ಲಿಯೇ ಬಹಳ ಹೊತ್ತಿನವರಿಗೂ ಕಾಲವನ್ನು ಕಳೆಯುತ್ತಾ ಇದ್ದನು.

೩೨–೩೪. ಆದರೆ ಸುಂದರೇಶ್ವರನ ಲೀಲೆಯಿಂದ ಕುದುರೆಗಳು ಬೇಗ ಬರಲಿಲ್ಲ. ಆದ್ದರಿಂದ ಪಾಂಡ್ಯರಾಜನಿಗೆ ಕೋಪವು ಬಂತು. ಆಗ ಅವನು ತನ್ನ ಹತ್ತಿರ ಇರುವ ದೂತರಿಗೆ "ಮೋಸಗಾರನಾದ ಇವನು ಕುದುರೆಗಳು ಬೇಗ ಬಗದಿರುವ ಹಾಗೆ ಮೋಸವನ್ನು ಮಾಡಿರುವನು. ಆದ್ದರಿಂದ ಮೋಸಮಾಡುವ ಈ

ಇತಿ ಭೂಪವಚಶ್ಶ್ರುತ್ವಾ ಚಿಂಚಾಶಾಖಾಃ ಪ್ರಗೃಹ್ಯ ಚ।
ತಂ ಪ್ರಹರ್ತುಂ ನಿರ್ದಯಯಾ ಚಾಯಯುಸ್ತಸ್ಯ ಕಿಂಕರಾಃ ॥ ೩೪ ॥
ಆಗಚ್ಛತಸ್ತಾನಾಲೋಕ್ಯ ಸಚಿವಶ್ಶಿವಭಕ್ತಿತಃ ।

ಶ್ರೀವಾಚಕ್ಕೈರಸ್ತುವಚ್ಚ ದ್ರಾವಯನ್ದ್ರಾವಿಡಾನ್ಕವೀನ್ ॥ ೩೫ ॥
ಆರ್ಯಾಶ್ಚ ಕಾಂಶ್ಚಿತ್ಪ್ರಾಹಾಥ ದ್ರಾವಯನ್ಸುಧಿಯಾಂ ಧಿಯಃ ।

ವಾಗರ್ಥಾತೀತಸ್ತ್ವಂ ಸದ್ಯಃ ಪ್ರಾದುರ್ಭವ ಕ್ಷಣಾತ್ತುರಗೈಃ ।
ಪುರುಷಾ ಭೂಪಸ್ಯ ಭೃಶಂ ಬ್ರೂಹಿ ಬ್ರೂಹೀತಿ ತರ್ಜಯಂತ್ಯದ್ಯ ॥ ೩೬ ॥

ಜನವನ್ನಾಥ ತ್ವತ್ಕಂ ವಚನಂ ವಿಶ್ವಸ್ಯ ಸುದೃಢ ಏವಾಸ್ಮಿ ।
ಪ್ರಾದುರ್ಭವ ಸ್ವದ್ಯಸ್ತ್ವಂ ತುರಗಾನ್ಭೂಪೋ ವಿಲೋಕಿತುಂ ಚಾಸ್ತೇ॥ ೩೭ ॥

---

ಮಂತ್ರಿಗೆ ಚೆನ್ನಾಗಿ ಶಿಕ್ಷೆ ಮಾಡಿರಿ" ಎಂದು ಅಪ್ಪಣೆ ಮಾಡಿದನು. ಅವರು ರಾಜಾಜ್ಞೆಯಂತೆ ಹುಣಿಸೆಯ ಮರದ ಸಣ್ಣ ಕೊಂಬೆಗಳನ್ನು ತೆಗೆದುಕೊಂಡು ಕೊಂಚವೂ ದಯೆಯಿಲ್ಲದವರಾಗಿ ಅವನನ್ನು ಹೊಡೆಯಲು ಸಿದ್ಧರಾಗಿ ಬಂದರು.

೩೫-೩೭. ಮಂತ್ರಿಯಾದ ವಾತಪುರೇಶ್ವರನು ಕುದುರೆಗಳು ಬರದಿರುವ ಕಾರಣ ಶಿವನಲ್ಲಿ ಭಕ್ತಿಯುಳ್ಳವನಾಗಿ, ದ್ರಾವಿಡಭಾಷೆಯ ಕವಿಗಳನ್ನು ತಿರಸ್ಕರಿಸುವ ಹಾಗೆ, ಬುದ್ಧಿವಂತರ ಬುದ್ಧಿಗಳನ್ನು ಮಂಕುಮಾಡುತ್ತಾ ಇರುವ, ಶಿವನನ್ನು ಸ್ತೋತ್ರ ಮಾಡುವ ಪದ್ಯಗಳನ್ನು ಹೇಳುತ್ತಿದ್ದನು. ಎಲೈ ದೇವನೆ, ನೀನು ಶಬ್ದ ಮತ್ತು ಅರ್ಥ ಇವೆರಡನ್ನೂ ಮೀರಿ ಇರುತ್ತೀಯೆ. ಈ ಕ್ಷಣದಲ್ಲಿಯೇ ಕುದುರೆಗಳೊಡನೆ ಪ್ರತ್ಯಕ್ಷನಾಗು. ಈಗ ರಾಜನ ದೂತರು ಕುದುರೆಗಳ ವಿಷಯವನ್ನು ಹೇಳು, ಹೇಳು ಎಂದು ಬೆದರಿಸುತ್ತಾ ಇರುವರು. ಎಲೈ ಜನವನ್ನಾಥನೆ, ನಿನ್ನ ಮಾತನ್ನು ನಾನು ನಂಬಿಕೊಂಡಿರುವೆನು. ಆದ್ದರಿಂದ ಮನಸ್ಸಿನಲ್ಲಿ ದೃಢವಾದ ಭಕ್ತಿಯುಳ್ಳವನಾಗಿಯೇ ಇರುತ್ತೇನೆ. ನೀನು ಈಗಲೇ ಕುದುರೆಗಳನ್ನು ತೋರಿಸು. ರಾಜನು ಅವುಗಳನ್ನು ನೋಡಲು ಸಿದ್ಧನಾಗಿ ಕಾದಿರುವನು" ಎಂದು ಅರ್ಥವನ್ನು ಬೋಧಿಸುವ ಪದ್ಯಗಳನ್ನು ಹೇಳಿದನು.

ತಸ್ಮಿನ್ವದತಿ ಸತ್ಯೇವಂ ಶ್ರುತೋಽಭೂತ್ಕಾಹಲಧ್ವನಿಃ ।
ತುರಂಗಮಖುರೋದ್ಭೂತಾ ಧೂಲಿಃ ಪ್ರಾದುರಭೂದಥ ॥ ೩೮ ॥

ರಾಜಾಪಿ ತಂ ಸಮಾಹೂಯ ಸಚಿವಂ ಭ್ರಾಂತವತ್ ಸ್ಥಿತಂ ।
ಮಾರೋದೀರಿತಿ ಚಾಶ್ವಾಸ್ಯ ಪಶ್ಯನ್ನಶ್ವಾಗತಿಂ ಪುರಃ ॥ ೩೯ ॥

ವಿವಿಧೋಷ್ಣೀಷಕೂರ್ಪಾಸಭೂಷಣಾಂಬರಮಂಡಿತಾಃ ।
ಬಾಲಭಾನುತಟಿತ್ತಪ್ತಕಾಂಚನಾಭಕಲೇಬರಾಃ ॥ ೪೦ ॥

ಪ್ರಮಥಾಃ ಶಂಕುಕರ್ಣಾದ್ಯಾ ನಾನಾಯುಧಲಸತ್ಕರಾಃ ।
ಊರುಭ್ಯಾಂ ಚೋದಯನ್ನಶ್ವಾನಾವಿರಾಸನ್ ನೃಪಾಗ್ರತಃ ॥ ೪೧ ॥

---

೩೮–೪೧ ಅವನು ಈ ಪದ್ಯಗಳನ್ನು ಹೇಳುತ್ತಿರುವಾಗಲೇ ಕಹಳೆಯನ್ನು ಊದುತ್ತಿರುವ ಧ್ವನಿಯು ಕೇಳಿಸಿತು. ಕುದುರೆಗಳ ಗೊರಸಿನ ಧೂಳಿಯು ಪ್ರಕಟವಾಯಿತು. ಹುಚ್ಚನಂತೆ ನಿಂತಿದ್ದ ಮಂತ್ರಿಯಾದ ವಾತಪುರೇಶ್ವರನನ್ನು ರಾಜನು ನೋಡಿ, ಅವನನ್ನು ಹತ್ತಿರಕ್ಕೆ ಕರೆದನು. "ನೀನು ಅಳಬೇಡ" ಎಂದು ಅವನನ್ನು ಸಮಾಧಾನಮಾಡುತ್ತಾ ಮುಂದುಗಡೆಯಲ್ಲಿ ಕಾಣುತ್ತಿರುವ, ಕುದುರೆಗಳ ಬರುವಿಕೆಯನ್ನು ನೋಡುತ್ತಾ ನಿಂತನು. ಶಂಕುಕರ್ಣನೇ ಮೊದಲಾದ ಪ್ರಮಥಗಣಗಳವರು, ಮನುಷ್ಯರ ಆಕಾರವನ್ನು ಹೊಂದಿದ್ದರು. ಅವರು ಅನೇಕ ವಿಧವಾದ ರುಮಾಲು, ಅಂಗಿ, ಆಭರಣ, ವಸ್ತ್ರ ಇವುಗಳಿಂದ ಅಲಂಕಾರವನ್ನು ಮಾಡಿಕೊಂಡು ಇದ್ದರು. ಅವರ ದೇಹದ ಕಾಂತಿಯು ಪುಟಹಾಕಿದ ಚಿನ್ನದಂತೆಯೂ, ಎಳೆಯ ಬಿಸಿಲಿನಂತೆಯೂ ಇತ್ತು. ಅವರು ಅನೇಕ ವಿಧವಾದ ಆಯುಧಗಳನ್ನು ಕೈಯ್ಯಿನಲ್ಲಿ ಹಿಡಿದುಕೊಂಡು ಇದ್ದರು. ಕುದುರೆಗಳನ್ನು ಹತ್ತಿಕೊಂಡು ಅವುಗಳನ್ನು ತಮ್ಮ ಊರು (ತೊಡೆ)ಗಳಿಂದ ವೇಗವಾಗಿ ಹೋಗುವಂತೆ ಪ್ರೇರಿಸುತ್ತಾ ಇದ್ದರು. ರಾಜನು ಅವರೆಲ್ಲರನ್ನೂ ನೋಡಿದನು.

ಆಲೋಲಸ್ಮಣಿಕುಂಡಲ ಸ್ಸಕವಚೀ ಹಾರಾಂ ಗದಾಲಂಕೃತೋ ।
ವೇದಾಶ್ವಂ ಪರಿವರ್ತಯರ್ ಲಘುಗತಿಃ ಸವ್ಯಾಪಸವ್ಯಂ ಕ್ರಮಾತ್-
ಗಾಢಾಕೃಷ್ಟಖಲೀನಪಾಶ ಮಸಕೃದ್ಧಾರಾಸು ಸಂಚೋದಯನ್ ।
ಆಘೂರ್ಣ್ಯ ಕರವಾಲಮಾವಿರಭವಲ್ಲೋಕೈಕಸಾದೀ ಹರಃ ॥ ೪೨ ॥

ತುಲ್ಯಾಕೃತೀಂ ಸ್ತುಲ್ಯವರ್ಷಾಂ ಸ್ತುಲ್ಯಾಯುಧವಿಭೂಷಣಾನ್ ।
ತುರಂಗಸಾದಿನೋ ವೀಕ್ಷ್ಯ ವಿಸ್ಮಿತೋ ಭೂಸ್ಮಹೀಪತಿಃ ॥ ೪೩ ॥

ಅಥ ಪಾಂಡ್ಯಮಹೀಪಾಲಃ ಪರಮಾನಂದಸಂಯುತಃ ।
ಪ್ರಧಾನಭೂತಮೇತೇಷಾಂ ಬ್ರೂಹೀತ್ಯಾಹ ಚ ಮಂತ್ರಿಣಂ ॥ ೪೪ ॥

---

೪೨. ಈ ಸವಾರರ ಮಧ್ಯದಲ್ಲಿ ಒಬ್ಬನು ಮಾತ್ರ ನವರತ್ನಖಚಿತವಾದ ಕುಂಡಲಗಳನ್ನು ಹಾಕಿಕೊಂಡಿದ್ದನು. ಬೆಲೆಬಾಳುವ ಕವಚವನ್ನು ಧರಿಸಿಕೊಂಡು ಹಾರ, ಭುಜಕೀರ್ತಿ, ಇವೇ ಮೊದಲಾದ ಆಭರಣಗಳಿಂದ ಅಲಂಕಾರಮಾಡಿಕೊಂಡಿದ್ದನು. ಇವನು ಹತ್ತಿರುವ ಕುದುರೆಯು ಇತರ ಎಲ್ಲಾ ಕುದುರೆಗಳಿಗಿಂತಲೂ ವೇಗಶಾಲಿಯಾಗಿತ್ತು. ಕುದುರೆಯನ್ನು ಅವನ ಎಡ, ಬಲ ಭಾಗಗಳಿಗೆ ತಿರುಗಿಸುತ್ತಾ ಲಗಾಮನ್ನು ಬಲವಾಗಿ ಬಿಗಿದು ಎಳೆದು ಹಿಡಿದುಕೊಂಡು ಚಮತ್ಕಾರವಾದ, ಮತ್ತು ವೇಗವಾದ ನಡಿಗೆಗಳಲ್ಲಿ ಅದನ್ನು ಪ್ರೇರಿಸುತ್ತಾ ಇದ್ದನು. ಕೈಯ್ಯಿನಲ್ಲಿ ಹಿಡಿದಿರುವ ಕತ್ತಿಯನ್ನು ಆಗಾಗ್ಗೆ ಕೊಡವುತ್ತಿದ್ದನು. ಇವನು ಪ್ರಪಂಚದಲ್ಲಿರುವ ಎಲ್ಲಾ ಸವಾರರಿಗಿಂತಲೂ ಶ್ರೇಷ್ಠನಾಗಿ ಕಾಣುತ್ತಿದ್ದನು. ಅವನನ್ನೂ, ಆ ಕುದುರೆಯನ್ನೂ ನೋಡಿದರೆ ಇತರರಂತೆ ಕಾಣುತ್ತಿರಲಿಲ್ಲವಾದ ಕಾರಣ, ಆ ಕುದುರೆಯು ವೇದಮಯವಾಗಿಯೂ, ಆ ಸವಾರನೇ ಸುಂದರೇಶ್ವರನಾಗಿಯೂ ಇದ್ದನು ಎಂದು ನಿಶ್ಚಯಮಾಡಬೇಕಾಗಿತ್ತು.

೪೩-೪೬. ಅರಿಮರ್ದನಪಾಂಡ್ಯರಾಜನು ಒಂದೇಸಮನಾದ ಆಕಾರವುಳ್ಳವರಾಗಿ, ವಯಸ್ಸಿನಿಂದಲೂ ಒಂದೇಸಮನಾಗಿರುವ, ಒಂದೇವಿಧವಾದ ಆಯುಧವನ್ನು

ಸೋಽಪ್ಯಾಹ ನೈವ ಜಾನೇ ತಮಿತ್ಯುತ್ತರಮಥೋ ದದೌ ।
ದೃಷ್ಟ್ವಾಹಮೇಕವಾರಂ ತಮೀಶ್ವರಂ ಸಾದಿನಾಂ ವರಂ ॥ ೪೫ ॥

ತಸ್ಮೈ ದತ್ತಂ ಧನಂ ಸರ್ವಮಿದಾನೀಂ ಪೀಡಯಾ ಚ ತೇ ।
ಮನಃಕ್ಷೋಭಯುತೋ ಹಂತು ಬಹುಸೇನಾಸಮನ್ವಿತಂ ॥ ೪೬ ॥

ಅಥ ಪಾಂಡ್ಯಮಹೀಪಾಲಃ ಪುನರಾಹ ಚ ಮಂತ್ರಿಣಂ ।
ವಿಹಾಯ ಚಿತ್ತಕ್ಷೋಭಂ ತ್ವಂ ಮತ್ಪ್ರೀತ್ಯೈ ತಂ ಪ್ರದರ್ಶಯ ॥ ೪೭ ॥

ಬ್ರೂಹಿ ಬ್ರೂಹೀತಿ ಚಾಹೈನಂ ಮಂತ್ರಿಣಂ ಪಾಂಡ್ಯರಾಟ್ಸ ಚ ।

ಅಧಾವಯನ್ಸ್ವಮಪಿ ಚಾಂಡಜಮಂಡಧಾತಾ-
ಪಾಶಚ್ಛಿದಾ ಕರತಲೇನ ಗೃಹೀತಪಾಶಃ ।
ಶಶ್ವತ್ಪದಾಬ್ಜಮಚಲಂ ಚಲಯನ್ ಪುರಸ್ತಾ-
ದಶ್ವಾಧಿಪಃ ಪಶುಪತಿಃ ಸ್ವಯಮಾವಿರಾಸೀತ್ ॥ ೪೮ ॥

---

ಧರಿಸಿ, ಮಹಿಮೆಯುಳ್ಳವರಾಗಿ ಶಿಸ್ತಿನಿಂದ ಬರುತ್ತಿರುವ ಕುದುರೆಯ ಸವಾರರನ್ನು ನೋಡಿ, ಆಶ್ಚರ್ಯಪಟ್ಟನು. ಇವರನ್ನು ನೋಡಿದ ರಾಜನಿಗೆ ಉಂಟಾದ ಸಂತೋಷವು ಬಹಳವಾಗಿತ್ತು. ಆಗ ಮಂತ್ರಿಯಾದ ವಾತಪುರೇಶ್ವರನನ್ನು ಕರೆದು ಇವರಲ್ಲಿ ಮುಖ್ಯಸ್ಥನು ಯಾರು ಎಂಬುದನ್ನು ನನಗೆ ತಿಳಿಸು ಎಂದು ಕೇಳಿದನು. ಅವನು "ನನಗೆ ಅವನು ಯಾರೆಂಬುದು ತಿಳಿಯದು. ನಾನು ಒಂದೇ ಒಂದು ಸಲ ಅಶ್ವಗಳ ವ್ಯಾಪಾರಕ್ಕಾಗಿ ಅವನನ್ನು ನೋಡಿ ಹಣವನ್ನು ಅವನಿಗೆ ಕೊಟ್ಟೆನು. ತಿರಿಗಿ ಅವನನ್ನು ನೋಡಲಿಲ್ಲ. ಈಗ ನೀನು ಮಾಡಿಸುತ್ತಿರುವ ಶಿಕ್ಷೆಯಿಂದ ನನಗೆ ಮನಸ್ಸಿನ ಸ್ಥಿತಿಯು ಸರಿಯಾಗಿಲ್ಲ. ಆದ್ದರಿಂದ ಈ ಗುಂಪಿನಲ್ಲಿ ಅವನನ್ನು ಗುರುತು ಹಿಡಿಯಲು ಆಗುವುದಿಲ್ಲ" ಎಂದು ಉತ್ತರವನ್ನು ಹೇಳಿದನು.

೪೭–೫೧. ಆ ಮಾತನ್ನು ಕೇಳಿ ರಾಜನು, ನೀನು ಮನಸ್ಸಿನ ವ್ಯಥೆಯನ್ನು ನನಗೋಸ್ಕರ ಕಮ್ಮಿಮಾಡಿಕೊಂಡು, ಅವನನ್ನು ನನಗೆ ತೋರಿಸು ಎಂದು ಹೇಳುತ್ತಾ

ಪಾಂಡ್ಯೇಶ್ವರ ಮಹಾಭಾಗ ಪಶ್ಯ ತ್ವಂ ಮಾಮಿತಿ ಬ್ರುವನ್ ।
ಸಾದಿವರ್ಯ ಸ್ವತುರಗಂ ವಚಿತ್ರಂ ಸಮಧಾವಯತ್ ॥ ೪೯ ॥

ಅನ್ಯೇಪಿ ಪ್ರಮಥಾಸ್ಸರ್ವೇ ಸ್ವಾನ್ಸ್ವಾನಶ್ವಾನಚೋದಯನ್ ।
ದ್ರುತಾದಿಗಮನಂ ತೇಷಾಮಶ್ವಾನಾಂ ವೀಕ್ಷ್ಯ ವಿಸ್ಮಿತಃ ॥ ೫೦ ॥

ಪ್ರಾಹ ಗಂಭೀರಯಾ ವಾಚಾ ನೃಪಸ್ತಾನಶ್ವಸಾದಿನಃ ।
ಭೋ ಭೋ ಯುಷ್ಮಾಸು ಕಸ್ಸ್ವಾಮೀತ್ಯಪೃಚ್ಛತ್ಪಾಂಡ್ಯರಾಣ್ಮುಹುಃ ॥ ೫೧ ॥

ನಾಯಕಂ ದರ್ಶಯಾಮಾಸುರಂಗುಲೀಸಂಜ್ಞಯಾ ಥ ತೇ ।
ಸೇನಾಮಧ್ಯಗತಂ ಶಂಭುಂ ಸೋಮಸುಂದರಮೀಶ್ವರಂ ॥ ೫೨ ॥

---

ಹೇಳು ! ಹೇಳು ಎಂದು ಬಲಾತ್ಕಾರಪಡಿಸಿದನು. ರಾಜನು ಹೀಗೆ ಹೇಳುವ ಕಾಲಕ್ಕೆ ಸರಿಯಾಗಿ, ಆ ಕುದುರೆಗಳಿಗೆಲ್ಲಕ್ಕೂ ಯಜಮಾನನಾದವನು, ಎಲ್ಲಕ್ಕಿಂತಲೂ ವಿಲಕ್ಷಣವಾದ ತನ್ನ ಕುದುರೆಯನ್ನು ಬೇಗ ಓಡಿಸುತ್ತಾ ಬಂದನು. ಅವನು ಬ್ರಹ್ಮನ ಪಾಶವನ್ನು ಕತ್ತರಿಸುವ ತನ್ನ ಹಸ್ತದಿಂದ ಕುದುರೆಯ ಲಗಾಮನ್ನು ಹಿಡಿದು ಕೊಂಡಿದ್ದನು. ಸುಂದರವಾದ ಕಮಲದಂತಿರುವ ತನ್ನ ಪಾದಗಳನ್ನು ಚಂಚಲ ವಾಗಿರುವಂತೆ ಕುದುರೆಯ ವ್ಯೈಯ್ಯಿನಲ್ಲಿ ಆಡಿಸುತ್ತಾ ರಾಜನ ಎದುರಿಗೆ ನಿಂತನು. ಅವನು ಬಂದಕೂಡಲೆ, ಎಲೈ ಪಾಂಡ್ಯರಾಜನೆ, ಅದೃಷ್ಟಶಾಲಿಯಾದ ಪುಣ್ಯವಂತನೆ, ನೀನು ನನ್ನನ್ನು ನೋಡು ಎಂದು ಹೇಳುತ್ತಾ ತನ್ನ ಕುದುರೆಯನ್ನು ಆಶ್ಚರ್ಯಕರ ವಾಗುವಂತೆ ನಡಿಗೆಗಳಲ್ಲಿ ತಿರುಗಾಡಿಸಿದನು. ಇತರ ಪ್ರಮಥಗಣಗಳೂ ಸವಾರರಾಗಿ ತಮ್ಮ ತಮ್ಮ ಕುದುರೆಗಳನ್ನೂ ಹೀಗೆಯೇ ನಡೆಯಲು ಪ್ರೇರಿಸಿದರು. ರಾಜನು ಕುದುರೆಗಳ ನಡಿಗೆಗಳನ್ನು ನೋಡಿ, ಬಹಳ ಆಶ್ಚರ್ಯದಿಂದ ಕೂಡಿದವನಾಗಿ, "ನಿಮ್ಮಲ್ಲಿ ಮುಖ್ಯನಾದವನನ್ನು ಹೇಳಿರಿ" ಎಂದು ಆ ಸವಾರರನ್ನು ಅನೇಕಸಾರಿ ಪ್ರಶ್ನೆ ಮಾಡಿದನು.

೫೨-೫೩. ಆಗ ಅವರು ತಮ್ಮ ಬೆರಳನ್ನು ತಮ್ಮ ಯಜಮಾನನ ಕಡೆಗೆ ನೀಡಿ, ಅವನನ್ನು ರಾಜನಿಗೆ ತೋರಿಸಿದರು. ಅವನು ಅಶ್ವಸೇನೆಯ ಮಧ್ಯದಲ್ಲಿರುತ್ತಾ

**ದದರ್ಶ ಪಾಂಡ್ಯಭೂಪೋऽಪಿ ಲೀಲಾತತ್ಪರಮೀಶ್ವರಂ ।**
**ಮನೋಭವರಿಪು ಶ್ಚಾರಾನ್ಮನೋ ಭೂಪಸ್ಯ ಮೋಹಯನ್ ॥ ೩೩ ॥**

**ಮನೋವೇಗತುರಂಗೇಣ ಮನೋಜ್ಞೇನ ಸಮಾಯಯೌ ।**
**ಪುರೋಗತಂ ಪುರಾರಾತಿಂ ತೇಜೋರಾಶಿಸಮುಜ್ವಲಂ ॥ ೩೪ ॥**

**ವೀಕ್ಷ್ಯ ಪಾಂಡ್ಯೋऽಪಿ ಭೀತಸ್ಸನ್ಭ್ರಾಂತ್ವಾ ಸದ್ಯಸ್ಸಮುತ್ಥಿತಃ ।**
**ಆಸೀತ್ತಸ್ಯಾಂಜಲಿಶ್ಶೀರ್ಷೇ ಕೃತ್ವಾ‌ಕೃತ್ಯ ಮಜಾನತಃ ॥ ೩೫ ॥**

**ನೇಮುರನ್ಯೇऽಪಿ ತಂ ಸರ್ವೇ ವಶೀಕೃತ್ವಾಂಜಲೀಂ ಸ್ತದಾ ।**
**ಉತ್ಥಾನಂ ನಾರ್ಹಮಸ್ಮಾಕಮಿತಿ ಬುಧ್ವಾಪಿ ಭೂಪತಿಃ ॥ ೩೬ ॥**

---

ಎಲ್ಲರಿಗೂ ಪ್ರಭುವಾದ ಸುಂದರೇಶ್ವರನಾಗಿದ್ದನು. ಪಾಂಡ್ಯರಾಜನು ವಿನೋದಮಾಡು ವುದರಲ್ಲಿ ಆಸಕ್ತನಾಗಿರುವ ಸುಂದರೇಶ್ವರನನ್ನು ನೋಡಿದನು. ಕಾಮಶಾಸನ ನಾದ ಅವನು ರಾಜನನ್ನು ಮರುಳುಗೊಳಿಸುತ್ತಿದ್ದನು. ಅವನ ಮನೋವೇಗದಿಂದ ಇರುವ ಸುಂದರವಾದ ಕುದುರೆಯನ್ನು ಬಿಟ್ಟುಕೊಂಡು ರಾಜನ ಹತ್ತಿರಕ್ಕೆ ಬಂದನು.

೩೪-೩೬. ರಾಜನು ತನ್ನ ಎದುರಿಗೆ ಬಂದು ನಿಂತಿರುವ ಸವಾರನು ಸುಂದರೇಶ್ವರನೆಂದು ತಿಳಿದಿರಲಿಲ್ಲ. ಆದರೂ ಅವನು ಬಹಳ ತೇಜಶ್ಶಾಲಿಯಾಗಿರು ವುದನ್ನು ನೋಡಿದ್ದರಿಂದ ರಾಜನ ಮನಸ್ಸಿನಲ್ಲಿ ಒಂದು ವಿಧವಾದ ಭೀತಿಯೂ, ಆಶ್ಚರ್ಯವೂ ಉಂಟಾಯಿತು. ಆದರಿಂದ ಅವನು ಕೂಡಲೆ ಆ ಸವಾರನನ್ನು ನೋಡುವುದಕ್ಕಾಗಿ ಎದ್ದು ನಿಂತನು. ಕಾರ್ಯಾಕಾರ್ಯಗಳನ್ನು ತಿಳಿಯದೆ ಇರುವ ರಾಜನ ಎರಡು ಹಸ್ತಗಳೂ ರಾಜನ ಶಿರಸ್ಸಿನ ಮೇಲಕ್ಕೆ ಬಂದವು. ಅವನು ಶಿರಸ್ಸನ್ನು ತಗ್ಗಿಸಿದನು. ಇದರಿಂದ ರಾಜನು ಅವನಿಗೆ ನಮಸ್ಕಾರಮಾಡಿದಂತಾಯಿತು. ರಾಜನ ಹತ್ತಿರದಲ್ಲಿ ಇದ್ದವರೆಲ್ಲರೂ ಬಗಸೆಯನ್ನು ಹಿಡಿದುಕೊಂಡು ಅವನಿಗೆ ನಮಸ್ಕಾರವನ್ನು ಮಾಡಿದರು. ರಾಜನು ಸವಾರನಿಗಾಗಿ ಮೇಲಕ್ಕೆ ಎದ್ದು ಮರ್ಯಾದೆಮಾಡುವುದು ಯೋಗ್ಯವಲ್ಲವೆಂದು ತಿಳಿದಿದ್ದನು. ಆದರೂ ಅವನನ್ನು ನೋಡಿದ ಕೂಡಲೆ, ತಾನು (ರಾಜನು) ಕೂತುಕೊಂಡಿದ್ದ ಆಸನವನ್ನು ಬಿಟ್ಟು ನಾಚಿಕೆಯಿಂದ ಎದ್ದು ನಿಲ್ಲ ಬೇಕಾದ ಮನೋಭಾವವು ಉಂಟಾಗಿ, ಅವನ ಎದುರಿಗೆ ನಿಂತುಕೊಂಡನು.

ಆಸೀದುಚ್ಚಾಸನೇ ಪಶ್ಚಾಲ್ಲಜ್ಜಿತಃ ಸ್ಥಿತ ಏವ ಸಃ ।
ತಂ ಭೂಪತಿಂ ಪಶುಪತಿರಿತಿ ಪ್ರಾಹ ಪುರಸ್ಸ್ಥಿತಂ ॥ ೫೭ ॥

ಶೃಣು ಪಾಂಡ್ಯಮಹೀಪಾಲ ಶಶಿವಂಶಶಿಖಾಮಣೇ ।
ಅನೇನ ಮಂತ್ರಿವರ್ಯೇಣ ಕುರ್ವತಾ ಹಿತಮೇವ ತೇ ॥ ೫೮ ॥

ಯಾವಂತೋಽರ್ಥಾ ಗೃಹೀತಾಶ್ಚ ಭವತಃ ಕೋಶಸದ್ಮನಃ ।
ತಾವಂತೋಽರ್ಥಾಗೃಹೀತಾಶ್ಚ ಮದೀಯಾನುಚರೈರ್ಮಯಾ ॥ ೫೯ ॥

ಸುಂದರೇಶ್ವರಭಕ್ತತ್ವಾದ್ವೀಕ್ಷ್ಯ ಭಕ್ತಂ ಕೃಪಾವತಾ ।
ತವೈಶ್ವರ್ಯಾದಪಿ ಮಹದನಂತೈಶ್ವರ್ಯವಾನಹಂ । ॥ ೬೦ ॥

ಐಶ್ವರ್ಯಾಪೇಕ್ಷಯಾ ಸತ್ಯಂ ಗೃಹೀತಂ ತ್ವದ್ಧನಂ ನ ಹಿ ।
ತಥಾಪಿ ಪೀಡಾಂ ಕೃತವಾನ್ಸನ್ಮಂತ್ರಿಣಮಹಂ ಪರಂ ॥ ೬೧ ॥

ತಸ್ಯ ದುಃಖಾದಹಂ ದುಃಖೀ ಮಾಂ ತ್ವಂ ಪೀಡಿತವಾನಸಿ ।
ಕಿಂಚಿದಪ್ಯಸ್ಯ ಹಸ್ತೇ ತು ಧನಂ ನಾಸ್ತಿ ಮಹೀಪತೇ ॥ ೬೨ ॥

---

೫೭–೬೨. ಆಗ ಕುದುರೆಯ ಸವಾರನ ವೇಷದಿಂದ ಇರುವ ಸುಂದರೇಶ್ವರನು. ತನ್ನ ಎದುರಿಗೆ ನಿಂತಿರುವ ಪಾಂಡ್ಯರಾಜನನ್ನು ನೋಡುತ್ತಾ "ಎಲೈ ಪಾಂಡ್ಯರಾಜನೆ ಕೇಳು. ನೀನು ಚಂದ್ರವಂಶದ ರಾಜರಿಗೆಲ್ಲರಿಗೂ ಶ್ರೇಷ್ಠನು. ಈ ಮಂತ್ರಿಯು ನನಗೆ ಹಿತವನ್ನು ಮಾಡಿರತಕ್ಕವನು. ನಿನ್ನ ಭಂಡಾರದಿಂದ ಬಹಳ ದ್ರವ್ಯವನ್ನು ತೆಗೆದುಕೊಂಡು ನನ್ನ ಪರಿವಾರದವರೆಲ್ಲರಿಗೂ ದಾನ ಮಾಡಿರುವನು. ನಾನು "ಸುಂದರೇಶ್ವರನ ಭಕ್ತನು ಅವನು" ಎಂದು ತಿಳಿದು ಅವನಲ್ಲಿಯೂ ನಿನ್ನಲ್ಲಿಯೂ ದಯೆಯುಳ್ಳವನಾದೆನು. ನಿನ್ನ ಐಶ್ವರ್ಯಕ್ಕಿಂತಲೂ ನನಗೆ ಇರುವ ಐಶ್ವರ್ಯವು ಬಹಳವಾದದ್ದು. ಮತ್ತು ಅಸಂಖ್ಯಾತವಾದದ್ದು. ನನಗೆ ದ್ರವ್ಯವಿಲ್ಲವೆಂದು ನಿನ್ನ ದ್ರವ್ಯವನ್ನು ನಾನು ಸ್ವೀಕರಿಸಲಿಲ್ಲ. ಇದು ಸತ್ಯವಾದ ಮಾತು. ಆದಾಗ್ಯೂ ಗುಣವಂತನಾದ ನಿನ್ನ ಮಂತ್ರಿಗೆ ದುಃಖವನ್ನು ನಾನು ಉಂಟು ಮಾಡಿರುವೆನು. ಅವನ ದುಃಖಕ್ಕಿಂತಲೂ ನನಗೆ ದುಃಖವು ಬಹಳವಾಗಿರತ್ತದೆ. ನೀನು (ಅವನನ್ನು ಶಿಕ್ಷೆಮಾಡುವುದು ನನಗೆ ಶಿಕ್ಷೆಯಾಗಿರುತ್ತದೆ.) ನನಗೆ ಶಿಕ್ಷೆಯನ್ನು ಮಾಡಿರುತ್ತೀಯೆ. ಈಗ ಅವನ ಹತ್ತಿರದಲ್ಲಿ ಕೊಂಚ ದ್ರವ್ಯವೂ ಇಲ್ಲ.

**ಸಲ್ಲಕ್ಷಣಾಶ್ಚ ಸದ್ದೇಶ್ಯಾ ಆಯಾತಾಸ್ತುರಗಾ ಇಹ ।**
**ಶ್ವೋ ನಸ್ಯಾದಿತಿ ಚಾಶ್ವತ್ವಂ ತುರಗಾಣಾಂ ಪ್ರಕೀರ್ತಿತಂ॥ ॥ ೬೩ ॥**

**ಅಶ್ವಾಸ್ತೇ ಯದಿ ವಿಕ್ರೇತುಂ ಗೃಹೀತುಂ ಚೇಚ್ಛಸಿ ಪ್ರಭೋ ।**
**ತತ್ಪಾಶಾನಾಂ ವಿನಿಮಯಃ ಕಾರ್ಯೋಽದ್ಯ ಸಹಸಾ ತ್ವಯಾ ॥ ೬೪ ॥**

**ಶುಭಾಶುಭಂ ನ್ವೈವ ಜಾನೇ ಪಾಶಾನಾಂ ವ್ಯತ್ಯಯಾತ್ಪರಂ ।**
**ಗೃಹೀತುಂ ತೇ ಧನಾನ್ಯದ್ಯ ಪುನರಿಚ್ಛಾಸ್ತಿ ಭೂಪತೇ ॥ ೬೫ ॥**

**ಧನಾನಿ ದಾಸ್ಯೇ ದ್ವಿಗುಣಂ ವಿನಾ ಮಂತ್ರಂ ವದಾದ್ಯವೋ ।**
**ಇತಿ ಶ್ರುತ್ವಾ ತಸ್ಯ ವಾಚಂ ನೃಪಃ ಪ್ರೀತಸ್ತಮಬ್ರವೀತ್ ॥ ೬೬ ॥**

---

೬೩-೬೪ ಉತ್ತಮವಾದ ದೇಶಗಳಲ್ಲಿ ಹುಟ್ಟಿದ ಸರಿಯಾದ ಲಕ್ಷಣಗಳುಳ್ಳ ಕುದುರೆಗಳು ಈಗ ಇಲ್ಲಿಗೆ ಬಂದಿರುತ್ತವೆ. (ಅಶ್ವಶಬ್ದಕ್ಕೆ ಶ್ವಃ ಎಂದರೆ, ನಾಳೆ ನಾಶ ವಾಗುವುದು ಅಶ್ವವೆಂದು ಅರ್ಥವಾಗಿರುವುದು) ತುರಗ ಎಂದರೆ ಬೇಗನೆ ಹೋಗುವುದು. ಅಶ್ವವೆಂದರೆ ನಾಳೆ ಇಲ್ಲದಿರುವುದು. ಎಂದು ಅಶ್ವ, ತುರಗ ಶಬ್ದಗಳ ಅರ್ಥವಾಗಿರುವುದು. ರಾಜನಾದ ನೀನು ಈ ಪ್ರಕಾರವಾದ ಅರ್ಥವನ್ನು ಕೊಡುವ ಅಶ್ವ, ತುರಗ ಎಂಬ ಶಬ್ದಬೋಧ್ಯವಾದ ಪದಾರ್ಥಗಳನ್ನು ಕೊಂಡು ಹಿಡಿದು, ಕಟ್ಟಿಹಾಕಲು ಇಚ್ಛಿಪಡುವುದಾದರೆ ಅವುಗಳ ಹಗ್ಗಗಳನ್ನು ಬೇಗ ಬದಲಾಯಿಸ ತಕ್ಕದ್ದು.

೬೫-೬೬. ಹಗ್ಗಗಳನ್ನು ಬದಲಾಯಿಸಿದ ನಂತರ ಉಂಟಾಗುವ ಒಳ್ಳೆಯದು ಮತ್ತು ಕೆಟ್ಟದರ ವಿಷಯದಲ್ಲಿ ನಾನು ನಂಬಿಕೆಯುಳ್ಳವನಲ್ಲ. ಎಲೈ ರಾಜನೆ ನಿನ್ನಿಂದ ಹಣವು ನನಗೆ ಇನ್ನೂ ಬರಬೇಕಾಗಿರುವುದು. ಕುದುರೆಗಳು ಬೇಡವೆಂದು ನೀನು ಹೇಳಿದರೆ, ಕೊಟ್ಟಿರುವ ದ್ರವ್ಯಕ್ಕಿಂತಲೂ ಎರಡರಷ್ಟು ಧನವನ್ನು ನಾನು ಕೊಡುವೆನು. ಮಂತ್ರಾಲೋಚನೆಯಿಲ್ಲದೆ ಈಗ ಕುದುರೆಗಳು ಬೇಕೋ. ಬೇಡವೋ ಬೇಗ ಹೇಳು" ಎಂದು ಹೇಳುತ್ತಿರುವ ಸವಾರರಿಗೆಲ್ಲರಿಗೂ ಯಜಮಾನನಾದ ಅವನ ಮಾತನ್ನು ಕೇಳಿ ಪಾಂಡ್ಯರಾಜನು ಸಂತೋಷವನ್ನು ಹೊಂದಿದನು.

ಸಾದಿವರ್ಯ ಮಹಾಭಾಗ ಭವಾನ್ಸರ್ವಜ್ಞ ಏವ ಹಿ ।
ಪಾಶವ್ಯತ್ಯಯತಃ ಪಶ್ಚಾದಶ್ವಾನಾಂ ತು ಶುಭಾಶುಭಂ ॥ ೬೭ ॥

ಮಮ್ಯೈವ ಸ್ಯಾತ್ತು ಯುಷ್ಮಾಕಂ ಸಂಬಂಧೋ ನ ಹಿ ವಾಜಿಷು ।
ಮಮ ಮಾಸ್ತು ಧನಾನ್ಯದ್ಯ ದದಸ್ವಾಶ್ವಾನ್ಸ್ಮೃತಂ ವದೇ ॥ ೬೮ ॥

ಪ್ರಯಚ್ಛ ಸದ್ಯಸ್ತುರಗಾಂತ್ಸವೇಗಾಂಶ್ಚ ಸುಲಕ್ಷಣಾನ್ ।
ತ್ವತ್ಸಹಾಯಮಹಂ ಲಬ್ಧ್ವಾ ವಿಜೇಷ್ಯಾಮಿ ರಿಪೂನ್ರಣೇ ॥ ೬೯ ॥

ಮಧ್ಯೇ ಚ ಮಂತ್ರಿಣಾಂ ಮೇದ್ಯ ಮಂತ್ರೀ ವಾತಪುರೇಶ್ವರಃ ।
ಮತ್ಕಾರ್ಯಕಾರಿಣಾಂ ಮಧ್ಯೇ ಪ್ರಾಪಾತ್ಯಂತಂ ಪ್ರವೀಣತಾಂ ॥ ೭೦ ॥

ಏವಂ ವಾತಪುರೇಶಾನಂ ಪೂಜಯಾಮಿ ಚ ಮಂತ್ರಿಣಂ ।
ಏವಂ ಕೋ ವಾ ತು ಮತ್ಕಾರ್ಯಂ ಕರೋತ್ಯನ್ಯೇಷು ಮಂತ್ರಿಷು ॥ ೭೧ ॥

೬೭-೬೯. ಎಲೈ ಪುಣ್ಯವಂತನಾದ ಸವಾರಶ್ರೇಷ್ಠನೆ, ನೀನು ಎಲ್ಲವನ್ನೂ ತಿಳಿದು ಇರುತ್ತೀಯೆ. ಕುದುರೆಗಳ ಹಗ್ಗವನ್ನು ಬದಲಾಯಿಸಿದ ನಂತರ ಉಂಟಾಗುವ ಶುಭಾಶುಭಗಳು ನನಗೆ ಸಂಬಂಧಪಟ್ಟಿರುವುವು. ಅದಕ್ಕೂ ನಿಮಗೂ ಸಂಬಂಧವಿಲ್ಲ. ನನಗೆ ದ್ರವ್ಯವು ಬೇಕಾಗಿಲ್ಲ ಕುದುರೆಗಳೇ ಬೇಕಾಗಿರುತ್ತವೆ. ನಿನಗೆ ನಿಜವನ್ನು ಹೇಳುತ್ತೇನೆ. ವೇಗಶಾಲಿಗಳಾಗಿರುವ ಸರಿಯಾದ ಲಕ್ಷಣಗಳುಳ್ಳ ಕುದುರೆಗಳನ್ನು ನನಗೆ ಕೊಡು. ನಿನ್ನ ಸಹಾಯದಿಂದ ನಾನು ಶತ್ರುಗಳನ್ನು ಯುದ್ಧದಲ್ಲಿ ಗೆಲ್ಲುವೆನು.

೭೦-೭೩. ನನಗೆ ಇರುವ ಮಂತ್ರಿಗಳೆಲ್ಲರಿಗಿಂತಲೂ ವಾತಪುರೇಶ್ವರನೇ ಈಗ ಚೆನ್ನಾಗಿ ನನ್ನ ಕಾರ್ಯವನ್ನು ಸಾಧಿಸಿರುವನು. ಇವನಿಗೆ ಬುದ್ಧಿವಂತನೆಂದು ಹೆಸರು ಬಂದಿರುವುದು. ಇವನಿಗೆ ಅತಿಶಯವಾಗಿ ಮರ್ಯಾದೆಯನ್ನು ಮಾಡುವೆನು. ಇತರ ಮಂತ್ರಿಗಳು ಯಾರೂ ಹೀಗೆ ಕಾರ್ಯವನ್ನು ನೆರವೇರಿಸಲಿಲ್ಲ. ಕುದುರೆಗಳನ್ನು ನೋಡಿದ ಕೂಡಲೆ ಎಲ್ಲಾ ಜನರಿಗೂ ಆಶ್ಚರ್ಯವಾಗುವ ಹಾಗೆ ನೀನೂ ಕೂಡ ನನಗೆ

**ದೃಷ್ಟಮಾತ್ರೇಣ ತುರಗಾಃ ಜನಾನಾಂ ವಿಸ್ಮಯಪ್ರದಾಃ ।**
**ಕುರ್ವಂತಿ ಚ ಯಥಾ ತ್ವಂ ಚ ಕರೋಷಿ ಪರಮಾಂ ಮುದಂ ॥ ೭೨ ॥**

**ಪ್ರಸಾದಯ ಪ್ರಸನ್ನಸ್ತ್ವಂ ಮಹ್ಯಮಶ್ವಾನ್ಮನೋಹರಾನ್ ।**
**ಇತ್ಯುಕ್ತ್ವಾ ಪೂರ್ವವತ್ತಸ್ಥೌ ವಿಸ್ಮಿತೋ ನಿಶ್ಚಲೋ ನೃಪಃ ॥ ೭೩ ॥**

**ಇತಿ ತದ್ವಾಕ್ಯಮಾಕರ್ಣ್ಯ ಸಾದಿರಾಟ್ಸುಂದರೇಶ್ವರಃ ।**
**ಪುರಾ ತಲ್ಲಕ್ಷಣಾನ್ಯುಕ್ತ್ವಾ ಪಶ್ಚಾದ್ದಾತುಂ ತುರಂಗಮಾನ್ ॥ ೭೪ ॥**

**ಸಮುದ್ಯುಕ್ತ ಇತಿ ಪ್ರಾಹ ವಾಚಾ ಭೂಪಂ ಪ್ರಗಲ್ಭಯಾ ।**
**ಶ್ರೀಮತ್ಪಾಂಡ್ಯ ಮಹೀಪಾಲ ಮಹೀತಲಪುರಂದರ ॥ ೭೫ ॥**

**ಶ್ರುತ್ವಾ ತಲ್ಲಕ್ಷಣಾನ್ಯಾದೌ ಮನಸ್ತುಷ್ಟ್ಯೈ ಶುಭಾಯ ಚ ।**
**ಮನೋವೇಗಾತಿವೇಗಾಢ್ಯಾನ್ ಗೃಹಾಣಾಶ್ವಾನಥ ಪ್ರಭೋ ॥ ೭೬ ॥**

---

ಬಹಳ ಸಂತೋಷವನ್ನು ಉಂಟುಮಾಡುತ್ತಿರುತ್ತೀಯೆ. ನೀನು ನನ್ನ ವಿಷಯದಲ್ಲಿ ಸಂತೋಷವುಳ್ಳ ಮನಸ್ಸಿನಿಂದ ಮನೋಹರವಾಗಿರುವ ಈ ಕುದುರೆಗಳನ್ನು ಕೊಡು" ಎಂದು ಅರಿಮರ್ದನ ಪಾಂಡ್ಯರಾಜನು ಹೇಳಿ, ಮೊದಲಿನ ಹಾಗೆ ಆಶ್ಚರ್ಯದಿಂದ ಸ್ತಂಭದಂತೆ ಸುಮ್ಮನೆ ನಿಂತನು.

೭೪-೭೬. ಸವಾರರಿಗೆ ಯಜಮಾನನಾದ ಸುಂದರೇಶ್ವರನು ರಾಜನ ಮಾತನ್ನು ಕೇಳಿ, ಮೊದಲು ಕುದುರೆಗಳ ಲಕ್ಷಣಗಳನ್ನು ತಿಳಿಸಿದನಂತರ ಅವುಗಳನ್ನು ರಾಜನಿಗೆ ಕೊಡಲುದ್ಯುಕ್ತನಾಗಿ, ಪ್ರೌಢವಾದ ಮಾತಿನಿಂದ ರಾಜನೊಡನೆ ಮಾತನಾಡಲುಪಕ್ರಮಿಸಿದನು. " ಭೂಮಿಯಲ್ಲಿ ಇಂದ್ರನಂತೆ ಇರುವ ಪಾಂಡ್ಯರಾಜನೆ, ಮೊದಲು ನೀನು ಕುದುರೆಗಳ ಲಕ್ಷಣಗಳನ್ನು ತಿಳಿದುಕೊ. ನೀನು ಮನಸ್ಸನ್ನು ಸಂತೋಷಪಡಿಸಿಕೊಂಡನಂತರ, ಹಿತವನ್ನು ಹೊಂದುವುದಕ್ಕಾಗಿ ಮನೋವೇಗ

ಸರ್ವಲಕ್ಷಣಸಂಯುಕ್ತಾ ಯತ್ರ ತಿಷ್ಠಂತಿ ವಾಜಿನಃ ।
ತಸ್ಯ ರಾಜ್ಯಂ ಯಶೋ ಲಕ್ಷ್ಮೀರ್ವಿಜಯೋಽಪಿ ಭವತ್ಯಥ ॥ ೭೭ ॥

ರಣೇ ಖಡ್ಗಖಣಾತ್ಕಾರಭೀಷಣೇ ಪತಿಮರ್ವಣಾಂ ।
ಸ್ವಯಂ ವೃಣೋತಿ ವೀರಶ್ರೀಃ ಶುಭಯಾ ಕೀರ್ತಿಮಾಲಯಾ ॥ ೭೮ ॥

ಅಹೋ ವಿಲೋಕಯಾಶ್ವಾಂಸ್ತ್ವಂ ಮದೀಯಾನ್ಪುರತಸ್ಥಿತಾನ್ ।
ಮೃಗೇಂದ್ರವೇಗಾ ಶಾರ್ದೂಲವೇಗಾ ವೇಗಾನ್ಮೃಗೋಪಮಾನ್ ॥೭೯॥

ಗಜೈಶ್ಚೈರ್ವಾನರೈಶ್ಚ ಶರಭೈಶ್ಚ ಶರೈರಪಿ ।
ವೇಗೇನ ಸನ್ನಿಭಾನಶಾನ್ವಾಯುವೇಗಾ ಮನೋಜವಾನ್ ॥ ೮೦ ॥

ಆಯಾಮೋತ್ಸೇಧ ವಿಸ್ತಾರಪರಿಣಾಹಮನೋಹರಾನ್ ।
ಏಕವರ್ಣಾನ್ ಪಂಚವರ್ಣಾ ನಥ ಭಿನ್ನಾನ್ಮನೋಹರಾನ್ ॥ ೮೧ ॥

---

ಕ್ಕಿಂತಲೂ ವೇಗಶಾಲಿಗಳಾದ ಕುದುರೆಗಳನ್ನು ಸ್ವೀಕರಿಸು. ಎಲ್ಲಾ ವಿಧವಾದ ಲಕ್ಷಣಗಳುಳ್ಳ ಕುದುರೆಗಳನ್ನು ಹೊಂದಿರುವ ರಾಜನಿಗೆ ರಾಜ್ಯ, ಕೀರ್ತಿ, ಐಶ್ವರ್ಯ, ಜಯ ಇವುಗಳು ಸ್ಥಿರವಾಗಿ ಇರುವುವು.

೭೮–೮೦. ಯುದ್ಧದಲ್ಲಿ ಕತ್ತಿಯ ಭಯಂಕರವಾದ ಖಣಖಣಧ್ವನಿಯು ಉಂಟಾಗುವಂತೆ ಕೆಲಸಮಾಡುವ, ಉತ್ತಮವಾದ ಕುದುರೆಗಳನ್ನು ಹೊಂದಿರುವ, ರಾಜನನ್ನು ಕೀರ್ತಿ ಎಂಬ ಹಾರವನ್ನು ಧರಿಸಿರುವ ವೀರಲಕ್ಷ್ಮಿಯು ತಾನಾಗಿ ಪ್ರೀತಿಯಿಂದ ವರಿಸುವಳು. ಎಲೈ ರಾಜನೆ, ನೋಡು ನನ್ನ ಕುದುರೆಗಳು ಹೇಗಿರುತ್ತವೆ. ಇವುಗಳಲ್ಲಿ ಕೆಲವು ಸಿಂಹ, ಹುಲಿ, ಜಿಂಕೆ, ಆನೆ, ಮೊಲ, ಕಪಿ ಶರಭ, ಬಾಣ, ಇವುಗಳ ವೇಗಕ್ಕೆ ಸಮನಾದ ವೇಗಶಾಲಿಗಳಾಗಿರುವವು.

೮೧–೮೩. ಇವುಗಳು ಶರೀರದ ಸುತ್ತಳತೆ, ಎತ್ತರ, ಬೆನ್ನಿನ ವಿಸ್ತಾರ, ಮತ್ತು ಸುತ್ತಲೂ ಅನುರೂಪವಾಗಿರುವಿಕೆ, ಇವುಗಳಿಂದ ಸುಂದರವಾಗಿರುವುವು.

ಶಂಖಸ್ವಸ್ತಿಕಚಕ್ರಾಭಪುಂಡರೀಕತ್ರಿಪುಂಡ್ರಕಾನ್ ।
ಮೇಘಗಂಭೀರನಿರ್ಘೋಷಹೇಷಿತಾರ್ಣವದಸಂಯುತಾನ್ ॥ ೮೨ ॥

ಅಂಘ್ರಿದೋಷೈರ್ವಿರಹಿತಾನ್ ಶಿಕ್ಷಾವಿಧಿಸುಶಿಕ್ಷಿತಾನ್ ।
ಶಂಖಾಂಬುವಾಹಶರಭಸಿಂಹಗಂಭೀರಹೇಷಿತಾನ್ ॥ ೮೩ ॥

ನಿಗಲೀ ದೇವಮಣಿನೋ ಸ್ಥಾವರ್ತೈಶ್ಚ ವರ್ತೈಯುತಾನ್ ।
ಅಷ್ಟಮಂಗಲಸಂಪನ್ನಾನ್ ಪಂಚಕಲ್ಯಾಣಶೋಭಿತಾನ್ ॥ ೮೪ ॥

ಕುಂಕುಮಾಗರುಕರ್ಪೂರಕಸ್ತೂರೀ ಗಂಧಗಂಧಿತಾನ್ ।
ಅಭಿತೋ ಧಾವನೇ ಪ್ರಾಪ್ತೇಲಾತಚಕ್ರಸಮಾನಪಿ ॥ ೮೫ ॥

---

ಈ ಕುದುರೆಗಳು ಒಂದು ಬಣ್ಣಗಳುಳ್ಳವುಗಳು. ಕೆಲವು, ಐದು ಬಣ್ಣದಿಂದ ಇರುವುವು. ಕೆಲವು ಮಿಶ್ರವಾದ ವರ್ಣವುಳ್ಳವುಗಳು. ಕೆಲವು ಒಟ್ಟಿನಲ್ಲಿ ಸುಂದರವಾಗಿರುವುವು. ಇವುಗಳಲ್ಲಿ ಶಂಖ, ಚಕ್ರ, ಪುಂಡರೀಕ, ತ್ರಿಪುಂಡ್ರ ಈ ಚಿಹ್ನೆಗಳು ಇರುವುವು. ಮೇಘದಹಾಗೆ ಗಂಭೀರವಾದ ಧ್ವನಿಯನ್ನು ಹೊಂದಿರುವ ಈ ಕುದುರೆಗಳು ಮದಿಸಿರುವುವು.

೮೪-೮೫. ಇವುಗಳ ಕಾಲಿನಲ್ಲಿ ದೋಷವಿಲ್ಲ. ಇವುಗಳಿಗೆ ಸರಿಯಾದ ಶಿಕ್ಷೆಯು ನಡೆದಿರುವುದು. ಇವುಗಳ ಹೇಷಿತಧ್ವನಿಯು ಶಂಖ, ಮೇಘ, ಶರಭ, ಸಿಂಹ, ಇವುಗಳ ಧ್ವನಿಯ ಹಾಗೆ ಗಂಭೀರವಾಗಿರುವುದು. ಈ ಕುದುರೆಗಳ ಕುತ್ತಿಗೆಯಲ್ಲಿ ದೇವಮಣಿ ಎಂಬ ಸುಳಿಯು ಇರುವುದು. ಈ ಕುದುರೆಗಳು ಅಷ್ಟಮಂಗಳ ಎಂಬ ಲಕ್ಷಣಗಳಿಂದ ಕೂಡಿರುವುವು. ಇವುಗಳಿಗೆ ಪಂಚಕಲ್ಯಾಣವೆಂಬ ಲಕ್ಷಣವಿರುವುದು. ಕುಂಕುಮದ ಹೂವು, ಕಸ್ತೂರಿ, ಅಗಿಲು, ಕರ್ಪೂರ ಇವುಗಳಿಂದ ಕೂಡಿದ ಸುಗಂಧದ ವಾಸನೆಯು ಈ ಕುದುರೆಗಳ ಶರೀರದಲ್ಲಿರುವುದು. ಈ ಕುದುರೆಗಳು ಸುತ್ತಲೂ ಓಡುವ ಸಂದರ್ಭವು ಒದಗಿದಾಗ ಕೊಳ್ಳಿಯನ್ನು ಸುತ್ತಲೂ ತಿರುಗಿಸಿದಹಾಗೆ ತಿರುಗುತ್ತಿದ್ದರೂ ಮೇಲೆ ಕುಳಿತಿರುವ ಸವಾರನಿಗೆ ಅಧೀನವಾಗಿರುವುವು.

ಪುರುಷಾರೂಢಮಾತ್ರೇಣ ತದೂರುವಶವರ್ತಿನಃ ।
ಪೀಯೂಷಖಂಡಸದೃಶಫೇನಜಾಲಾಭಿಮಂಡಿತಾನ್ ॥ ೮೬ ॥

ನೌಸನ್ನಿಭಾನಾಪಗಾಸು ಗಂತುಂ ಶಕ್ತಾಂಶ್ಚ ದುರ್ಗಮೇ ।
ಪ್ರಾಕಾರಬಂಧವಾರ್ಯಗ್ನಿ ಪರಿಲಂಘನಸುಕ್ಷಮಾನ್ ॥ ೮೭ ॥

ಜಾತಾಷ್ಟವರ್ಷದೇಶೀಯಾ ನಶಕ್ತಿರಹಿತಾನಪಿ ।
ಏವಮಾದಿಗುಣೈರ್ಯುಕ್ತಾನ ಶ್ವಾನತ್ಯಂತದುರ್ಲಭಾನ್ ॥ ೮೮ ॥

ವಾಹನಾನ್ಯುಚಿತಾನೀತಿ ರಾಜ್ಞಾಂ ಪ್ರಾಹುರ್ವಿಚಕ್ಷಣಾಃ ।
ತ್ವದ್ಯೋಗ್ಯಾ ಏವ ತುರಗಾ ಆನೀತಾ ಅಖಿಲಾ ಅಪಿ ॥ ೮೯ ॥

ಇತ್ಯುಕ್ತ್ವಾ ಪಾಂಡ್ಯಭೂಪಾಲಂ ನಂದ್ಯಾದಿಗಣನಾಯಕಾನ್ ।
ಕಿಂಚಿದಾಲೋಕಯಾಮಾಸ ಕಟಾಕ್ಷೇಣ ಮಹೇಶ್ವರಃ ॥ ೯೦ ॥

---

೮೬–೯೦. ಅಮೃತದ ಚೂರಿನಂತೆ ಇರುವ ನೊರೆಗಳ ಸಮೂಹದಿಂದ ಪ್ರಕಾಶಿಸುತ್ತಿರುವವು. ಈ ಕುದುರೆಗಳು ಹೊಳೆಯನ್ನು ದಾಟುವಾಗ ಹಡಗುಗಳಂತೆ ಇರುವವು. ದುರ್ಗಮಪ್ರದೇಶಗಳಲ್ಲಿಯೂ, ಸಂಚರಿಸಲು ತಕ್ಕವುಗಳಾಗಿರುವವು. ಕೋಟೆಯ ಗೋಡೆ, ಕಂದಕ, ಬೆಂಕಿ, ಇವುಗಳನ್ನು ಹಾರುವ ಸಾಮರ್ಥ್ಯವುಳ್ಳವುಗಳಾಗಿ ಇರುವುವು. ಎಂಟು ವರ್ಷ ವಯಸ್ಸಿನವುಗಳಾದರೂ ಬಹಳ ಶಕ್ತಿಯುಳ್ಳವುಗಳಾಗಿ ಮೇಲೆ ಹೇಳಿದ ಗುಣಗಳಿಂದ ಕೂಡಿರುವ ಈ ಕುದುರೆಗಳು ರಾಜನಿಗೆ ವಾಹನವಾಗಿರಲು ಯೋಗ್ಯವೆಂದು ತಿಳಿದವರು ಹೇಳುವರು. ನಿನ್ನಂತೆ ಇರುವ ರಾಜನಿಗೆ ಯೋಗ್ಯವಾಗಿರುವ ಕುದುರೆಗಳೆಲ್ಲವನ್ನೂ ನಾನು ತಂದಿರುವೆನು. ಎಂದು ರಾಜನಿಗೆ ಹೇಳುತ್ತಾ ಮಹೇಶ್ವರನು ನಂದಿಯೇ ಮೊದಲಾದ ಗಣನಾಥರನ್ನು ಕಟಾಕ್ಷದಿಂದ ನೋಡಿದನು.

ತೇ ಸರ್ವೇ ಸ್ವ ಸ್ವ ತುರಗಾ ಶರವಾಯುಮನೋಜವಾನ್ ।
ಧಾರಾಸು ಚೋದಯಾಮಾಸುಃ ಸಮ್ಯಕ್ಪಂಚವಿಧಾಸು ಚ ॥ ೯೧ ॥

ವಿಲೋಕ್ಯ ವಿಸ್ಮಿತೋತ್ಯಂತಮಶ್ವಾನಾಮುದ್ಭುತಾಕೃತಿಂ ।
ಮಂತ್ರಿಭಿರ್ಮುಮುದೇ ರಾಜಾ ವಾತಗ್ರಾಮೇಶಮಂತ್ರಿಣಾ ॥ ೯೨ ॥

ಅಥ ದೇವೋಽಪಿ ವೇದಾಶ್ವಂ ಸ್ವಕೀಯಂ ಪರಿವರ್ತಯನ್ ।
ಸವ್ಯಾಪಸವ್ಯಮಾರ್ಗೇಣ ಬಭೌ ಸೂರ್ಯ ಇವಾಪರಃ ॥ ೯೩ ॥

ಸವ್ಯಾಪಸವ್ಯಗತಿಭಿ ಸ್ಸಂಚರನ್ನತಿವೇಗತಃ ।
ಏಕೋಽನೇಕ ಇವಾಭಾತಿ ಜನಾನಾಂ ಶಾಂಕರೋ ಹಯಃ ॥ ೯೪ ॥

ಪ್ರಾಪ್ತಾಯಾ ಮಭಿತೋ ಗತ್ಯಾಮಥ ಶಂಕರವಾಹನಂ ।
ಅಲಾತಚಕ್ರಸದೃಶ ಮಾಭಾತಿ ಸುಚಿರಂ ಜವಾತ್ ॥ ೯೫ ॥

---

೯೧-೯೨. ಆಗ ಅವರೆಲ್ಲರೂ ಬಾಣವೇಗ ಮನೋವೇಗ, ಮತ್ತು ವಾಯು ವೇಗಕ್ಕೆ ಸಮನಾದ ವೇಗವುಳ್ಳ, ತಮ್ಮ ತಮ್ಮ ಕುದುರೆಗಳನ್ನು ಐದು ವಿಧವಾದ ಗತಿಗಳಿಂದ ನಡೆಯಲು ಪ್ರೇರಿಸಿದರು. ರಾಜನು ಆ ಕುದುರೆಗಳ ಆಶ್ಚರ್ಯಕರವಾದ ಆಕಾರವನ್ನು ನೋಡಿ, ಮಂತ್ರಿಯಾದ ವಾತಪುರೇಶ್ವರನೇ ಮೊದಲಾದ ಮಂತ್ರಿಗಳೊಡನೆ ಸಂತೋಷವಾಗಿ ಆಶ್ಚರ್ಯಪಡುತ್ತಿದ್ದನು.

೯೩-೯೬. ಅನಂತರದಲ್ಲಿ ಸುಂದರೇಶ್ವರನು ತನ್ನ ವೇದಮಯವಾದ ಕುದುರೆಯನ್ನು ಎಡ ಬಲ, ಭಾಗಗಳಿಗೆ ತಿರುಗಿಸಿ ಓಡಿಸುತ್ತಾ ಬೇರೆಯಾಗಿರುವ ಸೂರ್ಯನ ಹಾಗೆ ಹೊಳೆಯುತ್ತಿದ್ದನು. ಎಡ ಬಲಭಾಗಗಳ ಗಮನವೇಗದಿಂದ ಸಂಚರಿಸುತ್ತಿರುವ ಅವನ ಕುದುರೆಯು ಅನೇಕ ಕುದುರೆಗಳ ಹಾಗೆ ಕಾಣಿಸುತ್ತಿದ್ದಿತು. ಶಿವನು ಏರಿರುವ ಕುದುರೆಯು (ಸುತ್ತುವ) ಸುತ್ತಲೂ ತಿರುಗುವ ವೇಗದಿಂದ ಕೂಡಿದ್ದಾಗಿ ಬೆಂಕಿಯ ಕೊಳ್ಳಿಯನ್ನು ತಿರುಗಿಸಿದ ಹಾಗೆ ಕಾಣಿಸುತ್ತಿರುವುದು.

ಪುರವೀಥೀಷು ದಿರ್ಘಾಸು ದ್ರುತಾನ್ಯೃಜುಗತಿಂ ಗತಃ ।
ವೀಥಿದೀರ್ಘಸಮಾಯಾಮಂ ವಾಜೀ ಪ್ರಾಪ್ತ ಇವಾಭವತ್ ॥ ೯೬ ॥

ಏವಂ ಬಹುವಿಧಾಭಿಶ್ಚ ಗತಿಭಿಸ್ತುರಗಸ್ಯ ಚ ।
ನೃಪಾದೀನಾಂ ಜನಾನಾಂ ಚಾಕರೋದತ್ಯದ್ಭುತಂ ಶಿವಃ ॥ ೯೭ ॥

ಅಥ ಭೂಪಪುರೋಭಾಗೇ ತುಂಗಂ ತುರಗಮಾತ್ಮನಃ ।
ನಿಶ್ಚಲೀಕೃತ್ಯ ತಂ ಭೂಪಮಿತಿ ಪ್ರಾಹ ಪಿನಾಕಧೃಕ್ ॥ ೯೮ ॥

ಏತೇ ಕಾಂಭೋಜಜಾ ಅಶ್ವಾ ಏತೇ ಬಾಹ್ಲೀಕದೇಶಜಾಃ ।
ಏತೇ ವನಾಯುಜಾ ಅಶ್ವಾ ಏತೇ ಗಾಂಧಾರದೇಶಜಾಃ ॥ ೯೯ ॥

ಆರಟ್ಟದೇಶಜಾ ಏತೇ ಸಿಂಧುದೇಶೋದ್ಭವಾ ಇಮೇ ।
ಏತೇ ಯವನದೇಶಿಯಾ ಏತೇ ಕಂಧರದೇಶಜಾಃ ॥ ೧೦೦ ॥

---

ನಗರದ ಉದ್ದವಾದ ಬೀದಿಗಳಲ್ಲಿ ಸಂಚರಿಸುತ್ತಾ ಆ ಕುದುರೆಯು ಬೀದಿಗೆ ಸಮನಾಗಿ ದೀರ್ಘವಾಗಿರುವಂತೆ ಕಾಣಿಸುತ್ತಿತ್ತು. ಶಂಕರನು ಇದೇ ಪ್ರಕಾರವಾದ ಅನೇಕ ವಿಧವಾದ ಗತಿಗಳಿಂದ ತನ್ನ ಕುದುರೆಯನ್ನು ನಡಿಸುತ್ತಾ ರಾಜನೇ ಮೊದಲಾದ ಜನರೆಲ್ಲರಿಗೂ ಬಹಳ ಆಶ್ಚರ್ಯವನ್ನುಂಟುಮಾಡಿದನು.

೯೮–೧೦೨. ತನ್ನ ಕುದುರೆಯ ವೇಗವನ್ನೂ, ನಡಿಗೆಯನ್ನೂ ತೋರಿಸಿದ ನಂತರ ಮಹೇಶ್ವರನು ರಾಜನ ಮುಂದುಗಡೆಯಲ್ಲಿ ಸ್ಥಿರವಾಗಿ ನಿಲ್ಲುವಂತೆ ತನ್ನ ಕುದುರೆಯನ್ನು ಪ್ರೇರಿಸಿ, ರಾಜನೊಡನೆ ಮಾತನಾಡಿದನು. ಈ ಕುದುರೆಗಳು ಕಾಂಭೋಜದೇಶದಲ್ಲಿ ಹುಟ್ಟಿದವುಗಳು. ಇವು ಬಾಹೀಕ ದೇಶದಲ್ಲಿ ಹುಟ್ಟಿದವು. ಇವು ವನಾಯುದೇಶದಲ್ಲಿಯೂ, ಇವು ಗಾಂಧಾರದೇಶದಲ್ಲಿಯೂ ಹುಟ್ಟಿರುವವು. ಈ ಕುದುರೆಗಳು ಆರಟ್ಟದೇಶದವುಗಳು. ಇವು ಸಿಂಧುದೇಶದವುಗಳು. ಇವು ಕಂಧರ ದೇಶದವುಗಳು. ಇವು ಯವನದೇಶದವುಗಳು. ಇವುಗಳು ಪರ್ವತದೇಶದವುಗಳು,

ಪಾರ್ವತೀಯಾ ಇಮೇ ಅಶ್ವಾ ಏತೇ ಕಾಶ್ಮೀರಸಂಭವಾಃ ।
ದ್ವೀಪಾಂತರೋದ್ಭವಾ ಏತೇ ಇಮೇ ಕೇಕಯದೇಶಜಾಃ ॥ ೧೦೧ ॥

ವಾಸಂತಕಾಶ್ಚ ಸೌವೀರಾ ಮಾಲವಾಸ್ತ್ವಿಮಾ ಇಮೇ ।
ಕುರುಕ್ಷೇತ್ರಾಶ್ಚ ಕಾಲಿಂಗಾ ಏತೇ ಸೌರಾಷ್ಟ್ರಜಾ ಹಯಾಃ ॥ ೧೦೨ ॥

ಏತೇ ಹೈಮವತಾ ಅಶ್ವಾ ಇಮೇ ಮಗಧದೇಶಜಾಃ ।
ಪಾಂಚಾಲಾ ಅಪಿ ಸಾಲ್ವೇಯಾ ಮಂದರಾದಾಗತಾ ಇಮೇ ॥ ೧೦೩ ॥

ಶ್ವೇತಾ ಶೋಣಾಶ್ಚ ಪಿಂಗಾಶ್ಚ ಕೃಷ್ಣಾ ಮಿಶ್ರಾಸ್ತುರಂಗಮಾಃ ।
ವರ್ಣಭೇದಾತ್ಪಂಚಭೇದಾಃ ಭವಂತಿ ಜಗತೀತಲೇ ॥ ೧೦೪ ॥

---

ಈ ಕುದುರೆಗಳು ಕಾಶ್ಮೀರದೇಶದಲ್ಲಿ ಹುಟ್ಟಿದವುಗಳು. ಇವು ಬೇರೆಯ ದ್ವೀಪದಲ್ಲಿ ಹುಟ್ಟಿದವುಗಳು. ಇವು ಕೇಕಯದೇಶದಲ್ಲಿ ಹುಟ್ಟಿದವು. ಈ ಕುದುರೆಗಳು ವಸಂತ ದೇಶದಲ್ಲಿ ಹುಟ್ಟಿದವುಗಳು. ಕುರುಕ್ಷೇತ್ರದಲ್ಲಿ ಹುಟ್ಟಿದ ಕುದುರೆಗಳು ಇವುಗಳು.

೧೦೩–೧೦೫ ಹಿಮವತ್ಪರ್ವತದ ಕುದುರೆಗಳು ಇವುಗಳು. ಮಗಧದೇಶದ ಕುದುರೆಗಳು ಇವುಗಳು. ಇವುಗಳು ಪಾಂಚಾಲದೇಶದ ಕುದುರೆಗಳು. ಸಾಳ್ವದೇಶದ ಕುದುರೆಗಳು ಇವುಗಳು. ಮಂಥರಪರ್ವತದಿಂದ ಬಂದ ಕುದುರೆಗಳು ಇವುಗಳು, ಭೂಮಿಯಲ್ಲಿ ಬಿಳುಪು, ಕೆಂಪು, ಹಳದಿ, ಕಪ್ಪು, ಮಿಶ್ರವರ್ಣ ಎಂದು ಕುದುರೆಗಳಲ್ಲಿ ಐದು ವಿಧವಾದ ವರ್ಣಗಳಿರುವುವು. ಮುತ್ತಿನಸರ, ಹಾಲು, ಚಂದ್ರ ಶಂಖ, ಬೆಳ್ಳಿ, ಹಿಮ, ಇವುಗಳಂತೆ ಬೆಳ್ಳಗಿರುವ ಕುದುರೆಗಳು ಉತ್ತಮವಾದವುಗಳು. ಅರಗಿನ ರಸದ ಕಾಂತಿ, ದಾಳಿಂಬೀಹೂವು, ಇವುಗಳಂತೆ ಕೆಂಪಗೆ ಇರುವ ಕುದುರೆಗಳಿಗೆ ಶೋಣಾಶ್ವಗಳೆಂದು ಹೆಸರು. ಇವುಗಳೂ ಉತ್ತಮವಾದವುಗಳು. ಕಾಡಿಗೆ, ಕೋಗಿಲೆ, ನೀರು ತುಂಬಿರುವ ಮೇಘ, ಇವುಗಳಂತೆ ಕಪ್ಪಗಿರುವ ಕುದುರೆಗಳು ಕೃಷ್ಣಾಶ್ವಗಳು. ಇವುಗಳೂ ಉತ್ತಮವಾದವುಗಳು. ಹೆಣ್ಣು ದುಂಬಿ, ಉತ್ತಮವಾದ ಹಸು, ಚಿನ್ನ,

ಹಾರಕ್ಷೀರಶಶಾಂಕಶಂಖರಜತಪ್ರಾಲೇಯವರ್ಣಾಃ ಸ್ಸಿತಾ-
ಆಲಕ್ತದ್ಯುತಿದಾಡಿಮೀಕುಸುಮವದ್ರಕ್ತಾಶ್ಚ ಶೋಣಾ ಶ್ಶುಭಾಃ ।
ಕೃಷ್ಣಾ ಸ್ತ್ವಂಜನಕೋಕಿಲಾಂಬುಧನಿಭಾ ಭೃಂಗಾಂಗನಾಗೋಪಧೂ
ಹೇಮಾಭಾ ಹರಯಃ ಪ್ರದೀಪ್ತಹುತಭುಗ್ಗೋರೋಚನಾಭಾ
ಶ್ಶುಭಾಃ ॥ ೧೦೫ ॥

ಯೇ ವರ್ಣಭೇದಾಃ ಸಮ್ಮಿಶ್ರಾಃ ಅಶ್ವಾ ಮಿಶ್ರಾಃ ಪ್ರಕೀರ್ತಿತಾಃ ।
ನಾನಾವರ್ಣವಿಚಿತ್ರಾಶ್ಚ ನಾನಾದೇಶಭವಾ ಅಪಿ ॥ ೧೦೬ ॥

ನಾನಾಸುಲಕ್ಷಣಯುತಾ ಇಮೇ ಅಶ್ವಾಃ ಸಮಾಗತಾಃ ।
ಶಿರೋವಕ್ಷಃಪುಚ್ಛಮುಖಪಾದಾ ಯೇಷಾಂ ಚ ಪಾಂಡರಾಃ ॥ ೧೦೭ ॥

ತೇಷ್ವಷ್ಟಮಂಗಲೋಪೇತಾಃ ತಾನಶ್ವಾನವಲೋಕಯ ।
ಮುಖೇ ಚ ಚರಣೇ ಯೇಷಾಂ ಗತಾ ಧವಲತಾಂಚ ಯೇ ॥ ೧೦೮ ॥

---

ಉರಿಯುತ್ತಿರುವ ಬೆಂಕಿ, ಗೋರೋಜನ, ಇವುಗಳಂತೆ ಹಳದಿಯ ಬಣ್ಣವುಳ್ಳ ಕುದುರೆಗಳು ಶ್ರೇಷ್ಠವಾಗಿರುವುವು. ಈ ನಾಲ್ಕು ವರ್ಣದ ಕುದುರೆಗಳು ಶುಭವನ್ನುಂಟು ಮಾಡುವುವು.

೧೦೬-೧೦೮. ಈ ಬಣ್ಣಗಳಲ್ಲಿ ಒಂದು, ಎರಡು, ಮೂರು, ನಾಲ್ಕು ವಿಧವಾದ ಬಣ್ಣಗಳನ್ನು ಹೊಂದಿರುವ ಕುದುರೆಗಳು ಮಿಶ್ರವರ್ಣದವುಗಳೆಂದು ಹೆಸರನ್ನು ಹೊಂದಿರುತ್ತವೆ ಈಗ ಬಂದಿರುವ ಕುದುರೆಗಳು ಅನೇಕ ಬಣ್ಣಗಳಿಂದ ಕೂಡಿದವುಗಳಾಗಿ ಅನೇಕ ದೇಶದಲ್ಲಿ ಹುಟ್ಟಿದವುಗಳಾಗಿರುವುವು. ಇವುಗಳಲ್ಲಿ ಅನೇಕವಿಧವಾದ ಉತ್ತಮ ಲಕ್ಷಣಗಳಿರುವುವು. ಶಿರಸ್ಸು, ವಕ್ಷಸ್ಸಿನ ಪ್ರದೇಶ, ಬಾಲದ ಭಾಗ, ಮುಖ, ಪಾದ, ಇವುಗಳು, ಶುಭ್ರವಾದ ವರ್ಣವುಳ್ಳದ್ದಾಗಿದ್ದರೆ ಅವುಗಳಿಗೆ ಅಷ್ಟಮಂಗಳ ಲಕ್ಷಣವುಳ್ಳ ಕುದುರೆಗಳೆಂದು ಹೆಸರು. ಆ ಕುದುರೆಗಳು ಈಗ ಇಲ್ಲಿ ಇರುವುವು. ಎಲೈ ರಾಜನೆ, ನೀನು ಅವುಗಳನ್ನು ನೋಡು. ಮುಖವೂ ಪಾದವೂ ಬಿಳಿಯ ವರ್ಣವುಳ್ಳವುಗಳಾಗಿರುವ ಕುದುರೆಗಳಿಗೆ ಪಂಚಕಲ್ಯಾಣ ಲಕ್ಷಣವುಳ್ಳವುಗಳೆಂದು ಹೆಸರು. ಇಲ್ಲಿರುವ ಅವುಗಳನ್ನು ನೋಡು.

ಪಂಚಕಲ್ಯಾಣಸಂಪನ್ನಾಂ ಸ್ತಾನ್ಸ್ಪೃಶ್ಯ ತುರಗಾನಪಿ ।
ಆವರ್ತೋ ನಿಗಲೇ ಯೇಷಾಂ ಸ ದೇವಮಣಿರೀರಿತಃ ॥ ೧೦೯ ॥

ತೇ ಸ್ವಾಮಿನೇ ಪ್ರಯಚ್ಛಂತಿ ಹಯಾ ಸ್ಸರ್ವಾಶ್ಚ ಸಂಪದಃ ।
ಉರಸಿ ದ್ವೌಚ ಶಿರಸಿ ದ್ವಾವಾಸ್ಯೇ ದ್ವೌ ಚ ನಾಸಯೋಃ ॥ ೧೧೦ ॥

ಲಲಾಟಮಧ್ಯೇ ತ್ವೇಕಶ್ಚ ಪಾದೇಚೈಕಃ ಪ್ರಕೀರ್ತಿತಃ ।
ಏತೇ ದಶ ಸಮಾವರ್ತಾಃ ಪ್ರಶಸ್ತಾಃ ಸರ್ವವಾಜಿನಾಂ ॥ ೧೧೧ ॥

ಏತೈರ್ವಿರಹಿತಾ ಅಶ್ವಾಃ ಪ್ರೋಕ್ತಾ ದುರ್ಲಕ್ಷಣಾ ಇತಿ ।
ಶ್ರೀವತ್ಸೋ ವಕ್ಷಸಿ ಪ್ರೋಕ್ತಸ್ತ್ವಾವರ್ತೈಃ ಪಂಚಭಿರ್ಭವೇತ್ ॥ ೧೧೨ ॥

ಮಧ್ಯಮೇವ ಚತುರ್ದಿಕ್ಷು ಸಂಭೂತೈ ಸ್ಸಪ್ರದಕ್ಷಿಣೈಃ ।
ಶ್ರೀವೃಕ್ಷಕೀ ತುರಂಗಶ್ಚ ಭರ್ತುಸ್ಸರ್ವಾರ್ಥದಾಯಕಃ ॥ ೧೧೩ ॥

---

೧೦೯.-೧೧೩. ಕುತ್ತಿಗೆಯಲ್ಲಿ ಸುಳಿಯು ಇದ್ದರೆ ಆ ಆವರ್ತವನ್ನು ದೇವಮಣಿ ಎಂದು ಕರೆಯುವರು. ದೇವಮಣಿ ಲಕ್ಷಣವುಳ್ಳ ಕುದುರೆಗಳು ರಾಜರಿಗೆ ಎಲ್ಲಾ ವಿಧವಾದ ಐಶ್ವರ್ಯವನ್ನು ಉಂಟುಮಾಡುವುವು. ಶಿರಸ್ಸಿನಲ್ಲಿ ಎರಡು ಎದೆಯಲ್ಲಿ ಎರಡು, ಮುಖದಲ್ಲಿ ಎರಡು, ಮೂಗಿನಲ್ಲಿ ಎರಡು, ಹುಬ್ಬಿನ ಹಣೆಯ ಮಧ್ಯದಲ್ಲಿ ಒಂದು, ಕಾಲಿನಲ್ಲಿ ಒಂದು, ಎಂಬ ರೀತಿಯಿಂದ ಎಲ್ಲಾ ಕುದುರೆಗಳಿಗೂ ಹತ್ತು ಸುಳಿಗಳಿರಬೇಕು ಹೀಗಿದ್ದರೆ ಆ ಕುದುರೆಗಳು ಉತ್ತಮವಾದವುಗಳು, ಆವರ್ತಗಳು ಹೀಗಿಲ್ಲದಿದ್ದರೆ ಆ ಕುದುರೆಗಳನ್ನು ಕೆಟ್ಟ ಲಕ್ಷಣಗಳು ಇರುವ, ಕುದುರೆಗಳೆಂದು ಹೇಳುವರು. ಎದೆಯಲ್ಲಿ ಸುಳಿಯಿದ್ದರೆ ಅದನ್ನು ಶ್ರೀವತ್ಸವೆಂದು ಕರೆಯುವರು. ನಾಲ್ಕು ದಿಕ್ಕಿನಲ್ಲಿ ನಾಲ್ಕು, ಮಧ್ಯಪ್ರದೇಶದಲ್ಲಿ ಒಂದು, ಎಂದು ಐದು ಸುಳಿಗಳು ಪ್ರದಕ್ಷಿಣ ಕ್ರಮವಾಗಿ ಇರುವುವು. ಈ ಲಕ್ಷಣವುಳ್ಳ ಕುದುರೆಯು ಶ್ರೀವಕ್ಷಕೀ ಎಂಬ ಹೆಸರನ್ನು ಹೊಂದಿ ತನ್ನ ಪ್ರಭುವಿಗೆ ಎಲ್ಲಾ ವಿಧವಾದ ಇಷ್ಟವನ್ನು ಉಂಟುಮಾಡುವುದು.

ಭವೇತಾಂ ಯಸ್ಯ ಚಾಶ್ವಸ್ಯ ದ್ವಾವಾವರ್ತೌ ಲಲಾಟಜೌ ।
ರಿಪೂನ್ ಜಯತಿ ತತ್ಸ್ವಾಮೀ ಧನಧಾನ್ಯಸುಪುತ್ರವಾನ್ ॥ ೧೧೪ ॥

ಲಲಾಟೇ ತ್ರಿಭಿರಾವರ್ತೈರ್ಯಸ್ಯ ನಿಶ್ರೇಣಿರಸ್ತಿ ಹಿ ।
ಲಭತೇ ವಾಜಿನಾ ತೇನ ಧನಧಾನ್ಯಜಯಂ ನೃಪಃ ॥ ೧೧೫ ॥

ಸವ್ಯಾವರ್ತೈಶ್ಚತುರ್ಭಿಶ್ಚ ಲಲಾಟಸ್ಥೈಸ್ತುರಂಗಮಾಃ ।
ಕುರ್ವತೇ ಸ್ವಾಮಿನಂ ಸದ್ಯಃ ಪುತ್ರವಂತಂ ಮಹೀಪತಿಂ ॥ ೧೧೬ ॥

ಆವರ್ತೌ ವೃಷಭಾಖ್ಯೌ ತೌ ಕರ್ಣಮೂಲೇ ಸಮಾಶ್ರಿತೌ ।
ಯಸ್ಯ ತು ಸ್ವಾಮಿನಸ್ತಸ್ಯ ಲಭಂತೇ ಭೂಷಣಾನಿ ಚ ॥ ೧೧೭ ॥

ಏವಮಾದಿಶುಭಾವರ್ತೈಸ್ಸಹಿತಾ ಅಶ್ವಪುಂಗವಾಃ ।
ಅಸಂಖ್ಯಾತಾ ಆಗತಾಶ್ಚ ತಾನೀಮಾನ್ ಪಶ್ಯ ಭೂಪತೇ ॥ ೧೧೮ ॥

---

೧೧೪-೧೧೮. ಹಣೆಯಲ್ಲಿ ಎರಡು ಆವರ್ತಗಳಿರುವ (ಸುಳಿಗಳಿರುವ) ಕುದುರೆಯು ತನ್ನ ಯಜಮಾನನಿಗೆ ಜಯವನ್ನೂ, ಧನ, ಧಾನ್ಯ, ಸುಪುತ್ರರನ್ನೂ, ಉಂಟುಮಾಡುವುದು. ಹಣೆಯಲ್ಲಿ (ಹುಬ್ಬಿನ ಮಧ್ಯದಲ್ಲಿ) ಸಾಲಾಗಿ (ಏಣಿಯಂತೆ) ಮೂರು ಆವರ್ತಗಳಿರುವ ಕುದುರೆಯಿಂದ (ಅದರ ಯಜಮಾನನಿಗೆ) ರಾಜನಿಗೆ ಧನ, ಧಾನ್ಯ ಮತ್ತು ಜಯಗಳುಂಟಾಗುವುವು. ಹಣೆಯ ಎಡಭಾಗದಲ್ಲಿ ನಾಲ್ಕು ಆವರ್ತಗಳಿರುವ ಕುದುರೆಗಳಿಂದ ರಾಜನಿಗೆ ಸುಪುತ್ರನಾಗುವನು. ಕಿವಿಯ ಬುಡದಲ್ಲಿರುವ ಸುಳಿಗಳಿಗೆ ವೃಷಭವೆಂದು ಹೆಸರು. ಈ ಲಕ್ಷಣವಿರುವ ಕುದುರೆಯಿಂದ ರಾಜನಿಗೆ ಆಭರಣಗಳು (ಸಿಕ್ಕುವವು) ದೊರೆಯುವವು. ಎಲೈ ರಾಜನೆ, ನೋಡು, ಈ ಪ್ರಕಾರವಾದ ಶುಭ ಲಕ್ಷಣಗಳುಳ್ಳ ಉತ್ತಮವಾದ ಅಶ್ವಗಳು ಲೆಕ್ಕವಿಲ್ಲದಷ್ಟು ಇಲ್ಲಿಗೆ ಬಂದಿರುವುವು.

ಆವರ್ತೌ ಗಲಮಧ್ಯಸ್ಥೌ ಭರ್ತುಃ ಕ್ಷುದ್ದುಃಖಮೃತ್ಯುದೌ ।
ಭರ್ತುರ್ಜಂಘೋಪಸ್ಥಾವರ್ತೌ ಭಯಬಂಧನದುಃಖದೌ ॥ ೧೧೯ ॥

ಸ್ವಾಮಿನೋ ಮಾತರಂ ಹಂತಿ ಹ್ಯಾವರ್ತಸ್ತೂತ್ತರೋಷ್ಠಜಃ ।
ಕಕ್ಷಾವರ್ತಸ್ತುರಂಗಾಣಾಂ ಹಂತಿ ಸ್ವಾಮಿನಮಾಹವೇ ॥ ೧೨೦ ॥

ಘೋಣಾವರ್ತೋ ಜನಯತಿ ಕಶ್ಮಲಂ ಮೃತ್ಯುಮಾಶು ಚ ।
ಗಂಡಾವರ್ತೋ ಭಯಗದಾಜನಕಸ್ಸ್ವಾಮಿನೋ ಭವೇತ್ ॥ ೧೨೧ ॥

ಜಾನ್ವಾವರ್ತಃ ಕ್ಷಪಯತಿ ಸ್ವಾಮಿಸಂ ದ್ರುತಂ ।
ಏವಮಾದ್ಯಶುಭಾವರ್ತೈ ಸ್ಸಹಿತಾಶ್ಚ ಹಯಾಧಮಾಃ ॥ ೧೨೨ ॥

೧೧೯-೧೨೨ ಕುತ್ತಿಗೆಯ ಮಧ್ಯದಲ್ಲಿ ಎರಡು ಸುಳಿಗಳನ್ನು ಹೊಂದಿರುವ ಅಶ್ವದಿಂದ ರಾಜನಿಗೆ ಹಸಿವು, ದುಃಖ, ಮರಣ ಇವುಗಳುಂಟಾಗುವುವು. ಮೊಳಕಾಲಿನಲ್ಲಿರುವ ಆವರ್ತಗಳಿಂದ ಭಯ, ಕಾರಾಗೃಹಪ್ರಾಪ್ತಿ, ದುಃಖಗಳು ಉಂಟಾಗುವುವು. ಕುದುರೆಯ ಮೇಲು ತುಟಿಯಲ್ಲಿ ಆವರ್ತವು ಇದ್ದರೆ ಅದರಿಂದ ಆ ಕುದುರೆಯ ಪ್ರಭುವಿನ ತಾಯಿಗೆ ಕೇಡು ಉಂಟಾಗುವುದು ಕುದುರೆಗಳ ಕಂಕುಳು ಪ್ರದೇಶದ ಆವರ್ತದಿಂದ ಆ ಕುದುರೆಯ ಸ್ವಾಮಿಗೆ ಯುದ್ಧದಲ್ಲಿ ಮರಣವು ಉಂಟಾಗುವುದು. ನಾಸಿಕಾದಲ್ಲಿ (ಮೂಗಿನ ಹತ್ತಿರದಲ್ಲಿ) ಆವರ್ತವುಳ್ಳ ಕುದುರೆಯಿಂದ ಯಜಮಾನನಿಗೆ ದುಃಖವು ಪ್ರಾಪ್ತವಾಗುವುದು. ಕುದುರೆಯ ಗಂಡಪ್ರದೇಶದ (ಕಪೋಲದ) ಆವರ್ತದಿಂದ ಅದರ ಸ್ವಾಮಿಗೆ ಭಯ, ರೋಗಗಳು ಉಂಟಾಗುವುವು. ಜಾನುಪ್ರದೇಶದಲ್ಲಿ ಸುಳಿಯನ್ನು (ಆವರ್ತವನ್ನು) ಹೊಂದಿ ಇರುವ ಕುದುರೆಯಿಂದ ಅದರ ಸ್ವಾಮಿಗೆ ಬೇಗನೆ ಕ್ಷೀಣಸ್ಥಿತಿಯು ಉಂಟಾಗುವುದು. ಇವೇ ಮೊದಲಾದ ದುರ್ಲಕ್ಷಣಗಳನ್ನು ಹೊಂದಿರುವ ಅಶ್ವಗಳು ಅಶ್ವಗಳಲ್ಲಿ ಅಧಮ (ನೀಚ) ಗಳಾದ ಕಾರಣ ಅಶ್ವಶಾಲೆಗೇ ಸೇರಿಸಬಾರದು. ಆ ಮಾದರಿಯ ಕುದುರೆಗಳು ಇಲ್ಲಿ ಬಂದಿರುವುದಿಲ್ಲ.

ಶಾಲಾಯಾಂ ನ ಪ್ರವೇಶ್ಯಾಶ್ಚ ನಾಗತಾ ಇಹ ತದ್ವಿಧಾಃ
ದ್ವಾತ್ರಿಂಶದಾಯುರಶ್ವಾನಾಂ ದಶಾಶ್ಚ ಕಥಿತಾ ದಶ ॥ ೧೨೩ ॥

ತ್ರೀಣಿ ವರ್ಷಾಣಿ ಮಾಸೌ ದ್ವೌ ದಿನಾನಿ ದ್ವಾದಶೈವ ಹಿ ।
ಆಯುಷೋ ದಶಮೋ ಭಾಗೋ ದಶಾಃ ಪ್ರೋಕ್ತಾ ಕ್ರಮಾದ್ದಶ ॥ ೧೨೪ ॥

ಮಧ್ಯಸ್ಥಾಸ್ತಾಶ್ಚ ಷಟ್ಚೈವ ಪ್ರಶಸ್ತಾಸ್ಸ್ಯುರ್ದಶಾಃ ಕ್ರಮಾತ್ ।
ಸರ್ವೇ ವರ್ಣಾಃ ಪ್ರಶಸ್ತಾಸ್ಸ್ಯುಶ್ಶ್ವೇತವರ್ಣೇನ ಸಂಯುತಾಃ ॥ ೧೨೫ ॥

ಅನ್ಯವರ್ಣಯುತಾಶ್ಚೈತಾ ಅಶ್ವಾನಾಮಪ್ರಶಸ್ತಕಾಃ ।
ವಾಜೀ ವೈಜಯಿಕೋ ನಾಮ್ನಾ ಭರ್ತುಸ್ಸರ್ವಾರ್ಥಸಾಧಕಃ ॥ ೧೨೬ ॥

ಅಶ್ವಸ್ತು ಕೃಷ್ಣಶ್ಶ್ವೇತೋ ವಾ ಕುಕ್ಷೌ ವಕ್ಷಸಿ ವಾರುಣಃ ।
ಭರ್ತ್ರೇ ದದಾತಿ ಭಾಗ್ಯಂ ಚ ವಿಜಯಂ ಚ ರಣಾಂಕಣೇ ॥ ೨೭ ॥

---

೧೨೩-೧೨೭ ಅಶ್ವಗಳಿಗೆ ಮೂವತ್ತೈದು ವರ್ಷಗಳೂ ಎರಡು ತಿಂಗಳೂ, ಹನ್ನೆರಡು ದಿವಸಗಳು ಆಯುಷ್ಯವೆಂದು ಹೇಳುವರು. ಈ ಆಯುಸ್ಸಿನಲ್ಲಿ ಹತ್ತನೆಯ ಒಂದು ಭಾಗಕ್ಕೆ ಒಂದು ದಶೆಯೆಂದು ಹತ್ತು ದಶೆಗಳಾಗುವುವು. ಅವುಗಳಲ್ಲಿ ಮಧ್ಯಸ್ಥವಾದ ಆರು ದಶೆಗಳು ಪ್ರಶಸ್ತವಾಗಿರುವುವು. ಕುದುರೆಗಳಲ್ಲಿ ಬಿಳಿಯ ಬಣ್ಣದಿಂದ ಕೂಡಿದ ಎಲ್ಲಾ ಬಣ್ಣಗಳೂ ಪ್ರಶಸ್ತವಾಗಿರುವುವು. ಬಿಳಿಯ ವರ್ಣ ಹೊರತು ಬೇರೆಯ ವರ್ಣವು ಸೇರಿದ್ದರೆ ಅವು ಪ್ರಶಸ್ತವಾಗಿರುವುದಿಲ್ಲ. ವೈಜಯಿಕವೆಂದು ಹೆಸರಿನ ಅಶ್ವವು ರಾಜನಿಗೆ ಎಲ್ಲಾ ಇಷ್ಟಗಳನ್ನೂ ಸಾಧಿಸಿಕೊಡುವುದು. ಕಪ್ಪು ಬಣ್ಣದ ಕುದುರೆಯಾಗಲಿ, ಬಿಳಿಯ ಬಣ್ಣದ ಕುದುರೆಯಾಗಲಿ, ಉದರಭಾಗ ಅಥವಾ ಎದೆಯ ಪ್ರದೇಶದಲ್ಲಿ ಕೆಂಪು ವರ್ಣವುಳ್ಳದ್ದಾಗಿ ಇದ್ದರೆ, ಅದರಿಂದ ಅದರ ಪ್ರಭುವಿಗೆ ಯುದ್ಧದಲ್ಲಿ ಜಯವೂ, ಐಶ್ವರ್ಯವೂ ಉಂಟಾಗುವುದು.

ಅಶ್ವಸ್ತು ಜಠರೇ ಶ್ವೇತಃ ಪುತ್ರಂ ಭರ್ತ್ರೇ ದದಾತಿ ಚ ।
ವಲಕ್ಷವಕ್ಷಾ ಆನಂದಂ ಗ್ರೀವಾಯಾಂ ಪಾಂಡರೋ ಧನಂ ॥ ೧೨೮ ॥

ಮುಖೇ ಶುಕ್ಲಸ್ತು ವಿಜಯಂ ಸೌಖ್ಯಂ ಪೃಷ್ಠೇ ತು ಪಾಂಡರಂ ।
ವಾಮಪಾರ್ಶ್ವೇ ಸಿತೋ ದಾರಾಃ ಧಾನ್ಯಂ ದಕ್ಷೇ ವಲಕ್ಷವಾನ್ ॥ ೧೨೯ ॥

ಯಸ್ಯಾಶ್ವ ಪೃಷ್ಠವಾಲಾಸ್ಸ್ಯುಃ ಶ್ವೇತಾಸ್ಸೋಽಶ್ವೋ ಜಯಪ್ರದಃ ।
ಸೈನ್ಯಸ್ಯಪುರತೋ ನೇಯೋ ಜಯಾರ್ಥಂ ಪೃಥಿವೀಭುಜಾ ॥ ೧೩೦ ॥

ಶ್ವೇತಾಶ್ವಸ್ಯ ಶ್ವೇತತರಂ ಶಿರೋ ಯಸ್ಯ ಚ ಲಕ್ಷ್ಯತೇ ।
ಭರ್ತುಸ್ಸರ್ವಾರ್ಥಕೃತ್ಸ ಸ್ಯಾತ್ಸೂರ್ಯಕಾಂತಾಭಿಧಾನವಾನ್ ॥ ೧೩೧ ॥

ಅಶ್ವಸ್ಯ ನಾಭಿಮಾರಭ್ಯ ಪೂರ್ವಾರ್ಧಂ ಬಾಲಭಾನುವತ್ ।
ಅಪರಾರ್ಧಂ ಪಾಂಡರಂ ಚೇದ್ದಿವಾ ವೈಜಯಿಕೋ ಭವೇತ್ ॥ ೧೩೨ ॥

---

೧೨೮-೧೨೯. ಉದರಪ್ರದೇಶದಲ್ಲಿ ಶ್ವೇತವರ್ಣವುಳ್ಳ ಅಶ್ವವು ತನ್ನ ಸ್ವಾಮಿಯನ್ನು ಪುತ್ರವಂತನನ್ನು ಮಾಡುವುದು ವಕ್ಷಸ್ಸಿನ ಪ್ರದೇಶವು ಶುಭ್ರವರ್ಣವುಳ್ಳದ್ದಾಗಿದ್ದರೆ ಅದರಿಂದ ಸಂತೋಷವು ಹೆಚ್ಚುವುದು. ಕುತ್ತಿಗೆಯು ಬೆಳ್ಳಗಿದ್ದರೆ ಧನವು ಉಂಟಾಗುವುದು. ಮುಖವು ಬೆಳ್ಳಗಿದ್ದರೆ ಜಯವೂ, ಬೆನ್ನಿನ ಭಾಗವು ಬೆಳ್ಳಗಿದ್ದರೆ ಸುಖವೂ, ಎಡಭಾಗವು ಬೆಳ್ಳಗಿದ್ದರೆ ಸ್ತ್ರೀ ಸುಖವೂ, ಬಲಭಾಗವು ಬಿಳುಪಾಗಿದ್ದರೆ ಧಾನ್ಯವೂ ಉಂಟಾಗುವುದು.

೧೩೦-೧೩೪. ಅಶ್ವದ ಹಿಂಭಾಗವೂ, ಬಾಲದ ಮುಂಭಾಗವೂ ಬಿಳಿಯ ಬಣ್ಣವುಳ್ಳದ್ದಾಗಿದ್ದರೆ ರಾಜನಿಗೆ ಜಯವನ್ನುಂಟುಮಾಡುವ ಕಾರಣ ರಾಜನು ಆ ಪ್ರಕಾರವಾದ ಕುದುರೆಯನ್ನು ಸೇನೆಯ ಮುಂದುಗಡೆಯಲ್ಲಿ ಯಾವಾಗಲೂ ಇರಿಸಬೇಕು. ಬಿಳಿಯವರ್ಣದ ಕುದುರೆಯ ಶಿರಸ್ಸು ಬಹಳ ಬಿಳಿಯ ವರ್ಣವುಳ್ಳದ್ದಾಗಿದ್ದರೆ, ಅದಕ್ಕೆ ಸೂರ್ಯಕಾಂತವೆಂದು ಹೆಸರು. ಈ ಕುದುರೆಯು ಯಜಮಾನನ ಇಷ್ಟಗಳು ನೆರವೇರುವುವು. ಕುದುರೆಯ ನಾಭಿಯವರಿಗಿನ ಅರ್ಧಭಾಗವು ಎಳೆಯ ಸೂರ್ಯನಂತೆ ಕೆಂಪಾಗಿಯೂ, ಉಳಿದ ಅಪರಾರ್ಧವು ಬಿಳಿಯವರ್ಣವುಳ್ಳದ್ದಾಗಿಯೂ ಇದ್ದರೆ

ಪೂರ್ವಮರ್ಧಂ ಶಶಾಂಕಾಭಂ ಪಶ್ಚಿಮಂ ಬಾಲಸೂರ್ಯವತ್ ।
ಯಸ್ಯಾಶ್ವಸ್ಯ ಭವೇದೇವಂ ನಿಶಾವೈಜಯಿಕಶ್ಚ ಸಃ ॥ ೧೩೩ ॥
ದಿವಾವೈಜಯಿಕಾ ಅಶ್ವಾ ನಿಶಾವೈಜಯಿಕಾ ಅಪಿ ।

ಆನೀತಾಸ್ತವ ಸೌಭಾಗ್ಯಸರ್ವಸಂಪತ್ಸಮೃದ್ಧಯೇ ॥ ೧೩೪ ॥
ಆರಾದತ್ರ ಸಮಾಯಾತಾ ಸ್ತಾನಸ್ಯಾಲೋಕಯ ಪ್ರಭೋ ।

ಪಾದೌ ಕಂತುಕವತ್ಸ್ಥಿತೌ ಚ ಗಿರಿವತ್ಸ್ವಸ್ಫಾಲನೇ ಸಿಂಹವತ್-
ನೇತ್ರೇ ನೀರಜವಜ್ಜವೇ ಸವನವದ್ಧೇಷಾರವೇ ಮೇಘವತ್ ।
ವಿನ್ಯಾಸೇ ನಟವನ್ಮುಖೇ ಕುಲವಧೂವಕ್ತ್ರೇಂದುವದ್ವಾಜಿನಾಂ ।
ಯೇಷಾಂ ತೇ ಭುವಿ ರಾಜವಾಹನಪದೇ ಸಂಭಾವನೀಯಾಸ್ಸದಾ ॥ ೧೩೫ ॥

---

ಅದನ್ನು ದಿವಾವೈಜಯಿಕಾಶ್ವವೆಂದು ಹೆಸರಿನಿಂದ ಕರೆಯುವರು. ಶರೀರದ ಪೂರ್ವಾರ್ಧವು ಚಂದ್ರನಹಾಗೆ ಶುಭ್ರವಾಗಿಯೂ, ಅಪರಾರ್ಧವು ಬಾಲಸೂರ್ಯನಂತೆ ಕೆಂಪಾಗಿಯೂ, ಇರುವ ಅಶ್ವವನ್ನು ನಿಶಾವೈಜಯಿಕವೆಂಬ ಹೆಸರಿನಿಂದ ಕರೆಯುವರು. ಎಲೈ ರಾಜನೆ, ನಿನ್ನ ಎಲ್ಲಾ ವಿಧವಾದ ಸಂಪತ್ತುಗಳ ಅಭಿವೃದ್ಧಿಗಾಗಿ ದಿವಾವೈಜಯಿಕ ನಿಶಾವೈಜಯಿಕ ಎಂಬ ಎರಡು ವಿಧವಾದ ಅಶ್ವಗಳನ್ನೂ ತಂದಿರುವೆನು. ಅವೆಲ್ಲವೂ ನಿನ್ನ ಹತ್ತಿರದಲ್ಲಿಯೇ ಇರುವುವು. ಎಲೈ ಪ್ರಭುವೆ, ಅವೆಲ್ಲವನ್ನೂ ನೋಡು.

೧೩೫. ಕುದುರೆಗಳ ಪಾದಗಳು ಚಂಡಿನಂತೆ ಗುಂಡಾಗಿರಬೇಕು. ಪೃಷ್ಠಪ್ರದೇಶಗಳು ಬೆಟ್ಟಗಳಂತೆ ಸ್ಥೂಲವಾಗಿರಬೇಕು ಲಂಘನೆ ಮಾಡುವುದರಲ್ಲಿ ಸಿಂಹದ ಹಾಗೆ ಕುದುರೆಗಳು ಇರಬೇಕು. ಕಣ್ಣುಗಳು ಕಮಲದಂತೆ ಇರಬೇಕು. ಕುದುರೆಗಳು ವೇಗದಲ್ಲಿ ವಾಯುವಿಗೆ ಸಮನಾಗಿ ಇರತಕ್ಕದ್ದು. ಗುಡುಗಿನ ಧ್ವನಿಯ ಹಾಗೆ ಕುದುರೆಗಳ ಧ್ವನಿಯು ಇರತಕ್ಕದ್ದು. ಕುದುರೆಗಳು, ಪಾದಗಳನ್ನು ನಟರು ಇರಿಸುವಂತೆ ಇರಿಸಬೇಕು. ಕುದುರೆಗಳ ಮುಖವು ಕುಲಸ್ತ್ರೀಯರ ಮುಖದಂತೆ ಸುಂದರವಾಗಿರತಕ್ಕದ್ದು. ಈ ಲಕ್ಷಣಗಳಿಂದ ಕೂಡಿರುವ ಕುದುರೆಗಳು ರಾಜರಿಗೆ ವಾಹನವಾಗಿರುವವು. ಮತ್ತು ಅವುಗಳು ಬಹಳ ಗೌರವವನ್ನು ನಿತ್ಯವೂ ಹೊಂದುವುವು.

ವಕ್ಷೋ ಲಲಾಟಂ ಜಘನಂ ಹಯಾನಾಂ-
ತ್ರೀಣಿ ಪ್ರಶಸ್ತಾನಿ ಪೃಥೂನಿ ವಿದ್ಯಾತ್ ।
ಪೃಷ್ಠಂ ಚ ಕರ್ಣಾವಥ ಕುಕ್ಷಿನಾಸಾ-
ಹ್ರಸ್ವಾನಿ ವೈ ತ್ರೀಣಿ ಶುಭಾನಿ ವಿದ್ಯಾತ್ ॥ ೧೩೬ ॥

ವಾಲಾಶ್ಚ ರೋಮಾಣಿ ಚ ಕೇಸರಾಶ್ಚ-
ತ್ರೀಣಿ ಪ್ರಶಸ್ತಾನಿ ಮೃದೂನಿ ವಿದ್ಯಾತ್ ।
ಆಸ್ಯಂ ಚ ನೇತ್ರೇ ಚ ಶಿರೋ ಹಯಾನಾಂ-
ತ್ರೀಣಿ ಪ್ರಶಸ್ತಾನಿ ಮಹಾಂತಿ ವಿದ್ಯಾತ್ ॥ ೧೩೭ ॥

ಓಷ್ಠೌ ಚ ಜಿಹ್ವಾ ತ್ವಥ ಸೃಕ್ಕಿಣೀ ಚ ।
ತ್ರೀಣಿ ಪ್ರಶಸ್ತಾನಿ ತನೂನಿ ವಿದ್ಯಾತ್ ।
ಗ್ರೀವಾ ತು ಜಂಘಾ ವದನಂ ಹಯಾನಾಂ-
ತ್ರೀಣ್ಯೇವ ದೀರ್ಘಾನಿ ಶುಭಾನಿ ವಿದ್ಯಾತ್ ॥ ೧೩೮ ॥

---

೧೩೬-೧೩೮. ಕುದುರೆಗಳಿಗೆ ಎದೆಯಪ್ರದೇಶ, ಹಣೆ ಹಿಂಭಾಗ ಇವುಗಳು ಸ್ಥೂಲವಾಗಿರುವುದು ಪ್ರಶಸ್ತವು. ಪೃಷ್ಠಭಾಗ, ಕಿವಿ, ಹೊಟ್ಟೆ, ಮೂಗು ಇವುಗಳು ಹ್ರಸ್ವವಾಗಿದ್ದಲ್ಲಿ ಶುಭಕರವೆಂದು ತಿಳಿಯಬೇಕು. ಬಾಲ, ರೋಮಗಳು, ಕೇಸರ ಇವುಗಳು ಮೃದುವಾಗಿದ್ದಲ್ಲಿ ಆ ಕುದುರೆಗಳು ಉತ್ತಮವೆಂದು ತಿಳಿಯಬೇಕು. ಮುಖ, ಕಣ್ಣು, ಶಿರಸ್ಸು ಇವು ಮೂರೂ ಕುದುರೆಗಳಿಗೆ ದೊಡ್ಡದಾಗಿದ್ದರೆ ಪ್ರಶಸ್ತವು, ಮತ್ತು ಶುಭಕರವು. ಕುದುರೆಗಳ ತುಟಿಗಳು, ನಾಲಿಗೆ, ಕಟವಾಯಿ, ಈ ಮೂರು ಪ್ರದೇಶಗಳೂ ಸೂಕ್ಷ್ಮವಾಗಿದ್ದರೆ ಪ್ರಶಸ್ತವು. ಕುತ್ತಿಗೆ ಮೊಣಕಾಲು, ಮುಖ, ಈ ಮೂರೂ ಕುದುರೆಗಳಿಗೆ ದೀರ್ಘವಾಗಿದ್ದಲ್ಲಿ ಪ್ರಶಸ್ತವು ಮತ್ತು ಶುಭವು ಎಂದು ತಿಳಿಯಬೇಕು.

ಉಪಚಿತಬಲಶೋಭಾಃ ಸತ್ತ್ವಸಾರೈರುಪೇತಾಃ ।
ಸುರಭಿಕುಸುಮಗಂಧಾಃ ಶಂಖಮೇಘೇಭನಾದಾಃ ।
ಬಹುವಿಧಶುಭವರ್ಣಾಃ ಸಂಹತಾಂಗಸ್ವರೂಪಾಃ ।
ಶುಭಗತಿಜವಯುಕ್ತಾಃ ವಾಹವರ್ಯಾಸ್ಸುನೇತ್ರಾಃ ॥ ೧೩೯ ॥

ಜೀಮೂತವರ್ಣೋ ಘನಘೋಷಹೇಷಿತಃ ।
ಸ್ವಾಜ್ಯಸ್ಯಗಂಧೋ ಗಜಸಿಂಹಗಾಮೀ ।
ಪ್ರಿಯಶ್ಚ ಮಾಲ್ಯೇ ಚ ವಿಲೇಪನೇ ಚ ।
ಸೋಽಪ್ಯಶ್ವರಾಜೋ ನೃಪವಾಹನಂ ಸ್ಯಾತ್ ॥ ೧೪೦ ॥

ಶತಾಂಗುಲಸಮುತ್ಸೇಧಮುತ್ತಮಾಶ್ವಸ್ಯ ಕೀರ್ತಿತಂ ।
ತತಃ ಷೋಡಶಭಾಗೋನಂ ಪ್ರಮಾಣಂ ಮಧ್ಯಮಸ್ಯ ತು ॥ ೧೪೧ ॥

---

೧೩೯ ಕುದುರೆಗಳು ಹೆಚ್ಚಾದಬಲವೂ, ಕಾಂತಿಯೂ ಉಳ್ಳವುಗಳಾಗಿರಬೇಕು. ಬಹಳ ಶಕ್ತಿಯುಳ್ಳವುಗಳಾಗಿ ಸುವಾಸನೆಯುಳ್ಳ ಹೂವಿನ ಪರಿಮಳದಿಂದ ಕೂಡಿರಬೇಕು. ಶಂಖಧ್ವನಿ, ಮೇಘಧ್ವನಿಗೆ ಸಮನಾದ ಧ್ವನಿಯನ್ನು ಹೊಂದಿರಬೇಕು. ಅನೇಕ ವಿಧವಾದ ಶುಭವಾದ ವರ್ಣವುಳ್ಳವುಗಳಾಗಿ, ದೃಢವಾದ ಸಂಧಿಬಂಧಗಳುಳ್ಳ ಶರೀರವನ್ನು ಹೊಂದಿರುವ, ಮಂಗಳಕರವಾದ ಮತ್ತು ವೇಗದಿಂದ ಕೂಡಿರುವ ನಡಿಗೆಯುಳ್ಳ, ಅಂದವಾದ ನೇತ್ರಗಳುಳ್ಳ ಕುದುರೆಗಳು ಶ್ರೇಷ್ಠಗಳೆನಿಸಿಕೊಂಡಿರುವುವು.

೧೪೦-೧೪೩. ಮೇಘದ ಬಣ್ಣದಂತೆ ಇರುವ ವರ್ಣವುಳ್ಳದ್ದಾಗಿ, ಮೇಘದ ಧ್ವನಿಯಂತೆ ಇರುವ ಹೇಷಾರವವನ್ನು ಮಾಡುತ್ತಾ, ಉತ್ತಮವಾದ ತುಪ್ಪದ ವಾಸನೆಯನ್ನು ಹೊಂದಿ, ಆನೆ ಮತ್ತು ಸಿಂಹವಂತೆ ನಡಿಗೆಯುಳ್ಳ ಉತ್ತಮವಾದ ಕುದುರೆಯು, ಹಾರ ಮತ್ತು ಗಂಧಾನುಲೇಪನಗಳಲ್ಲಿ ಪ್ರೀತಿಯನ್ನು ಹೊಂದಿರುವದಾಗಿ ರಾಜನಿಗೆ ವಾಹನವಾಗಿರುವುದು. ಉತ್ತಮವಾದ ಕುದುರೆಯು ಒಂದು ನೂರು ಅಂಗುಲ ಎತ್ತರವಾಗಿರುವುದು. ಅದರಲ್ಲಿ ಹದಿನಾರನೆಯ ಒಂದು ಭಾಗ ಕಡಿಮೆಯಾದ ಪ್ರಮಾಣವನ್ನು ಮಧ್ಯಮ ತರಗತಿಯ ಕುದುರೆಯು ಹೊಂದಿರುವುದು. ಮಧ್ಯಮಾಶ್ವ ಪ್ರಮಾಣದಲ್ಲಿ ಎಂಟುಭಾಗವು ಕಮ್ಮಿಯಾಗಿರುವ ಪ್ರಮಾಣವನ್ನು ಹೊಂದಿರುವ

ಮಧ್ಯಮಾದಷ್ಟಭಾಗೋನಂ ಪ್ರಮಾಣಂ ಸ್ಯಾತ್ಕನೀಯಕಂ ।
ರಾಜಾಪ್ಯೇವಂ ವಿಧಾನಶ್ವಾನ್ ರೂಪಲಕ್ಷಣಸಂಯುತಾನ್ ॥ ೧೪೨ ॥

ಗಂಧೈರ್ಮಾಲ್ಯೈಶ್ಚ ವಿವಿಧೈಃ ಪೂಜಯೇತ್ತಾನ್ವಿಧಾನತಃ ।
ಪೂಜಯ ತ್ವಂ ಚ ತುರಗಾನ್ಪರೀಕ್ಷ್ಯೈವಂ ಸುಲಕ್ಷಣಾನ್ ॥ ೧೪೩ ॥

ವಿಜಯಾಯ ಯಶೋವೃದ್ಧ್ಯೈ ಧರ್ಮಕಾಮಾರ್ಥಸಿದ್ಧಯೇ ।
ಕಾಂತಾತ್ಮರೂಪಾನ್ಗಂಧರ್ವಾನ್ ಕಠಿಣ್ಯಖುರಸಂಯುತಾನ್ ॥ ೧೪೪ ॥

ಸತ್ತ್ವಯುಕ್ತಾಂಶ್ಚ ಸದ್ವರ್ಣಾನ್ ಸದಾವರ್ತಾನ್ಜವಾಧಿಕಾನ್ ।
ಸಲ್ಲಕ್ಷಣಾಂಶ್ಚ ಸದ್ದೇಶ್ಯಾನ್ದುರ್ಲಕ್ಷಣವಿವರ್ಜಿತಾನ್ ॥ ೧೪೫ ॥

ಮಹಾಭಾರಸಹಿಷ್ಣೂಂಶ್ಚ ಮಹಾಕ್ಷುತ್ತೃಟ್ಸಹಾನಪಿ ।
ಏತಾನ್ಗೃಹಾಣ ತುರಗಾನಖಿಲಾ ನವನೀಪತೇ ॥ ೧೪೬ ॥

---

ಅಶ್ವವು ಕಡಿಮೆಯ ತರಗತಿಯನ್ನು ಹೊಂದಿರುವುದು. ರಾಜನೂ ಕೂಡ ಈ ವಿಧವಾದ ಕುದುರೆಗಳನ್ನು ರೂಪಲಕ್ಷಣಗಳಿಂದ ಕೂಡಿರುವವುಗಳೆಂದು, ಗಂಧ ಹೂವುಗಳಿಂದ ಶಾಸ್ತ್ರಕ್ಕನುಸಾರವಾಗಿ ಪೂಜಿಸಬೇಕು. ಆದ್ದರಿಂದ ಎಲೈ ಪಾಂಡ್ಯರಾಜನೆ, ನೀನು ಈ ಕುದುರೆಗಳ ಉತ್ತಮವಾದ ಲಕ್ಷಣಗಳನ್ನು ಪರೀಕ್ಷಿಸಿ ಪೂಜೆಯನ್ನು ಮಾಡು ಅದರಿಂದ ನಿನಗೆ ಜಯವೂ, ಕೀರ್ತಿಯೂ, ಅಭಿವೃದ್ಧಿಯೂ, ಧರ್ಮ, ಕಾಮ, ಅರ್ಥಗಳ ಸಿದ್ಧಿಯೂ ಉಂಟಾಗುವುದು.

೧೪೪-೧೪೬. ಎಲೈ ರಾಜನೆ ಮನೋಹರವಾದ ಆಕಾರವುಳ್ಳ ಕಠಿಣವಾದ ಗೊರಸುಗಳನ್ನು ಹೊಂದಿರುವ, ಶಕ್ತಿಯುಳ್ಳವುಗಳಾದ, ಉತ್ತಮವಾದ ದೇಹ ವರ್ಣವುಳ್ಳ, ಉತ್ತಮವಾದ ಆವರ್ತಗಳನ್ನು ಹೊಂದಿರುವ, ವೇಗಶಾಲಿಗಳಾದ, ಈ ಕುದುರೆಗಳು ಉತ್ತಮವಾದ ಲಕ್ಷಣಗಳನ್ನು ಹೊಂದಿರುವುವು. ಉತ್ತಮವಾದ ದೇಶದಲ್ಲಿ ಹುಟ್ಟಿದವು. ಕೆಟ್ಟ ಲಕ್ಷಣಗಳಿಲ್ಲದಿರುವವು. ಹೆಚ್ಚಾದ ಹೊರೆಯನ್ನು

ಇತಿ ಪ್ರೋಚ್ಯ ಕ್ರಮಾದಶ್ವಾನ್ ಶಿವಾಗಣಕೃತಾನ್ ಶಿವಃ ।
ಪ್ರಾದಾತ್ತಸ್ಮೈ ಮಹೀಪಾಯ ಪುರಃಪ್ರಸ್ಪೃತಪಾಣಯೇ ॥ ೧೪೭ ॥

ಪ್ರತ್ಯಗ್ರಹೀತ್ತಾನ್ ರಾಜಾಪಿ ತತ್ಪಾಶಸ್ಪರ್ಶಮಾತ್ರತಃ ।
ಮುದಾ ಪರಮಯಾ ಯುಕ್ತಃ ಪಾಂಡ್ಯರಾಡರಿಮರ್ದನಃ ॥ ೧೪೮ ॥

ಅಹೂಯ ಸತ್ಕಲಾಶಕ್ತಾನಾತ್ಮೀಯಾನಶ್ವಪೋಷಕಾನ್ ।
ಮಂದುರಾಸು ಮದೀಯಾಸು ಬಧ್ಯಂತಾಂ ತುರಗಾ ಇಮೇ ॥ ೧೪೯ ॥

ಇತ್ಯಾಜ್ಞಾಂ ಪ್ರದದೌ ತೇಭ್ಯಃ ತಥಾಕುರ್ವನ್ಸ್ಪಟಾಶ್ಚ ತೇ ।
ಆಮ್ನಾಯಮಯಮಾತ್ಮೀಯಮಶ್ವಮೇಕಂ ವಿಹಾಯ ಚ ॥ ೧೫೦ ॥

ಶಿವಃ ಶಿವಾಮಯಾನಶ್ವಾನ್ಪ್ರದದೌ ಪಾರ್ಥಿವಾಯ ಚ ।
ತುರಂಗಸಾದಿನಾಂ ಮಧ್ಯೇ ವಿಹಂಗಮಪತಿರ್ಯಥಾ ॥ ೧೫೧ ॥

---

ಸಹಿಸುವುವು. ಹೆಚ್ಚಾದ ಹಸಿವು ಬಾಯಾರಿಕೆಗಳನ್ನು ತಡೆಯತಕ್ಕವುಗಳಾಗಿರುವವು. ಆದ್ದರಿಂದ ಈ ಕುದುರೆಗಳೆಲ್ಲವನ್ನೂ ನೀನು ಸ್ವೀಕರಿಸು ಎಂದು ಹೇಳುತ್ತಾ ಪರಮೇಶ್ವರನು ಕುದುರೆಗಳನ್ನು ತೆಗೆದುಕೊಳ್ಳುವುದಕ್ಕಾಗಿ ಪುನಃ ಕೈಯ್ಯನ್ನು ನೀಡಿರುವ ರಾಜನಿಗೆ ಕುದುರೆಗಳ ಆಕಾರದಿಂದ ಇರುವ ನರಿಗಳ ಗುಂಪನ್ನು ಕ್ರಮವಾಗಿ ಒಪ್ಪಿಸಿದನು.

೧೪೮–೧೫೨. ಪಾಂಡ್ಯದೇಶದ ರಾಜನಾದ ಅರಿಮರ್ದನನು ಪರಮೇಶ್ವರನು ಒಪ್ಪಿಸಿದ ಕುದುರೆಯ ಹಗ್ಗದ ಸ್ಪರ್ಶಮಾತ್ರದಿಂದಲೇ ಬಹಳ ಸಂತೋಷವುಳ್ಳವನಾಗಿ ಅವುಗಳನ್ನು ಸ್ವೀಕರಿಸಿದನು. ರಾಜನು ಬುದ್ಧಿವಂತರಾದ ತನ್ನ ಕುದುರೆಗಳನ್ನು ಪೋಷಿಸುವವರನ್ನು (ಅಶ್ವಶಾಲಾಧ್ಯಕ್ಷರನ್ನು) ಕರೆದು "ನೀವು ಈ ಕುದುರೆಗಳನ್ನು ನನ್ನ ಅಶ್ವಶಾಲೆಯಲ್ಲಿ ಕಟ್ಟಿರಿ" ಎಂದು ಅವರಿಗೆ ಅಪ್ಪಣೆಯನ್ನು ಮಾಡಿದನು. ಅವರು ರಾಜನ ಅಪ್ಪಣೆಯ ಪ್ರಕಾರ ಕೆಲಸವನ್ನು ಮಾಡಿದರು. ಪರಮೇಶ್ವರನು ತಾನು ವಾಹನವಾಗಿ ಮಾಡಿಕೊಂಡಿದ್ದ ವೇದಮಯವಾದ ಅಶ್ವವೊಂದನ್ನು ಹೊರತು ಉಳಿದ

ಸಂಚರಂತಂ ಸದಶ್ವೇನ ತಂ ದೃಷ್ಟ್ವಾ ದೇವಪುಂಗವಂ ।
ಪ್ರಿಯವಿಸ್ಮಯಸಂಯುಕ್ತೋ ಭೂಷಣಾನಿ ಪ್ರದಾಯ ಚ ॥ ೧೫೨ ॥

ಪುನಸ್ಸರ್ವೋತ್ತಮಾಯಾಥ ಸಾಧಿವರ್ಯಾಯ ಶಂಭವೇ ।
ಚಂದ್ರಿಕಾಧವಲಾಂ ಪ್ರಾದಾದ್ಭೂಪ ಶ್ಚೇಲಾಮನುತ್ತಮಾಂ ॥ ೧೫೩ ॥

ಅವರುಹ್ಯ ತುರಂಗಾತ್ತಾಂ ಸಮಾದಾಯ ಮಹೇಶ್ವರಃ ।
ಸ್ವಸ್ಯ ಭಕ್ತಸ್ಯ ರಕ್ಷಾರ್ಥಂ ಕೃಪಯಾ ಶಿರಸಾ ದಧೌ ॥ ೧೫೪ ॥

ಆಮುಕ್ತಭೂಷಣ ಮಧಿಷ್ಠಿತವಾಹವರ್ಯ-
ಮಂಗೀಕೃತಾಸಿಲತಮೀಶ್ವರಮದ್ರಿಜೇಶಂ ।
ಚೂಡಾಪದೇನ ಸುರಸಿಂಧುಮಿವ ದ್ವಿತೀಯಾಂ-
ಚೇಲಾಂ ದಧಾನಮಮಲಾ ಮವನೀಂದ್ರದತ್ತಾಂ ॥ ೧೫೫ ॥

---

ಕುದುರೆಗಳನ್ನು ಎಲ್ಲವನ್ನೂ ರಾಜನಿಗೆ ಒಪ್ಪಿಸಿಕೊಟ್ಟನು ಕುದುರೆಗಳನ್ನು ಹತ್ತಿಕೊಂಡು ಇರುವ ಸವಾರರ ಮಧ್ಯದಲ್ಲಿ ಗರುಡನ ಹಾಗೆ ಉತ್ತಮಾಶ್ವದಿಂದ ಸಂಚರಿಸುತ್ತಿರುವ ದೇವಶ್ರೇಷ್ಠನಾದ ಪರಮೇಶ್ವರನಿಗೆ ಪ್ರೀತಿ ಮತ್ತು ಆಶ್ಚರ್ಯಗಳಿಂದ ಕೂಡಿರುವ ರಾಜನು ಆಭರಣಗಳನ್ನು ಕೊಟ್ಟನು.

೧೫೩-೧೫೪. ಅನಂತರದಲ್ಲಿ ಪಾಂಡ್ಯರಾಜನು ಎಲ್ಲರಿಗಿಂತಲೂ ಶ್ರೇಷ್ಠನಾಗಿ, ಪೂಜ್ಯನಾಗಿ, ಇರುವ ಪರಮೇಶ್ವರನಿಗೆ ಬೆಳದಿಂಗಳಿನಂತೆ ಶುಭ್ರವಾದ ಶ್ರೇಷ್ಠವಾದ ವಸ್ತ್ರವನ್ನು ಉಚಿತವಾಗಿ ಕೊಟ್ಟನು. ಸವಾರನ ರೂಪದಿಂದ ಇರುವ ಅವನು ತನ್ನ ಕುದುರೆಯಿಂದ ಇಳಿದು, ಅದನ್ನು ತೆಗೆದುಕೊಂಡು, ತನ್ನ ಭಕ್ತನ ರಕ್ಷಣೆಗಾಗಿ ಅವನಲ್ಲಿ ದಯೆಯಿಂದ ಅದನ್ನು ಶಿರಸ್ಸಿನಲ್ಲಿ ಧರಿಸಿದನು.

೧೫೫-೧೫೭. ಆಗ ಪರಮೇಶ್ವರನ ಗಣಗಳು ಬಹಳ ಹರ್ಷದಿಂದ ನೋಡುತ್ತಿದ್ದರು. ಅವರು ಅವರವರ ಪ್ರದೇಶದಲ್ಲಿರುತ್ತಾ ಪರಮೇಶ್ವರನು ನಿಜವಾದ ತನ್ನ ಆಭರಣಗಳನ್ನು ಬಿಟ್ಟು, ಉತ್ತಮವಾದ ಅಶ್ವವನ್ನು ವಾಹನವನ್ನಾಗಿ ಸ್ವೀಕರಿಸಿ,

ಪರ್ಯಾಯಿಸಂ ಸಮವತುಷ್ಯ ಶಿವಸ್ತುರಂಗಂ-
ಪಾಂಡ್ಯಸ್ಯ ಹಂತ ಶಿರಸಾಸ್ಯ ಬಿಭರ್ತಿ ಚೇಲಾಂ ।
ಸಂಜಾತಮಸ್ತಕ ಇವಾಪಕಸೇದನುಷ್ಯ-
ದಿಗ್ವಾಸಸಃ ಕರತಲೇನ ಧೃತಂ ಕಪಾಲಂ ॥ ೧೫೬ ॥

ಗಣಾ ಇತ್ಯಬ್ರುವನ್ ಸರ್ವೇ ಹರ್ಷಾಶ್ರುಪುಲಕಾನ್ವಿತಾಃ ।
ಸ್ಥಾನೇ ಸ್ಥಾನೇ ಚ ತಿಷ್ಠಂತೋ ಮುದಾ ಪರಮಯಾ ಯುತಾಃ ॥ ೧೫೭ ॥

ಇತರೇಭ್ಯಶ್ಚ ಸಾದಿಭ್ಯಸ್ತೇಭ್ಯಃ ಪ್ರಾದಾದ್ವರಾನ್ನೃಪಃ ।
ಬಧ್ವಾ ಶೀರ್ಷೇಷು ತೇ ಸರ್ವೇ ನಂದ್ಯಾದಿಗಣನಾಯಕಾಃ ॥ ೧೫೮ ॥

ಅಶ್ವಾರೂಢಮುದಾರಾಂಗಂ ನತ್ವಾ ನೀಪವನೇಶ್ವರಂ ।
ಸಾದಿವರ್ಯಂ ಪುರಸ್ಕೃತ್ಯ ಹಸಂತೋ ಲೀಲಯಾಸ್ಯ ಚ ॥ ೧೫೯ ॥

---

ವಸ್ತ್ರದಲ್ಲಿ ಕತ್ತಿಯನ್ನು ಹಿಡಿದುಕೊಂಡ ಇವನನ್ನು ಕಂಡರು. ಪಾಂಡ್ಯರಾಜನು ಉಚಿತವಾಗಿ ಕೊಟ್ಟಿದ್ದ ಪರಿನಿರ್ಮಲವಾದ ವಸ್ತ್ರವನ್ನು ಪ್ರಶಸ್ತವಾದ ಗಂಗಾನದಿಗಿಂತ ಬೇರೆಯಾಗಿರುವ ನದಿಯನ್ನು ಧರಿಸಿರುವ ಹಾಗೆ ಶಿರಸ್ಸಿನಲ್ಲಿ ಪರಮೇಶ್ವರನು ಧರಿಸಿರುವುದನ್ನು ನೋಡಿದರು. "ಈ ಪರಮೇಶ್ವರನು ಕ್ರಮವಾಗಿ ಈ ಅಶ್ವದಿಂದ ಇಳಿದು, ಪಾಂಡ್ಯರಾಜನು ಕೊಟ್ಟಿರುವ ವಸ್ತ್ರವನ್ನು ಶಿರಸ್ಸಿನಿಂದ ಧರಿಸುವುದನ್ನು ನೋಡಿದ ಗಣಗಳು ದಿಗಂಬರನಾದ ಈ ಪ್ರಭುವಿನ ಹಸ್ತದಲ್ಲಿರುವ ಕಪಾಲವು ಶಿರಸ್ಸನ್ನು ಹೊಂದಿ ಇವನನ್ನು ಅವಮಾನ್ಯಮಾಡುವುದು" ಎಂದು ತಮ್ಮಲ್ಲಿ ತಾವು ಮಾತನಾಡಿಕೊಳ್ಳುತ್ತಾ, ಸಂತೋಷದಿಂದ ರೋಮಾಂಚಿತಶರೀರವುಳ್ಳವರಾಗಿದ್ದರು.

೧೫೮–೧೬೦. ಆಗ ಪಾಂಡ್ಯರಾಜನು ಇತರ ಸವಾರರಿಗೂ ಉತ್ತಮವಾದ ವಸ್ತ್ರಗಳನ್ನು ಉಚಿತವಾಗಿ ಕೊಟ್ಟನು. ನಂದಿಯೇ ಮೊದಲಾದ ಗಣಾಧೀಶ್ವರರು ಎಲ್ಲರೂ ಅದನ್ನು ತೆಗೆದುಕೊಂಡು ಶಿರಸ್ಸಿನಲ್ಲಿ ಧರಿಸಿದರು. ಅವರೆಲ್ಲರೂ ವೇದಮಯವಾದ ಅಶ್ವವನ್ನು ಹತ್ತಿರುವ, ನೀಪವನಾಧೀಶ್ವರನಾದ, ಉತ್ತಮ ಸವಾರನಾಗಿರುವ

ಅರಿಮರ್ದನಪಾಂಡ್ಯಸ್ಯ ಭಾಗ್ಯಂ ತಸ್ಯಾಪಿ ನೇತಿ ಚ ।
ವದಂತಿ ಸುಂದರೇಶಸ್ಯ ಸನ್ನಿಧಿಂ ಪ್ರಾಪು ರಂಜಸಾ ॥ ೧೬೦ ॥

ಆಹೂಯ ಮಂತ್ರಿವರ್ಯಂ ತಂ ನೃಪೋ ವಾತಪುರೇಶ್ವರಂ ।
ಚಾಟುನಾ ಸಾಂತ್ವವಾದೇನ ಸಂತೋಷ್ಯ ನಿತರಾಮಪಿ ॥ ೧೬೧ ॥

ನಾನಾರತ್ನಸಮಾಯುಕ್ತಾಂ ಸ್ವರ್ಣಪಟ್ಟಾಮ್ಮನೋರಮಾಂ ।
ಸರ್ವೈರಾಭರಣೈಸ್ಸಾರ್ಧಂ ಚೇಲಾಮುತ್ಯುತ್ತಮಾನಿ ಚ ॥ ೧೬೨ ॥

ತಸ್ಮೈ ಪ್ರದಾಯ ಸಚಿವಾ ಸೂಚಕಾನಿ ದಮಬ್ರವೀತ್ ।
ಹೇ ಮಂತ್ರಿಣೋಽಯಂ ಮನ್ಮಂತ್ರೀ ಸುಂದರೇಶ ಇವಾಪರಃ ॥ ೧೬೩ ॥

ಸಭಾಯಾ ಮಾಭಯಾ ಭಾತಿ ಸಾಮರ್ಥ್ಯಾತಿಶಯೇನ ಚ ॥
ಅಶ್ವಾ ಭವದ್ಭಿರ್ದೃಷ್ಟಾಶ್ಚ ಸಮಾನೀತಾ ಅನೇನ ಹಿ ॥ ೧೬೪ ॥

---

ಪರಮೇಶ್ವರನ ಲೀಲೆಯನ್ನು ನೋಡಿ, ನಗುತ್ತಿದ್ದರು. ಅವರು ಅರಿಮರ್ದನ ಪಾಂಡ್ಯ ರಾಜನ ಪುಣ್ಯವು ಯಾವ ರಾಜನಿಗೂ ಇರುವುದಿಲ್ಲವೆಂದು ಹೇಳುತ್ತಾ ಸುಂದರೇಶ್ವರನ ಹತ್ತಿರಕ್ಕೆ ಬೇಗನೆ ಬಂದು ಸೇರಿದರು.

೧೬೧-೧೬೫. ಅನಂತರದಲ್ಲಿ ರಾಜನು ಮಂತ್ರಿಶ್ರೇಷ್ಠನಾದ ವಾತಪುರೇಶ್ವರನನ್ನು ಕರೆದು, ಮೃದುವಾದ ಮತ್ತು ವಿನೋದವಾದ ಮಾತುಗಳನ್ನು ಅವರೊಡನೆ ಆಡುತ್ತಾ ಅವನಿಗೆ ಸಂತೋಷವನ್ನುಂಟುಮಾಡಿದನು. ಅನೇಕ ವಿಧವಾದ ರತ್ನ ಖಚಿತವಾದ ಚಿನ್ನದ ಪಟ್ಟೆಯ ವಸ್ತ್ರವನ್ನೂ, ಅನೇಕ ವಿಧವಾದ ಆಭರಣಗಳನ್ನೂ, ಬಹಳ ಸುಂದರವಾದ ಮತ್ತು ಶ್ರೇಷ್ಠವಾದ ವಸ್ತ್ರವನ್ನೂ ಅವನಿಗೆ ಉಚಿತವಾಗಿ ಕೊಟ್ಟನು. ಇವನ ವಿಷಯವನ್ನು ಹೇಳಿದ್ದ ಇತರ ಮಂತ್ರಿಗಳನ್ನು ಕರೆದು "ಇವನು ಸುಂದರೇಶ್ವರನಂತೆ ಬಹಳ ಪೂಜ್ಯನಾದವನು. ಆದ್ದರಿಂದ ಇವನು ಬಹಳ ಉತ್ತಮವಾದ ಮಂತ್ರಿಯು. ಇವನು ತನ್ನ ಹೆಚ್ಚಾದ ಸಾಮರ್ಥ್ಯದಿಂದ ಸಭೆಯಲ್ಲಿ ಬಹಳ

ಕಾಲೇ ವಿಲಂಬಿತೇಽಪ್ಯೇವಂ ಮಂತ್ರೀ ವಾತಪುರೇಶ್ವರಃ ।
ಅಸ್ಮಾತ್ಕಾರ್ಯಮಶೇಷಂ ಚ ಗುಣಮೇವ ವ್ಯಧಾತ್ಸುಧೀಃ　　॥ ೧೬೫ ॥

ಏವಂ ಪುನಃ ಪುನರ್ಭೂಪೋ ವದನ್ ಸಂತೋಷಸಂಯುತಃ ।
ಆಸ್ಥಾನಮಂಟಪೇ ತತ್ರ ಚಿರಂ ಭದ್ರಾಸನೇ ವಸನ್ ।

ಮಧ್ಯಂಗತೇಽಥ ಮಾರ್ತಂಡೇ ದಿವಸಸ್ಯ ಮಹೀಪತಿಃ ।
ಮಂತ್ರಿಮುಖ್ಯಾನ್ ಜನಾನ್ಸರ್ವಾನ್ಗಂತುಂ ಸ್ವಾನ್ಸ್ವಾನ್ಗೃಹಾನ್ಪ್ರತಿ ॥ ೧೬೬ ॥

ಆಜ್ಞಾಪ್ಯಾಜ್ಞಾಪಯಾಮಾಸ ವಾತಗ್ರಾಮೇಶಮಪ್ಯಥ ।
ಗಂತುಂ ಸಂತೋಷಸನ್ಮಾನಪೂರ್ವಂ ರಾಜಾ ರಿಮರ್ದನಃ　　॥ ೧೬೭ ॥

ತೇಷು ಸರ್ವೇಷು ಗಚ್ಛತ್ಸು ಮಂತಿಮುಖ್ಯಜನೇಷು ಚ ।
ಯಯೌ ವಾತಪುರೇಶೋಽಪಿ ಗೃಹಂ ಪೂರ್ಣಮನೋರಥಃ　　॥ ೧೬೮ ॥

---

ಮಟ್ಟಿಗೆ ಪ್ರಕಾಶಿಸುತ್ತಿರುವನು. ಇವನು ತರಿಸಿರುವ ಕುದುರೆಗಳೆಲ್ಲವನ್ನೂ ನೀವು ನೋಡಿರುವಿರಿ. ಮಂತ್ರಿಯಾದ ಈ ವಾತಪುರೇಶ್ವರನು ಕಾಲವಿಲಂಬವಾದಾಗ್ಯೂ ನಮ್ಮ ಕಾರ್ಯವೆಲ್ಲವನ್ನೂ ಬುದ್ಧಿವಂತನಾದುದರಿಂದ ಈ ಪ್ರಕಾರದಿಂದ ಚೆನ್ನಾಗಿ ಸಾಧಿಸಿರುವನು.

೧೬೬-೧೬೯. ಎಂದು ಈ ಪ್ರಕಾರದಿಂದ ಹೇಳುತ್ತಾ ರಾಜನು ಬಹಳ ಸಂತೋಷವುಳ್ಳವನಾಗಿ ಸಭೆಯಲ್ಲಿ ಬಹಳ ಕಾಲದವರಿಗೂ ಸಿಂಹಾಸನದಲ್ಲಿ ಕೂತುಕೊಂಡು ಮಧ್ಯಾಹ್ನಕಾಲವಾದನಂತರ ಮಂತ್ರಿಗಳೆಲ್ಲರನ್ನೂ ಅವರವರ ಮನೆಗೆ ಅವರವರು ಹೋಗಲು ಆಜ್ಞೆಯನ್ನು ಕೊಟ್ಟನು. ವಾತಪುರೇಶ್ವರನನ್ನು ಮನೆಗೆ ಹೋಗುವುದಕ್ಕೆ ಮರ್ಯಾದೆಯಿಂದ ಆಜ್ಞೆಯನ್ನು ಮಾಡಿ, ಸಂತೋಷದಿಂದ ಕಳುಹಿಸಿದನು. ಇತರ ಮಂತ್ರಿಗಳೆಲ್ಲರೂ ಮನೆಗೆ ಹೋದನಂತರ ಪೂರ್ಣವಾದ ಇಷ್ಟಸಿದ್ಧಿಯನ್ನು ಹೊಂದಿದ ವಾತಪುರೇಶ್ವರನು ತನ್ನ ಮನೆಯನ್ನು ಹೊಂದಿದನು. ಅರಿಮರ್ದನ

ಚಿಹ್ನಕಾಹಲಘೋಷೇಣ ಪೂರಯನ್ಪುರಮಾತ್ಮನಃ ।
ರಾಜಾ ಚ ಪಶ್ಚಾತ್ಸ್ವಂ ಪ್ರಾಪ ಮಂದಿರಂ ಮಂಗಲಾಲಯಂ ॥ ೧೬೯ ॥

ದೃಷ್ಟವಂತೋ ಜನಾಃ ಸರ್ವೇ ವಿಚಿತ್ರಂ ಚಾಶ್ವವಿಕ್ರಯಂ ।
ವದಂತೋತ್ಯದ್ಭುತಮಿತಿ ಸ್ವಂ ಸ್ವಂ ಗೇಹಂ ಯಯುಸ್ತದಾ ॥ ೧೭೦ ॥

ಸುಂದರೇಶೋಪಿ ಭಗವಾನ್ ಹಸನ್ಗಣವರೈಃ ಸಹ ।
ಪ್ರಾಹ ಪ್ರಲಯಕಾಲೇಪಿ ಸ್ವಾಲಯಂ ಲಯವರ್ಜಿತಂ ॥ ೧೭೧ ॥

॥ ಅಗಸ್ತ್ಯ ಉವಾಚ ॥

ಮೂಲಲಿಂಗೇ ತಿರೋಧಾನಂ ಪ್ರಾಪ ಸರ್ವೈರ್ಗಣೈಃ ಸಹ ।
ಲೀಲಾ ವಿಶೇಷ ಮಾಶ್ಚರ್ಯಂ ಭಕ್ತಾರ್ಥಂ ಕೃತ ಮಾತ್ಮನಾ ॥ ೧೭೨ ॥

---

ಪಾಂಡ್ಯರಾಜನು ತನ್ನ ನಗರದಲ್ಲಿ ಎಲ್ಲಾ ಕಡೆಯಲ್ಲಿಯೂ ಸಂತೋಷಸೂಚಕವಾದ ಕಹಳೆಯೇ ಮೊದಲಾದ ವಾದ್ಯಗಳನ್ನು ಧ್ವನಿಮಾಡಿಸುತ್ತಾ ಎಲ್ಲಾ ಮಂಗಳಗಳಿಗೂ ಆಸ್ಪದವಾದ ತನ್ನ ಮನೆಯನ್ನು ತಾನೂ ಹೊಂದಿದನು.

೧೭೦-೧೭೧ ಆಶ್ಚರ್ಯಕರವಾದ ಅಶ್ವಗಳ ವಿಕ್ರಯವನ್ನು ನೋಡಿದ ಜನರೆಲ್ಲರೂ "ಇದು ಬಹಳ ಆಶ್ಚರ್ಯಕರವಾಗಿರುವುದು", ಎಂದು ಹೇಳುತ್ತಾ ತಮ್ಮ ತಮ್ಮ ಮನೆಗಳಿಗೆ ಹೋದರು. ಪೂಜ್ಯನಾದ ಸುಂದರೇಶ್ವರನೂ ತನ್ನ ಗಣಗಳೊಡನೆ ನಗುತ್ತಾ, ಪ್ರಳಯಕಾಲದಲ್ಲಿಯೂ ನಾಶವಾಗದಿರುವ ತನ್ನ ವಾಸಸ್ಥಾನವನ್ನು ಹೊಂದಿದನು.

೧೭೨-೧೭೫. ಅಗಸ್ತ್ಯಋಷಿಯು ಹೇಳಿದನು :—ಅನಂತರದಲ್ಲಿ ಪರಮೇಶ್ವರನು ತನ್ನ ಗಣಗಳೊಡನೆ ಮೂಲಲಿಂಗದಲ್ಲಿ ಅದೃಶ್ಯನಾದನು. ಮತ್ತು ಭಕ್ತರಿಗಾಗಿ ತಾನು ಆಚರಿಸಿದ ಅತಿಶಯವಾದ ಈ ಲೀಲೆಯನ್ನು ಗೌರಿದೇವಿಯ ಸಂಗಡ ಹೇಳಿದನು. ಅವಳು ಅದನ್ನು ಕೇಳಿ ಆಶ್ಚರ್ಯಪಟ್ಟಳು. ಸುಂದರೇಶ್ವರನು

ಗೌರ್ಯ್ಯೈ ಸ ಕಥಯಾಮಾಸ ಸಾಪಿ ಶ್ರುತ್ವಾ ಸುವಿಸ್ಮಿತಾ ।
ಏಕೋನಷಷ್ಟಿಲೀಲೇಯಂ ಶ್ರೀಹಾಲಾಸ್ಯಪತೇಃ ಪ್ರಭೋಃ　　॥ ೧೭೩ ॥

ಸಮಸ್ತದುಃಖಗಹನದಾವಾನಲಶಿಖೋಪಮಾ ।
ಶೃಣ್ವತಾಂ ಸ್ತುವತಾಂ ನೄಣಾಂ ಸುಂದರೇಶಾಶ್ವವಿಕ್ರಯಂ　　॥ ೧೭೪ ॥

ಜ್ಯೇಷ್ಠಾ ಪಲಾಯಿತಾ ಸದ್ಯಸ್ಸಮಾಯಾತಿ ಕನೀಯಸೀ ।

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಮಾಯಾಶ್ವವಿಕ್ರಯೋ ನಾಮ
ಪಂಚಷಷ್ಟಿತಮೋಽಧ್ಯಾಯಃ

---

ಆಚರಿಸಿದ ಅಶ್ವವಿಕ್ರಯವೆಂಬ ಲೀಲೆಯನ್ನು ಕೇಳಿದವರೂ, ಓದಿದವರೂ ದರಿದ್ರತನವನ್ನು ಕಳೆದುಕೊಂಡು ಶ್ರೀಮಂತರಾಗುವರು. ಪ್ರಭುವಾದ ಹಾಲಾಸ್ಯೇಶ್ವರನ ಏವತ್ತೊಂಭತ್ತನೆಯ ಈ ಲೀಲೆಯು ಎಲ್ಲಾ ವಿಧವಾದ ದುಃಖವನ್ನೂ ನಾಶಮಾಡುವುದರಲ್ಲಿ ಬಹಳ ಸಾಮರ್ಥ್ಯವುಳ್ಳದ್ದಾಗಿರುವುದು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಅಶ್ವವಿಕ್ರಯವೆಂದು ಹೆಸರುಳ್ಳ ಅರವತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಷಟ್‌ಷಷ್ಟಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಯಯಾ ನದ್ಯಾ ಕರ್ಷಣಂ ಚಾಸ್ಯಕರೋತ್ಸುಂದರೇಶ್ವರಃ ।
ಅಥಾಭಿಧಾಸ್ಯೇ ತಾಂ ಲೀಲಾಮತಿಚಿತ್ರಾಮಘಾಪಹಾಂ ॥ ೧ ॥

ಮಾಯಯಾ ತುರಗಾಕಾರಾಸ್ಸೃಗಾಲಾ ಅಖಿಲಾ ಅಪಿ ।
ನಿಶೀಥೇ ಪೂರ್ವರೂಪಂ ಚ ಪ್ರಾಪು ಶ್ಶಂಕರಲೀಲಯಾ ॥ ೨ ॥

ಅಥ ತೇ ಚಿಂತಯಾಮಾಸು ರನ್ಯೋನ್ಯಂ ಹರ್ಷಸಂಯುತಾಃ ।
ಗಾಢಂ ಬದ್ಧಾ ವಯಂ ಸರ್ವೇಽಪುರಾಶ್ವತ್ವಂ ಸಮಾಶ್ರಿತಾಃ ॥ ೩ ॥

---

### ಅರವತ್ತಾರನೆಯ ಅಧ್ಯಾಯವು

೧-೫. ಅಗಸ್ತ್ಯಋಷಿಯು ಹೇಳಿದನು:— ಹಾಲಾಸ್ಯೇಶ್ವರನಾದ ಸುಂದರೇಶ್ವರನು ವೇಗವತೀನದಿಯ ನೀರು ಹೆಚ್ಚುವಂತೆ ಮಾಡಿದ, ಪಾಪವನ್ನು ಪರಿಹರಿಸುವ ಲೀಲೆಯನ್ನು ಹೇಳುವೆನು. ಶಂಕರನ ಮಾಯೆಯಿಂದ ಕುದುರೆಯ ಆಕಾರವನ್ನು ಹೊಂದಿದ್ದ ನರಿಗಳೆಲ್ಲವೂ ಅರ್ಧರಾತ್ರಿಯಾದ ಕೂಡಲೆ ಶಿವನ ಲೀಲೆಯಿಂದ ತಮ್ಮ ನಿಜವಾದ ರೂಪವನ್ನು ಹೊಂದಿದವು. ಆಗ ಅವೆಲ್ಲವೂ ಸಂತೋಷದಿಂದ ಒಂದು ಕಡೆ ಸೇರಿ ಅನ್ಯೋನ್ಯವಾಗಿ ಯೋಚಿಸಿದವು. ನಮಗೆ "ಕುದುರೆಗಳ

ಲಬ್ಧಾನ್ಯಾತ್ಮೀಯರೂಪಾಣಿ ದೈವಾದಸ್ಮಾಭಿರದ್ಯ ತು ।
ರಜ್ಜುಭಿಃ ಶೃಂಖಲಾಭಿಶ್ಚ ಪುರಾ ಬದ್ಧಾ ವಯಂ ನರೈಃ ॥ ೪ ॥

ತದ್ಬಂಧನೇಭ್ಯೋ ಮುಕ್ತಾನಾಂ ನಃ ಪಥ್ಯಂ ಹಿ ಪಲಾಯನಂ ।
ನಾನುಭೂತಾಃ ಕ್ವಚಿದಪಿ ಬಾಧಾ ಏವಂ ವಿಧಾಃ ಖಲು ॥ ೫ ॥

ವರ್ತಂತೇಽದ್ಯಾಪಿ ದೇಹೇಷು ಬಂಧೇನ ಗುಣವೇದನಾಃ ಃ
ಅತ್ರ ಸ್ಥಿತಾನಾಂ ಹೃದ್ಯಾನಿ ಭಕ್ಷ್ಯಾಣ್ಯಪಿ ನ ಸಂತಿ ಹಿ ॥ ೬ ॥

ಕುಳಿತ್ಥಮುದ್ಗಚಣಕತೃಣಂ ದಾಸ್ಯಂತಿ ಪೋಷಕಾಃ ।
ತದ್ಭಕ್ಷ್ಯಂ ನಾರ್ಹಮಸ್ಮಾಕಂ ಕಾರ್ಯಮೇವ ಪಲಾಯನಂ ॥ ೭ ॥

---

ಆಕಾರವೂ ಸ್ವಭಾವವೂ ಮೊದಲು ಉಂಟಾಗಿತ್ತು. ನಮ್ಮನ್ನು ಬಲವಾಗಿ ಹಗ್ಗ ಮತ್ತು ಸರಪಣಿಗಳಿಂದ ಮನುಷ್ಯರು ಕಟ್ಟಿಹಾಕಿದ್ದರು. ನಾವು ಯಾವಾಗಲೂ ಈ ದುಃಖವನ್ನು ಅನುಭವಿಸಿದವರಲ್ಲ.

೬–೭. ದೈವಗತಿಯಿಂದ ನಮ್ಮ ನಿಜರೂಪವು ನಮಗೆ ಬಂದಿರುತ್ತದೆ ಆದ್ದರಿಂದ ಮನುಷ್ಯರು ಕಟ್ಟಿರುವ ಬಂಧನವು ತಪ್ಪಿಹೋಗಿರುತ್ತದೆ. ಈಗಲೂ ನಮಗೆ ಅವರು ಕಟ್ಟಿರುವುದರಿಂದ ಉಂಟಾದ ಗಾಯದ ಗುರುತುಗಳು ನೋವನ್ನು ಉಂಟುಮಾಡುತ್ತಾ ಇವೆ. ಬಂಧನದಿಂದ ಬಿಡುಗಡೆಯಾದ ಕಾರಣ ನಾವುಗಳು ಇಲ್ಲಿಂದ ಓಡಿಹೋಗುವುದು ಸರಿಯಾಗಿರುವುದು. ಇಲ್ಲಿ ನಾವು ಇದ್ದರೆ ಸುಖಕರವಾದ ಹುರುಳಿ, ಹೆಸರು, ಕಡಲೆ, ಹುಲ್ಲು, ಇವುಗಳನ್ನು ಪೋಷಕರು ಕೊಡುವರು. ಅದನ್ನು ತಿಂದುಕೊಂಡಿದ್ದರಿಂದ ನಮಗೆ ಹಿತವಾಗಿರುವುದಿಲ್ಲ. ಆದ್ದರಿಂದ ಓಡುವುದು ಉತ್ತಮವು" ಎಂದು ನಿಶ್ಚಯಮಾಡಿಕೊಂಡು ಕುದುರೆಗಳಾಗಿದ್ದ ನರಿಗಳೆಲ್ಲವೂ ಸುತ್ತಲೂ ಓಡಿಹೋಗಲುದ್ಯುಕ್ತವಾದವು.

**ಇತಿ ನಿಶ್ಚಿತ್ಯ ಮನಸಾ ಸೃಗಾಲಾ ಅಭಿತೋ ಯಯುಃ ।**
**ಪಲಾಯಿತಾಶ್ಚ ತೇ ಸರ್ವೇ ಶರವೇಗಯುತಾಃ ಪುರಾತ್ ॥ ೮ ॥**

**ಪುರವೀಥೀಷು ಸರ್ವಾಸು ಸರ್ವಗೇಹಾಂಕಣೇಷು ಚ ।**
**ಉದ್ಯಾನೇಷು ಸಮಸ್ತೇಷು ಸರ್ವದೇವಾಲಯೇಷು ಚ ॥ ೯ ॥**

**ಮಹಾಪ್ರಾಕಾರಮಧ್ಯಸ್ಥ ಪ್ರದೇಶೇ ಷ್ವಖಿಲೇಷ್ವಪಿ ।**
**ಸರ್ವತ್ರ ಬದ್ಧದ್ವಾರತ್ವಾತ್ಸಂಚರಂತ್ಯಖಿಲಾಶ್ಶಿವಾಃ ॥ ೧೦ ॥**

**ಪುರದ್ವಾರಕವಾಟೇಷು ಪ್ರಭಾತೇ ವಿಕೃತೇಷ್ವಥ ।**
**ಶಿವಾಯೂಥಾಶ್ಚ ನಿರ್ಗತ್ಯ ಜಗ್ಮುಸ್ತೇ ಕಾನನೇಷು ಚ ॥ ೧೧ ॥**

**ರಾತ್ರಾವೇವ ಪುರದ್ವಾರರಕ್ಷಿತಾಃ ಪೀಡಿತಾಃ ಶಿವೈಃ ।**
**ಕವಾಟೋದ್ಘಾಟನಂ ವಾಪಿ ಕುರ್ವಂತಿ ಸ್ಮ ಪ್ರಪೀಡಿತಾಃ ॥ ೧೨ ॥**

---

೮–೧೧. ಅಶ್ವಶಾಲೆಯಿಂದ ಬಾಣಗಳಂತೆ ವೇಗಶಾಲಿಗಳಾಗಿ ಆ ನರಿಗಳೆಲ್ಲವೂ ಓಡಾಡುತ್ತಾ ನಗರದ ಎಲ್ಲಾ ಬೀದಿಗಳೂ, ಮನೆಯ ಪಡಸಾಲೆಗಳೂ, ಎಲ್ಲಾ ಉದ್ಯಾನವನಗಳೂ ಎಲ್ಲಾ ದೇವಾಲಯಗಳೂ,ಕೋಟೆಯ ದೊಡ್ಡ ಗೋಡೆಯ ಮಧ್ಯ ಪ್ರದೇಶಗಳೂ, ಇವೆಲ್ಲವೂ ಬಾಗಿಲು ಹಾಕಿ ಭದ್ರಪಡಿಸಿರುವುದರಿಂದ ಅಲ್ಲಲ್ಲಿಯೇ ಓಡಾಡುತ್ತಿದ್ದ ಆ ನರಿಗಳು ಎಲ್ಲವೂ ಬೆಳಗಾದ ಮೇಲೆ, ಬಾಗಿಲನ್ನು ತೆಗೆದಕೂಡಲೆ ಹಿಂಡು ಹಿಂಡಾಗಿ ಕಾಡಿಗೆ ಓಡಿಹೋದವು.

೧೨–೧೭. ಆದರೆ ಆ ರಾತ್ರಿಯಲ್ಲಿ ನಗರದ ರಕ್ಷಕರು ನರಿಗಳಿಂದ ಉಂಟಾದ ಹಿಂಸೆಯನ್ನು ತಡೆಯಲಾರದೆ ಬೇಗನೆ ನಗರದ ಹೆಬ್ಬಾಗಿಲನ್ನು ತೆಗೆದರು. ನರಿಗಳಿಂದ ಕಡಿಸಿಕೊಂದು ಗಾಯವನ್ನು ಹೊಂದಿದವರಾದ ಕಾರಣ, ನಗರದಲ್ಲಿ ವಾಸಮಾಡುತ್ತಿರುವವರಲ್ಲಿ ಬಹಳ ಜನರು, ಬೆಳಗಾದನಂತರ ಅರಿಮರ್ದನಪಾಂಡ್ಯರಾಜನ ಹತ್ತಿರಕ್ಕೆ ಹೋಗಿ, "ಶತ್ರುಗಳೆಲ್ಲರನ್ನೂ ಜಯಿಸಿರುವ ವೀರನಾದ ಪಾಂಡ್ಯ ವಂಶಾಧಿಪನೇ, ನೀನು ನಮ್ಮನ್ನು ನೋಡು ನಮ್ಮ ವಿಜ್ಞಾಪನೆಯನ್ನು ಲಾಲಿಸು.

ಶಿವಾಭಿಃ ಖಾದಿತಾದಷ್ಟ್ವಾ ಅನೇಕೇ ಪುರವಾಸಿನಃ ।
ಪ್ರಭಾತೇ ಪೋಷಕಾಸ್ಸರ್ವೇ ರಾಜಾನಮರಿಮರ್ದನಂ ॥ ೧೩ ॥

ಪ್ರಾಪ್ಯ ಭೀತ್ಯಾ ನಮಸ್ಕೃತ್ಯ ನಿಶಾವೃತ್ತಾಂತಮಬ್ರುವನ್ ।
ರಾಜನ್ ಪಾಂಡ್ಯಕುಲಾಧೀಶ ಶಾಸಿತಾರಾತಿಮಂಡಲ ॥ ೧೪ ॥

ವೀಕ್ಷ್ಯೈಕರ್ಣಯ ಚಾಸ್ಮಾಕಂ ವಿಜ್ಞಪ್ತಿಮಧಿಕಾದ್ಭುತಾಂ ।
ಅಶ್ವಾ ಅಭಿನವಾಃ ಸರ್ವೇ ನಿಶೀಥೇ ಘೋರರೂಪಿಣಃ ॥ ೧೫ ॥

ಅಕುರ್ವನ್ನಾದಮತ್ಯುಚ್ಚೈ ರಾತ್ರೌಯು ಮತಿಭೀಷಣಂ ।
ನಾದಂ ಶ್ರುತ್ವಾ ವಯಂ ಸರ್ವೇ ಘೋರೂಣಾಂ ಮಂದುರಾಂತಿಕೇ ॥ ೧೬ ॥

ಕಿಮೇತದಿತ್ಯಥೋತ್ಥಾಯ ಗಚ್ಛಾಮಸ್ತತ್ರ ಸತ್ವರಂ ।
ದೃಷ್ಟಶ್ಶಿವಾಗಣೋಽಸ್ಮಾಭಿ ರ್ನದೃಷ್ಟಾ ವಾಜಿನಾಂ ಗಣಾಃ ॥ ೧೭ ॥

ಅಸ್ಮದ್ದರ್ಶನತೋ ಭೀತಾ ಉತ್ಪ್ಲುತ್ಯೋತ್ಪ್ಲುತ್ಯ ವೇಗತಃ ।
ಅಸ್ಮಾನ್ದಶಂತಿ ನಿತರಾಂ ಕೋಪಯುಕ್ತಾ ಸ್ಸದಂಷ್ಟ್ರಿಣಃ ॥ ೧೮ ॥

---

ಹೊಸದಾಗಿ ಬಂದಿದ್ದ ಕುದುರೆಗಳೆಲ್ಲವೂ ಅರ್ಧರಾತ್ರಿಯಲ್ಲಿ ನರಿಗಳಾದವು. ಅವು ಕೂಡಲೆ ತಮ್ಮ ಜಾತಿಯ ಸ್ವಭಾವಕ್ಕನುಗುಣವಾಗಿ ಗಟ್ಟಿಯಾಗಿ ಭಯವಾಗುವಂತೆ ಕಿರಿಚಿಕೊಂಡವು. ಅಶ್ವಶಾಲೆಯ ಹತ್ತಿರದಲ್ಲಿ ನರಿಗಳ ಧ್ವನಿಯೇ ಕೇಳಿದ ಕಾರಣ ನಾವೆಲ್ಲರೂ ಅಲ್ಲಿಗೆ ಬೇಗ ಎದ್ದು ಹೋಗಿ,-ನೋಡಿದೆವು. ಕುದುರೆಗಳು ಕಾಣಲಿಲ್ಲ. ನರಿಗಳ ಹಿಂಡನ್ನು ಮಾತ್ರ ನೋಡಿದೆವು.

೧೮–೨೨. ಅವುಗಳು ನಮ್ಮನ್ನು ನೋಡಿದ ಕೂಡಲೆ ಹೆದರಿದವುಗಳಾಗಿ ವೇಗದಿಂದ ನಮ್ಮಮೇಲೆ ಹಾರಿ ನಮ್ಮನ್ನು ಬಲವಾಗಿ ಕೋಪದಿಂದ ಕಚ್ಚಿದವು. ಕೆಲವು ನರಿಗಳು ಎತ್ತರವಾದ ಕೋಟೆಯ ಗೋಡೆಯ ಮೇಲೆ ಹೋದವು. ನೀರಿನ ಕಾಲುವೆಯ ಕಡೆಯಿಂದ ಕೆಲವು ಓಡಿದವು. ಕಿಟಕಿಗಳಿಂದ ಕೆಲವು ಓಡಿದವು. ಹೋಗಲು ಶಕ್ತಿಯಿಲ್ಲದ ನರಿಗಳು ನಾನಾವಿಧವಾದ ಸಣ್ಣ ಸಣ್ಣ ದಾರಿಗಳಿಂದ

ಗಚ್ಛಂತಿ ಕೇಚಿದುಲ್ಲಂಘ್ಯ ಸೃಗಾಲಾಸ್ಸಾಲಮುನ್ನತಂ ।
ಜಲಧಾರಾಯನೈಃ ಕೇಚಿದ್ಗವಾಕ್ಷೈರಪಿ ಕೇಚನ ॥ ೧೯ ॥

ರಂಧ್ರೈರ್ನಾನಾವಿಧೈಶ್ಚಾಪಿ ಯಯುಸ್ಸರ್ವೇಽಪಿ ವಂಚಕಾಃ ।
ಗಂತುಂ ಕೇಚಿದಶಕ್ತಾಶ್ಚ ಘೇರವಸ್ತತ್ರ ತೇ ಪುರೇ ॥ ೨೦ ॥

ಕೇಚಿನ್ಮಹಾಂತಃ ಕ್ರೋಷ್ಟಾರಃ ಕ್ರುದ್ಧಾ ಅಶ್ವಾನ್ಪುರಾತನಾನ್ ।
ದದಂಶು ಸ್ಸರ್ವಗಾತ್ರೇಷು ಅಸ್ಮಾಭಿಃ ಪ್ರಕೃತಾ ಅಪಿ ॥ ೨೧ ॥

ಅಸ್ಮಾನಪಿ ದದಂಶು ಸ್ತೇ ದಂತೈಸ್ತೀಕ್ಷ್ಣತರೈಃ ಪುನಃ ।
ಅಭವರ್ನ ಭಿನ್ನಮುಷ್ಕಾಶ್ಚ ಕೇಚಿದಶ್ವಾಃ ವಿಚೇತನಾಃ ॥ ೨೨ ॥

ಕೀಲಾನುದ್ಧೃತ್ಯ ಕೇಚಿಚ್ಚ ಮಂದುರಾಯಾ ಬಹಿರ್ಗತಾಃ ।
ಶಿವಾಶ್ಚ ನಗರೇsನಂತಾ ಧಾವಂತಃ ಪರಿತೋ ಮುಹುಃ ॥ ೨೩ ॥

ನಿಜೇನ ಧ್ವನಿನಾ ಸರ್ವಾ ದಿಶೋ ಮುಖರಯಂತಿ ಚ ।
ಚತುರ್ದ್ವಾರೇಷು ವಿವೃತೇ ಪುರಸ್ಯ ಮೃಗಧೂರ್ತಕಾಃ ॥ ೨೪ ॥

---

ಹೋದವು. ಬಲವಾಗಿರುವ ನರಿಗಳು ಕೆಲವು ಕೋಪದಿಂದ ಹಿಂದಿನಿಂದಲೂ ಇದ್ದ ನಮ್ಮ ಕುದುರೆಗಳನ್ನು ಎಲ್ಲಾ ಕಡೆಯಲ್ಲಿಯೂ ಕಚ್ಚಿದವು. ಅದರಿಂದ ನಾವು ಅವನ್ನು ಹೊಡೆದವು. ಆಗ ಅವು ನಮ್ಮಮೇಲೆ ಬಿದ್ದು ನಮ್ಮನ್ನು ಬಲವಾಗಿ ಕಡಿದವು. ಅಶ್ವಶಾಲೆಯಲ್ಲಿ ಕೆಲವು ಕುದುರೆಗಳ ಬೀಜಗಳಿಗೆ ಗಾಯವಾಗಿರುತ್ತದೆ. ಆದ್ದರಿಂದ ಅವುಗಳು ಮೈಮೇಲೆ ಎಚ್ಚರವಿಲ್ಲದೆ ಇರುತ್ತವೆ.

೨೩–೨೬. ಕೆಲವು ನರಿಗಳು ಅಶ್ವಶಾಲೆಯ ಅಗಣಿಯನ್ನು ತೆಗೆದುಕೊಂಡು ಹೊರಗೆ ಬಂದು ನಗರದ ಬೀದಿಗಳಲ್ಲಿ ಗುಂಪುಗುಂಪಾಗಿ ಓಡುತ್ತಾ ಇದ್ದವು. ಅವುಗಳು ತಮ್ಮ ಧ್ವನಿಯಿಂದ ನಗರವೆಲ್ಲವನ್ನೂ ಹೊಳಲುಗೊಡುವಂತೆ ಕೂಗುತ್ತಿದ್ದವು. ಹೆಬ್ಬಾಗಲನ್ನು ತೆರದಕೂಡಲೆ ಕತ್ತಲೆಯಾಗಿರುವಾಗಲೇ ಅವೆಲ್ಲವೂ ಕಾಡಿಗೆ

ವನಂ ಪ್ರತಿ ಚ ಧಾವಂತಿ ಸಹಸಾ ತಮಸಾ ಸಹ ।
ಅಯಂ ತು ಮಂದುರೋದ್ಭೂತವೃತ್ತಾಂತೋ ಸ್ವಾಭಿರೀರಿತಃ ॥ ೨೫ ॥

ಇತ್ಯಶ್ವಪೋಷಕಾನಾಂ ತು ವಾಕ್ಯಂ ಶ್ರುತ್ವಾ ಮಹೀಪತಿಃ ।
ಶೋಕಸಾಗರಸಮ್ಮಗ್ನೋ ಮುಹೂರ್ತಂ ಚ ವಿಚೇತನಃ ॥ ೨೬ ॥

ಅಂತಃಪುರೇಷು ಪೀಡಾಂ ಚ ಶಿವಾಭಿರರಿಮರ್ದನಃ ।
ಸರ್ವೇಽಪಿ ಸಚಿವಾ ಏತ್ಯ ತದಾ ತನ್ನಿಕಟೇ ಸ್ಥಿತಾಃ ॥ ೨೭ ॥

ಶ್ರುತಃ ಕಿಂ ಮಂದುರೋದಂತ ಇತ್ಯಪೃಚ್ಛತ ತಾನ್ನೃಪಃ ।
ತಸ್ಮಿನ್ಗೃಹೇಷು ಚಾಸ್ಮಾಕಂ ನಿಶಿ ಪೀಡಾಂ ಮಹತ್ತರಾಂ ॥ ೨೮ ॥

ಸ್ವಾಮಿನ್ನದ್ಯ ಶ್ರುತೋಽಸ್ಮಾಭಿರಿತ್ಯುಕ್ತ್ವಾ ತೇಽಪ್ಯಧೋಮುಖಾಃ ।
ವಿಸ್ಮಿತಾ ದುಃಖಿತಾ ಆಸನ್ರಾಜ್ಞಃ ಶೋಕಂ ವಿಲೋಕ್ಯ ಚ ॥ ೨೯ ॥

---

ಓಡಿಹೋದವು. ಅಶ್ವಶಾಲೆಯ ವರ್ತಮಾನವೆಲ್ಲವನ್ನೂ ನಾವು ಹೇಳಿರುವೆವು. ಅಶ್ವಶಾಲೆಯಲ್ಲಿ ನಡೆದ ವರ್ತಮಾನವನ್ನು ಅಶ್ವರಕ್ಷಕರಿಂದ ತಿಳಿದ ರಾಜನು ಬಹಳ ದುಃಖವುಳ್ಳವನಾಗಿ ಒಂದು ಮುಹೂರ್ತದವರಿಗೂ ಜ್ಞಾನವಿಲ್ಲದವನಾಗಿದ್ದನು.

೨೭–೨೯. ಅರಿಮರ್ದನರಾಜನು ಅಂತಃಪುರದಲ್ಲಿಯೂ ನರಿಗಳ ತೊಂದರೆಯನ್ನು ಕೇಳಿದನು. ಮಂತ್ರಿಗಳೆಲ್ಲರೂ ರಾಜನ ಹತ್ತಿರಕ್ಕೆ ಬಂದು ಸೇರಿದರು. "ಅಶ್ವಶಾಲೆಯ ವರ್ತಮಾನವನ್ನು ನೀವು ಕೇಳಿರುವಿರಾ" ಎಂದು ಮಂತ್ರಿಗಳನ್ನು ರಾಜನು ಪ್ರಶ್ನೆಮಾಡಿದನು. "ನಾವೆಲ್ಲರೂ ರಾತ್ರಿಯಲ್ಲಿ ಉಂಟಾದ ಅಲ್ಲಿಯ ಬಹಳವಾದ ತೊಂದರೆಯನ್ನು ಕೇಳಿದೆವು," ಎಂದು ಹೇಳಿ ಅವರೆಲ್ಲರೂ ಮುಖವನ್ನು ತಗ್ಗಿಸಿಕೊಂಡರು. ಮತ್ತು ಅವರೆಲ್ಲರೂ ರಾಜನಿಗೆ ಉಂಟಾಗಿರುವ ದುಃಖವನ್ನು ನೋಡಿ, ಆಶ್ಚರ್ಯವೂ ದುಃಖವೂ ಉಳ್ಳವರಾದರು.

ತದಾ ವಾತಪುರೇಶೋಽಪಿ ಕೃತಕೃತ್ಯ ಇತಿ ಸ್ಮರನ್ ।
ರಾಜ್ಞಃ ಸಮೀಪಂ ತು ಗತೋ ಧ್ಯಾಯನ್ ಶಂಭುಂ ಸಮಾಗತಃ ॥ ೩೦ ॥

ತಂ ದೃಷ್ಟ್ವಾ ನಿತರಾಂ ಕ್ರುದ್ಧಃ ಪ್ರೋವಾಚೇತಿ ಮಹೀಪತಿಃ ।
ಸಮ್ಯಕ್ತ್ವಯಾ ಸಮಾನೀತಾ ಅಶ್ವಾ ವಾತಪುರೇಶ್ವರ ॥ ೩೧ ॥

ಇಂದ್ರಜಾಲಮಹಾಜಾಲವಿದ್ಯಾ ಮೇ ದರ್ಶಿತಾ ತ್ವಯಾ ।
ಅಶ್ವಾಃ ಪೂರ್ವಂ ಸ್ಥಿತಾಶ್ಚಾಪಿ ಗತಾಃ ಪೌರಾಶ್ಚ ಪೀಡಿತಾಃ ॥ ೩೨ ॥

ಇತ್ಯುಕ್ತೇ ಚೋತ್ತರಂ ಪ್ರಾಹ ಧ್ಯಾಯನ್ಪಾಂಡ್ಯನೃಪಂ ಪ್ರತಿ ।
ರಾಜಂಸ್ತುರಂಗಾನಯನೇ ಕೋ ದೋಷಃ ಕಥಯಾದ್ಯ ಮೇ ॥ ೩೩ ॥

ತೇತ್ರ ಬಂಧಂ ಸಮಾಯಾಂತಿ ಇಂದ್ರಜಾಲಾದಿಕಂ ತ್ವಿತಿ ।
ವದಸಿ ತ್ವಂ ನಾಹಮಸ್ಮಿ ಕರ್ತ್ರಾ ದ್ರೋಹಂ ನ ಕಾರ್ಯಕೃತ್ ॥ ೩೪ ॥

---

೩೦–೩೨. ಆಗ ವಾತಪುರೇಶ್ವರನು ತನ್ನನ್ನು ಕೃತಕೃತ್ಯನನ್ನಾಗಿ ತಿಳಿದು ಕೊಂಡು ಶಿವನು ರಾಜನ ಹತ್ತಿರಕ್ಕೆ ಒಂದದ್ದನ್ನು ಧ್ಯಾನಮಾಡುತ್ತಾ, ರಾಜನ ಹತ್ತಿರಕ್ಕೆ ತಾನೂ ಬಂದನು. ಅವನನ್ನು ನೋಡಿದ ಕೂಡಲೆ ರಾಜನಿಗೆ ಬಹಳ ಕೋಪವು ಉಂಟಾಯಿತು. "ಎಲೈ ವಾತಪುರೇಶ್ವರನೇ, ನೀನು ಬಹಳ ಚೆನ್ನಾಗಿರುವ ಕುದುರೆ ಗಳನ್ನು ತಂದುಕೊಟ್ಟಿರುತ್ತೀಯೆ. ನೀನು ಇದರಿಂದ ಇಂದ್ರಜಾಲ ಮತ್ತು ಮಹಾಜಾಲ ವಿದ್ಯೆಯನ್ನು ತೋರಿಸಿರುತ್ತೀಯೆ. ನಮ್ಮಲ್ಲಿ ಹಿಂದೆ ಇದ್ದ ಕುದುರೆಗಳೂ ಹೋದುವು. ನಗರದ ಜನರಿಗೂ ತೊಂದರೆಯಾಯಿತು," ಎಂದು ರಾಜನು ಅವನ ಸಂಗಡ ಮಾತನಾಡಿದನು.

೩೩–೩೮. ವಾತಪುರೇಶ್ವರನು ರಾಜನ ಮಾತನ್ನು ಕೇಳಿ ಸುಂದರೇಶ್ವರನನ್ನು ಧ್ಯಾನಮಾಡುತ್ತಾ, "ಎಲೈ ರಾಜನೆ, ಕುದುರೆಗಳನ್ನು ತರಿಸಿರುವುದರಲ್ಲಿ ನಾನು ಯಾವ ವಿಧವಾದ ತಪ್ಪುಕೆಲಸವನ್ನು ಮಾಡಿರುವೆನು. ಅವುಗಳು ಬಂಧನವನ್ನು

ದೃಷ್ಟಾಸ್ತ್ವಯಾ ಮಂತ್ರಿಭಿಶ್ಚ ಅಶ್ವಾಧ್ಯಕ್ಷಕರೈರಪಿ ।
ಪುರಸ್ಥಿತೈರ್ಜನೈಶ್ಚಾಪಿ ತುಷ್ಟಂ ಚ ನಿತರಾಂ ಪ್ರಭೋ ॥ ೩೫ ॥

ಧನಂ ಮಾಸ್ತು ದದಸ್ವಾಶ್ವಾನಿತಿ ಪಾಶಂ ಗೃಹೀತವಾನ್ ।
ಅಹಂ ಚ ಮೋಹಿತಸ್ತೇನ ಅಶ್ವಾಧ್ಯಕ್ಷೇಣ ಶಂಭುನಾ ॥ ೩೬ ॥

ಶ್ರುತ್ವಾಶ್ವಾನಾಂ ಲಕ್ಷಣಂ ಚ ದೃಷ್ಟ್ವಾ ಸಂತೋಷಸಂಯುತಃ ।
ಸಂಸ್ಥಾನಂ ಚ ತ್ವಯಾ ತಸ್ಯ ಕಥಂ ಕೃತಮಹೋ ನೃಪ ॥ ೩೭ ॥

ಅಹಮಶ್ವಂ ಕ್ರೀತವಾನ್ನ ಈಶ ಏವ ಕೃತಸ್ತವ ।
ಶಿವೇ ಭಕ್ತಿಯುತೋ ಯಸ್ಮಾತ್ತ್ವಂ ತಚ್ಛಂಭು ಸ್ತವೇದೃಶೀಂ ॥ ೩೮ ॥

ತಾಂ ಲೀಲಾಂ ದರ್ಶಯತ್ ಸತ್ಯಂ ಮೋಹಿತಸ್ತಸ್ಯ ಲೀಲಯಾ ।
ಇತಿ ಧೀರೋಽಬ್ರವೀನ್ಮಂತ್ರೀ ತಂ ಸ್ಮೃತ್ವಾ ಈಶದರ್ಶನಾತ್ ॥ ೩೯ ॥

---

ಹೊಂದಿರುವುದೂ ಇಂದ್ರಜಾಲವೆಂದು ನೀನು ಹೇಳುತ್ತೀಯೆ. ನಾನು ದ್ರೋಹ ಮಾಡುವ ಕಾರ್ಯವನ್ನು ಮಾಡಿದವನಲ್ಲ. ನೀನೂ, ಮಂತ್ರಿಗಳೂ, ಅಶ್ವಶಾಲೆಯ ಅಧಿಕಾರಿಗಳೂ ಸಹ ಎಲ್ಲರೂ ಕುದುರೆಗಳನ್ನು ನೋಡಿದಿರಿ. ನಗರದ ಜನರೆಲ್ಲರೂ ನೋಡಿ ಸಂತೋಷಪಟ್ಟಿರುವರು. ನೀನು 'ಎಲೈ ಪ್ರಭುವೆ, ನನಗೆ ದ್ರವ್ಯವು ಬೇಡ, ಕುದುರೆಗಳನ್ನು ಕೊಡು,' ಎಂದು ಕೇಳುತ್ತಾ ಕುದುರೆಯ ಹಗ್ಗವನ್ನು ಹಿಡಿದಿರುತ್ತೀಯೆ. ಅಶ್ವಾಧ್ಯಕ್ಷನಾದ ಶಿವನಿಂದ ನಾನೂ ಮೋಸಕ್ಕೊಳಗಾದೆನು. ಕುದುರೆಗಳ ಲಕ್ಷಣ ವನ್ನು ಕೇಳಿ ಅವುಗಳನ್ನು ನೋಡಿ ನೀನು ಸಂತೋಷವನ್ನು ಹೊಂದಿರುತ್ತೀಯೆ. ಅಶ್ವಗಳನ್ನು ನೀನು ಯಾತಕ್ಕಾಗಿ ಇಲ್ಲಿ ನಿಲ್ಲಿಸಿಕೊಂಡಿರುತ್ತೀಯೆ. ಅಲ್ಲದೆ ನಾನು ಕುದುರೆಗಳನ್ನು ಕೊಂಡುಕೊಳ್ಳಲಿಲ್ಲ. ಜಗದೀಶ್ವರನು ಅವುಗಳನ್ನು ನೀನು ಕೊಂಡು ಕೊಳ್ಳುವಂತೆ ಮಾಡಿರುವನು. ನೀನು ಶಿವನಲ್ಲಿ ಭಕ್ತಿಯುಳ್ಳವನಾಗಿರುತ್ತೀಯೆ. ಆದ್ದರಿಂದ ಶಿವನು ಈ ರೀತಿಯಾದ ತನ್ನ ಲೀಲೆಯನ್ನು ನಿನಗೆ ತೋರಿಸಿದನು. ಇದರಿಂದ ನಿಜವಾಗಿಯೂ ನೀನು ಮೋಸಕ್ಕೊಳಗಾಗಿರುತ್ತೀಯೆ," ಎಂದು ಧೈರ್ಯವಾಗಿ ಉತ್ತರವನ್ನು ಹೇಳಿದನು.

೩೯–೪೨. ಆಗ ರಾಜನು ವಾತಪುರೀಶ್ವರನು ಹೇಳಿದಂತೆ ಪರಮೇಶ್ವರನ ಲೀಲೆಯನ್ನು ನೋಡುವ ಮೂಲಕವಾಗಿ ಅವನ ದರ್ಶನವು ತನಗೆ ಉಂಟಾದ ಕಾರಣ

ಈಶ ಮಾಯಾಮೋಹಿತಶ್ಚಾ ಪ್ಯಬ್ರವೀತ್ತಂ ನೃಪಃ ಪುನಃ ।
ತೇ ತುರಂಗಾ ಶಿವಾ ಭೂತ್ವಾ ಮಂದುರಾಸು ಪುರಸ್ಸ್ಥಿತಾನ್ ॥ ೪೦ ॥

ಮಂದರಾಚಲಸಂಕಾಶಾನ್ ಮಹಾಮೇರುಸಮಾನಪಿ ।
ಬಡಬಾನಲತುಲ್ಯಾಂಶ್ಚ ನಾತ್ಯುಚ್ಚೈಶ್ಶ್ರವಸಾನಪಿ ॥ ೪೧ ॥

ದದಂಶುರಶ್ವಾ ನಖಿಲಾಂಸ್ತೇ ಪ್ಯುಚ್ಛಿದ್ಯ ಸ್ವಶೃಂಖಲಾಃ ।
ತಾಭಿಃ ಶಿವಾಭಿಸ್ಸಹಿತಾ ಗತಾಃ ಸದ್ಯೋಽಟವೀಂ ಪ್ರತಿ ॥ ೪೨ ॥

ಏವಮುಕ್ತ್ವಾ ತು ಭೂಪಾಲೋ ನಿತರಾಂ ಕ್ರುದ್ಧಮಾನಸಃ ।
ಅತ್ಯಂತರಕ್ತನಯನಃ ಪ್ರಾಹ ಸ್ವಾಜ್ಞಾಕರಾನ್ಭಟಾನ್ ॥ ೪೩ ॥

ತುರಂಗಾಹರಣಾರ್ಥಂ ಚ ಮಯಾ ದತ್ತಂ ಧನಂ ಪುರಾ ।
ತಾವತ್ಸರ್ವಂ ಪ್ರಸಹ್ಯಾದ್ಯ ಸರ್ವಂ ಗೃಹ್ಣೀತ ಸತ್ವರಂ ॥ ೪೪ ॥

ಇತಿ ರಾಜ್ಞೋ ವಚಃ ಶ್ರುತ್ವಾ ತೇಽಪಿ ನಿರ್ದಯಮಾನಸಾಃ ಃ
ಬಧ್ವಾ ವಾತಪುರೇಶಾನಂ ಪೂರ್ವವದ್ದಂಡಯಂತಿ ಹಿ ॥ ೪೫ ॥

---

ತಾನು ಮೋಸಕ್ಕೆ ಒಳಗಾದೆನೆಂದು ತಿಳಿದುಕೊಂಡನು ಅನಂತರದಲ್ಲಿ ವಾತಪುರೇಶ್ವರನ ಮಾತಿಗೆ ಉತ್ತರವನ್ನು ಕೊಟ್ಟನು. "ಶಿವನ ಮಾಯೆಯಿಂದ ನಾನು ಮೋಸಗೊಂಡೆನು. ಹೊಸ ಕುದುರೆಗಳು ನರಿಗಳಾಗಿ ಅಶ್ವಶಾಲೆಯಲ್ಲಿ ಸೇರಿದವು. ಅವುಗಳು ಮಂದರಪರ್ವತದಂತೆಯೂ, ಮಹಾಮೇರುಪರ್ವತದಂತೆಯೂ, ಬಡಬಾಗ್ನಿಯ ಹಾಗೂ, ಉಚ್ಚೈಶ್ರವಸ್ಸೆಂಬ ಕುದುರೆಯ ಹಾಗೂ ನಿಮ್ಮಾದಿಯಿಂದ ಇರುವ ನಮ್ಮ ಕುದುರೆಗಳನ್ನು ತೀಕ್ಷ್ಣವಾದ ಹಲ್ಲುಗಳಿಂದ ಕಚ್ಚಿರುವುವು. ಆದ್ದರಿಂದ ಮೊದಲಿನಿಂದಲೂ ನಮ್ಮಲ್ಲಿ ಸುಖವಾಗಿದ್ದ ಕುದುರೆಗಳೆಲ್ಲವೂ ಸರಪಳಿಗಳನ್ನು ಕಿತ್ತುಕೊಂಡು, ಆ ನರಿಗಳೊಡನೆ ಆಗಲೇ ಕಾಡಿಗೆ ಓಡಿಹೋದುವು" ಎಂದು ರಾಜನು ಹೇಳಿದನು.

೪೩–೪೬. ಅರಿಮರ್ದನ ಪಾಂಡ್ಯರಾಜನಿಗೆ ಹೀಗೆ ಹೇಳುತ್ತಿರುವಾಗಲೇ ಕೋಪವು ಹೆಚ್ಚಾಗಿ ಬಂತು. ಅದರಿಂದ ಅವನು ಬಹಳ ಕೆಂಪಾದ ಕಣ್ಣುಳ್ಳವನಾಗಿ, ತನ್ನ ಅಪ್ಪಣೆಯನ್ನು ನಡಸುವ ಸೇವಕರನ್ನು ಕರೆದು, "ಕುದುರೆಗಳನ್ನು ತರುವುದಕ್ಕಾಗಿ ಮೊದಲು ನಾನು ಕೊಟ್ಟಿರುವ ಧನವನ್ನೆಲ್ಲವನ್ನೂ ಇವನಿಂದ ಬೇಗನೆ ನಿರ್ಬಂಧದಿಂದ

ನಿರ್ಬಂಧ ಮಖಿಲಂ ಸೋಢು ಮಶಕ್ತಸ್ಸ ಸ್ವಶಕ್ತಿತಃ ।
ಸರ್ವಾಪತ್ಪರಿಹರ್ತಾರಂ ಸುಂದರೇಶ್ವರಮೀಶ್ವರಂ ॥ ೪೬ ॥

ಶ್ರೀವಾಚಕಗಣೈ ರ್ನವ್ಯೈರನೇಕೈ ರ್ಭುಕ್ತಿಮುಕ್ತಿದೈಃ ।
ಪ್ರಸ್ತುತ್ಯ ಪರಯಾ ಭಕ್ತ್ಯಾ ತ್ವಾರ್ಯಾಮೇವಮಥಾಬ್ರವೀತ್ ॥ ೪೭ ॥

" ತುರಗಾಸ್ಸೃಗಾಲರೂಪಾ ಯಾತಾ ರಾಜಾಪಿ ಬಾಧತೇ ದ್ರವಿಣಂ ।
ವಿತರೇತಿ ಮೇ ವಿಶೇಷಾದೀಶ ಭವಾನೇವ ಕೇವಲಂ ಶರಣಂ ॥ ೪೮ ॥

ಇತಿ ಸ್ತುತಸ್ಸುಂದರೇಶಃ ಪಾವನೈಃ ಪರಮಾದ್ಭುತೈಃ ।
ಸ್ತೋತ್ರೈಃ ವಾತಪುರೇಶೇನ ಕೃತೈಃ ಪ್ರೀತಃ ಪರಾತ್ಪರಃ ॥ ೪೯ ॥

---

ತೆಗೆದುಕೊಳ್ಳಿರಿ" ಎಂದು ಅವರಿಗೆ ಅಪ್ಪಣೆಮಾಡಿದನು. ಅವರು ರಾಜನ ಈ ಪ್ರಕಾರವಾದ ಅಪ್ಪಣೆಯನ್ನು ಕೇಳಿದ ಕೂಡಲೆ, ಕೊಂಚವೂ ದಯೆಯಿಲ್ಲದವರಾಗಿ ಮಂತ್ರಿಯಾದ ವಾತಪುರೇಶ್ವರನನ್ನು ಕಟ್ಟಿ ಮೊದಲಿನ ಹಾಗೆಯೇ ಶಿಕ್ಷೆಮಾಡಿದರು. ಆಗ ಅವನು ಅವರ ನಿರ್ಬಂಧವನ್ನು ಎಲ್ಲವನ್ನೂ ತಡೆಯುಲು ಸಾಮರ್ಥ್ಯವಿಲ್ಲದವನಾಗಿ ವಿಪತ್ತುಗಳೆಲ್ಲವನ್ನೂ ಪರಿಹರಿಸುವ ಪ್ರಭುವಾದ ಸುಂದರೇಶ್ವರನನ್ನು ಸ್ತೋತ್ರ ಮಾಡಿದನು. ಅವನು ಸ್ತುತಿಮಾಡಿದ ಪದ್ಯಗಳು ಹೊಸದಾಗಿಯೂ, ಭುಕ್ತಿಮುಕ್ತಿಗಳನ್ನುಂಟುಮಾಡುವುವುಗಳಾಗಿಯೂ, ಅನೇಕ ವಿಧವಾದ ಶ್ರೀ ವಾಚಕಸ್ತೋತ್ರಗಳಿಂದ ಕೂಡಿರುವುವುಗಳಾಗಿಯೂ ಇದ್ದುವು. ಅವನು ಈ ಪ್ರಕಾರವಾದ ಪದ್ಯಗಳನ್ನು ಉತ್ತಮವಾದ ಭಕ್ತಿಯುಳ್ಳ ಮನಸ್ಸಿನಿಂದ ಹೇಳುತ್ತಿದ್ದನು.

೪೭–೪೯. ಅನಂತರದಲ್ಲಿ ವಾತಪುರೇಶ್ವರನು, "ಎಲೈ ಜಗದೀಶ್ವರನೇ, ಕುದುರೆಗಳು ನರಿಗಳ ಆಕಾರವನ್ನು ಹೊಂದಿ ಓಡಿದುವು. ರಾಜನು ದ್ರವ್ಯವೆಲ್ಲವನ್ನೂ ಕೊಡು ಎಂದು ಬಹಳವಾಗಿ ಪೀಡಿಸುತ್ತಿರುವನು. ಈಗ ನೀನು ಮಾತ್ರವೇ ನನಗೆ ರಕ್ಷಕನಾಗಿರುತ್ತೀಯೆ" ಎಂದು ಅರ್ಥವುಳ್ಳ ಪದ್ಯವನ್ನು ಹೇಳಿ ಸ್ತುತಿಮಾಡಿದನು. ಪವಿತ್ರವಾದ ಬಹಳ ಆಶ್ಚರ್ಯಕರವಾದ ವಾತಪುರೀಶ್ವರನು ಮಾಡಿರುವ ಸ್ತೋತ್ರಗಳನ್ನು ಕೇಳಿದ ಪರಮೇಶ್ವರನು ಸಂತೋಷವುಳ್ಳವನಾಗಿ ಅವನ ಸಂಕಟವನ್ನು ಪರಿಹರಿಸುವುದಕ್ಕಾಗಿ ಒಂದು ಉಪಾಯವನ್ನು ಯೋಚಿಸಿದನು. ಆ ಉಪಾಯವು ಹೊಳೆಯಲ್ಲಿ ನೀರಿನ ಪ್ರವಾಹವು ಬಹಳವಾಗಿ ಬರುವಂತೆ ಮಾಡುವುದಾಗಿತ್ತು.

ಅಥೈವಂ ಚಿಂತಯಾಮಾಸ ತಸ್ಯಾರ್ತಿಹರ ಈಶ್ವರಃ ।
ಉಪಾಯಂ ಕಿಂಚಿದಾಶ್ಚರ್ಯಂ ನಿಮ್ನಗಾನಯನಾತ್ಮಕಂ ॥ ೫೦ ॥

ರಕ್ಷಣಾರ್ಥಂ ಮಮ ಹಿ ಮಾಂ ಸ್ವಸ್ಯ ಭಕ್ತಸ್ಯ ಲೀಲಯಾ ।
ಅಥ ವೇಗವತೀಮೇವಂ ಚೋದಯಾಮಾಸ ಶಂಕರಃ ॥ ೫೧ ॥

ಆಪಗೇ ಶೀಘ್ರಮಾಗಚ್ಛ ಜಲೈಃ ಕೂಲಂಕಷೈರ್ಭೃಶಂ ।
ಮಧುರಾವೀಥಿಷು ಜಲಂಪ್ರವಾಹಯ ಭಯಾವಹಂ ॥ ೫೨ ॥

ಇತಿ ಬ್ರುವಾಣೇ ಗೌರೀಶೇ ವೇಗಾದ್ವೇಗವತೀ ನದೀ ।
ಕ್ಷಣೇನ ರೋದಸೀ ಪೂರ್ಯೈರಂಭಸಾ ಮತ್ಯವಾಹಯತ್ ॥ ೫೩ ॥

ಅತ್ಯುತ್ತುಂಗೈಸ್ತರಂಗೈಶ್ಚ ಪ್ರೋಲ್ಲಸಚ್ಛಫರೀಗಣೈಃ ।
ವೇಗಾಕೃಷ್ಟಮಹಾವೃಕ್ಷೈರ್ಮಹಾವಾತೈರನೇಕಶಃ ॥ ೫೪ ॥

---

೫೦-೫೩. ತನ್ನ ಭಕ್ತನನ್ನು ರಕ್ಷಿಸುವುದಕ್ಕಾಗಿ ತನ್ನ ಮಹಿಮೆಯಿಂದ ಈಶ್ವರನು ವಿನೋದದಿಂದ, "ವೇಗವತೀನದಿಯೇ, ನೀನು ಎರಡು ದಡಗಳೂ ತುಂಬಿ ಹರಿಯುವ ಪ್ರವಾಹದಿಂದ ಹರಿಯುತ್ತಾ ಮಧುರಾನಗರದ ಬೀದಿಗಳಲ್ಲಿ ಎಲ್ಲರಿಗೂ ಭಯವಾಗುವ ಹಾಗೆ ಪ್ರವಹಿಸು" ಎಂದು ವೇಗವತೀನದಿಗೆ ಅಪ್ಪಣೆಮಾಡಿದನು. ಗೌರೀಪತಿಯಾದ ಪರಮೇಶ್ವರನು ಹೀಗೆ ಅಪ್ಪಣೆಯನ್ನು ಮಾಡಲು, ವೇಗವತೀ ನದಿಯು ಒಂದು ಕ್ಷಣದಲ್ಲಿ ಎರಡು ದಡವನ್ನೂ ಮೀರಿ ಹರಿಯಲು ಪ್ರಾರಂಭಿಸಿತು.

೫೪-೫೮. ಆಗ ವೇಗವತೀ ನದಿಯ ಪ್ರವಾಹದ ತೆರೆಗಳು ಬಹಳ ಎತ್ತರವಾಗಿ ಬರುತ್ತಿದ್ದವು. ಮೇಲೆ ಮೇಲೆ ಹಾರುತ್ತಿರುವ ಮೀನಿನ ಸಮೂಹಗಳೂ, ಬಹಳವಾಗಿ ದ್ದುವು. ದೊಡ್ಡ ದೊಡ್ಡ ಮರಗಳು ವೇಗದಿಂದ ಕೊಚ್ಚಿಕೊಂಡು ಬರುತ್ತಿದ್ದವು. ಬಿರುಗಾಳಿಗಳು ಬೀಸುತ್ತಿದ್ದುವು. ನೊರೆಯ ಸಮೂಹದಿಂದ ಕೂಡಿದ ಪ್ರವಾಹವು ಮಧುರಾ ನಗರದ ಬೀದಿಯಲ್ಲಿ ಹರಿಯುತ್ತಾ ಪಟ್ಟಣದಲ್ಲಿ ವಾಸಮಾಡುವ ಜನರಿಗೆ ಬಹಳ ಭಯವನ್ನುಂಟುಮಾಡಿತು. ರಾಜನ ಅಪ್ಪಣೆಯಂತೆ ನಡೆಯುವ ಸೇವಕರು ಮಂತ್ರಿಯಾದ ವಾತಪುರೇಶ್ವರನನ್ನು ಪೀಡಿಸುತ್ತಾ ಇದ್ದರು. ಆಗ ಮಧುರಾನಗರ

ಫಣಿಭಿ ರ್ಭೀಷಣೈಃ ಘೋರೈ ಸ್ಸಹಿತಾ ಸರಿತಾಂ ವರಾ ।
ಪುರವೀಥೀಗತಾ ಭೂತ್ವಾ ಪೌರಾಣಾಂ ಸ್ಯಾತ್ಕರೋದ್ಭಯಂ　　॥ ೫೫ ॥

ಯೇ ಪೀಡಯಂತಿ ಸಚಿವಂ ರಾಜಾಜ್ಞಾಕಾರಿಣೋ ಭಟಾಃ ।
ತಂ ವಿಹಾಯ ಯಯು ಸ್ತೇಪಿ ನದ್ಯಂಭೋಜಾತಸಂಭ್ರಮಾಃ　　॥ ೫೬ ॥

ಸ್ವೇಷ್ಟಜಾಯಾಪುತ್ರರಕ್ಷಾಕಾರಿಣ ಸ್ತ್ವನ್ಗೃಹಾ ನ್ಪ್ರತಿ ।
ಯದಾ ಜನಾ ಭಯಂ ಪ್ರಾಪು ರ್ಮಧುರಾಪುರವಾಸಿನಃ　　॥ ೫೭ ॥

ಪೀಡಾಕರಾ ಅಪಿ ಭಟಾ ಸ್ತ್ಯಕ್ತ್ವಾತ್ಮಾನಂ ಗೃಹಾನ್ಗತಾಃ ।
ತದಾ ನಿರ್ಭಯತಾಂ ಪ್ರಾಪ್ಯ ಮಂತ್ರೀ ವಾತಪುರೇಶ್ವರಃ　　॥ ೫೮ ॥

ಪುನಶ್ಚಿತ್ರೈರ್ವಾಚಕೈರನ್ಯೈಃ ಸ್ತುತ್ವಾ ಸುಂದರನಾಯಕಂ ।
ಸರ್ವಾಲಂಕಾರಸಂಯುಕ್ತಾಂ ಸಾಂಬಂ ಧ್ಯಾತ್ವಾ ಹೃದಂಬುಜೇ　　॥ ೫೯ ॥

ಕಾರಾಗೃಹಾನ್ಮುದಾ ಮುಕ್ತಸ್ಸುಂದರೇಶಾಲಯಂ ಗತಃ ।
ಸ್ನಾತ್ವಾ ಚ ಸ್ವರ್ಣಪದ್ಮಿನ್ಯಾಂ ಪರಿಧಾಯಾಂಬರಂ ಸ್ವಕಂ　　॥ ೬೦ ॥

---

ವಾಸಿಗಳೆಲ್ಲರೂ ತಮ್ಮ ತಮ್ಮ ಪತ್ನೀಪುತ್ರರನ್ನು ರಕ್ಷಿಸಲು ಉದ್ದೇಶವುಳ್ಳವರಾಗಿ ಪ್ರವಾಹದ ಭಯದಿಂದ ಮನೆಗಳಿಗೆ ಹೋಗುತ್ತಿರುವುದನ್ನು ನೋಡಿದಕಾರಣ ಅವರು ಅವನಿಗೆ ತೊಂದರೆ ಮಾಡುವುದನ್ನು ಬಿಟ್ಟರು. ಅವರು ಹೊಳೆಯ ಪ್ರವಾಹದ ಭಯದಿಂದ, ಶಿಕ್ಷಾರ್ಹನಾದ ಅವನನ್ನು ಬಿಟ್ಟು ಓಡಿಹೋದರು. ಮಂತ್ರಿಯಾ ವಾತಪುರೇಶ್ವರನಿಗೆ ತೊಂದರೆಯು ತಪ್ಪಿತು.

೫೯-೬೧. ಆಗ ಅವನು ಸುಂದರೇಶ್ವರನನ್ನು ಬೇರೆಯ ಸ್ತೋತ್ರಗಳಿಂದ ಸ್ತುತಿಮಾಡಿದನು. ಎಲ್ಲಾ ವಿಧವಾದ ಅಲಂಕಾರದಿಂದ ಕೂಡಿರುವ ಮೀನಾಕ್ಷೀ ಸಹಿತನಾದ ಸುಂದರೇಶ್ವರನನ್ನು ತನ್ನ ಹೃದಯದಲ್ಲಿ ಧ್ಯಾನಮಾಡುತ್ತಾ ಸೆರೆಮನೆಯಿಂದ ಹೊರಗಡೆಗೆ ಬಂದು ಸಂತೋಷದಿಂದ ಸುಂದರೇಶ್ವರನ ದೇವಾಲಯವನ್ನು ಸೇರಿದನು. ಅನಂತರದಲ್ಲಿ ಅವನು ಸ್ವರ್ಣಪದ್ಮಿನಿಯಲ್ಲಿ ಸ್ನಾನಮಾಡಿ, ತನ್ನ ವಸ್ತ್ರ

ಭೂತಿರುದ್ರಾಕ್ಷಧಾರೀ ಚ ನಿತ್ಯಕೃತ್ಯಂ ವಿಧಾಯ ಚ ।
ತೀರಸ್ಥಂ ವಿಘ್ನರಾಜಂ ಚ ಸರ್ವಸಿದ್ಧಿಪ್ರದಂ ನೃಣಾಂ ॥ ೬೦ ॥

ನತ್ವಾ ಸ್ತುತ್ವಾ ಗೃಹಂ ಚಾಪಿ ಬರ್ಹಿವಾಹಂ ಷಡಾನನಂ ।
ನತ್ವಾ ಸ್ತುತ್ವಾ ಪ್ರಾರ್ಥಯಿತ್ವಾ ಶ್ರೀಮೀನಾಕ್ಷೀಂ ವಿಲೋಕ್ಯ ಚ ॥ ೬೨ ॥

ನತ್ವಾ ಭಕ್ತ್ಯಾ ಸ್ತುತಿಂ ಕೃತ್ವಾ ರಕ್ಷಮಾ ಮಿತಿ ಚಾರ್ಥಯನ್ ।
ಪ್ರದಕ್ಷಿಣತ್ರಯಂ ಕೃತ್ವಾ ಪ್ರಾದಕ್ಷಿಣ್ಯೇನ ಸಾಂಜಲಿಃ ॥ ೬೩ ॥

ವೃಷಭಾಗ್ರೇ ನಮಸ್ಕೃತ್ಯ ತ್ರಿವಾರಂ ಭಕ್ತಿಸಂಯುತಃ ।
ದ್ವಾರಪಾಲಾನ್ನಮಸ್ಕೃತ್ಯ ನಂದಿಕೇಶಂ ಪ್ರಣಮ್ಯ ಚ ॥ ೬೪ ॥

ಸ್ವ ಈಶಾಂ ಚ ನಮಸ್ಕೃತ್ಯ ಪ್ರವಿಶ್ಯಾಲಯಮೇವ ಚ ।
ನಟೇಶಂ ಚ ನಮಸ್ಕೃತ್ಯ ಚಂದ್ರಶೇಖರಪೂರ್ವಕಂ ॥ ೬೫ ॥

---

ಗಳನ್ನು ಧರಿಸಿ, ಭಸ್ಮರುದ್ರಾಕ್ಷಧಾರಿಯಾಗಿ, ನಿತ್ಯಕರ್ಮಗಳನ್ನು ಮಾಡಿಕೊಂಡು, ತೀರದಲ್ಲಿರುವ ಜನರೆಲ್ಲರಿಗೂ ಸಿದ್ಧಿಯನ್ನು ಕೊಡುತ್ತಿರುವ ವಿಘ್ನೇಶ್ವರನಿಗೆ ನಮಸ್ಕಾರಮಾಡಿದನು.

೬೨-೬೫. ಅನಂತರದಲ್ಲಿ ಅವನು ನವಿಲನ್ನು ವಾಹನವನ್ನಾಗಿ ಹೊಂದಿರುವ ಷಣ್ಮುಖನಿಗೂ ನಮಸ್ಕಾರಮಾಡಿ, ಸ್ತೋತ್ರಗಳನ್ನು ಹೇಳಿದನು. ಮೀನಾಕ್ಷೀ ದೇವಿಯನ್ನು ದರ್ಶನಮಾಡಿ, ನಮಸ್ಕರಿಸಿ, ಸ್ತೋತ್ರಮಾಡಿ, "ಭಕ್ತಿಯಿಂದ ರಕ್ಷಿಸು" ಎಂದು ಪ್ರಾರ್ಥನೆ ಮಾಡಿದನು. ಆಮೇಲೆ ಅವನು ಮೂರು ಪ್ರದಕ್ಷಿಣೆಯನ್ನುಮಾಡಿ ಪ್ರದಕ್ಷಿಣೆಯ ಕ್ರಮದಿಂದಲೂ ವೃಷಭದ ಮುಂದುಗಡೆಯಲ್ಲಿ ಮೂರು ಸಾರಿ ಭಕ್ತಿಯಿಂದ ನಮಸ್ಕರಿಸಿದನು. ದ್ವಾರಪಾಲಕರು, ನಂದಿಕೇಶ, ಸ್ವಈಶಾ, ಎಂಬ ದೇವತೆ, ಇವರನ್ನು ನಮಸ್ಕರಿಸಿ, ದೇವಾಲಯದ ಒಳಗಡೆಗೆ ಹೋಗಿ ನಟೇಶವಿಗ್ರಹ, ಚಂದ್ರಮೌಳೀಶ್ವರ ವಿಗ್ರಹಗಳಿಗೆ ನಮಸ್ಕಾರ ಮಾಡಿದನು.

ದೃಷ್ಟ್ವಾ ತನ್ನಟನಂ ಸಮ್ಯಕ್ ದ್ವಾದಶಾಂತಸ್ಥಲೇಽಮಲೇ ।
ಕೃತಾರ್ಥೋಽಸ್ಮೀತಿ ವಿಜ್ಞಾಪ್ಯ ಸ್ವೇಷ್ಟಂ ಸಂಪ್ರಾರ್ಥ್ಯ ತತ್ರ ತಂ ॥ ೬೬ ॥

ಮಹಾಮಂಟಪಮಾಸಾದ್ಯ ಚಾಂತರ್ಗೃಹಮವಾಪ್ಯ ಸಃ ।
ದ್ವಾರಪಾಲಾನ್ನಮಸ್ಕೃತ್ಯ ತತ್ರಾಪಿ ಗಣಪಂ ಗುಹಂ ॥ ೬೭ ॥

ದೃಷ್ಟ್ವಾದಿಲಿಂಗಮಮಲಂ ಸುಂದರೇಶಸ್ಯ ಭಕ್ತಿತಃ ।
ಆನಂದಸಾಗರೇ ಮಗ್ನಸ್ತ್ವಾನಂದ ಜಲಲೋಚನಃ ॥ ೬೮ ॥

ಪುಲಕಾಂಚಿತಸರ್ವಾಂಗೋ ಲಿಂಗಮಧ್ಯೇಂಬಿಕಾಯುತಂ ।
ಧ್ಯಾತ್ವಾ ವಿಲೋಕ್ಯಭಕ್ತೇಷ್ಟದಾಯಕಂ ಸನ್ನಿಧೌ ಸ್ಥಿತಃ ॥ ೬೯ ॥

॥ ಅಗಸ್ತ್ಯ ಉವಾಚ ॥

ಶ್ರೀಹಾಲಾಸ್ಯಪತೇಃ ಶಂಭೋಃ ಷಷ್ಟಿಸಂಖ್ಯಾಸು-ಪೂರಿಣೀ ।
ಲೀಲಾ ಮಯಾ ವರ್ಣಿತಾ ಚ ಪಾಪತೂಲಾನಲೋಪಮಾ ॥ ೭೦ ॥

---

೬೬-೬೯ ನಟರಾಜನು ನಿರ್ಮಲವಾದ ದ್ವಾದಶಾಂತ ಸ್ಥಳದಲ್ಲಿ ಆಚರಿಸುವ ನೃತ್ಯವನ್ನು ನೋಡಿ ಕೃತಾರ್ಥನಾದೆನೆಂದು ವಿಜ್ಞಾಪಿಸಿಕೊಂಡು, ತನ್ನ ಇಷ್ಟವು ನೆರವೇರುವುದಕ್ಕಾಗಿ ಪ್ರಾರ್ಥನೆ ಮಾಡಿಕೊಂಡನು. ಅನಂತರದಲ್ಲಿ ವಾತಪುರೇಶ್ವರನು ಮಹಾಮಂಟಪವನ್ನೂ, ಅದರಿಂದ ಗರ್ಭಗೃಹವನ್ನೂ ಪ್ರವೇಶಿಸಿದನು. ದ್ವಾರ ಪಾಲಕರು, ಗಣಪತಿ, ಷಣ್ಮುಖ, ಇವರಿಗೆ ನಮಸ್ಕಾರ ಮಾಡಿದನು. ಅನಂತರದಲ್ಲಿ ಅವನು ಪವಿತ್ರನಾದ ಸುಂದರೇಶ್ವರ ಶಿವಲಿಂಗವನ್ನು ಭಕ್ತಿಯಿಂದ ದರ್ಶನಮಾಡಿದನು. ಅದರಿಂದ ಅವನಿಗೆ ಬಹಳ ಆನಂದವಾಯಿತು. ಆನಂದ ಭಾಷ್ಪವನ್ನು ಕಣ್ಣಿನಿಂದ ಸುರಿಸುತ್ತಾ, ರೋಮಾಂಚದಿಂದ ಕೂಡಿರುವ ಶರೀರವುಳ್ಳವನಾಗಿ, ಸುಂದರೇಶ್ವರ ಶಿವ ಲಿಂಗದ ಮಧ್ಯದಲ್ಲಿ ಪಾರ್ವತೀ ಸಹಿತನಾದ, ಭಕ್ತರ ಇಷ್ಟವನ್ನು ಕೊಡುವ, ಪರಮೇಶ್ವರನನ್ನು ಧ್ಯಾನಮಾಡುತ್ತಾ ಸುಂದರೇಶ್ವರ ಶಿವಲಿಂಗದ ಸಮೀಪದಲ್ಲಿಯೇ ಇದ್ದನು

೭೦-೭೧. ಅಗಸ್ತ್ಯಋಷಿಯು ಹೇಳಿದನು :—"ಹಾಲಾಸ್ಯಕ್ಷೇತ್ರಕ್ಕೆ ಅಧಿಪ ನಾದ ಶಿವನು ಆಚರಿಸಿದ ಅರವತ್ತೆಂಟನೆಯ ಲೀಲೆಯನ್ನು ವರ್ಣಿಸಿರುವೆನು.

ಏತಾಂ ಲೀಲಾಂ ಮಹಾಪುಣ್ಯಾಂ ಶ್ರುತವಾನ್ಯೋ ಮಹೀತಲೇ ।
ಇಹ ಸರ್ವಾಂ ಮಹೀಂ ಭುಕ್ತ್ವಾ ಶಂಭೋಃ ಸಾರೂಪ್ಯಮೇಷ್ಯತಿ ॥ ೭೧ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯ ಸಂಹಿತಾಯಾ ಹಾಲಾಸ್ಯ
ಮಾಹಾತ್ಮ್ಯೇ ವೇಗವತೀಜಲಾಕರ್ಷಣಂ ನಾಮ
ಷಟ್‌ಷಷ್ಠಿತಮೋಽಧ್ಯಾಯಃ

---

ಈ ಲೀಲೆಯು ಪಾಪರಾಶಿಯನ್ನು ಪರಿಹರಿಸುವುದು. ಬಹಳ ಪುಣ್ಯಕರವಾದ ಈ ಲೀಲೆಯನ್ನು ಕೇಳುವವನು ಈ ಭೂಮಿಯೆಲ್ಲವನ್ನೂ ಪರಿಪಾಲಿಸಿ, ಶಿವನ ಸಾರೂಪ್ಯವನ್ನು ಹೊಂದುವನು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯ ಹಾಲಾಸ್ಯ
ಮಹಿಮೆಯಲ್ಲಿ ವೇಗವತೀ ಜಲಾಕರ್ಷಣವೆಂಬ ಹೆಸರುಳ್ಳ
ಅರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಸಪ್ತಷಷ್ಟಿತಮೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

ಧತ್ರೇ ಪಿಷ್ಟಾಯ ಮೃದ್ಭಾರಂ ಯಯಾ ಸುಂದರನಾಯಕಃ ।
ತಾಂ ಲೀಲಾಮಭಿಧಾಸ್ಯಾಮಿ ವಿಚಿತ್ರಾಂ ವಿವಿಧೇಷ್ಟದಾಂ ॥ ೧ ॥

ಪಯೋಭಾರ್ವೈರ್ವೇಗವತ್ಯಾ ಮಧುರಾಪುರವಾಸಿನಃ ।
ಪೀಡಿತಾಶ್ಚ ಪ್ರಭೀತಾಶ್ಚ ಜನಾಶ್ಚಕ್ರುರ್ಮಹಾರವಂ ॥ ೨ ॥

ಅಂತಃಪುರಗತೋ ರಾಜಾ ಪಾಂಡ್ಯೋಽಪ್ಯಾಕರ್ಣ್ಯ ತದ್ಧ್ವನಿಂ ।
ಕಿಮಿದಂ ಭಯಮಾಪನ್ನಂ ಪೌರಾಣಾಂ ಸಂಕುಲಾತ್ಮನಾಂ ॥ ೩ ॥

---

### ಅರವತ್ತೇಳನೆಯ ಅಧ್ಯಾಯವು

೧–೪. ಸುಂದರೇಶ್ವರನು ಆಶ್ಚರ್ಯಕರವಾಗಿರುವ ಹಾಗೆ ಹಿಟ್ಟನ್ನು ತಿಂದು ಮಣ್ಣನ್ನು ಹೊತ್ತಿರುವ, ಭಕ್ತರ ಇಷ್ಟಸಿದ್ಧಿಯನ್ನುಂಟುಮಾಡುವ, ಲೀಲೆಯನ್ನು ವರ್ಣಿಸುವೆನು. ವೇಗವತೀನದಿಯ ಪ್ರವಾಹದಿಂದ ಮಧುರಾನಗರದ ಜನರು ತೊಂದರೆಪಡುತ್ತಾ ಭಯದಿಂದ ಕೂಗುತ್ತಿದ್ದರು. ಅಂತಃಪುರದಲ್ಲಿರುವ ಪಾಂಡ್ಯರಾಜನು ಆ ಧ್ವನಿಯನ್ನು ಕೇಳಿದನು. ನಗರದ ಜನರೆಲ್ಲರೂ ಒಟ್ಟಿಗೆ ಸೇರಿ ಆ ಪ್ರಕಾರವಾಗಿ ಕೂಗುತ್ತಿದ್ದರು ಸಂಕಟದಿಂದ ಹಾಹಾಕಾರ ಮಾಡುತ್ತಿದ್ದರು. " ದೊಡ್ಡ ವಿಪತ್ತು

**ಅಭೂದಾರ್ತಸ್ವರೋ ಹಾ ಹಾ ಹೇತಿ ಮತ್ವಾ ಮಹಾಮತಿಃ ।**
**ನಿವೃತ್ಯಾಂತಪುರಾತ್ತೂರ್ಣಂ ಪುರೋವೇಗವತೀಭವಂ ॥ ೪**

**ಅಪಶ್ಯತ್ಪುರಥೀಥೀಷು ಪ್ರವೃದ್ಧಂ ಪುರತೋ ಜಲಂ ।**
**ತೀರಮುಲ್ಲಂಘ್ಯ ಚಾಯಾತಿ ಜಲಸ್ರೋತ ಇತೀರಿತೇ ॥ ೫**

**ನದೀಕೂಲಂ ಬಂಧಯಿತುಮುನ್ನುನ್ನತಮಶೇಷಕಂ ।**
**ಸಹಸಾ ಚೋದಯಾಮಾಸ ಸಚಿವಾನಥ ಭೂಪತಿಃ ॥ ೬**

**ತೇ ನದೀತೀರಮಾಸಾದ್ಯ ಶಾಸನಾತ್ಪಾಂಡ್ಯಭೂಪತೇಃ ।**
**ವೋಢಾರಃ ಕರ್ಷಕಾ ನಾಸ್ತಿ ಪುರೇದಾನೀ ಮಿತೀರಿತೇ ॥ ೭**

**ವಿಭಜ್ಯ ಚೋನ್ನತಂ ಕಾರ್ಯಂ ಪೌರಾಣಾಂ ಗೃಹಮೇಧಿನಾಂ ।**
**ನದೀತೀರಂ ಚೋನ್ನತತ್ವಾದುನ್ನತಸ್ಸರ್ವಮೇವ ಹಿ ॥ ೮**

---

ಈಗ ನನ್ನ ಪ್ರಜೆಗಳಿಗೆ ಬಂದಿರುವುದು" ಎಂಬುದಾಗಿ ಅವನು ತಿಳಿದನು. ಅಂತಃ ದಿಂದ ಬೇಗನೆ ಹೊರಗಡೆ ಬಂದನು. ಕೂಡಲೆ ಅವನು ವೇಗವತೀ ನದಿಯ ಹೆಚ್ಚಾ ಪ್ರವಾಹವನ್ನು ನೋಡಿದನು.

೫–೮. ಮಧುರಾನಗರದ ಬೀದಿಗಳಲ್ಲಿ ವೇಗವತೀನದಿಯು ಪ್ರವಾ ದಡವನ್ನು ಮೀರಿ ಹರಿಯುತ್ತಿತ್ತು. ಈ ಪ್ರವಾಹವನ್ನು ನೋಡಿದ ಕೂ ರಾಜನು ಪ್ರವಾಹವು ನಗರದ ಒಳಗೆ ಬರದಂತೆ ತಡೆಯನ್ನು ಕಟ್ಟಿಸುವುದಕ ಮಂತ್ರಿಗಳನ್ನು ನಿಯಮಿಸಿದನು. ಅವರು ಹೊಳೆಯ ತೀರಕ್ಕೆ ಹೋದರು. ಪಾಂ ರಾಜನ ಅಪ್ಪಣೆಯಂತೆ ನದಿಯ ತೀರವನ್ನು ಎತ್ತರವಾಗಿ ಮಣ್ಣಿನಿಂದ ಕಟ್ಟುವುದ ಜನಗಳನ್ನು ವಿಚಾರಮಾಡಿದರು. ಯಾರೂ ಇಲ್ಲದ ಕಾರಣ, "ನಗರದಲ್ಲಿ ವ ಮಾಡುವವರೆಲ್ಲರ ಮನೆಯಿಂದಲೂ ಜನಗಳು ಬಂದು ಸೇರಬೇಕು. ಹೊಳೆ ತೀರವನ್ನು ಎತ್ತರವಾಗಿ ಕಟ್ಟುವ ಕೆಲಸವನ್ನು ಮಾಡಿದರೆ ಮನೆಗಳಿಗೆ ಅನುಕ ವಾಗುವುದು. ಆದ್ದರಿಂದ ವಿಂಗಡಿಸಿಕೊಂಡು ಕೆಲಸಮಾಡಬೇಕು. ನದೀತೀ ಎತ್ತರವಾದರೆ ಎಲ್ಲರಿಗೂ ಸುಖವಾಗುವುದು" ಎಂದು ನಿಶ್ಚಯಮಾಡಿ ಕೆಲಸವ ನಗರದಲ್ಲಿ ವಾಸವಾಗಿರುವವರಿಗೆಲ್ಲರಿಗೂ ಹಂಚಿಬಿಟ್ಟರು.

ಮಂತ್ರಿಣಶ್ಚೇತಿ ನಿಶ್ಚಿತ್ಯ ತಂ ಕರ್ತುಂ ವಿಭಜಂತಿ ತೇ ।
ಪೌರಾಣಾಮಪಿ ಸರ್ವೇಷಾಂ ಮೃದ್ಧಾರೇ ಗೃಹಮೇಧಿನಾಂ ॥ ೯ ॥

ಧನಿನಾಂ ತ್ರೀಣಿ ಪುರುಷಾ ದರಿದ್ರಾಣಾಮಥೈಕಕಂ ।
ನಿಸೃಜ್ಯತಾಂ ತು ಭೃತಕಾ ಇತಿ ಸಂಕೇತಕಾರಿಣಃ ॥ ೧೦ ॥

ತದೇವಾ ಜ್ಞಾಪಯಾಮಾಸು ಸ್ತೀರಬಂಧನಹೇತವೇ ।
ತಥೈವ ಪೌರಾ ಸ್ತೇ ಸರ್ವೇ ಸ್ವಂ ಸ್ವಮಂಶಂ ಮೃದಾಂ ಭರೈಃ ॥ ೧೧ ॥

ವೋಢೃಭಿಃ ಪರ್ವತೀಚಕ್ರುಃ ತೇಭ್ಯೋ ದತ್ವಾ ಚಿರಂ ಧನಂ ।
ವೋಢಾರೋ ನಗರೀಮಧ್ಯೇ ದುರ್ಲಭಾ ಅಭವಂಸ್ತದಾ ॥ ೧೨ ॥

ತದಾ ತು ಪಿಷ್ಟಂ ವಿಕ್ರೀತಂ ಪುರ್ಯಾ ಆಗ್ನೇಯಕೋಣತಃ ।
ನಿವಸಂತೀ ಸ್ವಕೀಯಾಂಶಂ ತ್ರಿಂಶತ್ಪಾದಪ್ರಮಾಣಕಂ ॥ ೧೩ ॥

೯–೧೨ ಆಗ ಇದಕ್ಕನುಸಾರವಾಗಿ "ಪುಣ್ಯವಂತರ ಮನೆಯಿಂದ ಮೂರು ಜನಗಳೂ, ಬಡವರ ಮನೆಯಿಂದ ಒಬ್ಬನೂ ನದಿಯ ತೀರವನ್ನು ಎತ್ತರವಾಗಿ ಕಟ್ಟುವುದಕ್ಕೆ ಮಣ್ಣನ್ನು ಹೊರುವುದಕ್ಕಾಗಿ ಬರಬೇಕು" ಎಂದು ಅವರು ಸಂಕೇತವನ್ನು ಮಾಡಿದರು. ಮತ್ತು ಆ ಸಂಕೇತವನ್ನು ಊರಿನ ಎಲ್ಲಾ ಕಡೆಗಳಿಗೂ ತಿಳಿಸಿದರು. ನಗರದ ಜನರೆಲ್ಲರೂ ಅದಕ್ಕೆ ಒಪ್ಪಿಕೊಂಡು ತಮ್ಮ ತಮ್ಮ ಭಾಗಕ್ಕೆ ಬಂದ ನದೀತೀರವನ್ನು ಕಟ್ಟುವುದಕ್ಕಾಗಿ ಜನರನ್ನು ಕಳುಹಿಸಿ, ತೀರಕ್ಕೆ ತಕ್ಕಂತೆ ಏರಿಯನ್ನು ಕಟ್ಟಿಸಿ, ಕೆಲಸಮಾಡಿದವರಿಗೆ ಕೂಲಿಯನ್ನು ಕೊಡುತ್ತಾ ಇದ್ದರು. ಇದರಿಂದ ಮಣ್ಣನ್ನು ಹೊರುವುದಕ್ಕೆ ತಕ್ಕ ಜನಗಳು ಸಿಕ್ಕುವುದು ಕಷ್ಟವಾಗಿತ್ತು.

೧೩–೧೮. ಹೀಗಿರುವಾಗ ಆ ನಗರದ ಆಗ್ನೇಯದಿಕ್ಕಿನಲ್ಲಿ ಮೂವತ್ತು ಹೆಜ್ಜೆಗಳ ದೂರ ನದೀತೀರವನ್ನು ಕಟ್ಟುವ ಕೆಲಸವು ಹಿಟ್ಟನ್ನು ಮಾರುವ ಒಬ್ಬ ಮುದುಕಿಯ ಪಾಲಿಗೆ ಬಂದಿತು. ಅದನ್ನು ಕಟ್ಟಿಸುವುದಕ್ಕಾಗಿ ಅವಳು ಊರಿನಲ್ಲಿ ಆಳನ್ನು ಹುಡುಕಿದಳು. ಆಳು ಸಿಗಲಿಲ್ಲ ಅವಳು ತಾನೇ ಕೆಲಸ ಮಾಡುವಷ್ಟು

ದೃಢಂ ತೀರಂ ಬಂಧಿತುಂ ತಂ ಸ್ವಸ್ಯಾಪಿ ಬಲಹಾನಿತಃ ।
ಅನ್ವೀಕ್ಷ್ಯ ಭೃತಕಂ ಕಂಚಿದ್ಬಭ್ರಾಮ ಕಟಿಕಾಂತರೇ ॥ ೧೪ ॥

ಸಾ ತು ಭಕ್ತ್ಯಾ ಶಿವೇತೀವ ಮೀನಾಕ್ಷೀರಮಣಪ್ರಭೋಃ ।
ಪುತ್ರಾದ್ಯಾಸ್ತಸ್ಯ ನಾಸ್ತ್ಯೇವ ಗೃಹಂ ಸಂಕೋಚಮಸ್ತಿ ಚ ॥ ೧೫ ॥

ಭೂತಿರುದ್ರಾಕ್ಷಧಾರೀಚ ತಥೈವ ಶಿವಪೂಜಿಕಾ ।
ನಿತ್ಯಂ ನಿಯಮತಃ ಸೇವಾಂ ಕರೋತಿ ಪ್ರಾತರೇವ ಸಾ ॥ ೧೬ ॥

ಮೀನಾಕ್ಷೀಂ ಸುಂದರೇಶಂ ಚ ಪ್ರದಕ್ಷಿಣಪರಾಯಣಾ ।
ಪಿಷ್ಟಸಾಕಂ ದಿನಂ ಕೃತ್ವಾ ವಿಕ್ರಯಂ ಸ್ವೋದರಂಭರಾ ॥ ೧೭ ॥

ಸ್ವಪಿಷ್ಟಕ್ರಯಲಾಭಾದ್ಯಂ ಪಿಷ್ಟಮಾದೌ ಸುಪಕ್ವಕಂ ।
ಪ್ರೀತ್ಯರ್ಥಂ ಪರಮೇಶಸ್ಯ ದದಾತಿ ಬ್ರಾಹ್ಮಣೇಷು ಸಾ ॥ ೧೮ ॥

ಬ್ರಾಹ್ಮಣೀ ಸಾ ಸ್ನಾನಪರಾ ನಿತ್ಯಂ ಶುಚಿಯುತಾಪಿ ಸಾ ।
ಸ್ವಜೀವನಾದಿಕಂ ಚಾಪಿ ನಿತ್ಯಂ ಲಬ್ಧ್ವಾ ಧನೇಷ್ವಥ ॥ ೧೯ ॥

---

ಶಕ್ತಿಯುಳ್ಳವಳಾಗಿ ಇರಲಿಲ್ಲ. ಆದರೆ ಅವಳು ಶಿವನಲಿಯೂ, ಮೀನಾಕ್ಷೀದೇವಿಯಲ್ಲಿಯೂ ಬಹಳವುಟ್ಟಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದಳು. ಅವಳಿಗೆ ಮಕ್ಕಳು ಮೊದಲಾದವರು ಯಾರೂ ಇರಲಿಲ್ಲ. ಅವಳ ಮನೆಯೂ ಚಿಕ್ಕದಾಗಿತ್ತು. ಅವಳು ಪ್ರತಿದಿನವೂ, ಪ್ರಾತಃಕಾಲದಲಿ ಭಸ್ಮರುದ್ರಾಕ್ಷೆಗಳನ್ನು ಧರಿಸಿಕೊಂಡು, ನಿಯಮದಿಂದಲೂ ಭಕ್ತಿಯಿಂದಲೂ ಶಿವನನ್ನು ಪೂಜಿಸಿ, ಸುಂದರೇಶ್ವರ ಮತ್ತು ಮೀನಾಕ್ಷೀದೇವಿಯರ ಸೇವೆಯನ್ನು ಮಾಡಿ, ಪ್ರದಕ್ಷಿಣೆಯನ್ನು ಮಾಡುತ್ತಿದ್ದಳು. ಅವಳು ಪ್ರತಿದಿನವೂ, ಹಿಟ್ಟನ್ನು ಬೇಯಿಸಿ ಅದನ್ನು ಮಾರಿ ಅದರಿಂದ ಜೀವನವನ್ನು ಮಾಡುತ್ತಿದ್ದಳು. ಹೀಗಿದ್ದರೂ ಅವಳು ಬೇಯಿಸಿದ ಹಿಟ್ಟಿನಲ್ಲಿ ಮಾರಬೇಕಾದ ಮೊದಲನೆಯ ಭಾಗವನ್ನು ಪರಮೇಶ್ವರನ ಪ್ರೀತಿಗಾಗಿ ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದಳು.

೧೯–೨೦. ಆ ಸ್ತ್ರೀಯು ಬ್ರಾಹ್ಮಣ ಸ್ತ್ರೀಯಾಗಿ ಪ್ರತಿದಿನವೂ ಸ್ನಾನಮಾಡತಕ್ಕವಳಾಗಿದ್ದಳು. ಅವಳು ಪರಿಶುದ್ಧಳಾಗಿರುತ್ತಾ ತನ್ನ ಜೀವನಕ್ಕಿಂತಲೂ ಹೆಚ್ಚಾದ

ಅನಿತ್ಯಂ ದೇಹಮಿತ್ಯೇವ ಜ್ಞಾತ್ವಾ ಪರದಿನಸ್ಯ ಚ ।
ನ ಕರೋತಿ ಸ್ಥಾಪನಂ ಚ ನಿಯಮಾದೃತ ಚೇತನಾ ॥ ೨೦ ॥

ಸ್ವಜೀವನಾದಿಕಂ ವಸ್ತು ದದೌ ವಿಪ್ರೇಭ್ಯ ಆದರಾತ್ ।
ಅಸ್ತೀತಿ ಜಠರೇ ಸಾ ಚ ನ ಲಬ್ಧಾ ಕರ್ಷಕಂ ಕ್ವಚಿತ್ ॥ ೨೧ ॥

ರಾಜ್ಯಭೃತ್ಯಾ ಬಾಧಯಂತಿ ಪುರುಷಂ ವಿಸೃಜೇತಿ ಚ ।
ಗೃಹೇಚ್ಛಿದ್ರಂ ಕರಿಷ್ಯಂತಿ ಧನಮಸ್ತೀತಿ ಕೋಪತಃ ॥ ೨೨ ॥

ಅಹಂ ಚ ಪುರುಷಂ ತೇಷಾಂ ವಿಸೃಜಾಮೀತಿ ಸದ್ವಚಃ ।
ಉಕ್ತ್ವಾ ನ ಬಾಧಯಧ್ವಂ ಮಾಂ ನ ಕಾರ್ಯಂ ಗೃಹನೋಟನಂ ॥ ೨೩ ॥

ಶಿವಾಲಯಾಗ್ರಂ ಸಂಪ್ರಾಪ್ಯ ನತ್ವಾ ಸಾ ಸುಂದರೇಶ್ವರಂ ।
ಸಕಲಾರ್ತಿಹರಂ ಸಾಂಬಂ ಮೀನಾಕ್ಷೀಪತಿಮೀಶ್ವರಂ ॥ ೨೪ ॥

---

ದ್ರವ್ಯವನ್ನು ಪ್ರತಿದಿನವೂ, ಸಂಪಾದಿಸಿದಾಗ್ಯೂ, "ಶರೀರವು ನಿತ್ಯವಾದದ್ದಲ್ಲ" ಎಂದು ನಿಶ್ಚಯವಾಗಿ ತಿಳಿದುಕೊಂಡು, ನಿಯಮವನ್ನು ಆಚರಿಸುವುದರಲ್ಲಿ ಆದರವುಳ್ಳ ಮನಸ್ಸಿನಿಂದ ಹೆಚ್ಚಾಗಿ ಬಂದ ದ್ರವ್ಯವನ್ನು ಮಾರನೆಯ ದಿನಕ್ಕೆ ಇಡುತ್ತಿರಲಿಲ್ಲ. ತನ್ನ ಆಯಾಯ ದಿನದ ಜೀವನಕ್ಕೆ ಬೇಕಾಗುವುದಕ್ಕಿಂತ ಹೆಚ್ಚಾದ ಪದಾರ್ಥವನ್ನು ಬ್ರಾಹ್ಮರಿಗೆ ಆದರದಿಂದ ದಾನಮಾಡುತ್ತಿದ್ದಳು.

೨೧-೨೩. ಅವಳಿಗೆ ಆಳು ಯಾರೂ ದೊರೆಯಲಿಲ್ಲ. ಅವಳ ಮನೆಯ ಮಧ್ಯದ ದಲ್ಲಿ ಧನವು ಇರುವುದು, ಎಂದು ತಿಳಿದು ರಾಜದೂತರು. "ಆಳನ್ನು ಕಳುಹಿಸು" ಎಂದು ತೊಂದರೆಯನ್ನು ಕೊಡುತ್ತಿದ್ದರು. ಇವಳಲ್ಲಿ ದ್ರವ್ಯವಿರುವುದು ಎಂದು ತಿಳಿದುಕೊಂಡು ಕೋಪದಿಂದ ಮನೆಯಲ್ಲಿ ರಂಧ್ರವು ಉಂಟಾಗುವಂತೆ ಕೆಲಸವನ್ನು ಮಾಡುತ್ತಿದ್ದರು. ಆಗ ಅವಳು, "ನಾನು ಆಳನ್ನು ಕಳುಹಿಸಿಕೊಡುತ್ತೇನೆ. ಆದ್ದರಿಂದ ನನ್ನ ಮನೆಯನ್ನು ಕೆಡವಬೇಡಿ" ಎಂದು ಒಳ್ಳೆಯ ಮಾತನ್ನು ಅವರಿಗೆ ಹೇಳಿದಳು.

೨೪-೨೬. ಅನಂತರದಲ್ಲಿ ಅವಳು ಸುಂದರೇಶ್ವರನ ದೇವಾಲಯದ ಕಡೆಗೆ ಹೋಗಿ ಎಲ್ಲಾ ವಿಧವಾದ ಸಂಕಟಗಳನ್ನೂ ಪರಿಹರಿಸುವ ಮೀನಾಕ್ಷೀದೇವಿಗೆ ಪ್ರಭು

ಧ್ಯಾತ್ವಾ ಚ ರಕ್ಷ ರಕ್ಷೇತಿ ಪ್ರಾರ್ಥಯಿತ್ವಾ ಚ ಸಾ ಸತೀ ।
ಸಮ್ಯಕ್ಪಕ್ವಾನ್ ಸುಪಿಷ್ಟಾಂಶ್ಚ ಸಮರ್ಪ್ಯೇಶಾಯ ಭಕ್ತಿತಃ ॥ ೨೫ ॥

ಸ್ವಾಮಿನ್ಮಾಂ ಬಾಧಯಂತೀಶ ಪುರುಷಂ ವಿಸೃಜೇತಿ ಚ ।
ಅನ್ವೀಯ ಚಾಪಿ ವೋಢಾರಂ ನ ಪಶ್ಯಾಮಿ ಸ್ವವೀಥಿಷು ॥ ೨೬ ॥

ಇತಿ ಸಂಪ್ರಾರ್ಥ್ಯ ಜರಠಾ ಸುಂದರೇಶಂ ಪ್ರಣಮ್ಯ ಚ ।
ಪುನರ್ಬಭ್ರಾಮ ವೀಥೀಷು ಪಶ್ಯಂತೀ ಭೃತಕಂ ದ್ವಿಜಾಃ ॥ ೨೭ ॥

ಏವಂ ನಿಯಮಯುಕ್ತಾಯಾ ಸ್ತಸ್ಯಾಃ ಕರ್ತುಮನುಗ್ರಹಂ ।
ಸರ್ವವ್ಯಾಪೀ ಸುಂದರೇಶಷ್ಷೋಡಶಾಬ್ದಾಕೃತಿ ಶ್ಶಿವಃ ॥ ೨೮ ॥

ಸ್ಮಿತಮಾಧುರ್ಯಮಧುರಮುಖಮಂಡಲಮಂಡಿತಃ ।
ಸೌಂದರ್ಯಸಾಗರೋದ್ಭೂತಶಂಖಸನ್ನಿಭಕಂಧರಃ ॥ ೨೯ ॥

---

ವಾದ ಸುಂದರೇಶ್ವರನನ್ನು ಧ್ಯಾನಮಾಡಿ ಚೆನ್ನಾಗಿ ಬೇಯಿಸಿದ ಹಿಟ್ಟನ್ನು ಭಕ್ತಿಯಿಂದ ಶಿವನಿಗೆ ಒಪ್ಪಿಸಿ, "ಎಲೈ ಪ್ರಭುವೆ, ಈಶ್ವರನೆ ರಾಜದೂತರು ನನ್ನನ್ನು ಆಳನ್ನು ಕಳುಹಿಸು ಎಂದು ತೊಂದರೆಮಾಡುತ್ತಿರುವರು. ಬೀದಿಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ ಹುಡುಕಿದಾಗ್ಯೂ ಮಣ್ಣನ್ನು ಹೊರುವ ಆಳು ನನಗೆ ಯಾರೂ ದೊರೆಯಲಿಲ್ಲ. ಆದ್ದರಿಂದ ನನ್ನನ್ನು ರಕ್ಷಿಸು," ಎಂದು ಪ್ರಾರ್ಥಿಸಿದಳು.

೨೭-೩೧. ಆ ಮುದುಕಿಯು ಸುಂದರೇಶ್ವರನಿಗೆ ನಮಸ್ಕಾರಮಾಡಿ ಹೀಗೆ ಪ್ರಾರ್ಥನೆಯನ್ನು ಮಾಡಿದ ನಂತರ ಮಧುರಾನಗರದ ಬೀದಿಯಲ್ಲಿ ಕೂಲಿಯ ಆಳನ್ನು ಹುಡುಕುತ್ತಾ ಸುತ್ತುತ್ತಿದ್ದಳು. ಹೀಗೆ ನಿಯಮವುಳ್ಳವಳಾಗಿರುವ ಆ ಮುದುಕಿಗೆ ಅನುಗ್ರಹಮಾಡುವುದಕ್ಕಾಗಿ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ಸುಂದರೇಶ್ವರನು ಹದಿನಾರು ವರ್ಷ ವಯಸ್ಸಿನ ಹುಡುಗನ ಆಕಾರವನ್ನು ಹೊಂದಿದನು. ಇವನು ಸುಂದರವಾದ ಮತ್ತು ಮಧುರವಾದ ಮಂದಹಾಸದಿಂದ ಕೂಡಿದ ಮುಖವುಳ್ಳವ

ಕವಾಟಕಠಿನೋರಸ್ಕಃ ಕಮನೀಯ ಕರಾಂಬುಜಃ ।
ಕಚ್ಛ ಬಂಧಾತ್ತಸುತರಕಟೀತಟವಿರಾಜಿತಃ ॥ ೩೦ ॥

ಕದಲೀಕಾಂಡಸೌಭಾಗ್ಯಜಿತಜಂಘೋರುಶೋಭಿತಃ ।
ಕಮಠೀ ಕರ್ಪರಾಕಾರಪ್ರಪದಃ ಪ್ರಮಥೇಶ್ವರಃ ॥ ೩೧ ॥

ಬ್ರಾಹ್ಮಂ ಶಿರಃ ಕಪಾಲಂ ಚ ಪಿಟಕಂ ಪ್ರವಿಧಾಯ ಚ ।
ಖನಿತ್ರಂ ಪರಶುಂ ಕೃತ್ವಾ ಶಿರಸಾಂಸೇನ ತೌ ವಹನ್ ॥ ೩೨ ॥

ಕರ್ಷಕಾಕಾರವಾನ್ ಮರ್ತ್ಯ ಇವ ಲಿಂಗಾತ್ಸಮುತ್ಥಿತಃ ।
ಅಶೀತಿವೃದ್ಧಾಂ ಪಿಷ್ಟಾಂಬಾಂ ಪ್ರಾಪ್ಯ ಶಂಭುರ್ದಯಾಪರಃ ॥ ೩೩ ॥

ಅಂಬಿಕಾಂ ಚ ಸಮನ್ವೀಕ್ಷ್ಯ ಭ್ರಮಸೀತಸ್ತತೋ ಮುಹುಃ ।
ಅಸ್ತಿ ಕಿಂ ಭೃತಕಾಪೇಕ್ಷಾ ಕಥಯಸ್ವೇತ್ಯಥಾಬ್ರವೀತ್ ॥ ೩೪ ॥

---

ನಾಗಿದ್ದನು. ಇವನ ಕುತ್ತಿಗೆಯು ಸೌಂದರ್ಯ ಸಮುದ್ರದಲ್ಲಿ ಹುಟ್ಟಿದ ಶಂಖಕ್ಕೆ ಸಮ ನಾಗಿ ಇತ್ತು. ಎದೆಯು ಕದದಂತೆ ಕಠಿಣವಾಗಿಯೂ, ಹಸ್ತಗಳು ಸುಂದರವಾಗಿಯೂ ಇದ್ದುವು. ನಡುವಿಗೆ ದೃಢವಾಗಿರುವಂತೆ ವಸ್ತ್ರವನ್ನು ಉಟ್ಟು ಕಚ್ಚೆಯನ್ನು ಬಲ ವಾಗಿ ಕಟ್ಟಿದ್ದನು. ಬಾಳೆಯಗಿಡದ ಸೌಂದರ್ಯವನ್ನು ಮೀರಿರುವ ಇವನ ಜಂಘಾ ಪ್ರದೇಶಗಳು ಒಪ್ಪುತ್ತಿದ್ದುವು. ಇವನ ಹೆಜ್ಜೆಯ ಮೇಲುಗಡೆಯ ಭಾಗವು ಆಮೆಯ ಓಡಿನಂತೆ ಪ್ರಕಾಶಿಸುತ್ತಿದ್ದಿತು.

೩೨-೩೪. ಪ್ರಮಥಾಧಿಪನಾದ ಪರಶಿವನು ಈ ಪ್ರಕಾರವಾದ ಆಕಾರವನ್ನು ಹೊಂದಿ ಬ್ರಹ್ಮಶಿರಃ ಕಪಾಲವನ್ನು ಮಣ್ಣುಹೊರುವ ಮಂಕರಿಯನ್ನಾಗಿ ಮಾಡಿ ಕೊಂಡು, ಪರಶು (ಕೊಡಲಿ) ವನ್ನು ಗುದ್ದಲಿಯಾಗಿ ಮಾಡಿಕೊಂಡು, ಒಂದನ್ನು ತಲೆಯಮೇಲೂ ಒಂದನ್ನು ಹೆಗಲಿನಮೇಲೂ ಇರಿಸಿಕೊಂಡು ಕೂಲಿಮಾಡುವ ಶೂದ್ರ ಜಾತಿಯ ಆಳಿನ ಆಕಾರದಿಂದ ಶಿವಲಿಂಗದ ಹೊರಗಡೆಯಲ್ಲಿ ಕಾಣಿಸಿಕೊಂಡನು. ಅವನು ಎಂಭತ್ತು ವರ್ಷ ವಯಸ್ಸುಳ್ಳ ಆ ಮುದುಕಿಯನ್ನು ನೋಡಿ, “ ಎಲೈ ಮುದುಕಿಯೆ, ನೀನು ಈ ನಗರದಲ್ಲಿ ಅಲ್ಲಲ್ಲಿ ಯಾತಕ್ಕಾಗಿ ಸುತ್ತುತ್ತಿರುತ್ತೀಯೆ. ನೀನು ಆಳನ್ನು ಹುಡುಕುವೆಯಾದರೆ, ಆಳು ನಿನಗೆ ಬೇಕಾಗಿದೆಯೋ? ಅದನ್ನು ಹೇಳು ” ಎಂದು ಅವನು ಪ್ರಶ್ನೆಮಾಡಿದನು.

ಇತಿ ತಸ್ಯ ವಚಶ್ಶ್ರುತ್ವಾ ಖನಿತ್ರಪಿಟಕಸ್ಯ ಚ ।
ಅಸ್ತೀತ್ಯುಕ್ತ್ವಾ ಪುನಃ ಪ್ರಾಹ ಮುದಾ ಸಾದರಮೀಕ್ಷ್ಯತಾಂ ॥ ೩೫ ॥

ನಾಥ ವೋಢುಂ ಭವಾನ್ಶಕ್ತೋ ಮೃದ್ಭಾರಂ ವಹಿತುಂ ಮಮ ।
ತದಂಶಮಾಪಗಾಕೂಲಂ ಕುರು ಭೋ ದೃಢಮುನ್ನತಂ ॥ ೩೬ ॥

ಶಿವೇನ ಪ್ರೇಷಿತ ಸ್ತ್ವಂ ಹಿ ಮದ್ದೃಷ್ಟ್ಯಾ ಹಿ ನ ಸಂಶಯಃ ।
ಇತಿ ತಸ್ಯ ವಚಃ ಶ್ರುತ್ವಾ ಮಹ್ಯಂ ತ್ವಂ ಕಿಮುದಾ ಭೃತಿಂ ॥ ೩೭ ॥

ಪ್ರೋವಾಚ ಕೃಪಯಾ ತಾಂ ಚ ಹಸನ್ನೀಪಾಟವೀಪತಿಃ ।
ಸಾ ಪುನಃ ಪ್ರಾಹ ಜರತಾ ಭೃತಕಂ ತಂ ಪ್ರಿಯಾನ್ವಿತಾ ॥ ೩೮ ॥

ಅರ್ಥೋ ನಾಸ್ತಿ ಚ ಮೇ ಹಸ್ತೇ ಸತ್ಯಮೇವ ವದಾಮ್ಯಹಂ ।
ಪಿಷ್ಟಾನ್ ಸೋಷ್ಮಾಂಶ್ಚ ದಾಸ್ಯಾಮಿ ಮುದ್ಗಯುಕ್ತಾನ್ ಸಶರ್ಕರಾನ್॥ ೩೯ ॥

---

೩೫-೩೬. ಗುದ್ದಲಿ ಮತ್ತು ಮಂಕರಿಯನ್ನು ಧರಿಸಿಕೊಂಡಿರುವ ಅವನ ಮಾತನ್ನು ಕೇಳಿ, "ನನಗೆ ಆಳು ಬೇಕಾಗಿರುವುದು" ಎಂದು ಆ ಮುದುಕಿಯು ಹೇಳಿದಳು. ಅನಂತರದಲ್ಲಿ ಅವಳು ಬಹಳ ಸಂತೋಷದಿಂದ ಕೂಡಿ ಆದರದಿಂದ, "ನನಗೆ ಸಂಬಂಧಪಟ್ಟ ಮಣ್ಣಿನ ಭಾರವನ್ನು ಹೊರಲು ನೀನು ಶಕ್ತನಾಗಿರುತ್ತೀಯೆ. ನನ್ನ ಭಾಗದಲ್ಲಿ ಕಟ್ಟಬೇಕಾಗಿರುವ ಹೊಳೆಯ ದಡವನ್ನು ಎತ್ತರವಾಗಿರುವಂತೆ ನೀನು ಮಾಡು. ನಿನ್ನನ್ನು ಶಿವನೇ ಕಳುಹಿಸಿರುವನೆಂದು ನನಗೆ ತೋರುವುದು. ಇದರಲ್ಲಿ ಸಂಶಯವಿಲ್ಲ" ಎಂದು ಅವನ ಸಂಗಡ ಮುದುಕಿಯು ಹೇಳಿದಳು.

೩೭-೪೧. ಆ ಮಾತನ್ನು ಕೇಳಿ ನೀಪಾಟವೀಪತಿಯಾದ ಪರಮೇಶ್ವರನು ದಯೆಯುಳ್ಳವನಾಗಿ ನಗುತ್ತಾ ನನಗೆ ಏನು ಕೂಲಿಯನ್ನು ಕೊಡುತ್ತೀಯೆ ?" ಎಂದು ಕೇಳಿದನು. ಆಗ ಮುದುಕಿಯು ಕೂಲಿಯ ಆಳಾಗಿರುವ ಅವನಿಗೆ "ನನ್ನ ಹತ್ತಿರದಲ್ಲಿ ದ್ರವ್ಯವಿರುವುದಿಲ್ಲ, ನಾನು ನಿಜವನ್ನೇ ಹೇಳುತ್ತೇನೆ. ಸಕ್ಕರೆ, ಹೆಸರುಬೇಳೆ ಇವುಗಳನ್ನು ಹಾಕಿರುವ ಬಿಸಿಯಾದ ಹಿಟ್ಟಿಗೆ ತೆಂಗಿನಕಾಯನ್ನು ಹಾಕಿ ಏಲಕ್ಕಿಯೇ ಮೊದಲಾದ್ದರಿಂದ ಸುವಾಸನೆಯುಳ್ಳದನ್ನಾಗಿ ಮಾಡಿ ನಿನಗೆ ಕೊಡುತ್ತೇನೆ. ಇದನ್ನು

ಸ ನಾರಿಕೇಲಾ೯ ಸದ್ಗಂಧಾ೯ ವಿದ್ಯಂತೇ ಮೃದ್ಭ್ರರಾ೯ ವಹ ।
ಕೃತೇ ಫಣಾಧಿಕಸ್ಯಾಸ್ತಿ ಏಲಾದ್ಯೈಶ್ಚ ಸುವಾಸಿತಾನ್ ॥ ೪೦ ॥

ಆದಾಯ ಮತ್ತಸ್ತಾನಾಶು ಭಕ್ಷಯಿತ್ವಾ ಮೃದಂ ವಹ ।
ದೀಯತಾಮಿತಿ ಸೋಽಪ್ಯಾಹ ವಹೇ ಮೃದ್ಭಾರಮಾಶು ತೇ ॥ ೪೧ ॥

ತಥಾ ಕರಿಷ್ಯ ಇತ್ಯುಕ್ತವತೇ ಭೃತನಿಕಾಯ ಚ ।
ತಸ್ಮೈ ಸಾ ಪ್ರದದೌ ಪಿಷ್ಟಾನ್ಸೋಽಪಿ ಪ್ರತ್ಯಗ್ರಹೀನ್ಮುದಾ ॥ ೪೨ ॥

ತಾನಾಪೂರ್ಯಾ೯ಥ ಕಚ್ಛಸ್ಯ ಅಂತರೇ ವಿವೃತೇ ಶಿವಃ ।
ಆಗತ್ಯ ತಟಿನೀತೀರಂ ಮೃದ್ಭಾರಂ ವಾಹಕಾ೯ ಜನಾ೯ ॥ ೪೩ ॥

ವೀಕ್ಷ್ಯೋತ್ಕೂಲಂ ನದೀಂ ಚಾಪಿ ಪಿಷ್ಟಾಂಬಾಂ ಚ ಸಮೀಪತಃ ।
ಅವನಂದ೯ ಹಸನ್ನಿತ್ಥಂ ಚಚಾರ ತಟಿನೀತಟೇ ॥ ೪೪ ॥

---

ನಿನಗೆ ಕೊಟ್ಟರೆ ಕೂಲಿಗಿಂತಲೂ ಹೆಚ್ಚಾಗುವುದು. ನಾನು ಕೊಡುವ ಅದನ್ನು ನೀನು ತೆಗೆದುಕೊಂಡು ನನಗಾಗಿ ಮಣ್ಣಿನ ಕೆಲಸವನ್ನು ಮಾಡು" ಎಂದು ಪ್ರೀತಿಯಿಂದ ಹೇಳಿದಳು. "ನೀನು ಹಿಟ್ಟನ್ನು ಕೊಡು, ಅದನ್ನು ತೆಗೆದುಕೊಂಡು ಮಣ್ಣನ್ನು ಹೊರುತ್ತೇನೆ" ಎಂದು ಅವನು ಹೇಳಿದನು.

೪೨-೪೫. ಹಾಗೆಯೇ ಮಾಡುತ್ತೇನೆ ಎಂದ ಕೂಲಿಯು ಆಳಿಗೆ ಆ ಮುದುಕಿಯು ಹಿಟ್ಟನ್ನು ಕೊಟ್ಟಳು. ಅವನು ಅದನ್ನು ಸಂತೋಷವಾಗಿ ತೆಗೆದುಕೊಂಡನು. ಹಿಟ್ಟನ್ನು ನಡುವಿನಲ್ಲಿ ಕಟ್ಟಿಕೊಂಡು ನದೀತೀರಕ್ಕೆ ಬಂದು ಮಣ್ಣನ್ನು ಹೊರುತ್ತಿರುವ ಜನರನ್ನು ಅವನು ನೋಡಿದನು. ನದಿಯು ದಡವನ್ನು ಮೀರಿ ಹರಿಯುತ್ತಿತ್ತು. ಆಗ ಹಿಟ್ಟನ್ನು ಕೊಟ್ಟ ಮುದುಕಿಯಾದ ಪಿಷ್ಟಾಂಬ ಎಂಬುವಳು ಹತ್ತಿರದಲ್ಲಿದ್ದಳು. ಅವಳಿಗೆ ಸಂತೋಷವನ್ನು ಉಂಟುಮಾಡುತ್ತಾ ಶಿವನು ನಗುತ್ತಾ, ನದಿಯ ದಡದಲ್ಲಿ

ಏಕಃ ಸ್ವಾದು ನ ಭುಂಜೀಯಾದಿತಿ ಶಾಸ್ತ್ರವಿಚಕ್ಷಣಃ ।
ಇತ್ಯುಕ್ತ್ವಾ ಭೃತ್ಯಕೇಭ್ಯಶ್ಚ ದದೌ ಪಿಷ್ಟಾರ್ಕಿಯುಕ್ತಿಯುತ್ ॥ ೪೫ ॥

ಪಿಷ್ಟಾಭಾವೇ ತು ತಾಮೇತ್ಯ ಶಂಕರೋ ಲೀಲಯಾ ವದತ್ ।
ಅಂಬ ಕೂಲಸ್ತ್ವಾಂಶಸ್ತು ಸರ್ವಾಂಶೇಭ್ಯೋ ದೃಢೀಕೃತಃ ॥ ೪೬ ॥

ಮಿಥ್ಯೇತಿ ಮಾ ವಿಜಾನೀಹಿ ತತ್ಸಾಕ್ಷೀ ಸುಂದರೇಶ್ವರಃ ।
ತ್ವಯೀಭೂತಾಃ ದತ್ತಪಿಷ್ಟಾಃ ಪುನರ್ವಾಂಛಾ ಹಿ ತೇಷು ಮೇ ॥ ೪೭ ॥

ದದಸ್ವ ತಾನಿತಿ ಪ್ರಾಹ ವಚಃ ಶ್ರುತ್ವಾ ಭೃತಂ ಚ ಸಾ ।
ಪುನಶ್ಚ ಬಹುಲಂ ಪಿಷ್ಟಂ ದದೌ ಸಾ ಚ ತದಾಗ್ರಹೀತ್ ॥ ೪೮ ॥

ಭಕ್ಷಯನ್ಭಕ್ಷಯನ್ಮಂದಂ ಪ್ರಾಪ್ಯ ಚೈವಂ ನದೀತಟೇ ।
ಅರ್ಭಕೇಭ್ಯಶ್ಚ ತಾಂ ದತ್ವಾ ಪಿಷ್ಟಾಂಬಾಂ ಚ ನದೀತಟೇ ॥ ೪೯ ॥

---

ಸಂಚರಿಸುತ್ತಿದ್ದನು. ಒಬ್ಬನೆ ರುಚಿಯಾದ ಪದಾರ್ಥವನ್ನು ತಿನ್ನಬಾರದು, ಎಂಬ ಶಾಸ್ತ್ರವನ್ನು ತಿಳಿದ ಬುದ್ಧಿವಂತನಾದ ಅವನು ಇತರ ಕೂಲಿಯವರಿಗೆ ಕೊಂಚ ಹಿಟ್ಟನ್ನು ದಾನ ಮಾಡಿದನು.

೪೬-೪೯. ಹಿಟ್ಟೆಲ್ಲವೂ ಮುಗಿದುಹೋಯಿತು. ಅನಂತರ ಶಿವನು ವಿನೋದದಿಂದ ಆ ಮುದುಕಿಯ ಹತ್ತಿರಕ್ಕೆ ಬಂದು "ಎಲೈ ಮಾತೆಯೆ, ನದಿಯ ದಡದಲ್ಲಿ ನಿನ್ನ ಭಾಗದಲ್ಲಿ ಕಟ್ಟಬೇಕಾದ ಭಾಗವನ್ನು ಎಲ್ಲಾ ಕಡೆಯಿಂದಲೂ ಗಟ್ಟಿಯಾಗಿ ಕಟ್ಟಿರುತ್ತೇನೆ. ಇದನ್ನು ಸುಳ್ಳು ಎಂದು ನೀನು ತಿಳಿಯಬೇಡ. ಸುಂದರೇಶ್ವರನೇ ಇದಕ್ಕೆ ಸಾಕ್ಷಿಯಾಗಿರುವನು. ನೀನು ಕೊಟ್ಟಿರುವ ಹಿಟ್ಟೆಲ್ಲವೂ ಮುಗಿದುಹೋಯಿತು. ನನಗೆ ಅದನ್ನು ತಿನ್ನಲು ಬಹಳ ಆಸೆಯಾಗಿರುತ್ತದೆ. ಆದ್ದರಿಂದ ಅದನ್ನ ನನಗೆ ಕೊಡು" ಎಂದು ಹೇಳಿದನು. ಆ ಮಾತನ್ನು ಕೇಳಿ ಅವಳು ಅವನ ಮಾತು ನಿಜವೆಂದು ತಿಳಿದು ಹಿಟ್ಟನ್ನು ಹೆಚ್ಚಾಗಿ ಕೊಟ್ಟಳು. ಅದನ್ನು ಅವನು ತೆಗೆದುಕೊಂಡನು. ಆನಂತರ ಮೆಲ್ಲ ಮೆಲ್ಲಗೆ ನಡೆಯುತ್ತಾ, ಹಾಗೆಯೇ ಅದನ್ನು ತಿನ್ನುತ್ತಾ, ನದೀತೀರಕ್ಕೆ ಅವನು ಬಂದು, ಅಲ್ಲಿರುವ ಹುಡುಗರೆಲ್ಲರಿಗೂ ಹಿಟ್ಟನ್ನು ಕೊಡುತ್ತಾ, ಹಾಡುಗಳನ್ನು ಹೇಳಿಕೊಂಡು, ಮಧುರವಾಗಿ ಮಾತನಾಡುತ್ತಾ ಯಾವ ಭಯವೂ ಇಲ್ಲದವನಾಗಿ ಆಟವಾಡುತ್ತಿದ್ದನು.

ಗಾಯನ್ಮಧುರಯಾ ವಾಚಾ ಕ್ರೀಡತ್ಯತ್ರ ಸ ನಿರ್ಭಯಃ ।
ಗಣನಾಯಾಂ ಪ್ರವೃತ್ತಾಯಾಂ ಗಣಕೇನ ನೃಪಾಜ್ಞಯಾ ॥ ೫೦ ॥

ಅತ್ಯಂತಮಲಿನಾಕಾರಕಚ್ಛಾಬದ್ಧಲಸತ್ಕಟಿಃ ।
ದರ್ಧಃಖನಿತ್ರಮಂಸೇನ ಪಿಟಕಂ ಶಿರಸಾ ವಹನ್ ॥ ೫೧ ॥

ಧೂಲಿಧೂಸರಗಾತ್ರಸ್ಸೋಽ ಸಮಭ್ಯೇತ್ಯ ತ್ವರಾನ್ವಿತಃ ।
ಭೃತ್ಯಕಂ ಪಿಷ್ಟವಿಕ್ರೇತ್ರ್ಯಾ ಕಾಯಸ್ಥ ಗಣಯಾಶು ಮಾಂ ॥ ೫೨ ॥

ಪುನಃ ಪುನರಿತಿ ಪ್ರಾಹ ಭೃತಕಾಕಾರ ಈಶ್ವರಃ ।
ಅಸೌ ನ ಕಿಂಚಿದ್ವಹತೀತ್ಯವದನ್ಭೃತಕಾಃ ಪರೇ ॥ ೫೩ ॥

ಮೃದಂ ತೇನೇತಿ ಚೋಕ್ತೇಷು ತಂ ಪ್ರತ್ಯಾಹ ಶಿವೋಽಪಿ ಸಃ ।
ಮಯ್ಯೈವ ಸರ್ವಂ ರಕ್ಷಾಯೈ ನದೀಕೂಲಂ ದೃಢೀಕೃತಂ ॥ ೫೪ ॥

---

೫೦-೫೩. ಕೆಲಸ ಮಾಡತಕ್ಕ ಜನಗಳನ್ನು ಎಣಿಸುವ ವೇಳೆಯು ಬಂದಿತು. ಜನಗಳನ್ನು ಎಣಿಕೆ ಮಾಡುವವರು ಧೊರೆಯ ಅಪ್ಪಣೆಯಿಂದ ಬಂದು ನೋಡಿದರು. ಆಗ ಕೂಲಿಯವನ ಆಕಾರವನ್ನು ಹೊಂದಿರುವ ಈಶ್ವರನು ಬಹಳ ಮಲಿನವಾದ ಆಕಾರವುಳ್ಳವನಾಗಿ, ನಡುವನ್ನು ಬಲವಾಗಿ ಕಟ್ಟಿಕೊಂಡು, ಗುದ್ದಲಿಯನ್ನು ಹೆಗಲಿನ ಮೇಲೆ ಇರಿಸಿ,!ತಲೆಯ ಮೇಲೆ ಮಂಕರಿಯನ್ನು ಹೊತ್ತುಕೊಂಡು ಧೂಳಿನಿಂದ ಮುಚ್ಚಿರುವ ಶರೀರ ವುಳ್ಳವನಾಗಿ, ಬೇಗನೆ ಅವರ ಮುಂದಕ್ಕೆ ಬಂದನು. ಆಗ ಅವನು "ಎಲೈ ಅಧಿಕಾರಿಗಳಿರಾ ನೀವು ನನ್ನನ್ನು ಹಿಟ್ಟು ಮಾರುವ ಮುದುಕಿಯ ಕಡೆಯ ಆಳೆಂದು ಲೆಕ್ಕ ಹಾಕಿಕೊಳ್ಳಿರಿ." ಎಂದು ಅನೇಕ ಸಾರಿ ಹೇಳಿದನು. ಇತರ ಕೂಲಿಯವರು ಮಾತ್ರ ಇವನು ಯಾವ ಮಣ್ಣನ್ನೂ ಹೊರುವುದಿಲ್ಲವೆಂದು ಹೇಳಿದರು.

೫೪-೫೬. ಅವರ ಮಾತನ್ನು ಕೇಳಿ ಶಿವನು "ನಾನು ಎಲ್ಲರನ್ನೂ ರಕ್ಷಿಸುವುದಕ್ಕಾಗಿ ನದಿಗೆ ದಡವನ್ನೇ ಕಟ್ಟಿರುತ್ತೇನೆ. ಎಲ್ಲರನ್ನೂ ಆಗಾಗ ಸರಿಯಾಗಿ ನೋಡುತ್ತಾ ಮಧುರಾನಗರವನ್ನು ನಾನು ರಕ್ಷಿಸುತ್ತಿರುವೆನು. ಸುಳ್ಳು ಹೇಳುವ

ಪಶ್ಯನ್ಸ್ಪೃಶ್ಯಂಶ್ಚ ಸರ್ವಾಂಶ್ಚ ಮಧುರಾಪುರರಕ್ಷಕಃ ।
ಅಸತ್ಯವಾದಿನಾಮೇಷಾಂ ನ ವಿಶ್ವಾಸ್ಯಂ ವಚಸ್ತ್ವಯಾ ॥ ೫೫ ॥

ಇತಿ ಪ್ರಗಲ್ಭವಚನಂ ಭೃತಕಂ ಸುಂದರಾಕೃತಿಂ ।
ವಿಲೋಕ್ಯಾಶ್ಚರ್ಯಸಂಯುಕ್ತೋ ಲಿಖಿತ್ವಾ ಸ ಯಯೌ ಜವಾತ್ ॥ ೫೬ ॥

ಗತೇಽಥ ಗಣಕೇಽನ್ಯತ್ರ ಪುನಶ್ಚ ಭೃತಕಾ ಅಪಿ ।
ಶಿರೋಪಧಾನಂ ಪಿಟಕಂ ಖನಿತ್ರೇ ಚರಣಾ ವಪಿ ॥ ೫೭ ॥

ವದನ್ ವಿನೋದವಾಕ್ಯಾನಿ ತೀರಸ್ಥೈರರ್ಭಕೈಃ ಸಹ ।
ಉಚ್ಚೈರ್ಗಾಯನ್ ಕ್ವಚಿಚ್ಛೇತೇ ಶುಭೇ ವೇಗವತೀತಟೇ ॥ ೫೮ ॥

ಏವಂ ಲೀಲಾಂ ಪ್ರಕುರ್ವಾಣೇ ಭೃತಕಾಕಾರ ಈಶ್ವರೇ ।
ಭೃತಕಾನಾಂ ಪ್ರಶಾಸ್ತಾ ಯಃ ತತ್ರಾಗತ್ಯಾತಿರೋಷತಃ ॥ ೫೯ ॥

---

ಇವರ ಮಾತನ್ನು ನಂಬಬಾರದು.” ಎಂದು ಅಧಿಕಾರಿಯ ಸಂಗಡ ಹೇಳಿದನು. ಬಹಳ ಪ್ರೌಢವಾಗಿ ಮಾತನಾಡುವ ಈ ಕೂಲಿಯವನು ಬಹಳ ಸುಂದರವಾದ ಆಕಾರವುಳ್ಳವನಾಗಿರುವುದನ್ನು ನೋಡಿ ಆಶ್ಚರ್ಯದಿಂದ ಇರುವ ಅಧಿಕಾರಿಯು ಬೇಗನೆ ಅವನನ್ನು ಲೆಖ್ಖದಲ್ಲಿ ಬರೆದುಕೊಂಡು ಹೊರಟುಹೋದನು.

೫೭–೬೦. ಅಧಿಕಾರಿಯು ಹೊರಟುಹೋದನಂತರ ಕೂಲಿಯುವನ ಆಕಾರದಿಂದ ಇರುವ ಅವನು ಗುದ್ದಲಿ ಮಂಕರಿಗಳನ್ನು ಕಾಲಿನ ಬುಡಕ್ಕೆ ಹಾಕಿಕೊಂಡು, ವಿನೋದವಾಗಿ ಮಾತುಗಳನ್ನು ಆಡುತ್ತಾ, ದಡದಲ್ಲಿರುವ ಹುಡುಗರ ಸಂಗಡ ಹಾಡು, ಗಳನ್ನು ಹೇಳುತ್ತಾ, ಪರಿಶುದ್ಧವಾದ ವೇಗವತೀನದಿಯ ತೀರದ ಒಂದುಕಡೆಯಲ್ಲಿ ಮಲಗಿಕೊಂಡನು. ಕೂಲಿಯುವನ ವೇಷದಿಂದ ಇರುವ ಶಿವನು ಹೀಗೆ ವಿನೋದವನ್ನು ಮಾಡುತ್ತಿರುವಾಗ ಕೂಲಿಯವರಿಗೆಲ್ಲರಿಗೂ ಮೇಲುವಿಚಾರಣೆ ಮಾಡುವವನು ಬಂದು ನೋಡಿದನು. ಆಗ ಇವನನ್ನು ನೋಡಿ ಬಹಳ ಕೋಪಗೊಂಡನು. ವಿನೋದ

ಕೋಽಯಂ ಲೀಲಾಪರಶ್ಶೇತೇ ಪಪ್ರಚ್ಛೇತಿ ಸಮೀಪಗಾನ್ ।
ಪಿಷ್ಟಾಂಬಾಯಾಶ್ಚ ಭೃತಕ ಇತಿ ತೇಽಕಥಯರ್ಜನಾಃ ॥ ೬೦ ॥

ತತಃ ಸ ತಂ ಸಮುತ್ಥಾಪ್ಯ ಪ್ರಭರ್ತ್ಸ್ಯ ಭೃಶಮಬ್ರವೀತ್ ।
ಆಕಾರೇಣ ಭವಾನ್ ಪೂಜ್ಯೋ ನೃಪೇಶ ಇತಿ ಲಕ್ಷ್ಯತೇ ॥ ೬೧ ॥

ಅಯಂ ಪೂಜ್ಯೋ ನಾನ್ಯಥೇತಿ ವ್ರೋಢಾತು ಜ್ಞಾಯತೇ ಮನಃ ।
ತ್ವಯಾ ಮೃದ್ಭಾರ ಏಕೋಽಪಿ ನಕ್ಷಿಪ್ತೋದ್ಯ ನದೀತಟೇ ॥ ೬೨ ॥

ಜಲಪ್ರವಾಹಂ ವಹತಿ ತ್ವದಂಶೇಭಿದ್ಯ ವೈ ತಟಂ ।
ಆಗಚ್ಛ ಸಚಿವಾಭ್ಯಾಶಂ ದರ್ಶಯಿಷ್ಯಾಮಿ ದುರ್ಮದಂ ॥ ೬೩ ॥

ಪಿಷ್ಟಾನ್ಗೃಹೀತ್ವಾ ಬಹುಲಂ ಭಕ್ಷಯಿತ್ವಾ ಶಯಿಷ್ಯಸಿ ।
ಏವಮುಕ್ತವತಾನೇನ ಸಾರ್ಧಂ ಕಲಹವಾನ್ ಹರಃ ॥ ೬೪ ॥

---

ದಲ್ಲಿ ಆಸಕ್ತನಾಗಿ ಮಲಗಿರುವ ಕೂಲಿಯವನು ಯಾರು ಎಂದು ಅವನು ಹತ್ತಿರದಲ್ಲಿರುವವರನ್ನು ಕೇಳಿದನು. ಅವರು "ಹಿಟ್ಟು ಮಾರುವ ಮುದುಕಿಯ ಆಳು ಇವನು" ಎಂದು ಉತ್ತರವನ್ನು ಹೇಳಿದರು.

೬೧-೬೪. ಅವನು ಮಲಗಿದ್ದವನನ್ನು ಎಬ್ಬಿಸಿ "ನಿನ್ನ ಆಕಾರವನ್ನು ನೋಡಿದರೆ ಮರ್ಯಾದೆಗೆ ತಕ್ಕಂತೆ ಕಾಣುತ್ತಿದೆ. ನೀನು ರಾಜನ ಹಾಗೆ ಕಾಣುತ್ತೀಯೆ. ಇವನು ಪೂಜ್ಯನು. ಇದರಲ್ಲಿ ಸಂಶಯವಿಲ್ಲವೆಂದು ಮನಸ್ಸಿಗೆ ತೋರುವುದು. ಆದರೆ ನೀನು ಮಣ್ಣನ್ನು ಹೊರುವವನಾಗಿದ್ದೀಯೆ. ನಿಶ್ಚಯವಾಗಿಯೂ, ಈವಾಗ ನದೀತೀರದಲ್ಲಿ ನೀನು ಒಂದು ಮಂಕರಿಯಷ್ಟು ಮಣ್ಣನ್ನೂ ಹೊತ್ತು ಹಾಕಿಲ್ಲ. ನೀನು ಕೆಲಸಮಾಡುವಭಾಗದಲ್ಲಿ ನದೀಪ್ರವಾಹವು ದಡವನ್ನು ಮೀರಿ ಹರಿಯುತ್ತಾ ಇದೆ. ನಿನ್ನ ದುರಹಂಕಾರವನ್ನು ಮಂತ್ರಿಗೆ ಹೇಳುತ್ತೇನೆ. ನೀನು ಮಂತ್ರಿಯ ಹತ್ತಿರಕ್ಕೆ ನಡಿ. ಹಿಟ್ಟನ್ನು ಮಾತ್ರ ಹೆಚ್ಚಾಗಿ ತೆಗೆದು ತಿಂದುಕೊಂಡು ಮಲಗಿರುತ್ತೀಯೆ" ಎಂದು ಹೇಳಿದನು. ಅವನ ಮಾತನ್ನು ಕೇಳಿ ಮುದುಕಿಯ ಕಡೆಯ ಕೂಲಿಯವನಾದ ಈಶ್ವರನು ಅವನ ಸಂಗಡ ಜಗಳವಾಡಿದನು.

ಸಚಿವಸ್ಸಹಸಾ ಪ್ರಾಪ್ಯ ಸುಸ್ಮಿತಾನನಮಂಡಲಃ ।
ಸಚಿವೋಽಪಿ ತಮಾಲೋಕ್ಯ ಅಪಚ್ಛತ್ಕಸ್ತ್ವಮಿತ್ಯಪಿ ॥ ೬೫ ॥

ಅಹಂ ತು ಮಧುರಾಮಧ್ಯೇ ನಿವಾಸೀ ಸರ್ವಭಾರಧೃಕ್ ।
ಪಿತಾ ಚ ಮಾತಾ ಭ್ರಾತಾ ಚ ನಾಸ್ತಿ ಮೇ ಬಾಂಧವಾ ಅಪಿ ॥ ೬೬ ॥

ಕಶ್ಚಿದುತ್ತರದೇಶೇಽಸ್ತಿ ಸಖಾ ಧನಪತಿರ್ಮಮ ।
ಸತಾಂ ಸುರಕ್ಷಕೋಽಹಂ ತು ಪರದೇಶೀ ಸುರಕ್ಷಕಃ ॥ ೬೭ ॥

ಮಯಾ ಕಾರ್ಯಂ ಕಿಂ ತವಾದ್ಯ ನ ಬಿಭೇಮಿ ನೃಪಸ್ಯ ಚ ।
ಪಿಷ್ಟಾಂಬಾಯಾಶ್ಚ ಕೃಪಯಾ ಮೃದ್ಭಾರಂ ಧರ್ತುಮಾಗತಂ ॥ ೬೮ ॥

ಇತ್ಯುಕ್ತವಂತಂ ಭೃತಕಂ ಮಂತ್ರೀ ಪ್ರತ್ಯಬ್ರವೀತ್ಕ್ರುಧಾ ।
ತ್ವಂ ತು ನಿರ್ಗುಣ ಏವಾಸಿ ಗುಣವಾನಿವ ಲಕ್ಷ್ಯಸೇ ॥ ೬೯ ॥

---

೬೫-೬೮. ಮಂತ್ರಿಗಳೂ ಬೇಗನೆ ಬಂದು ನೋಡಿದರು. ಅವರಿಗೂ ಅವನನ್ನು ನೋಡಿ ನಗುವು ಬಂದಿತು. ಅವರಲ್ಲಿ ಒಬ್ಬ ಮಂತ್ರಿಯು "ಇವನು ಯಾರು" ಎಂದು ಪ್ರಶ್ನೆ ಮಾಡಿದನು. ಆಗ ಅವನು, "ನಾನು ಮಧುರಾನಗರದಲ್ಲಿ ವಾಸ ಮಾಡುವವನು. ಎಲ್ಲಾ ಹೊರೆಯನ್ನೂ ನಾನು ಹೊರುತ್ತಿರುವೆನು. ನನಗೆ ತಂದೆಯೂ, ತಾಯಿಯೂ, ಬಂಧುವೂ ಬಳಗವೂ ಇಲ್ಲ. ಉತ್ತರದೇಶದಲ್ಲಿ ನನಗೆ ಒಬ್ಬ ಸ್ನೇಹಿತನಿರುವನು. ಅವನು ಬಹಳ ಹಣಗಾರನು. ನಾನು ಸತ್ಪುರುಷರನ್ನು ರಕ್ಷಿಸುವವನು ಪರದೇಶಿಯಾಗಿ ದಿಕ್ಕಿಲ್ಲದವನಾದರೂ ನಾನು ಎಲ್ಲರನ್ನೂ ರಕ್ಷಿಸುತ್ತಿರುವೆನು. ನಿನಗೆ ನನ್ನಿಂದ ಯಾವ ಕಾರ್ಯವಾಗಬೇಕಾಗಿರುವುದು. ಅದನ್ನು ಹೇಳು ನಾನು ರಾಜನಿಗೂ ಹೆದರುವವನಲ್ಲ. ಆದರೆ ಹಿಟ್ಟನ್ನು ಮಾರುವ ಮುದುಕಿಯ ವಿಷಯದಲ್ಲಿ ದಯೆಯಿಂದ ಮಣ್ಣನ್ನು ಹೊರುವುದಕ್ಕೆ ಬಂದಿರುವೆನು" ಎಂದು ಮಂತ್ರಿಗೆ ಉತ್ತರವನ್ನು ಹೇಳಿದನು.

೬೯-೭೩. ಮಂತ್ರಿಗೆ ಕೂಲಿಯವನ ವೇಷದಿಂದ ಇರುವ ಅವನ ಮಾತನ್ನು ಕೇಳಿ ಕೋಪವುಂಟಾಯಿತು. ಆಗ ಮಂತ್ರಿಯು "ನೀನು ಗುಣವಂತನಾಗಿರುವಂತೆ

ನಿತರಾಂ ಗರ್ವಯುಕ್ತಶ್ಚ ಸ್ವಾಧೀನೋಹಮಿದಂ ವಚಃ ।
ನ ಬಿಭೇಮಿಹ್ಯಹಂ ರಾಜ್ಞ ಇತಿ ತ್ವಂ ಭಾಷಸೇ ಕಿಲ ॥ ೭೦ ॥

ಪ್ರಹಾರಯೋಗ್ಯೋ ಥಾಪಿ ತ್ವಾ ಧರ್ಮಂ ನ ಪ್ರಹರಾಮ್ಯಹಂ ।
ಸದ್ಯಃ ಪೂರಯತೇ ಕೂಲಂ ಗಂಭೀರಂ ತ್ವಂ ತು ಮೃದ್ಘರೈಃ ॥ ೭೧ ॥

ನ ಕರಿಷ್ಯಥ ಯೇ ರಾಜ್ಞಾಂ ಪ್ರಹಾರಸ್ತೇ ಭವಿಷ್ಯತಿ ।
ಆಗಮಿಷ್ಯತಿ ರಾಜಾದ್ಯ ದ್ರಷ್ಟುಂ ನದ್ಯಾಸ್ತಟಂ ಪ್ರಭುಃ ॥ ೭೨ ॥

ಕೋಪಯುಕ್ತಸ್ತು ರಾಜಾ ಹಿ ಅರಿಮರ್ದನನಾಮವಾನ್ ।
ಇತ್ಯುಕ್ತ್ವಾ ಪ್ರೇಷಯಾಮಾಸ ಸ ಮಂತ್ರೀ ಭೃತಕಂ ಚ ತಂ ॥ ೭೩ ॥

ಪುನರ್ಭೃತಕ ಆಗತ್ಯ ಪೂರ್ವವತ್ತಟನೀತಟೇ ।
ಆಸೀನಸ್ಸ್ವ ಶಯಾನಸ್ಸ್ವ ಪಿಷ್ಟಂ ಸಂಭಕ್ಷಯನ್ ಸ್ಥಿತಃ ॥ ೭೪ ॥

---

ಕಾಣಿಸುತ್ತೀಯೆ. ವಸ್ತುತಃ ಗುಣವಂತನಲ್ಲಿ ಬಹಳ ಅಹಂಕಾರಿಯಾಗಿರುತ್ತೀಯೆ. ನಿನಗೆ ತೋರಿದಂತೆ ಮಾತನಾಡುತ್ತಿರುತ್ತೀಯೆ. ರಾಜನಿಗೆ ಹೆದರುವುದಿಲ್ಲವೆಂದು ನೀನು ಹೇಳಿರುತ್ತೀಯೆ. ಆದ್ದರಿಂದ ನೀನು ಶಿಕ್ಷೆಗೆ ಅರ್ಹನಾಗಿರುತ್ತೀಯೆ. ಆದಾಗ್ಯೂ ನಾನು ನಿನ್ನನ್ನು ಹೊಡೆಯುವುದು ಧರ್ಮವಲ್ಲ. ನದೀಪ್ರವಾಹವು ಗಂಭೀರವಾಗಿ ಬರುತ್ತಿರುವ ಕಾರಣ ಕೂಡಲೇ ದಡವನ್ನು ಮಣ್ಣಿನಿಂದ ಕಟ್ಟು. ನೀನು ಈ ಕಾರ್ಯವನ್ನು ಮಾಡದಿದ್ದರೆ ರಾಜನಿಂದ ನಿನಗೆ ಏಟುಗಳು ಬೀಳುವುವು. ರಾಜನೂ ಕೂಡ ಈಗ ಈ ನದಿಯ ದಡವನ್ನು ನೋಡುವುದಕ್ಕಾಗಿ ಬರುವನು. ಅವನು ಸ್ವಭಾವದಿಂದ ಬಹಳ ಕೋಪಿಷ್ಠನು. ಆದ್ದರಿಂದಲೇ ಅವನಿಗೆ ಅರಿಮರ್ದನನೆಂದು ಹೆಸರು ಬಂದಿರುವುದು." ಎಂದು ಹೇಳಿ ಆ ಕೂಲಿಯವನನ್ನು ಕಳುಹಿಸಿದನು.

೭೪–೭೯. ಕೂಲಿಯವನು ಪುನಃ ನದಿಯ ದಡಕ್ಕೆ ಬಂದು ಮೊದಲಿನಂತೆಯೇ ಕೂತುಕೊಂಡಿರುವುದು, ನಿಂತುಕೊಂಡಿರುವುದು, ಮಲಗಿರುವುದು,

**ಭೂಪಾಜ್ಞಾಕಾರಿಣಃ ಕೇಚಿದ್ವಟವಃ ಪಟವೋಽಪ್ಯಥ ।**
**ತಟಮಾಲೋಕಯಂತಸ್ತೇ ನಿಮ್ನಂ ದೇಶಂ ವಿಲೋಕ್ಯ ಚ ॥ ೨೫ ॥**

**ಕಸ್ಯಾಂಶೋಽಯಂ ನಿಮ್ನತರ ಇತ್ಯಪೃಚ್ಛನ್ ಸಮೀಪಗಾನ್ ।**
**ತೇ ಪ್ರಾಹುರಿತಿ ವೋಢಾರಃ ಪುರಸ್ಯಾಗ್ನೇಯದೇಶತಃ ॥ ೨೬ ॥**

**ವಸಂತ್ಯಾ ಪಿಷ್ಟವಿಕ್ರೇತ್ರ್ಯಾ ಅಂಶೋ ನಿಮ್ನತರೋ ಹ್ಯಯಂ ।**
**ಇತ್ಯಾಕರ್ಣ್ಯ ವಚಸ್ತೇಷಾಂ ವಟವಃ ಪಟವಶ್ಚ ತೇ ॥ ೨೭ ॥**

**ಆರೇತ್ಯುತ್ಥಾಯ ಚಾಕೃಷ್ಯ ತಂ ಪ್ರಭರ್ತ್ಸ್ಯೈವಮಬ್ರುವೀತ್ ।**
**ರೇ ರೇ ಭೃತಕ ದುರ್ಬುದ್ಧೇ ತ್ವಂಶೋ ನಿಮ್ನತರಸ್ತವ ॥ ೨೮ ॥**

**ತ್ವಂ ಪಿಷ್ಟಾರ್ಥಭಕ್ಷಯಿತ್ವಾಥ ಪಿಷ್ಟಾಂಬಾಯಾಶ್ಚ ವೇತನಂ ।**
**ನದಧಾಸಿ ಮೃದಂ ಕಿಂಚಿಚ್ಛೇದಿತಂ ಚ ನದೀತಟೇ ॥ ೨೯ ॥**

---

ಹಿಟ್ಟನ್ನು ತಿನ್ನುತ್ತಿರುವುದು. ಈ ಕೆಲಸಗಳನ್ನು ಮಾಡುತ್ತಾ ಕಾಲಕಳೆಯುತ್ತಿದ್ದನು ರಾಜನಕಡೆಯ ಅಧಿಕಾರಿಗಳಲ್ಲಿ ಕೆಲವರು ನದಿಯದಡದಲ್ಲಿ ಆಪ್ರದೇಶವು ಎತ್ತರವಾಗದೆ ಇರುವುದನ್ನು ನೋಡಿದರು. "ಇದು ಯಾರಭಾಗಕ್ಕೆ ಸೇರಿರುವುದು" ಎಂದು ಹತ್ತಿರವಿರುವವರನ್ನು ಪ್ರಶ್ನೆಮಾಡಿದರು. ಮಣ್ಣು ಹೊರುತ್ತಿರುವ ಆ ಕೂಲಿಯವರು "ಈ ನಗರದ ಆಗ್ನೇಯದಿಕ್ಕಿನಲ್ಲಿ ವಾಸಮಾಡುತ್ತಿರುವ ಹಿಟ್ಟು ಮಾರುವ ಮುದುಕಿಯು ಕಟ್ಟಿಸಬೇಕಾದ ಭಾಗವು" ಎಂದು ಹೇಳಿದರು ಅದನ್ನು ಕೇಳಿ ಬುದ್ಧಿವಂತರಾದ ಅಧಿಕಾರಿಗಳು ಮುದುಕಿಯ ಕಡೆಯ ಕೂಲಿಯವನನ್ನು ಎಲೋ ! ಮೇಲಕ್ಕೆ ಏಳು, ದುರ್ಬುದ್ಧಿಯಾದ ಕೂಲಿಯವನೆ, ನೀನು ಮಾಡಬೇಕಾದ ಕೆಲಸವು ಹಾಗೆಯೇ ಇದೆ. ನೀನುಮಾತ್ರ ಮುದುಕಿಯು ಕೊಟ್ಟ ಕೂಲಿಯಾದ ಹಿಟ್ಟನ್ನು ಚೆನ್ನಾಗಿ ತಿಂದೆ. ಬಿದ್ದು ಹೋಗಿರುವ ಹೊಳೆಯ ದಡಕ್ಕೆ ಮಣ್ಣನ್ನು ಹೊತ್ತು ಹಾಕುತ್ತಾ ಇಲ್ಲ" ಎಂದು ರಾಜನ ಅಪ್ಪಣೆಯನ್ನು ಕೇಳುವ ಅಧಿಕಾರಿಗಳು ಹೇಳಿದರು.

ಇತ್ಯುಕ್ತವತ್ಸು ವಟುಷು ರಾಜ್ಞಃ ಶಾಸನಕಾರಿಷು ।
ತ್ವದ್ದೌಷ್ಟ್ಯಕೃತ್ಯಂ ದುರ್ಬುದ್ಧೇ ಜಾನಾತಿ ಯದಿ ಭೂಪತಿಃ ॥ ೮೦ ॥

ದೃಢಃ ಪ್ರಹಾರಸ್ಸರ್ವೇಷಾಂ ತವ ಚೈವ ಭವಿಷ್ಯತಿ ।
ತಸ್ಮಾದಪಿ ಕುರು ಕ್ಷಿಪ್ರಂ ಭೇದಿತಂ ಚ ದೃಢಂ ಕುರು ॥ ೮೧ ॥

ನದೀತಟಂ ಚ ಭೃತಕೈಸ್ತ್ವದಂಶಂ ಶೇಷು ಸಂಸ್ಥಿತೈಃ ।
ಇತ್ಯುಕ್ತವತ್ಸು ವಟುಷು ರಾಜ್ಞಃ ಶಾಸನಕಾರಿಷು ॥ ೮೨ ॥

ತೃಣೀಕೃತ್ಯ ಚ ತಾನ್ ಸರ್ವಾನ್ ಪ್ರಾಹ ವಾಚಾ ಸ ಈಶ್ವರಃ ।
ತೂಷ್ಣೀಂ ಭವಂತೋ ಗಚ್ಛಂತು ಸ್ವಾಧೀನೋಽಸ್ಮಿ ಹಿ ನಿರ್ಭಯಃ ॥ ೮೩ ॥

ಸರ್ವೇಷಾಂ ಭೂಭೃತಾಂ ರಾಜಾ ಅಹಮೇವ ಹಿ ಪಾಂಡ್ಯಪಃ ।
ನಾರಿಮರ್ದನರಾಜಾ ತು ಮದ್ಭೃತ್ಯಶ್ಚಾರಿಮರ್ದನಃ ॥ ೮೪ ॥

ರಾಜ್ಞಾ ಸಹ ವದಂತ್ವೇವಂ ಮತ್ಪ್ರಭಾವಮವೈತು ಸಃ ।
ಇತಿ ತದ್ಗಿರಮಾಕರ್ಣ್ಯ ಸರ್ವಮಪ್ರತಿಘಾತಿತಾಃ ॥ ೮೫ ॥

---

೮೦–೮೫. ಅವರು ಆ ಕೂಲಿಯವನ ಸಂಗಡ "ಎಲೈ ಕೆಟ್ಟ ಬುದ್ಧಿಯವನೇ, ರಾಜನು ನಿನ್ನ ತುಂಟತನವನ್ನು ತಿಳಿದರೆ, ನಮಗೂ ನಿನಗೂ ಎಲ್ಲರಿಗೂ ಬಲವಾದ ಏಟುಗಳು ಬೀಳುವುವು. ಆದ್ದರಿಂದ, ನೀನು ಬೇಗ ಬಿದ್ದುಹೋಗಿರುವ ದಡದ ಕೆಲಸವನ್ನು ಸರಿಪಡಿಸು. ನೀನು ಮಾಡದಿದ್ದರೆ ನಿನ್ನ ಕೆಲಸವನ್ನು ಇತರ ಕೂಲಿಯವರಿಂದಲಾದರೂ ಮಾಡಿಸು" ಎಂದುಹೇಳಿದರು ಈಶ್ವರನು ಹೀಗೆ ಹೇಳಿದ ಅವರ ಮಾತನ್ನು ಕೇಳಿ ಅವರೆಲ್ಲರನ್ನೂ ಕಡ್ಡಿಗಿಂತ ಕಡೆಯಾಗಿ ತಿಳಿದು "ನೀವೆಲ್ಲರೂ ಸುಮ್ಮನೆ ಹೋಗಿರಿ ನನಗೆ ಯಾವ ಭಯವೂ ಇಲ್ಲ. ನಾನು ಸ್ವತಂತ್ರನಾಗಿರುವವನು. ರಾಜರಿಗೆಲ್ಲರಿಗೂ ನಾನು ರಾಜನೇ ಆಗಿರುವೆನು. ಪಾಂಡ್ಯದೇಶದ ರಾಜನೇ ನಾನು. ಪಾಂಡ್ಯದೇಶಕ್ಕೆ ಅರಿಮರ್ದನನು ರಾಜನಲ್ಲ. ಅವನು ನನ್ನ ಸೇವಕನು. ನೀವು ರಾಜನಸಂಗಡ ಈ ಮಾತನ್ನು ಹೇಳಿರಿ. ಅವನಿಗೆ ನನ್ನ ಮಹಿಮೆಯು ತಿಳಿಯಲಿ." ಎಂದು ಉತ್ತರವನ್ನು ಹೇಳುತ್ತಾ, ಅವರು ಹಿಂತಿರುಗುವಂತೆ ಮಾಡಿದನು. ಅವನ ಮಾತನ್ನು ಕೇಳಿ ಅವರು ಸುಮ್ಮನಾದರು.

ತೇ ಪ್ರಾಪ್ಯ ಪಾಂಡ್ಯಭೂಪಾಲಂ ಪ್ರಾಹುಶ್ಚೇಷ್ಟಾಶ್ಚ ತತ್ಕೃತಾಃ ।
ಘಾಟಿತಂ ಚ ನದೀತೀರಮುತ್ಕೂಲಂ ತಸ್ಯ ಚಾಂಶಕೇ ॥ ೮೬ ॥

ಸರ್ವೈರ್ಗರಪ್ಯನಿವಾರ್ಯಂ ತತ್ಪಾತಾಲಂ ಘಾತಮೇವ ಚ ।
ತಾಂ ಶ್ರುತ್ವಾ ಚ ಮಹೀಪಾಲೋ ಮಹಾಕೋಪಸಮನ್ವಿತಃ ॥ ೮೭ ॥

ಕೃತ್ಯಾಕೃತ್ಯಮವಿಜ್ಞಾಯ ಈಶಾಜ್ಞಾಪಾರವಶ್ಯತಃ ।
ಆಸ್ಥಾನಮಂಟಪಾತ್ತೂರ್ಣಂ ನಿರ್ಗತ್ಯ ಸ್ವಭಟ್ಯೈಃ ಸಹ ॥ ೮೮ ॥

ಸೌವರ್ಣವೇತ್ರವಿಲಸತ್ಪಾಣಿಪಲ್ಲವಭಾಸುರಃ ।
ಆಯಯಾವತಿವೇಗೇನ ತತ್ರೈವ ತಟನೀತಟೇ ॥ ೮೯ ॥

ಮಾಯಯಾ ಭೃತಕಾಕಾರಂ ಸುಂದರೇಶಂ ವಿಲೋಕ್ಯ ಸಃ ।
ನಿಮ್ನಂ ತರಂಗಿಣೀತೀರಂ ವಾರಿವೇಗಾತಿಘಾಟಿತಂ ॥ ೯೦ ॥

---

೮೬–೮೯. ಆ ಅಧಿಕಾರಿಗಳು ಪಾಂಡ್ಯರಾಜನ ಹತ್ತಿರಕ್ಕೆ ಹೋಗಿ ಅವನು ಮಾಡುತ್ತಿರುವ ಕೆಲಸವನ್ನು ತಿಳಿಸಿದರು. ಮತ್ತು ನದಿಯುದಡವು ಬಿದ್ದುಹೋಗಿರುವುದನ್ನೂ ಅದು ಯಾರಿಗೆ ಸಂಬಂಧಪಟ್ಟಿರುವುದು, ಎಂಬುದನ್ನೂ ಮತ್ತು ಅದು ಬಹಳ ಹಳ್ಳವಾಗಿ ಕೊರಕಲಾಗಿ ಹೋಗಿರುವುದನ್ನೂ ತಿಳಿಸಿದರು. ರಾಜನು ಅದನ್ನು ಕೇಳಿ ಬಹಳ ಕೋಪದಿಂದ ಕೂಡಿ ವಿವೇಕವಿಲ್ಲದವನಾಗಿ ಪರಮೇಶ್ವರನ ಆಜ್ಞಾನುಸಾರವಾಗಿ ಸಭೆಯಿಂದ ತನ್ನ ಸೇವಕನೊಡನೆ ಚಿನ್ನದ ಬೆತ್ತವನ್ನು ಕೈಯ್ಯಲ್ಲಿ ಹಿಡಿದುಕೊಂಡು ನದೀ ತೀರಕ್ಕೆ ಬೇಗ ಬಂದನು.

೯೦–೯೨ ಅಲ್ಲಿ ಅವನು ಮಾಯೆಯಿಂದ ಕೂಲಿಯವನ ಆಕಾರವನ್ನು ಧರಿಸಿರುವ ಸುಂದರೇಶ್ವರನನ್ನು ನೋಡಿದನು. ನದೀ ತೀರವು ಪ್ರವಾಹದ ವೇಗದಿಂದ ಬಹಳ ಕುಸಿದು ಹೋಗಿತ್ತು. ಅದನ್ನು ನೋಡಿದ್ದರಿಂದ ರಾಜನ ಕೋಪವು ಇನ್ನೂ

ಪುನಃ ಕೋಪಾನಲಜ್ವಾಲಾಯುತಃ ಪಾಂಡ್ಯಮಹೀಪತಿಃ ।
ಕೋಪಾತಿರಿಕ್ತನೇತ್ರಸ್ಸಂಸ್ತದಾ ಪಶ್ಯನ್ನೃಪಶ್ಚ ತಂ ॥ ೯೧॥

ಪ್ರಹರ್ತುಮುದ್ಯತಂ ಭೂಪಂ ದೃಷ್ಟ್ವಾ ಸರ್ವೇಪಿ ಕರ್ಮಕಾಃ ।
ವಹ ಮೃದ್ಭಾರಮಾಶು ತ್ವಂ ಪ್ರಹರ್ತುಂ ಚಾಯಯೌ ನೃಪಃ ॥ ೯೨ ॥

ಇತ್ಯೂಚುರ್ಭೃತಕಾಕಾರಮೀಶ್ವರಂ ವಿಸ್ಮಯಾನ್ವಿತಾಃ ।
ಶ್ರುತ್ವಾ ಭೀತಿಯುತೈರುಕ್ತಾಂ ವಾಚಂ ಭೀತಿವಿವರ್ಜಿತಃ ॥ ೯೩ ॥

ಮೃದ್ಭಾರಂ ಶಿರಸಾ ಧೃತ್ವಾ ಖನಿತ್ರಂ ಸ್ಕಂಧದೇಶತಃ ।
ಮಂದಂ ಮಂದಂ ಚಚಾರಾಸೌ ನ ನಿಕ್ಷಿಪ್ಯ ಮೃದಂ ತಟೇ ॥ ೯೪ ॥

ರೋಧಃಪ್ರಬಂಧನೇ ಚಾಸ್ಯ ನಹೀಚ್ಛಾ ವಿದ್ಯತೇ ಯತಃ ।
ಪ್ರಹಾರ ಏವ ಕರ್ತವ್ಯ ಇತಿ ನಿಶ್ಚಿತ್ಯ ಪಾಂಡ್ಯರಾಟ್ ॥ ೯೫ ॥

---

ಹೆಚ್ಚಿತು ಕೆಂಪಾದ ಕಣ್ಣಿನಿಂದ ರಾಜನು ಆ ಕೂಲಿಯವನನ್ನು ನೋಡಿದನು. ಮತ್ತು ರಾಜನು ಅವನನ್ನು ಹೊಡೆಯುವವನು ಎಂದು ತಿಳಿದು ಇತರ ಕೂಲಿಯವರು ಎಲ್ಲರೂ "ರಾಜನು ನಿನ್ನನ್ನು ಹೊಡೆಯುವುದಕ್ಕಾಗಿ ಬರುತ್ತಿರುವನು. ಮಣ್ಣನ್ನು ಬೇಗ ಹೊತ್ತು ಹಾಕು" ಎಂದು ಕೂಲಿಯ ವೇಷದಿಂದ ಇರುವ ಈಶ್ವರನಿಗೆ ಹೇಳಿದರು. ಆಗ ಅವನು ಅವರ ಮಾತನ್ನು ಕೇಳಿ ಹೆದರದೆ ಇದ್ದನು. ಇದರಿಂದ ಅವರು ಅವನ ಧೈರ್ಯವನ್ನು ನೋಡಿ ಆಶ್ಚರ್ಯವುಳ್ಳವರಾಗಿದ್ದರು.

೯೩-೯೭. ಹೆದರಿಕೆಯಿಂದ ಕೂಡಿದವರಾಗಿರುವ ಅವರು ಹೇಳಿರುವ ಮಾತನ್ನು ಕೇಳಿ, ಮುದುಕಿಯ ಕೂಲಿಯವನು ಹೆದರದೆ ಮಣ್ಣಿನ ಮಂಕರಿಯನ್ನು ಹೊತ್ತು ಕೊಂಡು ಹೆಗಲಿನಮೇಲೆ ಗುದ್ದಲಿಯನ್ನು ಹಾಕಿಕೊಂಡು, ಮೆಲ್ಲ ಮೆಲ್ಲಗೆ ನದೀತೀರದಲ್ಲಿ ಹೆಜ್ಜೆಯನ್ನು ಹಾಕುತ್ತಿದ್ದನು. ಇದರಿಂದ ಕೊಂಚ ಮಣ್ಣು ಹಳ್ಳಕ್ಕೆ ಬೀಳುತ್ತಾ ಇತ್ತು. ಪಾಂಡ್ಯರಾಜನು ಇವನ ಕೆಲಸವನ್ನು ನೋಡಿ

ತತ್ಸಮೀಪಂ ಚ ಸಂಪ್ರಾಪ್ಯ ತ್ವರಯಾ ತಸ್ಯ ಪೃಷ್ಠತಃ ।
ಪದ್ಮಕೋಮಲಪಾಣಿಸ್ಥ ಸುವರ್ಣಮಯವೇತ್ರಕೈಃ ॥ ೯೬ ॥

ಉದ್ಗಾಢಂ ತಾಡಯಾಮಾಸ ತದ್ದೇಹಾಪರಗಾತ್ರಕೇ ।
ರಾಜನ್ ಕಿಂ ಮಾಂ ಪ್ರಹರಸಿ ಗಮಿಷ್ಯಾಮೀತಿ ಸೋಽವದತ್ ॥ ೯೭ ॥

ತೀರೋಪಾಂತೇ ಪ್ರೋಥ್ಯಮಧ್ಯೇ ದದೃಶು ಸ್ತೇ ನ ಕೇಚನ ।
ಪಿಷ್ಟಾಂಬಾಯಾಃ ಕುಟೀಂ ಪ್ರಾಪ್ಯ ತೀರಬಂಧಾಧಿಕಾರಿಣಃ ॥ ೯೮ ॥

ಆಕೃಷ್ಯ ಜರಠಾಂ ಶೀಘ್ರಂ ಪೀಡಿತುಂ ಭೃಶಮುದ್ಯತಾಃ ।
ಕ್ವ ತೇ ಭೃತಕ ಇತ್ಯೂಚುಸ್ತಂ ದರ್ಶಯ ಪುರೋಽಧುನಾ ॥ ೯೯ ॥

---

"ದಡವನ್ನು ಕಟ್ಟುವುದರಲ್ಲಿ ಇವನಿಗೆ ಇಚ್ಛೆಯು ಇಲ್ಲ. ಆದ್ದರಿಂದ ನಿರ್ಬಂಧಮಾಡಿ ಏಟನ್ನು ಹೊಡೆದು ಇವನಿಂದ ಕೆಲಸವನ್ನು ಮಾಡಿಸಬೇಕು." ಎಂದು ನಿಶ್ಚಯ ಮಾಡಿದನು. ಆಗ ರಾಜನು ಇವನ ಹತ್ತಿರಕ್ಕೆ ಬಂದು ಬೇಗ ಇವನ ಹಿಂದುಗಡೆ ನಿಂತು ಕೊಂಡನು. ಪದ್ಮದಂತೆ ಇರುವ ತನ್ನ ಸುಂದರವಾದ ಕೈಯ್ಯಲ್ಲಿರುವ ಚಿನ್ನದ ಬೆತ್ತದಿಂದ ಆ ಕೂಲಿಯವನ ಬೆನ್ನಿನ ಮೇಲೆ ಬಲವಾಗಿ ಹೊಡೆದನು.

೯೮–೯೯. ಎಲೈ ರಾಜನೆ, "ನನ್ನನ್ನು ನೀನು ಹೊಡೆಯುತ್ತೀಯೋ? ಹಾಗಾದರೆ ನಾನು ಹೊರಟು ಹೋಗುತ್ತೇನೆ" ಎಂದು ಆ ಕೂಲಿಯವನು ಹೇಳಿದನು. ಅನಂತರದಲ್ಲಿ ಆ ನದಿಯ ತೀರದಲ್ಲಿ ಇರುವ ಕೂಲಿಯವರ ಗುಂಪಿನಲ್ಲಿ ಯಾರೂ ಅವನನ್ನು ತಿರಿಗಿ ಕಾಣಲೇ ಇಲ್ಲ. ಆಗ ಅಧಿಕಾರಿಗಳು ಹಿಟ್ಟನ್ನು ಮಾರುವ ಮುದುಕಿಯ ಗುಡಿಸಿಲಿನ ಹತ್ತಿರಕ್ಕೆ ಬಂದು ನದೀತೀರದ ಕೆಲಸವನ್ನು ಮಾಡಲು ಆಳನ್ನು ಕಳುಹಿಸುವುದಕ್ಕಾಗಿ ನಿರ್ಬಂಧ ಪಡಿಸಿದರು." ನಿನ್ನ ಕಡೆಯ ಆಳು ಎಲ್ಲಿ ಅವನನ್ನು ತೋರಿಸು" ಎಂದು ಆ ಮುದುಕಿಯನ್ನು ಕೇಳಿದರು.

ತಥೇತ್ಯಾಹ ಚ ಸಾ ಸ್ವಾಂತೇ ಸ್ಮರಂತೀ ಸುಂದರೇಶ್ವರಂ ।
ಶ್ರೀಹಾಲಾಸ್ಯಪ್ರಭೋ ಶಂಭೋ ಸಾಕ್ಷೀ ತ್ವಂ ಸರ್ವಕರ್ಮಣಾಂ ॥ ೧೦೦ ॥

ಭೃತಕಾಯ ಚ ಕಸ್ಮೈಚಿದಿಷ್ಟಾಃ ಪಿಷ್ಟಾ ಮಯಾರ್ಪಿತಾಃ ।
ನದೀತೀರಂ ದೃಢಯಿತುಂ ತತ್ಸತ್ಯಂ ಸೋಽಪಿ ನಾಕರೋತ್ ॥ ೧೦೧ ॥

ಅನಾಥನಾಥ ಭಗವನ್ ದಯಾಳೋ ಮೇ ದಯಾಂ ಕುರು ।
ನ ಸಹಿಷ್ಯಾಮಿ ಬಾಧಾಂ ತ್ವಂ ವ್ಯಪೋಹ್ಯ ಮಮ ಶಂಕರ ॥ ೧೦೨ ॥

ತ್ವತ್ಪಾದಭಕ್ತಾಂ ತ್ವಚ್ಚಿತ್ತಾಂ ಸಂಸಾರಾದುತ್ತರ ಪ್ರಭೋ ।
ಇತಿ ತದ್ದೀನವಚನ ಮಾಕರ್ಣ್ಯ ಕರುಣಾಕರಃ ॥ ೧೦೩ ॥

ವೃಷಭಾರೂಢ ಆಗತ್ಯ ಗೌರ್ಯಾ ಸ್ವೈರ್ಗಣಪೈಸ್ಸಹ ।
ಮಹದ್ವಿಮಾನಮಪಿ ಚ ಕೈಲಾಸಂ ಪ್ರೇಷಯದ್ಗಣೈಃ ॥ ೧೦೪ ॥

---

೧೦೦-೧೦೩. ಆಗ ಆ ಮುದುಕಿಯು ನಾನು "ನನ್ನ ಕಡೆಯ ಆಳನ್ನು ತೋರಿಸುತ್ತೇನೆ." ಎಂದು ಹೇಳಿ ಸುಂದರೇಶ್ವರನನ್ನು ಮನಸ್ಸಿನಿಂದ ಸ್ಮರಿಸುತ್ತಾ "ಹಾಲಾಸ್ಯ ಪ್ರಭುವಾದ ಶಿವನೆ, ನೀನು ಎಲ್ಲಾ ಕೆಲಸಗಳಿಗೂ ಸಾಕ್ಷಿಯಾಗಿ ಇರುತ್ತೀಯೆ. ನಾನು ಒಬ್ಬ ಕೂಲಿಯವನಿಗೆ ಬಹಳ ಚನ್ನಾಗಿರುವ ಹಿಟ್ಟನ್ನು ಕೊಟ್ಟು ನದೀತೀರವನ್ನು ಕಟ್ಟುವುದಕ್ಕೆ ಕಳುಹಿಸಿದ್ದೆ. ಇದು ಸತ್ಯವಾದದ್ದು. ಅವನು ಆ ಕೆಲಸವನ್ನು ಮಾಡಲಿಲ್ಲ. ನೀನು ದಿಕ್ಕಿಲ್ಲದವರಿಗೆ ರಕ್ಷಕನಾಗಿರುತ್ತೀಯೆ. ಮತ್ತು ದಯೆಯುಳ್ಳವನಾಗಿರುತ್ತೀಯೆ. ನನ್ನಲ್ಲಿ ದಯೆಯನ್ನು ತೋರಿಸು. ಅಧಿಕಾರಿಗಳ ಹಿಂಸೆಯನ್ನು ತಪ್ಪಿಸಿ ನನ್ನನ್ನು ಕಾಪಾಡು. ನಿನ್ನ ಪಾದದಲ್ಲಿ ನಾನು ಭಕ್ತಳಾಗಿದ್ದೇನೆ. ನಿನ್ನಲ್ಲಿಯೇ ನಾನು ಮನಸ್ಸನ್ನಿರಿಸಿರುವೆನು. ಎಲೈ ಪ್ರಭುವೇ, ಈ ಸಂಸಾರದಿಂದ ನನ್ನನ್ನು ಉದ್ಧರಿಸು." ಎಂದು ಸಂಕಟದಿಂದ ಹೇಳಿದಳು.

೧೦೪-೧೦೬. ಆಗ ಶಿವನು ಕೂಡಲೆ ತನ್ನ ವಾಹನವಾದ ವೃಷಭವನ್ನು ಏರಿಕೊಂಡು ಗೌರೀದೇವಿಯೂ ಗಣನಾಥರೂ ಇವರೊಡನೆ ಬಂದನು. ಉತ್ತಮವಾದ ವಿಮಾನವನ್ನು ತರಿಸಿದನು. ಆ ಮುದುಕಿಯು ತನ್ನ ಹಳೆಯ ಶರೀರವನ್ನು

ಜರಠತ್ವಂ ಪರಿತ್ಯಜ್ಯ ಪಿಷ್ಟಾಂಬಾ ಯುವತೀ ಸತೀ ।
ತದಾ ತು ವ್ಯೋಮಯಾನಸ್ಥಾ ದಿವ್ಯರೂಪಾ ಸಖೀಜನೈಃ ॥ ೧೦೫ ॥

ಮಹತಾ ವಾದ್ಯಘೋಷೈಶ್ಚ ಕೈಲಾಸಂ ಪ್ರಯಯೌ ತದಾ ।
ಸರ್ವೇ ಜನಾಶ್ಚ ತಾಂ ದೃಷ್ಟ್ವಾ ವಿಸ್ಮಯಂ ಪರಮಂ ಗತಾಃ ॥ ೧೦೬ ॥

ಊಚುಶ್ಚ ರಾಜ್ಞೇ ವೃತ್ತಾಂತಂ ಪಿಷ್ಟಾಂಬಾಯಾ ಗತಿಂ ತದಾ ।
ಯದಾ ಪ್ರಹೃತವಾನ್ ಭೂಪಸ್ತಂ ದೇವಂ ಭೃತಕಾಕೃತಿಂ ॥ ೧೦೭ ॥

ತಾಡಿತೇನ ಚ ವೇತ್ರೇಣ ಪ್ರಹಾರಂ ದ್ವಿಗುಣಂ ಪುನಃ ।
ಪಶ್ಚಾದ್ಭಾಗೇಷು ಜಗತಾಂ ಜಂಗಮಸ್ಥಾವರಾತ್ಮನಾಂ ॥ ೧೦೮ ॥

ಸರ್ವೇಷ್ವಪಿ ಚ ಲಿಂಗೇಷು ದೃಶ್ಯತೇ ವೇತ್ರತಾಡನಂ ।
ಗೃಹಪ್ರಭೃತಿಸಂಭೂತಾ ತತ್ಕೃತಾ ವ್ರಣವೇದನಾ ॥ ೧೦೯ ॥

---

ಬಿಟ್ಟು ಯುವತಿಯಾದಳು. ಉತ್ತಮವಾದ ಸೌಂದರ್ಯವನ್ನು ಹೊಂದಿ ಸಖಿಯರೊಡನೆ ವಿಮಾನವನ್ನು ಹತ್ತಿದಳು. ಆಗ ವಾದ್ಯಗಳು ಬಹಳವಾಗಿ ಧ್ವನಿಮಾಡುತ್ತಿದ್ದುವು. ಪರಮೇಶ್ವರನು ಈ ಪ್ರಕಾರವಾದ ವೈಭವದಿಂದ ಅವಳನ್ನು ಕೈಲಾಸ ಪರ್ವತಕ್ಕೆ ಕಳುಹಿಸಿದನು. ಆ ನಗರದ ಜನರೆಲ್ಲರೂ ಅದನ್ನು ನೋಡಿ ಬಹಳ ಆಶ್ಚರ್ಯಪಟ್ಟರು. ರಾಜನಿಗೆ ಆ ಮುದುಕಿಗೆ ಉಂಟಾದ ಉತ್ತಮ ಗತಿಯನ್ನು ತಿಳಿಸಿದರು.

೧೦೭–೧೧೩. ಕೂಲಿಯವನ ಆಕಾರದಿಂದ ಇದ್ದವನನ್ನು ರಾಜನು ಹೊಡದ ನಂತರ ಆ ಏಟಿಗೆ ಎರಡರಷ್ಟಾಗಿ ಕಾಣುವ ಗೆರೆಯು ಚರಸ್ಥಿರ ರೂಪದಿಂದ ಇರುವ ಜಗತ್ತಿನಲ್ಲಿರುವ ಎಲ್ಲಾ ಶಿವಲಿಂಗಗಳ ಹಿಂಭಾಗದಲ್ಲಿ ಕಂಡುಬಂದವು. ಆಗ ಆ ನಗರದಲ್ಲಿ ಪ್ರತಿಯೊಂದು ಮನೆಯಲ್ಲಿರುವವರೆಲ್ಲರಿಗೂ ಬೆನ್ನಿನಲ್ಲಿ ಬೆತ್ತದ ಎರಡು ಏಟು ಬಿದ್ದಂತೆ ಹುಣ್ಣು ಆಯಿತು. ಬೆತ್ತದ ಆಕಾರದಂತೆ ಇರುವ ಗಾಯವು ಉಂಟಾಯಿತು. ಇದನ್ನು ಎಲ್ಲರೂ ಅನುಭವಿಸುತ್ತಾ ಇದ್ದರು. ಹಿಟ್ಟನ್ನು ಮಾರುವ ಮುದುಕಿಯು

ತತ್ರಸ್ಥಾಶ್ಚ ಜನಾಸ್ಸರ್ವೇ ವೇತ್ರತಾಡನವೇದನಾಂ ।
ಅನುಭೂಯಾಶು ದದೃಶು ಸ್ಸರ್ವೇ ಸ್ವಪಿತರೇಷ್ವಪಿ ॥ ೧೯೦ ॥

ತೀರಂ ಚ ಪೂರಿತಮಭೂತ್ಪಿಷ್ಟಾಂಬಾಂಶಂ ವಿಶೇಷತಃ ।
ಬಹುನಾ ಕಿಂ ನೃಪಾಂಗೇಪಿ ಸಂಜಾತಾ ವ್ರಣವೇದನಾ ॥ ೧೧೧ ॥

ರಾಜಾ ಚ ಸಚಿವಾ ಸ್ಸರ್ವೇ ಪೌರಜಾನಪದಾಶ್ರಯಾಃ ।
ಸಂತಾಡಿತಾ ವಿಸ್ಮಿತಾಶ್ಚ ವಿಶೇಷೇಣ ಭಯಾಕುಲಾಃ ॥ ೧೧೨ ॥

ಅಥ ಸರ್ವೇಪಿ ಸಂಭೂಯ ಭೂಪಾಲಾಗ್ರೇಽಖಿಲಾಜನಾಃ ।
ತಾಡನಂ ವ್ರಣಹೇತುಂ ಚ ಸರ್ವೇಷಾಂ ಪಿತರೇಷು ಚ ॥ ೧೧೩ ॥

ಯದಾ ಜ್ಞಾತು ಮಶಕ್ತಾಸ್ಸ್ಯ ಸ್ಸಂಚಿಂತ್ಯಾಪಿ ಮುಹುರ್ಮುಹುಃ ।
ತದಾ ತು ಖಾದಭೂದ್ವಾಣೀ ಸುಂದರೇಶಮಹೇಶಿತುಃ ॥ ೧೧೪ ॥

---

ಭಾಗವಾಗಿದ್ದ ನದೀ ತೀರವು ಎಲ್ಲವೂ ಚನ್ನಾಗಿ ಕಟ್ಟಿ ಕೆಲಸವು ಪೂರೈಸಿತು. ಹೆಚ್ಚಾಗಿ ಹೇಳಿದ್ದರಿಂದ ಏನು? ರಾಜನ ಬೆನ್ನಿನಲ್ಲಿಯೂ ಬೆತ್ತದ ಏಟು ಬಿದ್ದಂತೆ ಗಾಯವಾಗಿ ನೋವು ಆಯಿತು. ರಾಜನೂ, ಮಂತ್ರಿಗಳೂ, ಪ್ರಜೆಗಳೂ ಎಲ್ಲರೂ ಬೆತ್ತದ ಏಟಿನ ತೊಂದರೆಯನ್ನು ಅನುಭವಿಸುತ್ತಾ ಆಶ್ಚರ್ಯ ಪಡುತ್ತಾ ಇದ್ದರು. ಮತ್ತು ಅವರೆಲ್ಲರಿಗೂ ಭಯವು ಹೆಚ್ಚಾಗಿ ಉಂಟಾಗಿತ್ತು.

೧೧೩-೧೧೯. ಅನಂತರದಲ್ಲಿ ಎಲ್ಲಾ ಜನರೂ ರಾಜನ ಎದುರಿಗೆ ಸೇರಿ ಎಲ್ಲರ ಬೆನ್ನಿನಲ್ಲಿಯೂ ಬೆತ್ತದ ಏಟಿನ ಗಾಯವಾಗಲು ಕಾರಣವನ್ನು ತಿಳಿಯದೆ ಬಹಳವಾಗಿ ಯೋಚಿಸುತ್ತಿದ್ದರು. ಆಗ ಪರಮೇಶ್ವರನಾದ ಸುಂದರೇಶ್ವರನ ಅನುಗ್ರಹರೂಪವಾಗಿ ಆಕಾಶವಾಣಿಯು ಆಯಿತು. “ ಎಲೈ ಪಾಂಡ್ಯರಾಜನೇ ನೀನು ಗರ್ವದಿಂದ ಸಂಪಾದಿಸಿದ ಧನವನ್ನು ಎಲ್ಲವನ್ನೂ ವಾತಪುರೇಶ್ವರನು ತೆಗೆದುಕೊಂಡು, ನನ್ನ

ರಾಜನ್ ಪಾಂಡ್ಯಮಹೀಪಾಲ ತವ ಧರ್ಮಾರ್ಜಿತಂ ಧನಂ ।
ಅತ್ತಂ ವಾತಪುರೇಶೇನ ಯತ್ಸರ್ವಂ ಕೋಶಮಧ್ಯಗಂ ॥ ೧೧೫ ॥

ಮದ್ಭಕ್ತೇಭ್ಯಶ್ಚ ಮಹ್ಯಂ ಚ ಧರ್ಮಾರ್ಥಂ ತೇಽಖಿಲಂ ದದೌ ।
ಅನಂತಪುಣ್ಯಂ ತೇ ಲಬ್ಧ್ವಾ ಕೋಶಂ ಪೂರ್ಣಂ ಧನೇನ ಚ ॥ ೧೧೬ ॥

ಮಮಾಜ್ಞಯಾ ವಿಶೇಷೇಣ ಪಯಃ ಪೂರಂ ನಿಬಂಧಿತಂ ।
ತಸ್ಯೋಪದ್ರವಮುಕ್ತ್ಯರ್ಥಂ ಮಯಾ ಸಂವರ್ಧಿತಾ ನದೀ ॥ ೧೧೭ ॥

ಭೂಪ ತೇ ತೇ ಭವಿಷ್ಯಂತಿ ಸಂಪದಸ್ಸಕಲಾ ಧ್ರುವಂ ।
ವೇದೋಕ್ತಾಯುಶ್ಚ ತೇ ಭೂಯಾಚ್ಚಿರಂ ರಾಜ್ಯಂ ಕರಿಷ್ಯಸಿ ॥ ೧೧೮ ॥

ಅಶ್ವಾ ಅನಂತಾಸ್ತೇ ಭೂಯಾಸ್ಮದನುಗ್ರಹತಃ ಪುನಃ ।
ಶ್ರೀಮದ್ವಾತಪುರೇಶಂ ಚ ಮಾಮಕಂ ವಿದ್ಧಿ ಮತ್ಪ್ರಿಯಂ ॥ ೧೧೯ ॥

ಸ್ವಚ್ಛಂದವೃತ್ತಯೇ ಸದ್ಯ ಏವಂ ತ್ವಂ ಮಾಂ ಚ ಶಾಸನಾತ್ ।
ಮಮ ಪಾಂಡ್ಯಮಹೀಪಾಲ ಭಕ್ತಪ್ರಿಯ ಕರೋಮ್ಯಹಂ ॥ ೧೨೦ ॥

---

ಭಕ್ತರಿಗೂ, ಮತ್ತು ನನಗೂ ಧರ್ಮಕ್ಕಾಗಿ ಕೊಟ್ಟಿರುತ್ತಾನೆ. ಇದರಿಂದ ನಿನಗೆ ಬಹಳ ಪುಣ್ಯವು ಉಂಟಾಗಿರುತ್ತದೆ. ನಿನ್ನ ಭಂಡಾರವು ಧನದಿಂದ ತುಂಬಿರುವುದು. ನನ್ನ ಆಜ್ಞೆಯಂತೆ ಹೊಳೆಯ ನೀರು ಕಡಿಮೆಯಾಗಿರುವುದು. ವಾತಪುರೇಶ್ವರನ ತೊಂದರೆಯನ್ನು ತಪ್ಪಿಸುವುದಕ್ಕಾಗಿ ನದಿಯ ನೀರನ್ನು ನಾನು ಹೆಚ್ಚಿಸಿದೆನು. ಎಲೈ ರಾಜನೇ! ನಿನಗೆ ಎಲ್ಲಾ ವಿಧವಾದ ಸಂಪತ್ತುಗಳೂ ಖಂಡಿತವಾಗಿಯೂ ಉಂಟಾಗುವುವು. ನಿನಗೆ ವೇದೋಕ್ತವಾದ ಆಯುಸ್ಸು ಎಲ್ಲವೂ ಉಂಟಾಗಿ ಬಹಳ ಕಾಲ ಸುಖದಿಂದ ರಾಜ್ಯವನ್ನು ನೀನು ರಕ್ಷಿಸುತ್ತೀಯೆ. ನನ್ನ ಅನುಗ್ರಹದಿಂದ ಕುದುರೆಗಳು, ನಿನ್ನ ಅಶ್ವಶಾಲೆಗಳಲ್ಲಿ ಅಸಂಖ್ಯಾತವಾಗುವುವು. ವಾತಪುರೇಶ್ವರನು ನನ್ನವನು, ನನ್ನ ಪ್ರೀತಿಪಾತ್ರನು, ಎಂದು ತಿಳಿದುಕೋ.

೧೨೦–೧೨೩. ಅವನು ಇಚ್ಛೆಬಂದಂತೆ ಇರುವ ಹಾಗೆ ನನ್ನ ಆಜ್ಞೆಯ ಮೇರೆ ಕಳುಹಿಸು. ಎಲೈ ಪಾಂಡ್ಯರಾಜನೇ, ನಾನು ಭಕ್ತರಿಗೆ ಹಿತವನ್ನು ಮಾಡುವವನು. ಹಿಟ್ಟನ್ನು ಮಾರುವ ಮುದುಕಿಯ ಕೆಲಸವನ್ನು ಕಾಪಾಡುವುದಕ್ಕೂ

ಪಿಷ್ಟಾಂಬಾಯಾರ್ಥರಕ್ಷಾರ್ಥಂ ತವ ಚಾಪಿ ವಿಶೇಷತಃ ।
ಭೃತಕಾಕಾರಮಾಸ್ಥಾಯ ಪಿಷ್ಟಾರ್ಥಂ ವೃದ್ಧೃತಂ ಮಯಾ ॥ ೧೨೧ ॥

ವೇತ್ರಪ್ರಹಾರಂ ಚ ಮಯಾ ಕ್ಷಮಿತಂ ತೇ ಯಥಾಪುರಾ ।
ಅರ್ಜುನಸ್ಯ ಸ್ವಚಾಪೇನ ಪ್ರಹಾರಂ ಚ ಯಥಾ ಮತಂ ॥ ೧೨೨ ॥

ಏವಂ ಗಗನಸಂಭೂತಾಮಾಕರ್ಣ್ಯ ಸಕಲಾ ಗಿರಂ ।
ವಿಸ್ಮಿತಾಶ್ಚ ಭಯಾವಿಷ್ಟಾ ರಾಜ್ಞೋ ಮುಖಮುಲೋಕಯನ್ ॥ ೧೨೩ ॥

ಭಕ್ತಪ್ರಿಯಸ್ಯ ವಾಗೇಷಾ ಶ್ರೀಹಾಲಾಸ್ಯಪ್ರಭೋರಿತಿ ।
ವದನ್ವಿಸ್ಮಯಸಂಯುಕ್ತಃ ಪುಲಕಾಂಚಿತವಿಗ್ರಹಃ ॥ ೧೨೪ ॥

ಅತಿಭೀತತರೋ ರಾಜಾ ಸ್ವಾತ್ಮಾನ ಮಪರಾಧಿನಂ ।
ಮತ್ವಾ ಕಂಪಿತಸರ್ವಾಂಗಃಸ ಮಂತ್ರಿಗಣಸಂಯುತಃ ॥ ೧೨೫ ॥

---

ನಿನಗೆ ಹಿತವನ್ನು ಮಾಡುವುದಕ್ಕೂ, ನಾನು ಹಿಟ್ಟನ್ನು ತಿನ್ನುವ ಕೂಲಿಯವನ ಆಕಾರವನ್ನು ಧರಿಸಿ ಮಣ್ಣನ್ನು ಹೊರುತ್ತಿದ್ದೆನು. ಹಿಂದೆ ಅರ್ಜುನನ ಧನುಸ್ಸಿನ ಏಟು ನನಗೆ ಹಿತವಾಗಿದ್ದಂತೆ ನಾನು ನಿನ್ನ ಬೆತ್ತದ ಏಟನ್ನು ಒಪ್ಪಿಕೊಂಡು ಕ್ಷಮಿಸಿ ರುತ್ತೇನೆ. " ಎಂದು ಆಕಾಶವಾಣಿಯು ಎಲ್ಲರಿಗೂ ಕೇಳಿಸಿತು ಅಂತರಿಕ್ಷದಿಂದ ಕೇಳುತ್ತಿರುವ ಆ ಮಾತನ್ನು ಕೇಳಿ ಎಲ್ಲರೂ ಆಶ್ಚರ್ಯದಿಂದಲೂ, ಭಯದಿಂದಲೂ ಕೂಡಿದವರಾಗಿ ರಾಜನ ಮುಖವನ್ನು ನೋಡಿದರು.

೧೨೪-೧೨೫. "ಇದು ಭಕ್ತರ ವಿಷಯದಲ್ಲಿ ಪ್ರೀತಿಯಿಂದ ಇರುವ ಹಾಲಸ್ಯೇಶ್ವರನು ಹೇಳಿದ ಮಾತು." ಎಂದು ರಾಜನು ತಿಳಿದು ರೋಮಾಂಚವುಳ್ಳ ಶರೀರ ದಿಂದ ಇರುತ್ತಾ ಬಹಳ ಹೆದರಿದವನಾಗಿ " ನಾನು ಅಪರಾಧವನ್ನು ಮಾಡಿದವನು" ಎಂದು ತಿಳಿದು ಕೊಂಡನು. ಆಗ ಅವನು ನಡಗುತ್ತಿರುವ ಶರೀರವುಳ್ಳವನಾಗಿ, ಮಂತ್ರಿಗಳನ್ನು ಜೊತೆಯಲ್ಲಿ ಕರೆದುಕೊಂಡು ವಾತಪುರೇಶ್ವರನ ಹತ್ತಿರಕ್ಕೆ ಹೋದನು.

ಸದ್ಯೋ ವಾತಪುರೇಶಸ್ಯ ಸಮೀಪಂ ಪ್ರಾಪ್ಯ ಪಾರ್ಥಿವಃ ।
ದಂಡವತ್ಪ್ರಣನಾಮಾಥ ನೇಮುಸ್ಸರ್ವಜನಾ ಅಪಿ ॥ ೧೨೬ ॥

ಸಾಂಜಲಿಃ ಪ್ರಾಹ ಪಾಂಡ್ಯಸ್ತು ಪ್ರೇಕ್ಷ್ಯವಾತಪುರೇಶ್ವರಂ ।
ಅಪರಾಧಾ ಸ್ತ್ವನಂತಾ ಯೇ ಮಯಾ ಜ್ಞಾನವಶಾತ್ಕೃತಾಃ । ॥ ೧೨೭ ॥

ಕ್ಷಂತವ್ಯಾಸ್ತೇ ತ್ವಯಾ ಸರ್ವೇ ಮದನುಗ್ರಹಹೇತವೇ ।
ಯಥಾ ಶಿವಸ್ತಥಾ ತ್ವಂ ಹಿ ತದ್ಭಕ್ತೋ ಸ ಶಿವಪ್ರಿಯಃ ॥ ೧೨೮ ॥

ಮತ್ಕಾರ್ಯಂ ಪೂರ್ವವತ್ಕೃತ್ವಾ ರಕ್ಷ ಮಾಂ ತ್ವಂ ಮದಂತಿಕೇ ।
ಇತಃ ಪರಂ ಮಯಾ ಪೂಜ್ಯಸ್ಸದಾ ತ್ವಚ್ಛ್ರೇಯಸೇ ಮಮ ॥ ೧೨೯ ॥

ಇತಿ ತದ್ವಚನಂ ಶ್ರುತ್ವಾ ಶ್ರೀಮಾನ್ವಾತಪುರೇಶ್ವರಃ ।
ಪ್ರತ್ಯವೋಚತ್ಪ್ರೀತಿಯುಕ್ತಃ ಶಂಕರಾಧೀನಮಾನಸಃ ॥ ೧೩೦ ॥

---

ರಾಜನೂ, ಇತರ ಎಲ್ಲಾ ಜನರೂ ಅವನಿಗೆ ದಂಡಾಕಾರವಾಗಿ ನಮಸ್ಕಾರ ಮಾಡಿದರು. ಆಗ ರಾಜನು ವಾತಪುರೇಶ್ವರನನ್ನು ನೋಡಿ "ನಾನು ಜ್ಞಾನ ಪೂರ್ವಕವಾಗಿ ನಿನಗೆ ಬಹಳ ಅಪರಾಧವನ್ನು ಮಾಡಿರುತ್ತೇನೆ. ನನ್ನಲ್ಲಿ ಅನುಗ್ರಹವನ್ನು ಮಾಡುವುದಕ್ಕಾಗಿ ಅದೆಲ್ಲವನ್ನೂ ನೀನು ಕ್ಷಮಿಸಬೇಕು. ನನಗೆ ಶಿವನು ಪೂಜ್ಯನಾಗಿ ಇರುವ ಹಾಗೆ ಶಿವಭಕ್ತನಾದ ನೀನೂ ಪೂಜ್ಯನಾಗಿರುತ್ತೀಯೆ. ಆದ್ದರಿಂದ ಮೊದಲಿನ ಹಾಗೆಯೇ ನೀನು ನನ್ನ ಹತ್ತಿರದಲ್ಲಿದ್ದುಕೊಂಡು ನನ್ನ ಕಾರ್ಯಗಳನ್ನು ಮಾಡುತ್ತಾ ನನ್ನನ್ನು ರಕ್ಷಿಸುತ್ತಿರು. ಇನ್ನು ಮುಂದೆ ನೀನು ನನಗೆ ಪೂಜ್ಯನಾಗಿರುತ್ತೀಯೆ. ನಿನ್ನ ಪೂಜೆಯು ನನಗೆ ಶ್ರೇಯಸ್ಸನ್ನುಂಟುಮಾಡುವುದು." ಎಂದು ಹೇಳಿದನು.

೧೩೦-೧೩೪. ಶಿವನ ಧ್ಯಾನದಲ್ಲಿರುವ ಮನಸ್ಸುಳ್ಳ ವಾತಪುರೇಶ್ವರನು ಆ ಮಾತನ್ನು ಕೇಳಿ ಪ್ರತ್ಯುತ್ತರವನ್ನು ಹೇಳಿದನು. "ಪಾಂಡ್ಯ ದೇಶವನ್ನು ಪರಿಪಾಲಿಸುತ್ತಿರುವಭೂಮಿಯಲ್ಲಿ ಚಂದ್ರನಾಗಿರುವ ಎಲೈ ರಾಜನೇ ನೀನು ಪರಮೇಶ್ವರನ ಅಂಶವನ್ನು

ರಾಜನ್ಪಾಂಡ್ಯಮಹೀಪಾಲ ಮಹೀತಲಪುರಂದರ ।
ಭರ್ವಾಶಿವಾಂಶ ಏವ ಸ್ಯಾತ್ಸಂಶಯೋ ನ ಹಿ ಭಕ್ತಿತಃ ॥ ೧೩೧ ॥

ಯತಸ್ತ್ವಾಂ ವಿಷಯೀಕೃತ್ಯ ಗಗನೇ ಶಂಭುವಾಗಭೂತ್ ।
ಸುತರಾಂ ಭಕ್ತಿರೀಶೇ ತೇ ಸಂಪದಸ್ಸಕಲಾ ಅಪಿ ॥ ೧೩೨ ॥

ತ್ವಾಮಾಶ್ರಿತ್ಯಾಖಿಲಾ ಧರ್ಮಾ ವೈದಿಕಾಃ ಶಿವತುಷ್ಟಯೇ ।
ಅನುಷ್ಠಿತಾ ಮಯಾ ಸಮ್ಯಕ್ಚಿತ್ತಶುದ್ಧಿರಭೂತ್ತತಃ ॥ ೧೩೩ ॥

ಚಿತ್ತಶುದ್ಧ್ಯಾ ಭವೇದ್ಭಕ್ತಿರೀಶ್ವರೇ ನಿತರಾಂ ದೃಢಾ ।
ತನ್ನಾಸ್ತಿ ಮಮ ಸಂಸಾರ ವಾಸನೇಶಪ್ರಸಾದತಃ ॥ ೧೩೪ ॥

---

ಹೊಂದಿರುತ್ತೀಯೆ. ನಿನಗೆ ಶಿವನ ವಿಷಯದಲ್ಲಿ ಭಕ್ತಿಯೂ ಬಹಳವಾಗಿರುವುದು. ಆದ್ದರಿಂದಲೇ ನನ್ನನ್ನು ಉದ್ದೇಶ ಮಾಡಿಕೊಂಡು ಆಕಾಶವಾಣಿಯು ಉಂಟಾಯಿತು. ಇದರಲ್ಲಿ ಸಂಶಯವಿಲ್ಲ. ಬಹಳ ಭಕ್ತಿಯು ನಿನಗೆ ಶಿವನಲ್ಲಿರುವುರಿಂದಲೇ ನಿನಗೆ ಎಲ್ಲಾ ವಿಧವಾದ ಐಶ್ವರ್ಯಗಳುಂಟಾಗಿರುವುವು ನಿನ್ನ ಆಶ್ರಯದಿಂದಲೇ ಲೌಕಿಕ ಮತ್ತು ವೈದಿಕ ಎಂಬ ಭೇದದಿಂದ ಇರುವ ಎಲ್ಲಾ ವಿಧವಾದ ಧರ್ಮಗಳನ್ನು ನಾನು ಸಂಪೂರ್ಣವಾಗಿ ಆಚರಿಸಿರುತ್ತೇನೆ. ಶಿವನ ತುಷ್ಟಿಗಾಗಿ ಆಚರಿಸಿದ ಕಾರಣ ನನಗೆ ಚಿತ್ತಶುದ್ಧಿಯುಂಟಾಯಿತು. ಚಿತ್ತಶುದ್ಧಿಯಿಂದ ಈಶ್ವರನಲ್ಲಿ ದೃಢವಾದ ಭಕ್ತಿಯೂ ಚೆನ್ನಾಗಿ ಉಂಟಾಗಿರುವುದರಿಂದ ಪರಮೇಶ್ವರನ ಅನುಗ್ರಹವೂ ಉಂಟಾಯಿತು. ಆದರಿಂದ ಸಂಸಾರ (ವಾಸನಾ ನಾಶವೂ) ಮಾಡಬೇಕೆಂಬ ಇಚ್ಛೆಯು ಹೋಗಿ ವೈರಾಗ್ಯವು ಉಂಟಾಗಿ ಜೀವನ್ಮುಕ್ತಿ ರೂಪವಾದ ಸ್ಥಿತಿಯು ಉಂಟಾಗಿರುವುದು. ಇದರಿಂದ ನಾನು ಶಿವಾತ್ಮಕವಾದ ಭಾವನೆಯಿಂದ ಇರುತ್ತೇನೆ. ಹಾಲಾಸ್ಯಪತಿಯಾದ ಈಶ್ವರನು ಪರಿಪೂರ್ಣನಾದ ಪರಶಿವನಾಗಿ ಇರುವನು.

ಜೀವನ್ಮುಕ್ತಿದಶಾ ಪ್ರಾಪ್ತಾ ಚೈಕರೂಪಾ ತದಾತ್ಮಿಕಾ ।
ಪರಿಪೂರ್ಣಃ ಪರಶಿವೋ ಹಾಲಾಸ್ಯೇಶ್ವರ ಈಶ್ವರಃ ॥ ೧೩೫ ॥

ಮೇರುಮಂದರಕೈಲಾಸಕಾಶೀಶ್ರೀಪರ್ವತಾದಿಷು ।
ಪುಣ್ಯಕ್ಷೇತ್ರೇಷು ಸರ್ವೇಷು ಲಿಂಗೇಷು ಪ್ರತಿಮಾಸ್ವಪಿ ॥ ೧೩೬ ॥

ಆವಿಶ್ಯ ಸನ್ನಿಧತ್ತೇಶ ಸ್ಸತ್ಯಮಿತ್ಯಾಹುರಾಗಮಾಃ ।
ಏಕ ಏವ ಹಿ ರುದ್ರೋsಯಂ ಶಕ್ತ್ಯಾ ಚಾಂಬಿಕಯಾ ಸಹ ॥ ೧೩೭ ॥

ನ ದ್ವಿತೀಯಾಯ ತಸ್ಥೇ ಚ ಸ ಚೋಪಾಸ್ಯೋ ಮುಮುಕ್ಷುಭಿಃ ।
ಏವಂ ವೇದಾಂತವಾಕ್ಯೈಶ್ಚ ಪ್ರತಿಪಾದಿತ ಈಶ್ವರಃ ॥ ೧೩೮ ॥

ಸುಂದರೇಶ್ವರ ಏವೇತಿ ವಿದುರ್ವೇದಾಂತ ವೇದಿನಃ ।
ವೇದಸ್ಯಾರ್ಥೋಪದೇಶಂ ಚ ಸುಂದರೇಶೋ ಯಯಾsಕರೋತ್॥ ೧೩೯ ॥

---

೧೩೫-೧೪೦. ಮೇರು, ಮಂದರ, ಕೈಲಾಸ, ಕಾಶಿ, ಶ್ರೀಪರ್ವತ ಇವೇ ಮೊದಲಾದ ಕ್ಷೇತ್ರಗಳಲ್ಲಿ ಇರುವ, ಎಲ್ಲಾ ಶಿವಲಿಂಗಗಳೂ ಮತ್ತು ಎಲ್ಲಾ ಶಿವ ಪ್ರತಿಮೆಗಳೂ ಇವುಗಳಲ್ಲಿ ಶಿವನು ತನ್ನ ಸನ್ನಿಧಾನವನ್ನು ಅನುಗ್ರಹಿಸಿರುವನು, ಎಂದು ಎಲ್ಲಾ ಶಾಸ್ತ್ರಗಳೂ ಹೇಳುವುವು. ಇವನು ರುದ್ರನೆಂದು ಎನಿಸಿಕೊಂಡಿರುವನು. ಇವನಿಗಿಂತಲೂ ಬೇರೆಯವನು ಇರುವುದಿಲ್ಲ. ಇವನು ಜಗನ್ಮಾತೆಯಾದ ಪಾರ್ವತಿಯೊಡನೆ ಇರುವನು. ಇವನನ್ನು ಶಕ್ತಿಗಿಂತಲೂ ಬೇರೆಯಾದವನೆಂದು ಮುಕ್ತಿಯನ್ನು ಅಪೇಕ್ಷಿಸುವವರು ಧ್ಯಾನಮಾಡಬಾರದು. ವೇದಾಂತ ವಾಕ್ಯಗಳು ಈಶ್ವರನಿಗೆ ಸ್ವರೂಪವನ್ನು ಹೀಗೆ ಹೇಳುವುವು. ಈಶ್ವರನೇ ಸುಂದರೇಶ್ವರನೆಂದು [ವೇದಾಂತಶಾಸ್ತ್ರವನ್ನು ತಿಳಿದವರು] ಜ್ಞಾನಿಗಳು ತಿಳಿದಿರುವರು. ಸುಂದರೇಶ್ವರನೇ ವೇದಾರ್ಥೋಪದೇಶವನ್ನು ಕಣ್ವನೇ ಮೊದಲಾದ ಮುನಿಗಳಿಗೆ ಉಪದೇಶ ಮಾಡಿರುವನೆಂದು ಶಾಸ್ತ್ರಗಳು ಹೇಳುತ್ತಿರುವುವು. ಬ್ರಹ್ಮನೆನಿಸಿರುವವನು ಒಬ್ಬನೇ

**ಕಣ್ವಾದಿಭ್ಯೋ ಮುನಿಭ್ಯಶ್ಚ ತಾಂ ಲೀಲಾಂ ಪ್ರಾಹುರಾಗಮಾಃ ।**
**ಏಕಮೇವಾದ್ವಿತೀಯಂ ಚ ಬ್ರಹ್ಮೇತಿ ಪ್ರಾಹ ಯಚ್ಛ್ರುತಿಃ ॥ ೧೬೯ ॥**

**ತನ್ಮೂಲಲಿಂಗ ಏವೇದಂ ಶ್ರೀಹಾಲಾಸ್ಯೇಶ್ವರಾದಿಭಿಧಂ ।**
**ತಸ್ಮಾತ್ಸಾನ್ನಿಧ್ಯಕೃತ್ತತ್ರ ವೇದಾನಾಮರ್ಥ ಈಶ್ವರಃ ॥ ೧೭೦ ॥**

**ಸರ್ವವ್ಯಾಪೀ ಚ ಸರ್ವಜ್ಞಃ ಸಚ್ಚಿದಾನಂದವಿಗ್ರಹಃ ।**
**ಸರ್ವಕ್ಷೇಮಪ್ರದಃ ಶಂಭುಃ ಮೀನಾಕ್ಷೀಪತಿರವ್ಯಯಃ ॥ ೧೭೧ ॥**

**ಏವಂ ರೂಪ ಸ್ಸುಂದರೇಶ ಸ್ಸರ್ವಪ್ರೇರಕ ಈಶ್ವರಃ ।**
**ಕಿಂ ಕಾರ್ಯಾರ್ಥಂ ನ ಜಾನಾಮಿ ತತ್ರ ಮುಕ್ತಿಂ ದಿಶಾಮ್ಯಹಂ ॥ ೧೭೨ ॥**

**ನ ಸ್ವಾಮ್ಯಾಜ್ಞಾ ಲಂಘನೀಯಾ ತದ್ಭಕ್ತೇನ ತ್ವಯಾಪಿ ಚ ।**
**ಮಾಮಪಿ ಪ್ರೇಷಯ ಕ್ಷಿಪ್ರಂ ಗಂತುಂ ತ್ವಂ ಹಿ ಚಿದಂಬರಂ ॥ ೧೭೩ ॥**

---

ಆಗಿರುವನು. ಅವನಿಗಿಂತ ಬೇರೆಯಾದವನು ಎರಡನೆಯವನು ಇರುವುದಿಲ್ಲ, ಎಂದು ವೇದವು ಹೇಳುತ್ತಿರುವುದು. ಆ ಪ್ರಕಾರವಾಗಿ ವೇದೋಕ್ತವಾದ ಪರಮೇಶ್ವರನ ರೂಪವೇ ಹಾಲಾಸ್ಯೇಶ್ವರನೆಂದು ಹೆಸರನ್ನು ಹೊಂದಿರುವ ಮೂಲಲಿಂಗವಾಗಿರುವುದು. ಆದ್ದರಿಂದ ಆ ಶಿವಲಿಂಗದಲ್ಲಿ ಸಾನ್ನಿಧ್ಯವನ್ನು ಅನುಗ್ರಹಿಸಿರುವವನು ವೇದಾರ್ಥ ರೂಪವಾಗಿರುವ ಪರಮೇಶ್ವರನೇ ಆಗಿರುವನು.

೧೭೧-೧೭೨. ಪರಮೇಶ್ವರನು ಎಲ್ಲವನ್ನೂ ವ್ಯಾಪಿಸಿರುವನು. ಎಲ್ಲವನ್ನೂ ತಿಳಿದಿರುವನು. ಸತ್, ಚಿತ್, ಆನಂದಗಳೇ ಅವನ ರೂಪವಾಗಿರುವುವು. ಪರಿಪೂರ್ಣನಾದ ಮೀನಾಕ್ಷೀದೇವಿಗೆ ಪತಿಯಾಗಿರುವ ಶಿವನು ಎಲ್ಲರಿಗೂ ಕ್ಷೇಮವನ್ನು ಅನುಗ್ರಹಿಸುವನು. ಈ ಸುಂದರೇಶ್ವರನೇ ಎಲ್ಲರನ್ನೂ ಆಯಾಯ ಕಾರ್ಯಗಳಲ್ಲಿ ಉದ್ಯುಕ್ತರಾಗಿರುವಂತೆ ಪ್ರೇರಿಸುತ್ತಿರುವನು. ಅವನಿಗೆ ಈ ಪ್ರಕಾರವಾದ ಕೆಲಸ ಮಾಡುವುದರಿಂದ ಯಾವ ವಿಧವಾದ ಲಾಭವೂ ಇರುವುದಿಲ್ಲ. ಇದರಿಂದ ಅವನಿಗೆ ಏನು ಪ್ರಯೋಜನವೊ ನನಗೆ ತಿಳಿಯದು. ನಾನು ನಿನಗೆ ಬೇರೆ ಕಡೆಯಲ್ಲಿ ಮುಕ್ತಿಯನ್ನು ಕೊಡುವೆನೆಂದು ಅಪ್ಪಣೆಮಾಡಿರುವೆನು.

೧೭೩-೧೭೪. ಪ್ರಭುವಾದ ಪರಮೇಶ್ವರನ ಅಪ್ಪಣೆಯನ್ನು ಭಕ್ತನಾಗಿರುವ ನೀನೂ, ನಾನೂ, ಕೂಡ ಮೀರಬಾರದು. ಆದ್ದರಿಂದ ನನ್ನನ್ನು ಬೇಗನೆ ಚಿದಂಬರ ಕ್ಷೇತ್ರಕ್ಕೆ ಕಳುಹಿಸು " ಎಂದು ಹೇಳಿದನು, ವಾತಪುರೀಶ್ವರನ ಮಾತನ್ನು ಕೇಳಿ

ಇತಿ ತದ್ಗಿರ ಮಾಕರ್ಣ್ಯ ಪಾಂಡ್ಯರಾಡರಿಮರ್ದನಃ ।
ಅನುಜ್ಞಾಂ ಪ್ರದದೌ ತಸ್ಮೈ ಗಚ್ಛ ತ್ವಮಿತಿ ಮಂತ್ರಿಣೇ ॥ ೧೪೪ ॥

ಅಥ *ಶ್ರೀವಾಚಕಗಣೈ ರ್ಗಾಯನ್ ಸುಂದರನಾಯಕಂ ।
ಪ್ರತಸ್ಥೇ ಪ್ರಥಿತಂ ಕ್ಷೇತ್ರಂ ಶ್ರೀಮದ್ವ್ಯಾತಪುರೇಶ್ವರಃ ॥ ೧೪೫ ॥

ಅನ್ವಗಚ್ಛತ್ಕ್ರೋಶಮಾತ್ರಂ ಪಥಿ ತೇನ ನಿವಾರಿತಃ ।
ತಂ ವಿಸೃಜ್ಯಾಯಯೌ ಪ್ರೇಮ್ಣಾ ಮಧುರಾಂ ಪಾಂಡ್ಯಭೂಪತಿಃ ॥ ೧೪೬ ॥

ಅಥಾಸಾದ್ಯ ಮಹೇಶಸ್ಯ ಮಹಾಂತಂ ಮಂಟಪಂ ಪುರಃ ।
ಮಹೀಪೋ ಮಂತ್ರಿಭಿಸ್ಸಾರ್ಧಂ ಶಂಭೋಃ ಕಾರುಣ್ಯಮದ್ಭುತಂ ॥ ೧೪೭ ॥

ಪ್ರಶಶಂಸ ಮುದಾ ಭಕ್ತ್ಯಾ ಶ್ರೀಹಾಲಾಸ್ಯಪ್ರಭೋರ್ಮಹುಃ ।
ಹೇ ಮಂತ್ರಿಣಃ ಸಂಶೃಣುಧ್ವಂ ಭಕ್ತರಕ್ಷಾಕರಸ್ಯ ತತ್ ॥ ೧೪೮ ॥

---

ಅರಿಮರ್ದನಪಾಂಡ್ಯರಾಜನು ಮಂತ್ರಿಯಾದ ಅವನನ್ನು ಚಿದಂಬರಕ್ಕೆ ಹೋಗಲು ಸಮ್ಮತಿಯನ್ನು ಕೊಟ್ಟನು. ಆಗ ಆವನು ಸುಂದರೇಶ್ವರನನ್ನು ಶ್ರೀವಾಚಕ ಮಂತ್ರಗಳಿಂದ ಸ್ತೋತ್ರಮಾಡುತ್ತಾ ಪ್ರಸಿದ್ಧವಾದ ಚಿದಂಬರ ಕ್ಷೇತ್ರಕ್ಕೆ ಹೊರಟನು. ಒಂದು ಹರಿದಾರಿ ದೂರದವರಿಗೆ ಪಾಂಡ್ಯರಾಜನು ಪ್ರೀತಿಯಿಂದ ಅವನನ್ನು ಅನುಸರಿಸಿ ಹೋದನು. ಅನಂತರದಲ್ಲಿ ವಾತಪುರೇಶ್ವರನು ರಾಜನನ್ನು ನೀನು ಬರಬೇಡವೆಂದು ಹೇಳಿ, ಅವನನ್ನು ಹಿಂದಕ್ಕೆ ಕಳುಹಿಸಿಬಿಟ್ಟನು. ಆಗ ರಾಜನು ಮಧುರಾ ನಗರಕ್ಕೆ ಹಿಂತಿರುಗಿ ತನ್ನ ಮಂತ್ರಿಗಳ ಸಂಗಡ ಶಿವನ ಆಶ್ಚರ್ಯಕರವಾದ ದಯೆಯನ್ನು ಶ್ಲಾಘಿಸಿದನು.

೧೪೮-೧೫೦. ಎಲೈ ಮಂತ್ರಿಗಳಿರಾ ಭಕ್ತರನ್ನು ರಕ್ಷಿಸುತ್ತಿರುವ ಪರಮೇಶ್ವರನ ದಯೆಯನ್ನು ವಿವರಿಸಿ ಹೇಳುವೆನು ಕೇಳಿರಿ. ಭಕ್ತರ ಹಿತಕ್ಕಾಗಿ ಅವನು ನಿಂದಿತವಾದ [ ಮಣ್ಣು ಹೊರುವುದೇ ಮುಂತಾದ ] ಕೆಲಸಗಳನ್ನು ಮಾಡಿರುವನು.

---

*ಶ್ರೀ ವಾಚಕಗಣ=ತಮಿಳುಭಾಷೆಯ ಪದ್ಯಗಳು

ಕಾರುಣ್ಯಂ ವಿದಿತಂ ಚಾಪಿ ಕೃತಂ ತೇನ ಹಿತಾಯ ಹಿ ।
ವಿಷಂ ವ್ಯಾಧಸ್ಯ ಪಿಶಿತಂ ಶಿಶುಮಾಂಸಂ ಚ ಭಕ್ಷಿತಂ ॥ ೧೪೯ ॥

ಪ್ರಿಯಂ ಜಾತಂ ಕಸ್ಯಚಿತ್ತ್ವಪ್ರಿಯಂ ಪಾಷಾಣತಾಡನಂ ।
ಧನುಷಾ ತಾಡನಂ ವೇತ್ರತಾಡನಂ ಚಾದ್ಯ ತತ್ಪ್ರಿಯಂ ॥ ೧೫೦ ॥

ತಸ್ಮಾತ್ಸರ್ವೇಶ್ವರೇ ಕಾರ್ಯಾ ಭಕ್ತಿರೇವ ಹಿತೇಪ್ಸುನಾ ।
ಸರ್ವೇಷ್ವಪಿ ಚ ದೇವೇಷು ಶಿವ ಏವಾಶ್ರಿತಾರ್ತಿಹಾ ॥ ೧೫೧ ॥

ಇತಿ ನಿಶ್ಚಿತ್ಯ ಪಾಂಡ್ಯೇಶ ಶ್ಶಿವಮೇವ ಸದಾಶ್ರಯನ್ ।
ಶ್ರೀಹಾಲಾಸ್ಯೇಶ್ವರಾಯಾಪಿ ಗೋಭೂಹೇಮಾಂಬರಾದಿಕಂ ॥ ೧೫೨ ॥

ಉಪಧಾ ವಿವಿಧಾಃ ಪ್ರಾದಾನ್ನವರತ್ನಾದಿಕಂ ಬಹು ।
ಇಂದೂದಯೇಬ್ಧಿವತ್ ನೃಪ ಇವ ರಾಜ್ಞೋ ವರ್ಧಂತಿ ಸಂಪದಃ ॥ ೧೫೩ ॥

---

ವಿಷವನ್ನು ಪಾನಮಾಡಿದನು. ಬೇಡರವನು ತಂದು ಕೊಟ್ಟ ಮಾಂಸವನ್ನು ತಿಂದಿರುವನು. ಮಗುವಿನ ಮಾಂಸವನ್ನು ತಿಂದಿರುವುದು ಯಾರಿಗೆ ಹಿತಕರವಾದದ್ದು. ಕಲ್ಲಿನಿಂದ ಏಟನ್ನು ಅನುಭವಿಸಿರುವುದು ಯಾರಿಗೆ ಹಿತಕರವು. ಧನಸ್ಸಿನಿಂದ ಏಟನ್ನು ಹೊಡೆಸಿಕೊಳ್ಳುವುದು, ಬೆತ್ತದಿಂದ ಏಟನ್ನು ಹೊಡೆಸಿಕೊಳ್ಳುವುದು ಇವುಗಳು ಯಾರಿಗೆ ಹಿತಕರವಾದದ್ದು. ಇವೆಲ್ಲವನ್ನೂ ವಿನೋದವನ್ನಾಗಿ ತಿಳಿದುಕೊಂಡು ಇರುವ ಪರಮೇಶ್ವರನಲ್ಲಿ ಭಕ್ತಿಯುಳ್ಳ ಮನಸ್ಸಿನಿಂದ ಇರುವುದು ಹಿತವನ್ನು ಅಪೇಕ್ಷಿಸುವವನ ಕೆಲಸವಾಗಿರುತ್ತದೆ. ದೇವತೆಗಳ ಮಧ್ಯದಲ್ಲಿ ಭಕ್ತರ ವಿಪತ್ತನ್ನು ಶಿವನೊಬ್ಬನೇ ಪರಿಹಾರ ಮಾಡುವವನು.

೧೫೧-೧೫೪. ಪಾಂಡ್ಯರಾಜನು ಹೀಗೆ ನಿಶ್ಚಯ ಮಾಡಿಕೊಂಡು ಶಿವನನ್ನೇ ಯಾವಾಗಲೂ ನಂಬಿಕೊಂಡು ಇದ್ದನು. ಹಾಲಾಸ್ಯೇಶ್ವರನಿಗೆ ಗೋವು, ಭೂಮಿ, ಚಿನ್ನ, ವಸ್ತ್ರ, ಆಭರಣ, ನವರತ್ನ ಇವೇ ಮೊದಲಾದವುಗಳನ್ನು ಬಹಳ ಮಟ್ಟಿಗೆ ಕಾಣಿಕೆಯಾಗಿ ಒಪ್ಪಿಸಿದನು. ಚಂದ್ರನು ಪೂರ್ಣಿಮೆಯ ದಿನದಲ್ಲಿ ಉದಯಿಸಿದ

ಮೀನಾಕ್ಷೀಶಸ್ಯ ಕೃಪಯಾ ಚಾರಿಮರ್ದನಪಾಂಡ್ಯಪಃ ।
ಪುತ್ರಂ ಲಬ್ಧ್ವಾ ಜಗನ್ನಾಥಂ ಸರ್ವಸದ್ಗುಣಸಂಯುತಂ ॥ ೧೫೪ ॥

ರಾಜ್ಯಂ ಚಕಾರ ಸುಚಿರಂ ಯಥಾ ಶಂಭುಃ ಪುರಾಕರೋತ್ ।
ಸ ವಾತಗ್ರಾಮನಾಥೋಽಪಿ ಸಹ್ಯಯೋನಿತಟೋದ್ಭವಂ ॥ ೧೫೫ ॥

ಪುಣ್ಯಕ್ಷೇತ್ರಮಶೇಷಂ ಚ ದೃಷ್ಟ್ವಾ ಸಂಸೇವ್ಯ ಶಂಕರಂ ।
ತತ್ರ ತತ್ರ ಸ್ವಶಿಷ್ಯೈಶ್ಚ ಪ್ರಾಪ ಶ್ರೀಮಚ್ಚಿದಂಬರಂ ॥ ೧೫೬ ॥

ಸ್ನಾತ್ವಾ ಚ ಶಿವಗಂಗಾಯಾಂ ದೃಷ್ಟ್ವಾ ಸಾಂಬಂ ನಟೇಶ್ವರಂ ।
ಶ್ರೀಮೂಲನಾಥ ಲಿಂಗಂ ಚ ಲಿಂಗಾನಾಮುತ್ತಮೋತ್ತಮಂ ॥ ೧೫೭ ॥

ತಸ್ಮಿನ್ನುಪವನೇ ರಮ್ಯೇ ಕ್ರೀಡಾಂ ಕೃತ್ವಾನುಗೈಸ್ಸಹ ।
ಮೃಗವ್ಯಾಪ್ತೇ ಸಂಚರನ್ ಸ ಪರ್ಣಾಶೀ ನ್ಯವಸಚ್ಚಿರಂ ॥ ೧೫೮ ॥

---

ಕಾಲದಲ್ಲಿ ಸಮುದ್ರದ ನೀರು ವೃದ್ಧಿಯಾಗುವಂತೆ, ಇವನ ಐಶ್ವರ್ಯವು ಪ್ರತಿದಿನವೂ ವೃದ್ಧಿಯನ್ನು ಹೊಂದುತ್ತಿತ್ತು. ಈ ಅರಿಮರ್ದನಪಾಂಡ್ಯರಾಜನು ಎಲ್ಲಾ ವಿಧವಾದ ಒಳ್ಳೆಯ ಗುಣಗಳಿಂದ ಕೂಡಿದವನಾದ, ಮೀನಾಕ್ಷೀದೇವಿಯಿಂದೊಡಗೂಡಿರುವ ಸುಂದರೇಶ್ವರನ ದಯೆಯಿಂದ ಜಗನ್ನಾಥನೆಂದು ಹೆಸರುಳ್ಳ ಮಗನನ್ನು ಹೊಂದಿ, ಪೂರ್ವದಲ್ಲಿ ಶಿವನು ರಾಜ್ಯಭಾರಮಾಡಿದಂತೆ ರಾಜ್ಯವನ್ನು ರಕ್ಷಿಸುತಿದ್ದನು.

೧೫೫–೧೫೮. ವಾತಪುರೇಶ್ವರನು ಕಾವೇರೀ ನದಿಯ ತೀರದಲ್ಲಿರುವ ಪುಣ್ಯಕ್ಷೇತ್ರಗಳೆಲ್ಲವನ್ನೂ ಸಂಚರಿಸುತ್ತಾ, ಶಿವನ ಸೇವೆಯನ್ನು ಮಾಡುವವನಾಗಿ ಶಿಷ್ಯರೊಡನೆ ಚಿದಂಬರಕ್ಷೇತ್ರಕ್ಕೆ ಬಂದನು. ಶಿವಗಂಗಾತೀರ್ಥದಲ್ಲಿ ಸ್ನಾನಮಾಡಿ ದೇವೀಸಹಿತನಾಗಿರುವ [ ಚಿದಂಬರೇಶ್ವರನನ್ನು ] ನಟೇಶ್ವರನ ದರ್ಶನವನ್ನು ಮಾಡಿದನು. ಮೂಲಸ್ಥಾನೇಶ್ವರನೆಂದು ಹೆಸರುಳ್ಳ ಬಹಳ ಪವಿತ್ರವಾದ ಶಿವಲಿಂಗವನ್ನು ಸೇವಿಸಿ ರಮ್ಯವಾದ ಆ ಅರಣ್ಯದಲ್ಲಿ ತನ್ನ ಅನುಚರರೊಡನೆ ವಿಹರಿಸುತ್ತಿದ್ದನು. ಹೀಗೆಯೇ ವಾತಪುರೇಶ್ವರನು ಮೃಗಗಳುಳ್ಳದ್ದಾದ ಆ ಕಾಡಿನಲ್ಲಿ ಪರ್ಣಾಹಾರ ಮಾಡುತ್ತಾ [ಮರದ ಎಲೆಗಳನ್ನು ತಿಂದುಕೊಂಡು] ಬಹಳ ಕಾಲ ವಾಸವಾಗಿದ್ದನು.

**ಸಮಾಧಿನಿಶ್ಚಯಮನಾಃ ತ್ಯಕ್ತ್ವಾ ಚ ವಿಷಯಾನ್ ಸದಾ ।**
**ನಿದ್ರಾಂ ತ್ಯಕ್ತ್ವಾ ನಿರಾಹಾರ ಶ್ಶಿವಾನಂದಾಮೃತಂ ಪಿಬನ್ ॥ ೧೫೯ ॥**

**ಮಹಾಯೋಗೀ ಮೃಗೈಃ ಸಾರ್ಧಂ ಸಂಚಚಾರ ಮುದಾ ತದಾ ।**
**ತದಾ ಬೌದ್ಧಾ ಸ್ಸಮಾಯಾತಾ ದ್ವೀಪಾಂತರನಿವಾಸಿನಃ ॥ ೧೬೦ ॥**

**ಸ್ವಸಂಪ್ರದಾಯಸಂಯುಕ್ತಾ ಶ್ಯಾಪಾನುಗ್ರಹಕಾರಿಣಃ ।**
**ಜೇತುಂ ಚ ವೈದಿಕಾಂಸ್ತತ್ರ ಶಿವೇ ಪರಮಕಾರಣೇ ॥ ೧೬೧ ॥**

**ಅನೇಕೈಃ ಪುಸ್ತಕೈರ್ಭೃತ್ಯೈಶ್ಶಿಷ್ಯೈಃ ಕರ್ಮಕರೈರಪಿ ।**
**ಕುತರ್ಕಕುಶಲಾಃ ಸರ್ವೇ ಶಿವೋ ನಾಸ್ತೀತಿ ವಾದಿನಃ ॥ ೧೬೨ ॥**

**ಪಿಂಛಸಮ್ಮಾರ್ಜನಕರಾಃ ಮುಂಡಿನಃ ಪರವಂಚಕಾಃ ।**
**ಜಿತ್ವಾನೇಕಸ್ಥಲೇ ವಾದೈಃ ಸ್ವಮತಾನ್ಸ್ಥಾಪ್ಯ ಸರ್ವತಃ ॥ ೧೬೩ ॥**

---

೧೫೯–೧೬೩. ಅವನು ಭೋಗಪಡುವ ಆಸೆಯನ್ನು ಬಿಟ್ಟು, ನಿದ್ರಾಹಾರಗಳಿಲ್ಲದವನಾಗಿ, ಯಾವಾಗಲೂ ಶಿವಾನಂದವನ್ನು ಅನುಭವಿಸುತ್ತಿದ್ದನು. ಸಮಾಧಿಯಿಂದ ಶಿವನನ್ನು ಧ್ಯಾನಮಾಡಲು ದೃಢವಾದ ಮನಸ್ಸಿನಿಂದ ಕೂಡಿ, ಮೃಗಗಳೊಡನೆ ಸಂತೋಷದಿಂದ ಸಂಚಾರಮಾಡುತ್ತಾ ಇರುವ, ದೊಡ್ಡ ಯೋಗಿಯಾಗಿದ್ದನು ಆಗ ದ್ವೀಪಾಂತರದಲ್ಲಿ ವಾಸಮಾಡುವ ಬೌದ್ಧರು ಒಟ್ಟುಗೂಡಿ ಬಂದರು. ಅವರು ತಮ್ಮ ತಮ್ಮ ಧರ್ಮವನ್ನು ಆಚರಿಸುವುದರಲ್ಲಿ ನಿಪುಣರಾಗಿ ನಿಗ್ರಹಾನುಗ್ರಹ ಮಾಡಲು ತಕ್ಕ ಮಟ್ಟಿಗೆ ಶಕ್ತರಾಗಿದ್ದರು. ಬಹಳ ದಯಾಶಾಲಿಯಾದ ಶಿವನಲ್ಲಿ ಆಸ್ತಿಕತ್ವ ಬುದ್ಧಿಯಿಂದ ಇರುವ ವೈದಿಕರನ್ನು ಇವರು ಜಯಿಸುವುದಕ್ಕಾಗಿ ಅನೇಕ ಗ್ರಂಥಗಳನ್ನೂ ತಂದಿದ್ದರು. ಇವರ ಸಂಗಡ ಬಹಳ ಜನ ಶಿಷ್ಯರೂ ಸೇವಕರೂ ಇದ್ದರು. ಈ ಬೌದ್ಧರು ಯಾವಾಗಲೂ ಕೆಟ್ಟ ಮಾರ್ಗದಿಂದ ತರ್ಕ ಮಾಡುವುದರಲ್ಲಿ ನಿಪುಣರು. ಶಿವನು [ದೇವರು] ಇಲ್ಲವೇ ಇಲ್ಲವೆಂದು ವಾದಿಸುತ್ತಿರುವರು.

**ಚಿದಂಬರ ಮಥ ಸ್ಸಾಪ್ರುಶ್ಶಿವಕ್ಷೇತ್ರಶಿಖಾಮಣಿಂ ।**
**ದ್ವಿಜಾನಾಂ ತ್ರಿಸಹಸ್ರಂ ಚ ಭಕ್ತಾನ್ಸೈವಾಂಶ್ಚ ಯೋಗಿನಃ ॥ ೧೬೪ ॥**

**ಬೌದ್ಧಾ ನಿರೋಧಯಾಮಾಸುರ್ವಿವಾದಾಯ ಪರಸ್ಪರಂ ।**
**ಊಹಾಪೋಹೈರನೇಕೈಸ್ತೈಃ ಕೃತ್ವಾ ತರ್ಕಂ ಶಿವಾಶ್ರಿತೈಃ ॥ ೧೬೫ ॥**

**ಮೋಕ್ಷದಾತಾ ಶಿವೋನಾಸ್ತಿ ಸರ್ವಂ ಬುದ್ಧಿಮಯಂ ಜಗತ್ ।**
**ಇತಿ ಸ್ವಶಾಸ್ತ್ರೈರ್ವಿಜಯಂ ಕುರ್ಯುಸ್ಸರ್ವತ್ರ ಪಾಪಿನಃ ॥ ೧೬೬ ॥**

**ಸರ್ವೇ ಚ ನಿರ್ಜಿತಾಸ್ಸಂತಃ ಪುನರೂಚುರ್ಜಯೈಷಿಣಃ ।**
**ವೇದಾ ನಿರರ್ಥಕಾ ಸ್ಸರ್ವೇ ಹ್ಯಸತ್ಯಾರ್ಥಂ ವದಂತಿ ಹಿ ॥ ೧೬೭ ॥**

**ನ ಧಾರ್ಯಂ ಭಸ್ಮ ಮೋಕ್ಷಾರ್ಥಂ ಭೋಗಾರ್ಥಂ ಹ್ಯಕ್ಷಮೇವ ಚ ।**
**ನಿಸ್ಸಂಬಂಧತ್ರಯಂ ಚಾತ್ರ ಶಿವಭಸ್ಮಾಕ್ಷತಾ ದ್ವಿಜಾಃ ॥ ೧೬೮ ॥**

---

೧೬೪–೧೬೬. ಇವರು ನವಿಲು ಗರಿಯ ದೊಂದೆಯನ್ನು ಯಾವಾಗಲೂ ಹಸ್ತದಲ್ಲಿ ಧರಿಸಿಕೊಂಡು ಅದರಲ್ಲಿ ನೆಲವನ್ನು ಗುಡಿಸುವರು. ಇವರು ತಲೆಯಲ್ಲಿ ಕೂದಲಿಲ್ಲದವರಾಗಿ ಇತರರಿಗೆ ಮೋಸ ಮಾಡುವರು. ಬಹಳ ಕಡೆಯಲ್ಲಿ ವಾದದಲ್ಲಿ ಗೆದ್ದು ತಮ್ಮ ಮತವನ್ನು ಸ್ಥಾಪಿಸಿರುವರು. ಬಹಳ ಉತ್ತಮ ಶಿವ ಕ್ಷೇತ್ರವಾದ ಚಿದಂಬರಕ್ಕೆ ಇವರು ಬಂದಾಗ ಅಲ್ಲಿರುವ ಮೂರು ಸಾವಿರ ಶಿವಭಕ್ತರನ್ನೂ, ಮತ್ತು ಯೋಗಿಗಳನ್ನೂ ವಾದಕ್ಕಾಗಿ ಬಲಾತ್ಕಾರ ಮಾಡಿದರು. ಈ ಬೌದ್ಧರು " ಶಿವನು ಮೋಕ್ಷವನ್ನು ಕೊಡತಕ್ಕವನಲ್ಲ. ಮತ್ತು ಶಿವನು ಇಲ್ಲವೇ, ಇಲ್ಲ. ಪ್ರಪಂಚವೆಲ್ಲವೂ ಬುದ್ಧಿಯ ಜ್ಞಾನದಿಂದಲೇ ತುಂಬಿರುವುದು." ಎಂಬ ತಮ್ಮ ಶಾಸ್ತ್ರವನ್ನು ಅನುಸರಿಸಿ ಅದಕ್ಕೆ ತಕ್ಕ ಆಕ್ಷೇಪ ಸಮಾಧಾನಗಳಿಂದ ಕುತರ್ಕವನ್ನು ಮಾಡಿಕೊಂಡು ಅದರಿಂದ ಶಿವಭಕ್ತರನ್ನು ವಾದದಲ್ಲಿ ಗೆಲ್ಲುತ್ತಿದ್ದರು. ಚಿದಂಬರ ಕ್ಷೇತ್ರದಲ್ಲಿರುವ ಶಿವ ಭಕ್ತರೆಲ್ಲರೂ ಇವರ ವಾದಕ್ಕೆ ತಕ್ಕ ಉತ್ತರವನ್ನು ಹೇಳಲಾರದೆ ಸೋತರು.

೧೬೭–೧೭೦. ಆಗ ಪಾಪಿಗಳಾದ ಈ ಬೌದ್ಧರೆಲ್ಲರೂ ವೇದಗಳು ಎಲ್ಲವೂ ಉಪಯೋಗಕ್ಕೆ ಬಂದವುಗಳಲ್ಲ. ಇವುಗಳೆಲ್ಲವೂ, ಸರಿಯಾದ ಅರ್ಥವನ್ನು ಹೇಳುವು

ಶಿವೇ ಭಸ್ಮನಿ ಭಕ್ತಾಶ್ಚ ಭವಂತೋ ಮೋಹಮಾಶ್ರಿತಾಃ ।
ಶಿವಸ್ಯ ವಾ ಭಸ್ಮನೋ ವಾ ಮಹತ್ವಂ ನ ಪವಿತ್ರತಾ || ೧೬೯ ||

ಶಿವೇನ ಧಾರ್ಯತೇ ಭಸ್ಮ ಪವಿತ್ರಂ ಯದಿ ಹೋಮಜಂ ।
ಸ್ಮಶಾನಭಸ್ಮಕಂ ಚಾಪಿ ಹ್ಯಪವಿತ್ರಂ ಪವಿತ್ರಕಂ || ೧೭೦ ||

ವದಂತು ಮೋಹಸಂಯುಕ್ತಾ ಸ್ಸ ಶಿವೋಽಪಿ ಸುಮೋಹಿತಃ ।
ವೃಕ್ಷಬೀಜಂ ಹ್ಯಗ್ನಿಬೀಜಂ ನ ಜನ್ಯಸ್ಸ ಶಿವೋಽಪಿ ಚ || ೧೭೧ ||

ನಿಸ್ಸಂಬಂಧತ್ರಯಂ ಚಾಪಿ ಹ್ಯಸ್ತಿ ಚೈತದ್ಭ್ರುವಂತು ನಃ ।
ಸಂದೇಹಂ ನಿಶ್ಚಯೀಕೃತ್ಯ ವದಂತು ಪರಮೇತಯೋಃ || ೧೭೨ ||

ಕಸ್ಸಂಬಂಧಶ್ಶೇಶ್ವರಸ್ಯ ಭಸ್ಮನೋ ವೇದನಾದಿನಃ ।
ದಿನಾನಿ ಸಪ್ತದತ್ತಾನಿ ತುಭ್ಯಂ ತನ್ನಿಶ್ಚಯಾಯ ಚ || ೧೭೩ ||

---

ದಿಲ್ಲ. ಭಸ್ಮ ರುದ್ರಾಕ್ಷಿಗಳ ಧಾರಣದಿಂದ ಭೋಗವೂ ಮೋಕ್ಷವೂ ಯಾವುದೂ ಉಂಟಾಗುವುದಿಲ್ಲ. ಇವುಗಳಿಗೆ ಪರಸ್ಪರವಾಗಿ ಯಾವ ಸಂಬಂಧವೂ ಇಲ್ಲ. ಶಿವನಲ್ಲಿ ನೀವು ಭಕ್ತರಾಗಿರುವುದು ಮತ್ತು ಭಸ್ಮವನ್ನು ಧರಿಸುವುದು ಇವೆಲ್ಲವೂ ನಿಮ್ಮ ತಪ್ಪು ತಿಳುವಳಿಕೆಯು. ಶಿವನಲ್ಲಿ ಮತ್ತು ಭಸ್ಮದಲ್ಲಿ ಮಹತ್ವವೂ ಪವಿತ್ರತೆಯೂ ಇಲ್ಲವೇ ಇಲ್ಲ. ಶಿವನು ಹೋಮದಿಂದ ಸಿದ್ಧಪಡಿಸಿದ ಪವಿತ್ರವಾದ ಭಸ್ಮವನ್ನು ಧರಿಸುವುದರ ಮೂಲಕ ಮಹತ್ತ್ವವೂ ಪರಿಶುದ್ಧತೆಯೂ ಉಂಟಾಗುವುದಾದರೆ ಸ್ಮಶಾನದಲ್ಲಿರುವ ಭಸ್ಮವು [ಅಪವಿತ್ರ] ಅಪರಿಶುದ್ಧವೆಂದು ಹೇಳಲು ಕಾರಣವೇನು. ಭಸ್ಮದ ಪರಿಶುದ್ಧತೆ ಮತ್ತು ಅಪರಿಶುದ್ಧತೆಯ ವಿಷಯದಲ್ಲಿ ಶಿವನೂ ನೀವು ಸರಿಯಾಗಿ ತಿಳಿದುಕೊಂಡು ಇಲ್ಲ.

೧೭೧–೧೭೪. ದಡ್ಡರಾಗಿರುವ ನೀವು ಇದಕ್ಕೆ ಸರಿಯಾದ ಸಮಾಧಾನವನ್ನು ಹೇಳಿರಿ. "ವೃಕ್ಷಬೀಜ, ಅಗ್ನಿಬೀಜ ಇವೆಲ್ಲವೂ ಶಿವನೇ ಆಗಿರುವನು. ನಿಸ್ಸಂಬಂಧತ್ರಯವೆಂದು" ಹೇಳುವ ನಿಮ್ಮ ಸಿದ್ಧಾಂತವನ್ನು ದೃಢಪಡಿಸಿರಿ. ನೀವು ಹೇಳುವ

ತಯೋ ರಾಧಿಕ್ಯಮೇಕಸ್ಯ ನೋಕ್ತಂ ಯುಷ್ಮಾಭಿರೇವ ಚೇತ್ ।
ಕರಿಷ್ಯಾಮೋಽಪ್ಯಭಾವಂ ಚ ಕನಕೈಃ ಕಲ್ಪಿತಾಂ ಸಭಾಂ ॥ ೧೭೪ ॥

ತೇಷಾಂ ವಾಕ್ಯಮಿತಿ ಶ್ರುತ್ವಾ ಶಂಭುಭಕ್ತಜನಾ ಮಿಥಃ ।
ವಿಚಾರ್ಯ ಚೋತ್ತರಂ ವಕ್ತುಂ ನ ಶಕ್ತಾ ಅಭವಂಸ್ತದಾ ॥ ೧೭೫ ॥

ಓಮಿತ್ಯುಕ್ತ್ವಾ ಸ ವಾಕ್ಯೈಸ್ತ ದಧ್ವರೇಶಸ್ಯ ವಾಧ್ವರೇ ।
ಸಮುತ್ಪತ್ತಿ ರ್ಧಾರಣತ್ವಂ ಭಸ್ಮನ ಶ್ಶಿವಶಾಸನಾತ್ ॥ ೧೭೬ ॥

ಧರ್ತವ್ಯಂ ಭೋಗಮೋಕ್ಷಾರ್ಥಂ ಸರ್ವೈರಪಿ ವದಂತಿ ಚ ।
ವೇದಾಗಮಪುರಾಣಾದಿವಾಕ್ಯೈರ್ವಿಹಿತಮೇವ ಚ ॥ ೧೭೭ ॥

---

ನಿಮ್ಮ ಶಾಸ್ತ್ರೀಯವಾದ ವಿಷಯಗಳಿಗೆ ಇರುವ ಸಂದೇಹವು ಹೋಗುವಂತೆ ಸರಿಯಾದ ಕಾರಣವನ್ನು ನಮಗೆ ತಿಳಿಸಿರಿ. ನೀವು ವೇದವನ್ನು ಪ್ರಮಾಣವಾಗಿ ನಂಬಿರುವವರು. ಭಸ್ಮಕ್ಕೂ ಶಿವನಿಗೂ, ಯಾವ ಸಂಬಂಧವು ಇರುವುದು ಇದಕ್ಕೆ ಸರಿಯಾದ ಉತ್ತರವನ್ನು ನಿಶ್ಚಯಿಸಿ ಹೇಳಲು ನಿಮಗೆ ಏಳುದಿನಗಳು ಅವಕಾಶವನು ಕೊಟ್ಟಿರುವೆವು. ಶಿವ ಮತ್ತು ಭಸ್ಮಗಳಿಗೆ ಮಹತ್ತ್ವವನ್ನು ಆಗಲಿ, ಒಂದಕ್ಕೆ ಮಹತ್ವವನ್ನಾಗಲಿ ನೀವು ಹೇಳದಿದ್ದರೆ ಈ ಚಿಂದಬರದಲ್ಲಿರುವ ಕನಕ ಸಭೆಯನ್ನು ನಾಶಮಾಡುವೆವು " ಎಂದು ಶೈವರನ್ನು ಎದುರಿಸಿದರು.

೧೭೫–೧೭೮. ಆಗ ಶಿವಭಕ್ತರೆಲ್ಲರೂ ಒಟ್ಟಾಗಿ ಸೇರಿದರು. ಅವರಲ್ಲಿ ಶಾಸ್ತ್ರ ವಿಚಾರಮಾಡಿ ಉತ್ತರವನ್ನು ಹೇಳುವ ಶಕ್ತರು ಯಾರೂ ಇರಲಿಲ್ಲ. ಆದಾಗ್ಯೂ ಅವರು ಬೌದ್ಧರು ಹೇಳಿರುವ ಮಾತನ್ನು ಒಪ್ಪಿದರು. " ಯಜ್ಞಪತಿಯಾದ ಪರಮೇಶ್ವರನ ಯಜ್ಞದಲ್ಲಿ ಪ್ರಣವ ಮಂತ್ರದಿಂದಲೂ, ಇತರ ವೇದಗಳ ಮಂತ್ರದಿಂದಲೂ ಭಸ್ಮದ ಉತ್ಪತ್ತಿಯು ಆಯಿತು ಅದರ ಧಾರಣವೂ ಶಿವನ ಆಜ್ಞೆ ಯಿಂದ ಉಕ್ತವಾಗಿರುವುದು. ಭಸ್ಮಧಾರಣದಿಂದ ಭೋಗ ಮೋಕ್ಷಗಳು ಸಿದ್ಧಿಸುವುವು. ಎಂದು ಎಲ್ಲರೂ ಹೇಳುವರು. ವೇದಗಳೂ ಆಗಮಗಳೂ ಪುರಾಣದಲ್ಲಿರುವ ವಾಕ್ಯಗಳೂ ಈ ಅರ್ಥವನ್ನೇ ಹೇಳುವುವು. ವೇದ ಶಾಸ್ತ್ರ ಪುರಾಣೋಕ್ತವಾದ ಭಸ್ಮ

ಧರ್ತವ್ಯ ಮನ್ಯಥಾ ನೃಣಾಂ ನಿರಯೇ ಪತನಂ ಧ್ರುವಂ ।
ಯೂಯಂ ತು ಪಾಪಿನಃ ಸರ್ವೇ ಧ್ರುವಂ ನಿರಯಭೋಗಿನಃ ॥ ೧೭೮ ॥

ಇತ್ಯುಕ್ತಾ ವೈದಿಕೈಸ್ಸರ್ವೈಸ್ತೇಽಪ್ಯೂಚುಃ ಪಾಪಿನೋ ವಚಃ ।
ನ ಸಮ್ಮತಾಸ್ತೇ ಸರ್ವೇಽಪಿ ವೇದಾಸ್ಸತ್ಯಪ್ರವಾದಿನಃ ॥ ೨೭೯ ॥

ದುಃಖಿತಾಸ್ತೇ ಗೃಹಾರ್ಜಗ್ಮುರನ್ಯೋನ್ಯವಿಜಯಾಯ ತೇ ।
ಗತೇ ಚ ಷಡ್ದಿನೇ ಪಶ್ಚಾತ್ತ್ರಿಸಹಸ್ರಂ ಮುನೀಶ್ವರಾಃ ॥ ೧೮೦ ॥

ಸಭಾಪತಿಂ ನಮಸ್ಕೃತ್ಯ ಚ ಕ್ರುರ್ವಿಜ್ಞಾಪನಂ ತ್ವಿದಂ ।
ತೇಷಾಂ ಶಿವೋಽವದತ್ಸ್ವಪ್ನೇ ಸ್ವಭಕ್ತಾನಾಂ ಜಯಾಯ ಚ ॥ ೧೮೧ ॥

---

ಧಾರಣೆಯನ್ನು ಬಿಟ್ಟವನಿಗೆ ನರಕವಾಸವು ತಪ್ಪುವುದಿಲ್ಲ. ನೀವು ಎಲ್ಲರೂ ಈ ಮಾರ್ಗವನ್ನು ಬಿಟ್ಟಿರುವ ಕಾರಣ ಸತ್ಯವಾಗಿಯೂ ನರಕವನ್ನು ಹೊಂದುತ್ತೀರಿ." ಎಂದು ಶಿವಭಕ್ತರು ಉತ್ತರವನ್ನು ಹೇಳಿದರು.

೧೭೯-೧೮೧. ವೇದಗಳನ್ನು ಸತ್ಯವೆಂದು ಹೇಳುವ ವೈದಿಕರ ಈ ಮಾತುಗಳನ್ನು ಕೇಳಿ ನೀವು ಹೇಳುವ ಯುಕ್ತಿಯು ನಿಮ್ಮ ಸಿದ್ಧಾಂತವನ್ನು ದೃಢ ಪಡಿಸಲು ಸಾಲದು." ಎಂದು ಬೌದ್ಧರೆಲ್ಲರೂ ಹೇಳಿದರು. ಆಗ ವೈದಿಕರೆಲ್ಲರೂ ವ್ಯಸನಪಡುತ್ತಾ ಇವರನ್ನು ಹೇಗಾದರೂ ಮಾಡಿ, ವಾದದಲ್ಲಿ ಜಯಿಸಬೇಕೆಂದು ಎಲ್ಲರೂ ನಿಶ್ಚಯಮಾಡಿಕೊಂಡು ತಮ್ಮ ತಮ್ಮ ಮನೆಗಳಿಗೆ ಬಂದರು. ಆರು ದಿನಗಳು ಕಳೆದುಹೋದವು. ಮೂರುಸಾವಿರ ವೈದಿಕರು (ಚಿಂದಂಬರೇಶ್ವರನ) ಚಿದಂಬರದಲ್ಲಿರುವ ಈಶ್ವರನ ದೇವಾಲಯಕ್ಕೆ ಬಂದು ಕನಕ ಸಭಾಪತಿಯಾದ ಶಿವನಿಗೆ ನಮಸ್ಕರಿಸಿದರು. ಆಗ ಶಿವನು ಇವರಲ್ಲಿ ದಯೆಯುಳ್ಳವನಾಗಿ ಭಸ್ಮರುದ್ರಾಕ್ಷಿಗಳನ್ನು ಧರಿಸಿರುವ ಬ್ರಾಹ್ಮಣನ ರೂಪದಿಂದ ಇವರ ಸ್ವಪ್ನದಲ್ಲಿ ಕಾಣಿಸಿಕೊಂಡನು.

ದ್ವಿಜವರ್ಯವಪುರ್ಧೃತ್ವಾ ಭೂತಿರುದ್ರಾಕ್ಷಭೂಷಿತಃ ।
ಅಸ್ಮಿಂ ಸ್ತಿಲ್ಲವನೇ ಕಶ್ಚಿನ್ಮಮ ಭಕ್ತೋ ಮಹೀಸುರಃ ॥ ೧೮೨ ॥

ವಾಗ್ವಿಭೂತ್ಯಾ ದ್ರಾವಿಡಯಾ ವರವಾಕ್ಯೋತಿವಿಶ್ರುತಃ ।
ವನ್ಯೈಶ್ಚ ಪ್ರಾಣಿಭಿ ಸ್ಸಾರ್ಧಂ ಚರತೇ ವ್ಯಾಘ್ರಪಾದವತ್ ॥ ೧೮೩ ॥

ಯುಷ್ಮಾಕಂ ಕಾರ್ಯಸಿದ್ಧಿಸ್ಸ್ಯಾತ್ತೇನ ಸತ್ಯವಿನಾ ಧ್ರುವಂ ।
ವನೇ ಗತ್ವಾ ಸಮಾನೀಯ ಪ್ರೀಣಯಿತ್ವಾ ಚ ಸಾಂತ್ವತಃ ॥ ೧೮೪ ॥

ತೇನೈವಾನುಗತಾ ಸರ್ವಾ ವೇದವಿದ್ಯಾವಿದೂಷಕಾನ್ ।
ಜಯಂತು ಮದ್ಗಿರಾ ಯೂಯಂ ಜ್ಞಾನವಿಜ್ಞಾನಸಿಂಧುನಾ ॥ ೧೮೫ ॥

ಸ ತು ವಾತಪುರೇಶಾಖ್ಯ ಸ್ತತೋ ಮಾಣಿಕ್ಯವಾಚಕಃ ।
ಏತದರ್ಥಂ ಪ್ರೇಷಿತಶ್ಚ ಸುಂದರೇಶೇನ ಶಂಭುನಾ ॥ ೧೮೬ ॥

---

೧೮೨–೧೮೪. ಅವನು " ಈ ತಿಲ್ಲವನವೆಂಬ ಕಾಡಿನಲ್ಲಿ ನನ್ನ ಭಕ್ತನಾದ ಒಬ್ಬ ಬ್ರಾಹ್ಮಣನು ದ್ರಾವಿಡ ಭಾಷೆಯ ವಾಕ್ಸಿದ್ಧಿಯುಳ್ಳವನಾಗಿ ವ್ಯಾಘ್ರಪಾದ ಋಷಿಯ ಹಾಗೆ ಕಾಡಿನಲ್ಲಿರುವ ಪ್ರಾಣಿಗಳ ಜೊತೆಯಲ್ಲಿ ಸಂಚರಿಸುತ್ತಿರುವನು. ಉತ್ತಮ ಕವಿಯಾದ ಅವನಿಂದ ನಿಜವಾಗಿಯೂ ನಿಮ್ಮ ಕಾರ್ಯವು ಗೆಲ್ಲುವುದು. ನೀವು ಕಾಡಿಗೆ ಹೋಗಿ ಅವನನ್ನು ಕರೆದುಕೊಂಡು ಬನ್ನಿರಿ. ಮೃದುವಾದ ಮಾತುಗಳನ್ನು ಹೇಳಿ ಅವನನ್ನು ಸಂತೋಷ ಪಡಿಸಿರಿ.

೧೮೫–೧೮೬. ನೀವುಗಳೆಲ್ಲರೂ ನನ್ನ ಮಾತಿನಂತೆ ಅವನೊಡನೆ ಸೇರಿಕೊಂಡು ವೇದಶಾಸ್ತ್ರಗಳನ್ನು ದೂಷಿಸುತ್ತಿರುವ ಈ ಬೌದ್ಧರೆಲ್ಲರನ್ನೂ ಸರಿಯಾದ ವೇದಾಂತ ಯುಕ್ತಿಗಳಿಂದ ನಿಗ್ರಹ ಮಾಡಿರಿ. ಅವನಿಗೆ ವಾತಪುರೇಶ್ವರನೆಂದು ಮೊದಲು ಹೆಸರಿದ್ದಿತು. ಅನಂತರದಲ್ಲಿ ಮಾಣಿಕ್ಯವಾಚಕನೆಂದು ಹೆಸರು ಬಂದಿರುವುದು. ಹಾಲಾಸ್ಯಪತಿಯಾದ ಸುಂದರೇಶ್ವರನು ಅವನನ್ನು ಈ ಕಾರ್ಯಸಾಧನೆಗಾಗಿ ಇಲ್ಲಿಗೆ

ಬೌದ್ಧಾನಾಂ ವಿಜಯಾರ್ಥಂ ಚ ಮಧುರಾವಾಸಸಾದರಃ ।
ಏವಂ ಮಾಹೇಶ್ವರಾಸ್ಸರ್ವೇ ದೃಷ್ಟ್ವಾ ಸ್ವಪ್ನಂ ಸುಮಂಗಲಂ ॥ ೧೮೭ ॥

ಅನ್ಯೋನ್ಯಂ ಸ್ವಪ್ನವೃತ್ತಾಂತ ಮೂಚು ರ್ವಿಸ್ಮಿತಮಾನಸಾಃ ।
ಸಂಭೂಯ ಶಂಭೋರಗ್ರೇ ತೇ ಸಂತೋಷಾಧಿಕ್ಯಸಂಯುತಾಃ ॥ ೧೮೮ ॥

ಶಾಂಭವೈಸ್ತ್ರೈಃ ಪರಿಜನೈ ರ್ವಾದ್ಯಾನಾಂ ಸುಸ್ವನೈರ್ವನೇ ।
ಪರಿತಃ ಸಂಚರಂತಿ ಸ್ಮ ಮೃಗಯಂತೇ ಶಿವಾಗ್ರತಃ ॥ ೧೮೯ ॥

ತದಾ ತು ಕುತ್ರಚಿದ್ದೃಷ್ಟೋ ಮೃಗಮಧ್ಯೇ ಮಹಾಮುನಿಃ ।
ಅಯಾಹಿ ರಕ್ಷೇತಿ ವಚಶ್ಚೋಚು ರ್ಗತ್ವಾ ತದಂತಿಕಂ ॥ ೧೯೦ ॥

ಅನುಗ್ರಹಂ ಕುರು ಸ್ವಾಮಿನ್ನಿತಿ ವಾಚಂ ಮೃದೂದಿನಃ ।
ಕೃತಾಂಜಲೀಂಶ್ಚ ಶೀರ್ಷೇಷು ವಿಲೋಕ್ಯ ವಿನಯಾನ್ವಿತಾನ್ ॥ ೧೯೧ ॥

---

ಕಳುಹಿಸಿರುವೆನು" ಎಂದು ಸ್ವಪ್ನದಲ್ಲಿ ಶಿವನು ಹೇಳಿದ ಮಾತನ್ನು ಕೇಳಿ ಮಹೇಶ್ವರರೆಲ್ಲರೂ ಪ್ರತಿಯೊಬ್ಬರೂ ತಮ್ಮ ತಮ್ಮ ಸ್ವಪ್ನ ವೃತ್ತಾಂತವನ್ನು ಎಲ್ಲರಿಗೂ ಹೇಳುತ್ತಾ ಆಶ್ಚರ್ಯಪಡುತ್ತಿದ್ದರು.

೧೮೮-೧೮೯. ಅವರೆಲ್ಲರೂ ಶಿವನ ಮುಂದುಗಡೆಯಲ್ಲಿ ಸಂತೋಷದಿಂದ ಇದ್ದರು. ಅನೇಕವಿಧವಾದ ವಾದ್ಯಗಳನ್ನು ತೆಗೆದುಕೊಂಡು ಕಾಡಿಗೆ ಹೋಗಿ ಸೇವಕರೊಡನೆ ತಮಗೆ ಶಿವನು ಸೂಚಿಸಿದ ಆ ಶಿವಯೋಗಿಯನ್ನು ಹುಡುಕಿದರು. ಕಾಡಿನಲ್ಲಿ ಎಲ್ಲಾ ಕಡೆಯಲ್ಲಿಯೂ ಮೃಗಗಳ ಜೊತೆಯಲ್ಲಿ ಓಡುತ್ತಿದ್ದ ಮಹರ್ಷಿಯಾದ ಅವನನ್ನು ಕಂಡರು.

೧೯೦-೧೯೩. ಆಗ ಇವರೆಲ್ಲರೂ ಅವನ ಹತ್ತಿರಕ್ಕೆ ಹೋಗಿ "ಎಲೈ ಪ್ರಭುವೆ, ನೀನು ನಮ್ಮಲ್ಲಿ ಅನುಗ್ರಹವನ್ನು ಮಾಡು. ನಮ್ಮ ಸಂಗಡ ಬಂದು ನಮ್ಮನ್ನು ರಕ್ಷಿಸು" ಎಂದು ಮೃದುವಾದ ಮಾತುಗಳನ್ನು ಹೇಳುತ್ತಾ ತಲೆಯಮೇಲೆ ಬಗಸೆಯನ್ನು ಕಟ್ಟಿ

ಅಶ್ರದ್ಧಯಾ ಪರಿತ್ಯಜ್ಯ ತಾನ್ಯೋಗೀ ಸ ಗತೋ ಮೃಗೈಃ ।
ಪುನಃ ಪುನರ್ಜನೈಸ್ಸರ್ವೈಃ ಗಂತುಂ ಶಕ್ಯೈ ಶ್ಚ ಶಾಂಭವೈಃ ॥ ೧೯೨ ॥

ಕ್ವಚಿತ್ಕ್ವಚಿತ್ಸ ದೃಷ್ಟಸ್ಸನ್ಪ್ರಾರ್ಥಿತೋಽಪಿ ವನಂ ಯಯೌ ।
ತದಾ ಸಂಭೂಯ ತೇ ಭರ್ತ್ರಾ ದುಃಖಿತಾ ಸ್ತಸ್ಥುರಂತಿಕೇ ॥ ೧೯೩ ॥

ಖಿನ್ನಾಶ್ಚ ತೇಽಥ ಸಂಪ್ರಾಪ್ತಾ ನೃತ್ತರಾಜಸ್ಯ ತೇಽಂತಿಕಂ ।
ಪ್ರಾರ್ಥಯಾಮಾಸು ಋಷಯ ಸ್ತ್ರಿಶಹಸ್ರಾ ನಟೇಶ್ವರಂ ॥ ೧೯೪ ॥

ಮೃಗೈಸ್ಸಹ ಪಲಾಯಂತೇ ಚಾಹ್ವಾನಂ ಚ ಕೃತೇ ಸತಿ ।
ಬೌದ್ಧಾನಾಂ ವಿಜಯಾರ್ಥಂ ಚ ಕರಣೀಯಂ ಚ ಕಿಂ ವದ ॥ ೧೯೫ ॥

ತದಾಶರೀರಿಣೀ ವಾಣೀ ಗಂಭೀರಾ ಗಗನಾದಭೂತ್ ।
ಋಷಯ ಸ್ತ್ರಿ ಸಹಸ್ರಾಣಿ ಯೂಯಂ ಶೃಣ್ವಂತು ಮದ್ವಚಃ ॥ ೧೯೬ ॥

---

ಕೊಂಡು ವಿನಯದಿಂದ ಬೇಡಿಕೊಂಡರು. ಅವನು ಇವರನ್ನು ನೋಡಿ ಇವರಲ್ಲಿ ಅನಾದರ ಬುದ್ಧಿಯಿಂದ ಇವರ ಮಾತನ್ನು ಕೇಳದೆ ಮೃಗಗಳ ಜೊತೆಯಲ್ಲಿ ಹೊರಟು ಹೋದನು. ಇವರೆಲ್ಲರೂ ಆ ಶಿವಯೋಗಿಯನ್ನು ಅನೇಕಸಾರಿ ನೋಡಿ ತಮ್ಮ ಸಂಗಡ ಬರಲು ಪ್ರಾರ್ಥಿಸಿದರು. ಅವನು ಕಾಡನ್ನು ಬಿಟ್ಟು ಬರಲಿಲ್ಲ. ಆಗ ಈ ಮಾಹೇಶ್ವರರೆಲ್ಲರಿಗೂ ಬಹಳ ದುಃಖ ಉಂಟಾಯಿತು. ಎಲ್ಲರೂ ಪುನಃ ಒಟ್ಟಾಗಿ ಸೇರಿದರು. ಮನಃಖೇದವುಳ್ಳ ಅವರೆಲ್ಲರೂ ಬಹಳಾಗಿ ಚಿದಂಬರದಲ್ಲಿರುವ ನಟರಾಜನ ಹತ್ತಿರಕ್ಕೆ ಬಂದರು. ಮೂರುಸಾವಿರ ಜನರೂ ನಟರಾಜನನ್ನು ಪ್ರಾರ್ಥಿಸಿದರು.

೧೯೪-೧೯೬. "ಎಲೈ ನಟರಾಜನೆ ನೀನು ಹೇಳಿದ ಶಿವಯೋಗಿಯನ್ನು ನಾವೆಲ್ಲರೂ ನೋಡಿದೆವು. ಇಲ್ಲಿಗೆ ಬರುವಂತೆ ಕರೆದೆವು. ಅವನು ನಮ್ಮ ಮಾತನ್ನು ತಿರಸ್ಕರಿಸಿದನು. ಇಲ್ಲಿಗೆ ಬರಲಿಲ್ಲ. ಮೃಗಗಳ ಸಂಗಡ ಸಂಚರಿಸುತ್ತಾ ಕಾಡಿನಲ್ಲಿಯೇ ಅವನು ಇರುತ್ತಾನೆ. ಬೌದ್ಧರನ್ನು ಈಗ ನಾವುಗಳು ಜಯಿಸಬೇಕಾಗಿದೆ. ಇದಕ್ಕಾಗಿ ನಾವೆಲ್ಲರೂ ಮಾಡಬೇಕಾದ ಕರ್ತವ್ಯವನ್ನು ನಮಗೆ ತಿಳಿಸು ಎಂದು ಕೇಳಿಕೊಳ್ಳುತ್ತಿರುವ ಅವರ ಮಾತಿಗೆ ಉತ್ತರವು ಆಕಾಶವಾಣಿಯ ಮೂಲಕವಾಗಿ ಕೇಳಿಸಿತು.

**ಶಕ್ತ್ಯಾ ಭವಂತ ಶ್ಶೃಣ್ವಂತು ಮದ್ವಾಕ್ಯಂ ಸಾವಧಾನತಃ ।**
**ಏಕೋಽಪಾಯಮಯತ್ನೇನ ತದಾಹ್ವಾನ ಸುಕರ್ಮಣಿ ॥ ೧೯೭ ॥**

**ಪುರಾ ಮಯಾ ವಾತಪುರೇ ಗುರುಣಾ ಕುಂದಮೂಲಕೇ ।**
**ದಿವ್ಯದೃಷ್ಟ್ಯಾ ವೀಕ್ಷಿತಸ್ಯ ದಿವ್ಯಮಂತ್ರೋಪದೇಶತಃ ॥ ೧೯೮ ॥**

**ಮಾಣಿಕ್ಯರತ್ನವದ್ವಾಣೀ ಸಂಭೂತಾ ಇತಿ ಯತ್ನತಃ ।**
**ಮಾಣಿಕ್ಯವಾಚಕ ಇತಿ ದೀಕ್ಷಾನಾಮ ಸುಕಲ್ಪಿತಂ ॥ ೧೯೯ ॥**

**ತೇ ನ ಕುರ್ವಂತು ಚಾಹ್ವಾನಂ ಸರ್ವೇ ಸರ್ವಹಿತಾಯ ಚ ।**
**ಆಯಾಸ್ಯತಿ ನಮಸ್ಕೃತ್ಯ ಸ್ಮರನ್ಮಾಂ ಚ ನಿಕಟಂ ಹಿ ವಃ ॥ ೨೦೦ ॥**

**ಇತಿ ಶ್ರುತ್ವಾ ಶಂಭುವಾಕ್ಯಂ ತೇ ಭಕ್ತಾಃ ಪರಯಾ ಮುದಾ ।**
**ಪುನರ್ಯಯುಸ್ತಿಲ್ಲವನಂ ಸೋಽಪಿ ದೃಷ್ಟೋಽಥ ದೂರತಃ ॥ ೨೦೧ ॥**

---

೧೯೭–೨೦೧. "ಮೂರುಸಾವಿರ ಸಂಖ್ಯೆಯುಳ್ಳ ಮಹೇಶ್ವರ ಭಕ್ತರಾದ ನೀವೆಲ್ಲರೂ ನನ್ನ ಮಾತನ್ನು ಜಾಗರೂಕರಾಗಿ ಕೇಳಿರಿ. ಅವನನ್ನು ಕರೆದು ತರುವ ವಿಚಾರದಲ್ಲಿ ಒಂದು ಸುಲಭವಾದ ಉಪಾಯವನ್ನು ಹೇಳುವೆನು. ಕುಂದಮೂಲ ಕ್ಷೇತ್ರದಲ್ಲಿ ವಾತಪುರೇಶ್ವರನಿಗೆ ಮಂತ್ರವನ್ನು ಉಪದೇಶಮಾಡುವಾಗ ಅವನನ್ನು ದಿವ್ಯ ದೃಷ್ಟಿಯಿಂದ [ನೋಡಿದೆನು] ಅನುಗ್ರಹಿಸಿದೆನು. ನೀವು ಇವೆಲ್ಲವನ್ನೂ ಅವನಿಗೆ ತಿಳಿಸಿ ಉಪಾಯದಿಂದ ಅವನನ್ನು ಕರೆಯಿರಿ. ಇದೆಲ್ಲವೂ ಅವನಿಗೆ ತಿಳಿದರೆ ಅವನು ನಿಮಗೆ ನಮಸ್ಕರಿಸುತ್ತಾ ನಿಮ್ಮ ಹತ್ತಿರಕ್ಕೆ ಬರುವನು. ಎಲ್ಲರಿಗೂ ಅವನು ಬಂದದ್ದರಿಂದ ಸುಖವಾಗುವುದು." ಈ ಪ್ರಕಾರವಾದ ಆಕಾಶವಾಣಿಯನ್ನು ಕೇಳಿ ಅವರೆಲ್ಲರೂ ಶಿವನಿಗೆ ನಮಸ್ಕಾರಮಾಡಿದರು. ಈ ಮಾತಿನಂತೆ ಎಲ್ಲರೂ ತಿಲ್ಲವನವೆಂಬ ಕಾಡಿಗೆ ಅವನನ್ನು ಹುಡುಕುವುದಕ್ಕಾಗಿ ಬಂದರು, ಹೋಗಿ ದೂರದಲ್ಲಿ ಅವನನ್ನು ಕಂಡು ಅವನ ಸಂಗಡ ಮಾತನಾಡಿದರು.

ಹಾಲಾಸ್ಯೇಶ್ವರವಾಕ್ಯಾತ್ತ್ವಂ ಪ್ರಾಪ್ತಾ ಸ್ತೇಂತಿಕ ಮುತ್ತಮಂ ।
ಮಾಣಿಕ್ಯವಾಚಕ ಇತಿ ದೀಕ್ಷಾನಾಮ ಸುಕಲ್ಪಿತಂ ॥ ೨೦೨ ॥

ತೇನ ಕುರ್ವಂತು ಚಾಹ್ವಾನಮಿತಿ ಖಾದಭವದ್ವಚಃ ।
ಮಾಣಿಕ್ಯವಾಚಕ ಏಹೀ ತ್ಯುಚ್ಚೈಃ ಪ್ರೋಚು ಶ್ಶಿವಾಜ್ಞಯಾ ॥ ೨೦೩ ॥

ಶೈವಸಿದ್ಧಾಂತಸಿದ್ಧ್ಯರ್ಥಂ ಬೌದ್ಧಾನಾಂ ನಿಗ್ರಹಾಯ ಚ ।
ಶಿವಾಜ್ಞಯಾ ತ್ವಾಂ ಸಂಪ್ರಾಪ್ತಾಶ್ಚಾಹೂತಾಶ್ಚ ಸುನಾಮತಃ ॥ ೨೦೪ ॥

ವಾತಗಾಮೇಶ್ವರೋ ದೀಕ್ಷಾನಾಮಶ್ರವಣಮಾತ್ರತಃ ।
ಮಾಣಿಕ್ಯವಾಚಕ ಇತಿ ಏಹ್ಯೇಹ್ಯಂತಿಕನೇವ ನಃ ॥ ೨೦೫ ॥

ಗುರುಮೂರ್ತ್ಯಾ ಶಿವೇನಾಹಮಾಹೂತೋಽನುಗ್ರಹಾಯ ಯತ್ ।
ತಸ್ಯಾಜ್ಞಯಾ ಚ ತನ್ನಾಮ ಲಬ್ಧವಂತ ಶ್ಶಿವಾಶ್ರಿತಾಃ ॥ ೨೦೬ ॥

---

೨೦೨–೨೦೪. "ಎಲೈ ಪ್ರಭುವೇ ? ನಾವೆಲ್ಲರೂ ಹಾಲಾಸ್ಯೇಶ್ವರನ ಮಾತಿನಂತೆ ನಿನ್ನನ್ನು ಹುಡುಕಿಕೊಂಡು ಬಂದಿರುವೆವು. ನಿನಗೆ ಮಂತ್ರೋಪದೇಶವನ್ನು ಮಾಡುವ ಕಾಲದಲ್ಲಿ ನಿನ್ನ ಗುರುವು ನಿನಗೆ ಮಾಣಿಕ್ಯವಾಚಕನೆಂದು ಹೆಸರನ್ನು ಇರಿಸಿರುವನು. ಈ ಹೆಸರಿನಿಂದ ನಿನ್ನನ್ನು ಕರೆಯಬೇಕೆಂದು ಆಕಾಶವಾಣಿಯಿಂದ ನಾವು ತಿಳಿದೆವು. ಶೈವ ಶಿದ್ಧಾಂತವನ್ನು ಪ್ರಚುರಪಡಿಸಿ ಬೌದ್ಧರನ್ನು ನಿಗ್ರಹ ಮಾಡುವುದಕ್ಕಾಗಿ ಶಿವನ ಆಜ್ಞೆಯಿಂದ ನಿನ್ನನ್ನು ಕರೆದುಕೊಂಡುಹೋಗಲು ನಾವುಗಳು ಬಂದಿರುತ್ತೇವೆ. ಆದರಿಂದಲೇ ನಾವುಗಳು ನಿನ್ನನು ಮಾಣಿಕ್ಯವಾಚಕನೆಂಬ ಹೆಸರಿನಿಂದ ಕರೆದಿರುವೆವು." ಎಂದು ಆ ಶಿವಯೋಗಿಯು ಸಂಗಡ ಹೇಳಿದರು.

೨೦೫–೨೧೦. ವಾತಪುರೇಶ್ವರನು ತನಗೆ ದೀಕ್ಷೆಯನ್ನು ಕೊಡುವ ಕಾಲದಲ್ಲಿ ಗುರುವು ತನಗೆ ಇರಿಸಿದ ಹೆಸರನ್ನು ಕೇಳಿದ ಕೂಡಲೇ ಅವನು " ನನ್ನ ಗುರುವು ಮಾಣಿಕ್ಯವಾಚಕನೆ, ನೀನು ನಮ್ಮ ಹತ್ತಿರಕ್ಕೆ ಬೇಗನೆ ಬಾ ಎಂದು ಕರೆದಂತೆ ತಿಳಿದನು. ಗುರುಮೂರ್ತಿಯಾದ ಶಿವನು ಅನುಗ್ರಹ ಮಾಡಲು ನನ್ನನ್ನು ಕರೆದಿರು

ಏತದರ್ಥಂ ಪ್ರೇಷಿತಾಶ್ಚ ಜೀವನ್ಮುಕ್ತಿಪುರಾದ್ಧಿ ಮಾಂ ।
ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮೀತ್ಯುಚ್ಚರನ್ ಸ ಮುಹುರ್ಮುಹುಃ ॥ ೨೦೭ ॥

ಪ್ರಣಿಪತ್ಯ ಪತ್ರಿಪದಂ ಶಾಂಭವಾನ್ಪ್ರತಿ ಚಾಯಯೌ ।
ತೇಽಪಿ ಪ್ರೀತಾ ನಮಸ್ಕಾರೈಃ ಪರಿಪೂಜ್ಯ ಚ ತಂ ಮುನಿಂ ॥ ೨೦೮ ॥

ವೃತ್ತಾಂತಮುಕ್ತ್ವಾ ಶಂಭೋಶ್ಚ ತಮಾದಾಯ ಪರೀವೃತಾಃ ।
ಅಂಗೀಕೃತ್ಯ ತಮಾಲಿಂಗ್ಯ ಸ್ಕಂಧಮಾರೋಪ್ಯ ಕಸ್ಯಚಿತ್ ॥ ೨೦೯ ॥

ಗಾಯಂತಃ ಶಿವನಾಮಾನಿ ನೃತ್ಯಂತ ಸ್ತಾಲವಾದ್ಯತಃ ।
ಯತ್ರ ತಿಷ್ಠಂತಿ ಬೌದ್ಧಾಸ್ತೇ ತತ್ಪ್ರದೇಶ ಮಥಾಯಯುಃ ॥ ೨೧೦ ॥

ತಂ ಯೋಗಿನಂ ಪುರಸ್ಕೃತ್ಯ ಶಿವಭಕ್ತಾನ್ ಸಮಾಗತಾನ್ ।
ಆಲೋಕ್ಯ ಯೂಯ ಮಾಯಾತಾ ಏನಂ ಸ್ಕಂಧವಹಾಃ ಪುನಃ ॥ ೨೧೧ ॥

---

ವನೆಂದು ತಿಳಿದುಕೊಂಡನು. ಶಿವಭಕ್ತರು ನನ್ನ ದೀಕ್ಷಾನಾಮದಿಂದ ಕರೆಯುವುದು ಇದಕ್ಕಾಗಿಯೇ ಆಗಿರುವುದು. ಜೀವನ್ಮುಕ್ತಿಪುರೀಶ್ವರನು ನನಗೆ ಅನುಗ್ರಹಮಾಡುವುದಕ್ಕಾಗಿ ಆ ನಗರದಿಂದ ನನ್ನನ್ನು ಇಲ್ಲಿಗೆ ಕಳುಹಿಸಿರುವನು. ಇದರಿಂದ ನಾನು ಕೃತಾರ್ಥನಾಗುವೆನು." ಎಂದು ಹೇಳುತ್ತಾ ಆ ಶಿವಯೋಗಿಯು ಶಿವಭಕ್ತರ ಹತ್ತಿರಕ್ಕೆ ಬಂದನು. ಪ್ರತಿಹೆಜ್ಜೆಗೂ ನಮಸ್ಕಾರ ಮಾಡುತ್ತಿರುವ ಆ ಶಿವಯೋಗಿಗೆ ಪ್ರತಿನಮಸ್ಕಾರವನ್ನು ಮಾಡುತ್ತಾ ಶಿವಭಕ್ತರೆಲ್ಲರೂ ಸಂತೋಷದಿಂದ ಅವನನ್ನು ಪೂಜಿಸುತ್ತಿದ್ದರು. ಶಿವನು ಹೇಳಿದ ಆಜ್ಞೆಯನ್ನು ಅವನಿಗೂ ತಿಳಿಸಿದರು. ಅನಂತರದಲ್ಲಿ ಅವನನ್ನು ಒಬ್ಬನ ಹೆಗಲ ಮೇಲೆ ಕೂರಿಸಿಕೊಂಡು ಎಲ್ಲರೂ ಶಿವನ ಸ್ತೋತ್ರಗಳನ್ನು ಹೇಳುತ್ತಾ, ತಾಳ ಮತ್ತು ವಾದ್ಯಗಳನ್ನು ಬಾರಿಸುತ್ತಾ, ಅಟ್ಟಹಾಸದಿಂದ ಕರದುಕೊಂಡು ಬಂದರು. ಎಲ್ಲರೂ ಬೌದ್ಧರು ಇರುವ ಪ್ರದೇಶಕ್ಕೆ ಬಂದು ವಾದ ಮಾಡಲು ಸಿದ್ಧರಾದರು.

೨೧೧-೨೧೩. ಆ ಶಿವಯೋಗಿಯನ್ನು ಮುಂದಿಟ್ಟುಕೊಂಡು ಬಂದಿರುವ ಶಿವಭಕ್ತರನ್ನು ಬೌದ್ಧರು ನೋಡಿ "ಇವನಿಂದ ನಿಮ್ಮ ಸಂದೇಹವೆಲ್ಲವೂ

ಬೌದ್ಧಾಃ ಪ್ರಾಹು ಸ್ಸಸಂದೇಹೋ ನಿಶ್ಚಿತಂ ವೇತ್ಥ್ಯನೇ ನ ಹಿ ।
ಇತಿ ತೇಷಾಂ ವಚಶ್ಶ್ರುತ್ವಾ ಪ್ರಾಹುರ್ಗಂಭೀರವಾಚಕೈಃ ॥ ೨೧೨ ॥

ಸುನಿಶ್ಚಿತ ಸ್ಸ ಸಂದೇಹೋ ಜಯೋಽಸ್ಮಾಕ ಮೇವ ಹಿ ।
ಯುಷ್ಮಾಕ ಮಪ್ಯಪಜಯ ಇತ್ಯೂಚುಸ್ತ್ರಿಸಹಸ್ರಕಾಃ ॥ ೨೧೩ ॥

ಕ್ರುದ್ಧಾ ಬೌದ್ಧಾಃ ಪುನಃ ಪ್ರಾಹು ಸ್ಸಂದೇಹೋ ನಿಶ್ಚಿತಃ ಕಥಂ ।
ಪದದ್ವಯಂ ಚ ಯೂಯಂ ಚ ವದಂತು ಶಿವಮೋಹಿತಾಃ ॥ ೨೧೪ ॥

ಇತ್ಯುಕ್ತ್ವಾ ಪ್ರಾಹುರೇನಂ ಚ ವಾತಗ್ರಾಮಾಧಿಪಂ ರುಷಾ ।
ಪದದ್ವಯಂ ಯಥಾ ಜ್ಞಾತಂ ಪರಃ ಕೋ ಭವ ಭಸ್ಮನೋಃ ॥ ೨೧೫ ॥

ಏವಮುಕ್ತವತಾಂ ತೇಷಾ ಮಗ್ರೇ ವಾತಪುರೇಶ್ವರಃ ।
ವೇದವಾಕ್ಯೈರುತ್ತರಂ ಚ ಸಂಬಂಧಂ ಪ್ರಾಹ ತತ್ತ್ವತಃ ॥ ೨೧೬ ॥

---

ಹೋಗಿರುವುದೇ ? ಎಂದು ಪ್ರಶ್ನೆಮಾಡಿದರು. "ನಮ್ಮ ಸಂಶಯುವೆಲ್ಲವೂ ಹೋಗಿರುವುದು. ಸಿದ್ಧಾಂತವನ್ನು ನಾವೆಲ್ಲರೂ ಚನ್ನಾಗಿ ತಿಳಿದಿರುವೆವು. ನಮಗೆ ವಾದದಲ್ಲಿ ಜಯವು ನಿಶ್ಚಯವಾಗಿ ಉಂಟಾಗುವುದು. ಮತ್ತು ನಿಮಗೆ ಅಪಜಯವೂ ಖಂಡಿತವಾಗಿ ಉಂಟಾಗುವುದು." ಎಂದು ಬೌದ್ಧರಿಗೆ ಮೂರು ಸಾವಿರ ಶಿವಭಕ್ತರು ಹೇಳಿದರು,

೨೧೪-೨೧೫. ಆಗ ಬೌದ್ಧರು ಕೋಪಗೊಂಡವರಾಗಿ "ಶಿವನೆಂದು ಹೇಳುತ್ತಾ ಭ್ರಾಂತರಾಗಿರುವ ನಿಮಗೆ ಎರಡು ಪದಗಳ ಅರ್ಥವೇ ತಿಳಿದಿಲ್ಲ. ಹೀಗಿರುವ ಕಾಲ ದಲ್ಲಿ ಶಾಸ್ತ್ರದ ಸಂದೇಹವು ನಿಮಗೆ ಹೇಗೆ ಹೋಗಿರುತ್ತದೆ ? ಎಂದು ಹೇಳುತ್ತಾ ವಾತಪುರೇಶ್ವರನನ್ನು ನೋಡಿ "ಭವ, ಭಸ್ಮ," ಎಂಬ ಎರಡು ಶಬ್ದಗಳ ವಿಷಯ ದಲ್ಲಿ ನೀನು ತಿಳಿದಿರುವುದನ್ನು ತಿಳಿಸು ಎಂದು ಪ್ರಶ್ನೆ ಮಾಡಿದರು.

೨೧೬-೨೧೭. ಆಗ ವಾತಪುರೇಶ್ವರನು ಆ ಬೌದ್ಧರ ಎದುರಿನಲ್ಲಿಯೇ ವೇದ ವಾಕ್ಯಗಳಿಂದ ಅವೆರಡು ಶಬ್ದಗಳಿಗೂ ಇರುವ ಸಂಬಂಧವನ್ನು ತಾತ್ತ್ವಿಕವಾದ

ಬೃಹತ್ಸಾಮೇತಿಮಂತ್ರೇಣ ತ್ರಿಯಾಯುಷ್ಯಾದಿಮಂತ್ರತಃ ।
ಆಪೋರಾಜೇತಿ ವಾಕ್ಯಾರ್ಥೈರ್ವಿಭೂತಿಪ್ರತಿಪಾದಕೈಃ ॥ ೨೧೭ ॥

ತೇ ಪ್ರಾಹುರ್ವೇದವಾಕ್ಯಾರ್ಥಾ ಅಸತ್ಯಾ ಸ್ಸರ್ವ ಏವ ಹಿ ।
ತತ್ವತೋ ವದ ಚಾಸ್ಮಾಕಂ ಯುಕ್ತ್ಯಯುಕ್ತಂ ನಿದರ್ಶನೈಃ ॥ ೨೧೮ ॥

ಇತಿ ತೇಷಾಂ ವಚಶ್ಶ್ರುತ್ವಾ ಬೌದ್ಧಾನಾಂ ಪ್ರಾಹ ಚಾಗ್ರತಃ ।
ಶುಷ್ಕಂ ಗೋಮಯಮಾನೀಯ ವಹ್ನಿನಾ ಸಮಯೋಜಯೇತ್ ॥ ೨೧೯ ॥

ಧಾರಣಾರ್ಥಂ ವಿಭೂತೇಶ್ಚ ಏತನ್ಮಂತ್ರಾದಿಕಂ ಹಿ ವಃ ।
ಸ ಗೋಮಯಮಯಃ ಪಿಂಡೋ ದಗ್ಧೋ ಭಸ್ಮಮಯೋಗ್ನಿನಾ ॥ ೨೨೦ ॥

ಅಂತರಗ್ನಿಮಯ ಶ್ಚಾಸೀತ್ತದೇತ್ಯಾಹ ಸ ತಾಸುಧೀಃ ।
ನಾಮಮಾತ್ರೇಣ ಸರ್ವಜ್ಞಾ ಯೂಯ ಮಜ್ಞಾ ಯಥಾರ್ಥತಃ ॥ ೨೨೧ ॥

---

ರೀತಿಯಿಂದ ಹೇಳಲುಪಕ್ರಮಿಸಿದನು. "ಬೃಹತ್ಸಾಮ" ಎಂಬ ಮಂತ್ರದಿಂದಲೂ ತ್ರಿಯಾಯುಷ್ಯಾದಿ ಮಂತ್ರಗಳಿಂದಲೂ "ಆಪೋರಾಜನಂ" ಎಂಬ ಮಂತ್ರ ದಿಂದಲೂ ಭಸ್ಮಮಾಹಾತ್ಮ್ಯವು ಪ್ರತಿಪಾದಿತವಾಗಿರುವುದು. ಎಂದು ಹೇಳಿದನು.

೨೧೮. ಅವನ ಮಾತನ್ನು ಕೇಳಿದ ಬೌದ್ಧರು, "ಇದನ್ನು ನಂಬುವುದಿಲ್ಲ ಭಸ್ಮ, ಮತ್ತು ಭವಶಬ್ದಗಳ ಅರ್ಥಸಂಬಂಧಗಳು ಲೋಕದಲ್ಲಿರುವ ದೃಷ್ಟಾಂತ ಯುಕ್ತಿಯಿಂದ ನಮಗೆ ತಿಳಿಯುವಂತೆ ಹೇಳು" ಎಂದು ಕೇಳಿದರು.

೨೧೯-೨೨೧. ಆಗ ವಾತಪುರೇಶ್ವರನು ಅವರ ಮಾತನ್ನು ಕೇಳಿ ಅವರ ಎದುರಿನಲ್ಲಿಯೇ ಒಣಗಿದ ಗೋಮಯವನ್ನು ತರಿಸಿ, ಅಗ್ನಿಯಿಂದ ಅದನ್ನು ಸುಡಬೇಕು ಅದರಿಂದ ಉಂಟಾಗುವ ಭಸ್ಮವನ್ನು ಧರಿಸುವಾಗ ಈ ಮಂತ್ರಗಳನ್ನು ಹೇಳತಕ್ಕದ್ದು. ಗೋಮಯವಾದ ಪಿಂಡವು ಅಗ್ನಿಯಿಂದ ಭಸ್ಮರೂಪವನ್ನು ಹೊಂದಿದ ಕಾರಣ ಭಸ್ಮದಲ್ಲಿ ಅಗ್ನಿಯ ಸಂಬಂಧವು ನಿತ್ಯವಾಗಿರುವುದು. ಇದನ್ನು ಬೌದ್ಧ ರಾದ ನೀವು ತಿಳಿಯದೆ ಹೆಸರಿನಿಂದ ಸರ್ವಜ್ಞರಾಗಿರುವಿರಿ. ನಿಜವಾಗಿಯೂ ನಿಮ್ಮಂತೆ ದಡ್ಡರು ಲೋಕದಲ್ಲಿಲ್ಲ.

ಅಗ್ನಿರೂಪಶ್ಶಿವಃ ಶಂಭು ಸ್ಸರ್ವೈರಪಿ ಸುನಿಶ್ಚಿತಃ ।
ಸಾಮಾನಾಧಿಕರಣ್ಯಂ ಚ ಸಂಬಂಧ ಶ್ಶಿವಭಸ್ಮನೋಃ ॥ ೨೨೨ ॥

ಅಸ್ಮಿನ್ ಗೋಮಯಪಿಂಡೇ ತು ದ್ರಷ್ಟುಂ ಪ್ರತ್ಯಯಮೇವ ವಃ ।
ಜನ್ಯಂ ಜನಕಸಂಬಂಧಮಪ್ಯಸ್ತಿ ಭವಭಸ್ಮನೋಃ ॥ ೨೨೩ ॥

ತಾಸ್ಮಾದೇವಂ ಪವಿತ್ರಂ ಹಿ ಸಜ್ಜನ್ಯತ್ವಾಚ್ಚ ಭಸ್ಮನಃ ।
ತದಜ್ಞಾಯ ವೃಥಾ ಜಲ್ಪಂ ಕುರ್ವತಾಂ ಭವತಾಮಿಹ ॥ ೨೨೪ ॥

ಅಜ್ಞಾನಾಂ ಪುರತೋ ದ್ರಷ್ಟುಂ ದೃಷ್ಟಾಂತೋ ಯಂ ಪ್ರದರ್ಶಿತಃ ।
ಸೋಽಗ್ನಿಶ್ಶಿವಮಯಃ ಪ್ರೋಕ್ತೋ ಭಸ್ಮ ತಸ್ಯ ವಿಭೂಷಣಂ ॥ ೨೨೫ ॥

ತದ್ಧಾರಣಾದ್ಭುಕ್ತಿಮುಕ್ತೀ ಸರ್ವೇಷಾಂ ಚ ಶಿವಾಜ್ಞಯಾ ।
ಶಿವೇನ ವಿಧೃತಂ ಸರ್ವಂ ಭುಕ್ತಿಮುಕ್ತಿವಿಧಾಯಕಂ ॥ ೨೨೬ ॥

---

೨೨೨-೨೨೪. ಅಷ್ಟಮೂರ್ತಿಯಾದ ಶಿವನ ಅಗ್ನಿಯೆಂದು ಹೆಸರಿನ ರೂಪವು ಒಂದು ಇರುವುದೆಂದು ಎಲ್ಲರೂ ನಿಶ್ಚಯ ಮಾಡಿರುವರು ಇದರಿಂದ ಭಸ್ಮಕ್ಕೂ ಶಿವನಿಗೂ ಸಾಮಾನಾಧಿಕರಣ್ಯವು ಉಂಟಾಗಿರುವುದು. (ಭಸ್ಮದಲ್ಲಿ ಶಿವನು ಇರವನು.) ಗೋಮಯದ ಪಿಂಡದಲ್ಲಿ ನಿಮಗೆ ನಂಬಿಕೆಯು ಉಂಟಾಗುವುದು. ಭವ, ಭಸ್ಮ ಶಬ್ದಾರ್ಥಗಳಿಗೆ ಜನ್ಯ ಜನಕ ಭಾವವಿರುವುದು. [ಭಸ್ಮ ಜನ್ಯ, ಭವ ಜನಕ] ಆದ್ದರಿಂದ ಭವನಿಂದ ಉಂಟಾದ ಭಸ್ಮವು ಪವಿತ್ರವಾದದ್ದು. ಇದನ್ನು ತಿಳಿಯದೆ ವ್ಯರ್ಥವಾಗಿ ಮಾತನಾಡುವ ನಿಮ್ಮ ಎದುರಿಗೆ ಈ ದೃಷ್ಟಾಂತವನ್ನು ಹೇಳಬೇಕಾಯಿತು.

೨೨೫-೨೨೬. ಅಗ್ನಿಯು ಶಿವನ ರೂಪಾಂತರವು. ಭಸ್ಮವು ಶಿವನಿಗೆ ಆಭರಣವು. ಆದ್ದರಿಂದಲೇ ಭಸ್ಮಧಾರಣೆಯಿಂದ ಭುಕ್ತಿ, ಮುಕ್ತಿಗಳುಂಟಾಗುವುವು. ಈ ಕಾರಣದಿಂದಲೇ ಎಲ್ಲರೂ ಭಸ್ಮವನ್ನು ಶಿವನ ಆಜ್ಞೆಯಂತೆ ಧರಿಸತಕ್ಕದ್ದು. ಶಿವನು

**ಅಕ್ಷಸ್ಯ ಚಾಪಿ ಗಂಗಾಯಾ ಶ್ಶಿವಧಾರಣಪುಣ್ಯತಃ ।**
**ಗಂಗಾಸ್ನಾನಾದ್ಯಥಾ ಮುಕ್ತಿಸ್ತಥಾ ತದ್ರಾಗ್ಧಸನ್ಯತಃ　　॥ ೨೨೭ ॥**

**ಸ್ವಭಾವತೋ ಯಥಾ ವಹ್ನಿ ರ್ಭಸ್ಮನಾಚ್ಛಾದಿತ ಸ್ತಥಾ ।**
**ಸ್ವಭಾವೇನ ಶಿವ ಶ್ಚಾಪಿ ಭಸ್ಮನೋದ್ಧೂಲಿತಃ ಪ್ರಭುಃ　　॥ ೨೨೮ ॥**

**ಇತಿ ವಾತಪುರೇಶಸ್ಯ ಶ್ರುತ್ವಾ ವಚನ ಮದ್ಭುತಂ ।**
**ತೇ ವಕ್ತುಂ ಪ್ರತಿವಾಕ್ಯಂ ಚ ನ ಶಕ್ತಾ ಭರ್ತ್ಸಯಂತಿ ತಂ　　॥ ೨೨೯ ॥**

**ನ ಯುಕ್ತಿಮತ್ತ್ವದುಕ್ತಂ ಹಿ ಜಿತೋಽಸ್ಮಾಭಿ ಸ್ತ್ವಮೀರಿತಃ ।**
**ಶಿವಾಶ್ರಿತಾಶ್ಚ ಸುಗತಾ ಮಿಥಃ ಕಲಹಕಾರಿಣಃ　　॥ ೨೩೦ ॥**

**ಆಯಯುಶ್ಚೋಳಭೂಪಾಲ ಮಾರಾನ್ನಗರವಾಸಿನಃ ।**
**ರಾಜಾ ಪರಶ್ಚ ತೇ ಸರ್ವೇ ಶಕ್ತ್ಯೋತ್ತರ ಮಥಾಬ್ರುವನ್　　॥ ೨೩೧ ॥**

---

ಧರಿಸಿರುವುದೆಲ್ಲವೂ ಹೀಗೆಯೇ ಭುಕ್ತಿ, ಮುಕ್ತಿಗಳನ್ನುಂಟುಮಾಡುವುವು. ಆದ್ದರಿಂದಲೇ ಶಿವ ಧರ್ಮಾಚರಣೆಯು ಭುಕ್ತಿ, ಮುಕ್ತಿಪ್ರದವಾಗಿರುವುದು. ಶಿವನು ರುದ್ರಾಕ್ಷವನ್ನೂ ಗಂಗೆಯನ್ನೂ ಧರಿಸಿರುವನು. ಶಿವನು ಧರಿಸಿರುವುದರಿಂದ ಉಂಟಾದ ಪರಿಶುದ್ಧತೆಯಿಂದ ಗಂಗಾಸ್ನಾನದಿಂದ ಮುಕ್ತಿಯು ಉಂಟಾಗುವ ಹಾಗೆ, ಭವಜನ್ಯವಾದ ಭಸ್ಮದಿಂದ ಮುಕ್ತಿಯು ಉಂಟಾಗುವುದು.

೨೨೮-೨೩೨. ಅಗ್ನಿಯು ಭಸ್ಮದಿಂದ ಆಚ್ಛಾದಿತವಾಗಿರುವುದು, ಸ್ವಭಾವವಾಗಿರುವಂತೆ ಪ್ರಭುವಾದ ಶಿವನೂ ಸ್ವಭಾವದಿಂದ ಭಸ್ಮೋದ್ಧೂಳಿತನಾಗಿರುವನು.” ಎಂದು ಹೇಳಿದ ವಾತಪುರೇಶ್ವರನ ಅದ್ಭುತವಾದ ಮಾತನ್ನು ಕೇಳಿ ಪ್ರತಿಯಾಗಿ ಹೇಳುವುದಕ್ಕೆ ತಿಳಿಯದೆ ಇರುವ ಬೌದ್ಧರು, ಅವನನ್ನು ಹೆದರಿಸುವುದಕ್ಕೆ ಪ್ರಾರಂಭಿಸಿದರು. ನೀವು ಹೇಳಿರುವುದು ಯುಕ್ತಿಕರವಾಗಿಲ್ಲ. ನಾವುಗಳು ವಾದದಲ್ಲಿ ಗೆದ್ದಿರುವೆವು ಎಂದು ಬೌದ್ಧರು ಹೇಳಿದರು. “ನಾವು ವಾದದಲ್ಲಿ ನಿಮ್ಮನ್ನು ಗೆದ್ದಿದ್ದೇವೆ” ಎಂದು ಶಿವಭಕ್ತರು ಹೇಳಿದರು. ಇಬ್ಬರಿಗೂ ಪರಸ್ಪರವಾಗಿ ಜಗಳವು ಉಂಟಾಗಿ

ಕಲಹಂ ಚಾಪಿ ತೇನ್ವೈತೇ ನೃಪೇ ಮಧ್ಯಸ್ಥವಾಚಕೇ ।
ಉಭಯೋಃಷಾಂ ಚ ಕೌಶಲ್ಯಮೀಕ್ಷಿತುಂ ಚ ಪರೀಕ್ಷಿತುಂ ॥ ೨೩೨ ॥

ಏವಮಾಹ ಸ ರಾಜಾ ಚ ತದ್ವಾಕ್ಯಂ ವಃ ಪ್ರಮಾಣಕಂ ।
ಮದ್ವಾಕ್ಯಂ ಕಾರ್ಯಮೇವಾಥ ತಥೇತ್ಯಾಹುಶ್ಚ ಸೌಗತಾಃ ॥ ೨೩೩ ॥

ಸ್ವಭಾವಮೂಕಾಂ ಸ್ವಾಂ ಪುತ್ರೀಮಾನೀಯಾಥ ಸುರೂಪಿಣೀಂ ।
ಅಗ್ರೇ ಸ್ಥಾಪ್ಯ ಪ್ರಾಹ ವಾಚಂ ಯೋಗೀಂದ್ರಂ ಕ್ಷಪಣಾನಪಿ ॥ ೨೩೪ ॥

ಮತ್ಪುತ್ರ್ಯಾ ಮೂಕತಾ ಮಾಶು ವಿನಾಶ್ಯ ವಿಧಿಕಲ್ಪಿತಾಂ ।
ವಾಕ್ಪಾಟವಂ ಯೇ ಕುರ್ವಂತಿ ತೇಷಾಮೇವ ಜಯೋಧುನಾ ॥ ೨೩೫ ॥

ಇತಿ ತದ್ಗಿರಮಾಕರ್ಣ್ಯ ಸರ್ವೇ ಶೈವಾಶ್ಚ ಸೌಗತಾಃ ।
ಮಿಥಃ ಪ್ರತಿಜ್ಞಾಂ ಕುರ್ವಂತಿ ತಥಾಸ್ತ್ವಿತಿ ಚ ಭೂಪತಿಂ ॥ ೨೩೬ ॥

---

ಅವರಿಬ್ಬರೂ ಹತ್ತಿರದಲ್ಲಿ ಇರುವ ಚೋಳರಾಜನ ನಗರಕ್ಕೆ ಬಂದರು. ರಾಜನ ಹತ್ತಿರದಲ್ಲಿ ಅವರಿಬ್ಬರೂ ತಮ್ಮ ಶಕ್ತಿಗನುಸಾರವಾಗಿ ತಮ್ಮ ತಮ್ಮ ವಿಶಯವನ್ನು ತಿಳಿಸಿದರು. ಆಗ ರಾಜನು ಎರಡು ಪಂಗಡದವರಿಗೂ ನಿರ್ಣಯವನ್ನು ಹೇಳುವುದಕ್ಕೆ ಒಪ್ಪಿಕೊಂಡು ಎರಡು ಪಂಗಡದವರಲ್ಲಿಯೂ ಇರುವ ನಿಪುಣತೆಯನ್ನು ಪರೀಕ್ಷಿಸಿ ತಿಳಿಯಲು ಮಾತನಾಡಿದನು.

೨೩೩–೨೩೬. "ನಿಮ್ಮ ಮಾತಿನಲ್ಲಿ ನನಗೆ ನಂಬಿಕೆಯು ಇರುವುದು. ಆದರೂ ನೀವು ನನ್ನ ಮಾತನ್ನು ಕೇಳಿರಿ" ಎಂದು ಹೇಳಿದ ರಾಜನ ಮಾತಿಗೆ ಹಾಗೇ ಆಗಲಿ ಎಂದು ಬೌದ್ಧರು ಒಪ್ಪಿಕೊಂಡರು. ಆಗ ರಾಜನು ಎರಡು ಪಂಗಡದವರಿಗೂ ಕಾಣುವಂತೆ ಹುಟ್ಟಿದಾಗಿನಿಂದಲೂ ಮೂಕತನದಿಂದ ಇರುವ ತನ್ನ ಮಗಳನ್ನು ಕರೆದುಕೊಂಡು ಬಂದು ಅವರ ಎದುರಿನಲ್ಲಿ ನಿಲ್ಲಿಸಿದನು. " ಈ ನನ್ನ ಮಗಳ ಮೂಕತನವು ಹೋಗಿ ಮಾತನಾಡುವ ಶಕ್ತಿಯು ಯಾರಿಂದ ಉಂಟಾಗುವುದೋ ಅವರಿಗೆ

ಯೇ ತ್ವತ್ರಾಪಜಯಂ ಪ್ರಾಪ್ತಾಸ್ತೇ ಸರ್ವೇ ನೃಪಪೂರುಷೈಃ ।
ಶಿಲಾಮಯೇಕ್ಷುಯಂತ್ರೈಶ್ಚ ಪೇಷಿತವ್ಯಾ ಸ್ಸುದುರ್ಮದಾಃ ॥ ೨೩೭ ॥

ಇತ್ಯನ್ಯೋನ್ಯಂ ಪ್ರತಿಜ್ಞಾಯ ಪ್ರಾಪುಸ್ತೇ ಕನ್ಯಕಾಂತಿಕಂ ।
ಬೌದ್ಧಾಸ್ತು ಪ್ರಥಮಂ ಮಂತ್ರೈಃ ಮಂತ್ರಿತೈಃ ಕುಂಡಿಕಾಂಬುಭಿಃ ॥ ೨೩೮ ॥

ತಸ್ಯಾನನಂ ಚ ಪ್ರಕ್ಷಾಲ್ಯ ಮೂಕತಾವಿಗಮಾಯ ಚ ।
ಸಿದ್ಧೈರ್ಮಂತ್ರೈರ್ಯತಂತೇ ಸ್ಮ ಸುತರಾಂ ಧ್ಯಾನತತ್ಪರಾಃ ॥ ೨೩೯ ॥

ನ ನಶ್ಯತಿ ಚ ಮೂಕತ್ವಂ ತಜ್ಜಯಾಶೈವ ನಶ್ಯತಿ ।
ಅತಿಮ್ಲಾನಮುಖಾ ದುಃಖಾದಾಹು ರ್ವಾತಪುರೇಶ್ವರಂ ॥ ೨೪೦ ॥

---

ಈ ವಿವಾದದಲ್ಲಿ ಜಯವು ಸಿದ್ಧವಾಗಿರುವುದು." ಎಂದು ಮಾಣಿಕ್ಯವಾಚಕ ಯೋಗೀಂದ್ರನಿಗೂ ಬೌದ್ಧರಿಗೂ ತಿಳಿಸಿದನು. ಆಗ ಶೈವರೂ ಬೌದ್ಧರೂ ಪರಸ್ಪರವಾಗಿ ಪ್ರತಿಜ್ಞೆಯನ್ನೂ ಕೇಳಿ ಈ ವಿಷಯದಲ್ಲಿ ಸೋತವರನ್ನು ಎಲ್ಲರನ್ನೂ ದುರಹಂಕಾರಿಗಳೆಂದು ತಿಳಿದು ಕಲ್ಲಿನಗಾಣಕ್ಕೆ ಹಾಕಿಸುವೆನು ಎಂದು ತಿಳಿಸಿದನು

೨೩೮-೨೪೦. ಅವರಿಬ್ಬರೂ ಆ ಮಾತನ್ನು ಕೇಳಿ ಆ ಹುಡುಗಿಯ ಹತ್ತಿರಕ್ಕೆ ಬಂದರು. ಬೌದ್ಧರು ಮೊದಲು ಮಂತ್ರಗಳನ್ನು ಹೇಳುತ್ತಾ ಮಂತ್ರಿಸಿರುವ ಕಮಂಡಲುವಿನ ನೀರಿನಿಂದ ಆ ಹುಡುಗಿಯ ಮುಖವನ್ನು ತೊಳೆಯಲು ಪ್ರಾರಂಭಿಸಿದರು. ಮತ್ತು ಸಿದ್ಧ ಮಂತ್ರಗಳಿಂದ ಧ್ಯಾನಮಾಡುವವರಾಗಿ ಬಹಳ ಪ್ರಯತ್ನ ಮಾಡಿದರು. ಇದರಿಂದ ಮಾತನಾಡುವ ಶಕ್ತಿಯು ಆ ಹುಡುಗಿಗೆ ಬರಲಿಲ್ಲ. ಆದ್ದರಿಂದ ಅವರಿಗೆ ಜಯವಾಗುವ ಆಶೆಯು ಹೋಯಿತು. ಆಗ ಅವರು ದುಃಖದಿಂದ ವಾತಪುರೇಶ್ವರನಿಗೆ "ನಿನ್ನ ಸಾಮರ್ಥ್ಯವನ್ನು ತೋರಿಸು. ರಾಜನ ಮಗಳು ಮಾತನಾಡುವಹಾಗೆ ಮಾಡು." ಎಂದು ಬಾಡಿದ ಮುಖವುಳ್ಳವರಾಗಿ ಹೇಳಿದರು.

ತ್ವತ್ಸಾಮರ್ಥ್ಯಂ ವಯಂ ದ್ರಷ್ಟುಮಿಚ್ಛಾಮ ಇತಿ ಸೌಗತಾಃ ।
ಕಾರಯ ತ್ವ ಮಮೂಕಾಂ ತು ಕನ್ಯಕಾಂ ಚ ನೃಪಸ್ಯ ಭೋಃ ॥ ೨೪೧ ॥

ಇತ್ಯುಕ್ತೇ ತೈ ರ್ನೃಪಸ್ಯಾಗ್ರೇ ನೃಪೇಣಾಪಿ ಚ ಮಾನಿತಃ ।
ಮಾಣಿಕ್ಯವಾಚಕೋ ಯೋಗೀ ಸ್ವಚಿತ್ತೇ ಚ ಚಿದಂಬರೇ ॥ ೨೪೨ ॥

ಶ್ರೀಹಾಲಾಸ್ಯೇ ಚೈಕ ಈಶೋ ನೃತ್ಯತೀತಿ ದೃಢಂ ಸ್ಮರನ್ ।
ಸಾಂಬಂ ಸದಾ ಲಾಸ್ಯಕರಂ ಧ್ಯಾಯನ್ ಹಾಲಾಸ್ಯನಾಯಕಂ ॥ ೨೪೩ ॥

ಶ್ರೀವಾಚಕೈರ್ನವ್ಯೈಃ ಸ್ತೌತಿ ತನ್ಮೂಕತ್ವನಿವೃತ್ತಯೇ ।
ಸ್ತುತ್ವಾ ವಿಂಶತಿಸಂಖ್ಯಾಕೈ ರ್ದ್ವಿಪದಾದ್ದ್ವಿಪದಂ ಪುನಃ ॥ ೨೪೪ ॥

ಅಗಾಯಚ್ಚ ಸ್ವಯಂ ತಾಂ ಚ ಗಾಯಸ್ವೇತಿ ತಥಾ ಕರೋತ್ ।
ವಿಹಾಯ ಸಾ ಚ ಮೂಕತ್ವಂ ವಾಕ್ಪಾಟವಯುತಾ ಬಭೌ ॥ ೨೪೫ ॥

---

೨೪೧-೨೪೫. ರಾಜನ ಎದುರಿಗೆ ಅವರು ಹಾಗೆ ಹೇಳಿದ್ದನ್ನು ಕೇಳಿ ವಾತಪುರೇಶ್ವರನನ್ನು ರಾಜನು ಗೌರವದಿಂದ ನೋಡಿದನು. ಆಗ ಮಾಣಿಕ್ಯವಾಚಕ ಯೋಗಿಯು ಚಿದಂಬರದಲ್ಲಿಯೂ, ಹಾಲಾಸ್ಯಕ್ಷೇತ್ರದಲ್ಲಿಯೂ ನರ್ತನ ಮಾಡುತ್ತಿರುವ ನಟರಾಜನೇ ನನ್ನ ಮನಸ್ಸಿನಲ್ಲಿಯೂ ನೆಲಸಿರುವನೆಂದು ಧ್ಯಾನಮಾಡಿದನು. ಮತ್ತು ಚೋಳರಾಜಪುತ್ರಿಯ ಮೂಕತನವು ಹೋಗುವುದಕ್ಕಾಗಿ ನಟರಾಜನನ್ನು ಸ್ತೋತ್ರಮಾಡಿದನು. ಅವನು ಪ್ರಭುವಾದ ಸುಂದರೇಶ್ವರನನ್ನು ಸ್ತೋತ್ರಮಾಡುವ ಪದ್ಯಗಳ ಪದಗಳನ್ನು ಎರಡೆರಡು ಪದಗಳಾಗಿ ಹೇಳುತ್ತಾ ಗಾನಮಾಡಿ ಆ ಹುಡುಗಿಯನ್ನು ನೀನೂ ಇದರಂತೆ ಗಾನಮಾಡು ಎಂದು ಹೇಳಿದನು. ಆಗ ಅವಳಿಗೆ ಮಾತನಾಡುವ ಶಕ್ತಿಯು ಬಂದಿತು. ರಾಜನಿಗೆ ಬಹಳ ಸಂತೋಷವು ಉಂಟಾಯಿತು. ಅವಳು ಮಾಣಿಕ್ಯವಾಚಕ ಯೋಗಿಯ ಉಪದೇಶದಂತೆ ಗಾನಮಾಡಿದಳು.

ಅಗಾಯತ್ಸುತರಾಂ ತೋಷಂ ಕುರ್ವಾಣಾ ಭೂಪತೇರ್ಭೃಶಂ ।
ಮೂಕತ್ವಮಗಮನ್ನಾಶಂ ವಾಚಿ ವಾಣೀ ಚ ನೃತ್ಯತಿ ॥ ೨೪೬ ॥

ಮನೋಽಪಿ ನಿರ್ಮಲಂ ಭದ್ರಂ ರಾಜಪುತ್ರ್ಯಾಶ್ಶಿವಾಜ್ಞಯಾ ।
ತದಾ ವದದ್ರಾಜಪುತ್ರೀ ಶ್ರೀವಾಚಕಗಣಾನ್ಬಹೂನ್ ॥ ೨೪೭ ॥

ಶ್ರೀಮದ್ವಾತಪುರೇಶಾಖ್ಯ ಕವಿನಾ ಪ್ರೇರಿತಾ ಸತೀ ।
ಏತದದ್ಭುತಮಾಲೋಕ್ಯ ರಾಜಾ ಸಂತೋಷಸಂಯುತಃ ॥ ೨೪೮ ॥

ಸ್ವಾಜ್ಞಾಕರಾನ್ಪ್ರೇರಯತಿ ಹಂತುಂ ಬೌದ್ಧಗಣಾನ್ಬಹೂನ್ ।
ಶಿಲಾಮಯೋ ಕ್ಷುಯಂತ್ರೈಶ್ಚ ಸಂಹರಂತೀತರೇಽಪಿ ತಾನ್ ॥ ೨೪೯ ॥

ಚೋಲದೇಶೋದ್ಭವಾ ಸ್ಸರ್ವೇಜನಾ ಶ್ಚೋಲನೃಪಾನ್ವಿತಾಃ ।
ವಿಶೇಷತಃ ಶಂಭುಭಕ್ತಾ ಅಭವಂಸ್ತೇ ನೃಪೋಽಪಿ ಚ ॥ ೨೫೦ ॥

---

೨೪೬–೨೪೯. ರಾಜಪುತ್ರಿಯ ಮೂಕತನವು ಹೋಯಿತು. ಅವಳು ಮಾತನಾಡುವುದರಲ್ಲಿ ಅಕ್ಷರಗಳು ಸ್ಪಷ್ಟವಾಗಿ ಉಚ್ಚಾರಣೆಯನ್ನು ಹೊಂದುತ್ತಾ ಇದ್ದವು. ಅವಳ ಮನಸ್ಸು ಶಿವನ ಸಮ್ಮತಿಯಿಂದ ನಿರ್ಮಲವಾಗಿಯೂ, ಒಳ್ಳೆಯ ಯೋಚನೆಯುಳ್ಳದ್ದಾಗಿಯೂ ಇತ್ತು. ಆಗ ರಾಜಕುಮಾರಿಯು ವಾತಪುರೇಶ್ವರನು ಹೇಳಿಕೊಟ್ಟಹಾಗೆ ಬಹಳ ಅಕ್ಷರಗಳುಳ್ಳ ಪದಗಳನ್ನು ಸ್ಪಷ್ಟವಾಗಿ ಉಚ್ಚರಿಸಿದಳು. ಈ ಆಶ್ಚರ್ಯವನ್ನು ನೋಡಿದ್ದರಿಂದ ರಾಜನಿಗೆ ಬಹಳ ಸಂತೋಷವುಂಟಾಯಿತು. ಚೋಳ ರಾಜನು ಅಲ್ಲಿಸೇರಿದ್ದ ಬೌದ್ಧರನ್ನು ಕಲ್ಲಿನ ಗಾಣಕ್ಕೆ ಹಾಕುವುದಕ್ಕಾಗಿ ತನ್ನ ಸೇವಕರಿಗೆ ಆಜ್ಞೆಮಾಡಿದನು. ಅವರು ರಾಜನ ಅಪ್ಪಣೆಯಂತೆ ನಡೆದುಕೊಳ್ಳುತ್ತಿದ್ದರು.

೨೫೦–೨೫೩. ಚೋಳದೇಶದಲ್ಲಿರುವ ಜನರೆಲ್ಲರೂ ಶಿವನಲ್ಲಿ ಹೆಚ್ಚಾದ ಭಕ್ತಿಯುಳ್ಳವರಾದರು. ರಾಜನಿಗೂ ಭಕ್ತಿಯು ಹೆಚ್ಚಿತು. ಮಾಣಿಕ್ಯ ವಾಚಕಯೋಗಿಯು ಶಿವನನ್ನು ಪ್ರತಿಪಾದಿಸುವ ಕಾವ್ಯಗಳನ್ನು ಬರದನು. ದೇವರೇ ಪ್ರಮಾಣವಾಗಿರುವ

ಶಿವಾಶ್ರಿತಾನಿ ಕಾವ್ಯಾನಿ ವೇದೋಕ್ತಾನಿ ಬಹೂನಿ ಚ ।
ದ್ರಾವಿಡಾನಿ ಸುಗೇಯಾನಿ ಕೃತ್ವಾ ಶಂಭೋರನುಗ್ರಹಾತ್ ॥ ೨೫೧ ॥

ಸ ಶರೀರಂ ಚ ಸಾಯುಜ್ಯಂ ಪ್ರಾಪ ಮಾಣಿಕ್ಯವಾಚಕಃ ।
ಅರಿಮರ್ದನಪಾಂಡ್ಯೋಽಪಿ ಹಾಲಾಸ್ಯೇಶಪ್ರಸಾದತಃ ॥ ೨೫೨ ॥

ಪುತ್ರೇ ನಿಕ್ಷಿಪ್ಯ ಭೂಭಾರಂ ಜಗನ್ನಾಥೇ ಜಗತ್ಪ್ರಿಯೇ ।
ಪ್ರಾಪಾಪವರ್ಗ ಮನ್ಯೇಷಾಂ ಯೋಗಿನಾಮಪಿ ದುರ್ಲಭಂ ॥ ೨೫೩ ॥

ಜಗನ್ನಾಥಾಖ್ಯಪಾಂಡ್ಯೋಽಪಿ ಜನಾನಾಂ ಚ ಹಿತಂ ಸದಾ ।
ಕುರ್ವನ್ಸ್ವಕ್ತ ಸ್ಸುಂದರೇಶೇ ರಾಜರಾಜಸಮೋಽಭವತ್ ॥ ೨೫೪ ॥

॥ ಅಗಸ್ತ್ಯ ಉವಾಚ ॥

ಇತ್ಯೇಕಷಷ್ಟಿಲೀಲಾ ಯಾ ಪ್ರೋಕ್ತಾ ಹಾಲಾಸ್ಯವಾಸಿನಃ ।
ಮುಹುರ್ಮುಹುಶ್ಚ ಶ್ರೋತವ್ಯಾ ಶಿವಭಕ್ತಿಪ್ರದಾಯಿನೀ ॥ ೨೫೫ ॥

---

ದ್ರಾವಿಡಭಾಷೆಯ ಪದ್ಯಗಳನ್ನು ಬಹಳಮಟ್ಟಿಗೆ ಕವನ ಮಾಡಿದನು. ಅನಂತರದಲ್ಲಿ ಶಿವನ ಅನುಗ್ರಹದಿಂದ ಶರೀರದೊಡನೆ ಶಿವನಲ್ಲಿ ಐಕ್ಯವನ್ನು ಹೊಂದಿದನು. ಅರಿ ಮರ್ದನ ಪಾಂಡ್ಯರಾಜನು ಹಾಲಾಸ್ಯೇಶ್ವರನ ಅನುಗ್ರಹದಿಂದ, ಜನಗಳ ಪ್ರೀತಿ ಪಾತ್ರನಾದ ತನ್ನ ಮಗನಾದ ಜಗನ್ನಾಥ ಪಾಂಡ್ಯನಿಗೆ ರಾಜ್ಯವನ್ನು ವಹಿಸಿ, ಇತರ ಯೋಗಿಗಳಿಗೂ ಹೊಂದಲಶಕ್ಯವಾದ ಮುಕ್ತಿಯನ್ನು ಹೊಂದಿದನು

೨೫೪–೨೫೮. ಜಗನ್ನಾಥ ಪಾಂಡ್ಯರಾಜನು ಜನಗಳಿಗೆ ಯಾವಾಗಲೂ ಹಿತವನ್ನು ಉಂಟುಮಾಡುವವನಾಗಿ ಸುಂದರೇಶ್ವರನಲ್ಲಿ ಭಕ್ತಿಯಿಂದ ಇರುತ್ತಾ, ಕುಬೇರನಿಗೆ ಸಮನಾಗಿದ್ದನು.

ಅಗಸ್ತ್ಯಋಷಿಯು ಹೇಳಿದನು:—"ಹಾಲಾಸ್ಯೇಶ್ವರನು ಆಚರಿಸಿದ ಅರುವತ್ತೊಂದ ನೆಯ ಲೀಲೆಯನ್ನು ಎಲ್ಲರೂ ಕೇಳತಕ್ಕದ್ದು. ಇದರಿಂದ ಶಿವನಲ್ಲಿ ಭಕ್ತಿಯು

ಭೋಗಮೋಕ್ಷೇಚ್ಛುಭಿ ಸ್ಸರ್ವೈಃ ದುರಿತಾನಾಂ ಚ ಮುಕ್ತಯೇ ।
ಪಿಷ್ಟಮೃದ್ಧರಣಂ ಶಂಭೋಃ ಕ್ಷಪಣಾನಾಂ ಚ ನಿಗ್ರಹಂ　　॥ ೨೫೬ ॥

ಕೃತಂ ಮಾಣಿಕ್ಯವಾಚೇನ ಶೃಣ್ವತಾಂ ಪಠತಾಂ ನೃಣಾಂ ।
ಧ್ರುವಂ ಸ್ಯಾನ್ಮೇದಿನೀಲಾಭಃ ಶ್ರೇಯಃ ಪ್ರಾಪ್ತಿಶ್ಚ ಶಾಶ್ವತೀ　　॥ ೨೫೭ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಪಿಷ್ಟಮೃದ್ಧರಣಂ ಬೌದ್ಧನಿರಸನಂ ನಾಮ
ಸಪ್ತಷಷ್ಟಿತಮೋಽಧ್ಯಾಯಃ

---

ಅತಿಶಯವಾಗಿ ಉಂಟಾಗುವುದು. ಭುಕ್ತಿ, ಮುಕ್ತಿಗಳನ್ನು ಅಪೇಕ್ಷಿಸುವವರಿಗೆ ಇದನ್ನು ಕೇಳುವುದರಿಂದ ಪಾಪಗಳು ನಾಶವಾಗುವುವು. ಶಿವನು ಹಿಟ್ಟನ್ನು ತಿಂದು ಮಣ್ಣನ್ನು ಹೊತ್ತಿರುವ ಮತ್ತು ಬೌದ್ಧರನ್ನು ಮಾಣಿಕ್ಯವಾಚಕನ ಮೂಲಕವಾಗಿ ನಾಶಪಡಿಸಿದ ನಿತ್ಯವಾಗಿರುವ ಲೀಲೆಯನ್ನು ಕೇಳುವವರಿಗೂ ಹೇಳುವವರಿಗೂ "ಭೂಪ್ರಾಪ್ತಿಯೂ ಶ್ರೇಯಃಪ್ರಾಪ್ತಿಯೂ ಆಗುವುವು."

ಸ್ಕಾಂದ ಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಹಾತ್ಮ್ಯೆಯಲ್ಲಿ
ಪಿಷ್ಟಮೃದ್ಧರಣ, ಬೌದ್ಧನಿರಸನವೆಂದು ಹೆಸರುಳ್ಳ ಅರುವತ್ತೇಳನೆಯ
ಅಧ್ಯಾಯವು ಮುಗಿದಿರುವುದು



॥ ಶ್ರೀ ॥
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಅಷ್ಟಷಷ್ಟಿತಮೋಽಧ್ಯಾಯಃ



॥ ಅಗಸ್ತ್ಯ ಉವಾಚ ॥

ಯಯಾ ತು ಕುಬ್ಜಪಾಂಡ್ಯಸ್ಯ ಜ್ವರಂ ತತ್ಕುಬ್ಜತಾಮಪಿ ।
ಶಂಕರಶ್ಶಮಯಾಮಾಸ ಸಾ ಲೀಲಾಥ ಮಯೋಚ್ಯತೇ ॥ ೧ ॥

ಜಗನ್ನಾಥಶ್ಚಿರಂ ಭೂಮಿಂ ಪರಿಪಾಲ್ಯ ದಿವಂ ಯಯೌ ।
ಸಂಸಾರಸಾಗರಾನ್ಮುಕ್ತ ಸ್ಸುಂದರೇಶಪ್ರಸಾದತಃ ॥ ೨ ॥

ವೀರಬಾಹುಶ್ಚ ತತ್ಪುತ್ರೋ ವೀರ್ಯೇಣ ಮಹತೀಂ ಮಹೀಂ ।
ಪಾಲಯಾಮಾಸ ಸುಚಿರಂ ಪಿತುರಪ್ಯಧಿಕಶ್ರಿಯಾ ॥ ೩ ॥

---

### ಅರವತ್ತೆಂಟನೆಯ ಅಧ್ಯಾಯವು

೧–೪. ಅಗಸ್ತ್ಯಋಷಿಯು ಹೇಳಿದನು.—ಕುಬ್ಜ ಪಾಂಡ್ಯರಾಜನಿಗೆ ಬಂದಿದ್ದ ಜ್ವರವನ್ನೂ, ಮತ್ತು ಅವನ ಕುಬ್ಜತನವನ್ನೂ ಶಿವನು ನಾಶಪಡಿಸಿದ ಲೀಲೆಯನ್ನು ಹೇಳುವೆನು. ಜಗನ್ನಾಥ ಪಾಂಡ್ಯರಾಜನು ಬಹಳಕಾಲ ಭೂಮಿಯನ್ನು ರಕ್ಷಿಸಿ ಸ್ವರ್ಗಕ್ಕೆ ಹೋದನು. ಮತ್ತು ಅವನು ಮುಕ್ತಿಯನ್ನು ಹೊಂದಿದನು. ಅವನ ಮಗನಾದ ವೀರಬಾಹುವೆಂಬುವನು ತನ್ನ ತಂದೆಗಿಂತಲೂ ಹೆಚ್ಚಾದ ಸಂಪತ್ತನ್ನು ಹೊಂದಿ ದೊಡ್ಡದಾದ ಭೂಮಿಯನ್ನು ಕಾಪಾಡಿದನು. ಅನಂತರದಲ್ಲಿ ವಿಕ್ರಮ ಬಾಹುವು ಬಹಳಕಾಲ ರಾಜ್ಯಭಾರವನ್ನು ಮಾಡಿದನು. ಆಮೇಲೆ ಪರಾಕ್ರಮ ಬಾಹು

ಅಥ ವಿಕ್ರಮಬಾಹುಶ್ಚ ಚಿರಂ ಪೃಥ್ವೀಮಪಾಲಯತ್ ।
ತತಶ್ಚ ಪಾಲಿತಾ ಪೃಥ್ವೀ ಸಾ ಪರಾಕ್ರಮಬಾಹುನಾ ॥ ೪ ॥

ತತಸ್ಸುರಭಿಪಾಂಡ್ಯೋಽಪಿ ರಾಜ್ಯಂ ಕೃತ್ವಾ ದಿವಂ ಗತಃ ।
ತತಃ ಕುಂಕುಮಪಾಂಡ್ಯಸ್ತು ಪೂಜ್ಯಕುಂಕುಮಪಂಕತಃ ॥ ೫ ॥

ಸುಂದರೇಶಂ ಪ್ರತಿದಿನಂ ಚಿರಂ ರಾಜ್ಯಮಪಾಲಯತ್ ।
ತತಃ ಕರ್ಪೂರಪಾಂಡ್ಯಸ್ತು ಪೂಜ್ಯ ಕರ್ಪೂರಸುಂದರಂ ॥ ೬ ॥

ಸದಾ ಕರ್ಪೂರಪಂಕೇನ ಪರಂ ಕೈವಲ್ಯಮಾಪ್ತವಾನ್ ।
ತತಃ ಕಾರುಣ್ಯಪಾಂಡ್ಯಸ್ತು ಕಾರುಣ್ಯಾತಿಶಯಾನ್ವಿತಃ ॥ ೭ ॥

ಕಾರ್ತವೀರ್ಯಾರ್ಜುನ ಇವ ಚಿರಂ ಪೃಥ್ವೀಮಪಾಲಯತ್ ।
ಪುರುಷೋತ್ತಮಪಾಂಡ್ಯೋಽಪಿ ಯಥಾ ಸ ಪುರುಷೋತ್ತಮಃ ॥ ೮ ॥

ರಕ್ಷಾಂ ಕರೋತಿ ಜಗತಾಂ ತಥಾ ರಕ್ಷದ್ವಸುಂಧರಾಂ ।
ಶತ್ರುಶಾಸನಪಾಂಡ್ಯೋಽಪಿ ಚೇರಚೋಳೌ ವಿಜಿತ್ಯ ಚ ॥ ೯ ॥

---

ಪಾಂಡ್ಯನೂ, ಸುರಭಿಪಾಂಡ್ಯನೂ, ರಾಜ್ಯವನ್ನು ಆಳಿದರು. ಕುಂಕುಮ ಪಾಂಡ್ಯನೆಂಬ ರಾಜನು ಕುಂಕುಮದಂತೆ ಇರುವ ಗಂಧದಿಂದ ಸುಂದರೇಶ್ವರನನ್ನು ಪ್ರತಿದಿನವೂ ಪೂಜಿಸುತ್ತಾ ರಾಜ್ಯವಾಳುತ್ತಿದ್ದನು

೫–೧೦. ಅನಂತರದಲ್ಲಿ ಕರ್ಪೂರ ಪಾಂಡ್ಯರಾಜನು ಪಚ್ಚಕರ್ಪೂರದಂತೆ ಸುಂದರನಾಗಿರುವ ಸುಂದರೇಶ್ವರನನ್ನು ಕರ್ಪೂರದ ಗಂಧದಿಂದ ಪೂಜಿಸಿ, ರಾಜ್ಯವಾಳುತ್ತಾ ಸಾಯುಜ್ಯವನ್ನು ಹೊಂದಿದನು. ಅನಂತರದಲ್ಲಿ ಪಟ್ಟಕ್ಕೆ ಬಂದ ಕಾರುಣ್ಯಪಾಂಡ್ಯನು ಬಹಳ ದಯೆಯುಳ್ಳವನಾಗಿದ್ದನು. ಅವನು ಕಾರ್ತವೀರ್ಯಾರ್ಜುನನ ಹಾಗೆ ಬಹಳ ಕಾಲದವರೆಗೂ ರಾಜ್ಯವನ್ನು ಆಳುತ್ತಿದ್ದನು. ಪುರಷೋತ್ತಮನಾದ

ದೇಶತ್ರಯಾಧಿಪೋ ಭೂತ್ವಾ ಭಾತಿ ಪಾಂಡ್ಯಶಿರೋಮಣಿಃ ।
ತದಾತ್ಮಜಃ ಕುಬ್ಜಪಾಂಡ್ಯಃ ಕುಂಕುಮಾರುಣವಿಗ್ರಹಃ ॥ ೧೦ ॥

ಮಧುರಾನಗರೀನಾಥೋ ಬಭೂವ ಸಕಲಾತುಲಃ ।
ವಸನ್ಕಾಂಚೀಪುರೇ ಚೋಲೇ ಸ್ವಾಂ ಕನ್ಯಾಂ ವನಿತೇಶ್ವರೀಂ ॥ ೧೧ ॥

ಪ್ರದಾಯ ತಸ್ಮೈ ಪಾಂಡ್ಯಾಯ ಸ್ವರಾಜ್ಯಂ ಪ್ರಾಪ್ತವಾಂಸ್ತಥಾ ।
ಚೇರೋಽಪಿ ಕುಬ್ಜಪಾಂಡ್ಯಾಯ ಬಹುಧಾನ್ಯಧನಾನಿ ಚ ॥ ೧೨ ॥

ಸಮರ್ಪ್ಯ ರಾಜ್ಯಂ ಸಂಪ್ರಾಪ ತನ್ಮಹೇಶಪ್ರಸಾಡತಃ ।
ಪಾಂಡ್ಯೋಽಪಿ ವನಿತೇಶ್ವರ್ಯಾ ಚೋಳಸ್ಯ ಸುತಯಾ ತಯಾ ॥ ೧೩ ॥

ನಾರಾಯಣ ಇವಾಭಾತಿ ಕ್ಷೀರಸಾಗರಕನ್ಯಯಾ ।
ಆಯಾತೋ ವನಿತೇಶ್ವರ್ಯಾ ಮಂತ್ರೀ ಚೋಲನೃಪಸ್ಯ ಸಃ ॥ ೧೪ ॥

---

ವಿಷ್ಣುವಿನಂತೆ ರಾಜ್ಯಭಾರ ಮಾಡಿದ ಪುರುಷೋತ್ತಮಪಾಂಡ್ಯನು ರಾಜ್ಯವನ್ನು ಪಾಲಿಸಿದ ನಂತರ ಶತ್ರುಶಾಸನ ಪಾಂಡ್ಯರಾಜನು ಚೇರ, ಚೋಳರಾಜರನ್ನು ಗೆದ್ದು ಚೋಳ, ಚೇರಪಾಂಡ್ಯವೆಂಬ ಮೂರುದೇಶಗಳಿಗೂ ರಾಜನಾಗಿದ್ದನು. ಇವನ ಮಗನೇ ಕುಬ್ಜಪಾಂಡ್ಯನೆಂಬುವನು. ಅವನು ಕುಂಕುಮದ ಹಾಗೆ ಕೆಂಪಗಿದ್ದನು.

೧೧–೧೪. ಮಧುರಾನಗರಕ್ಕೆ ಅಧಿಪತಿಯಾದ ಅವನು ಕಲೆಗಳಲ್ಲಿ ನಿಪುಣನಾಗಿ ರಾಜ್ಯವಾಳುತ್ತಿರಲು ಚೋಳರಾಜಧಾನಿಯಾದ ಕಾಂಚೀನಗರದಲ್ಲಿ ವಾಸ ಮಾಡುತ್ತಿರುವ ಚೋಳರಾಜನು ತನ್ನ ಮಗಳನ್ನು ಕುಬ ಪಾಂಡ್ಯರಾಜನಿಗೆ ವಿವಾಹ ಮಾಡಿಕೊಟ್ಟು ತನ್ನ ರಾಜ್ಯವನ್ನು ಹೊಂದಿದನು. ಚೇರರಾಜನು ಕುಬ ಪಾಂಡ್ಯ ರಾಜನಿಗೆ ಧನ ಧಾನ್ಯಗಳನ್ನು ಬಹಳವಾಗಿ ಕಾಣಿಕೆ ಕೊಟ್ಟು ಅವನ ಅನುಗ್ರಹದಿಂದ ತನ್ನ ರಾಜ್ಯವನ್ನು ಹೊಂದಿದನು. ವನಿತೇಶ್ವರೀ ಎಂದು ಹೆಸರುಳ್ಳ ಚೋಳ ರಾಜ ಪುತ್ರಿಯೊಡನೆ ಇರುವ ಕುಬ್ಜಪಾಂಡ್ಯ ರಾಜನು ಲಕ್ಷ್ಮೀ ಸಮೇತನಾದ ನಾರಾಯಣ ನಂತೆ ಪ್ರಕಾಶಿಸುತ್ತಿದ್ದನು. ಚೋಳ ರಾಜನು ತನ್ನ ಮಗಳ ಸಂತೋಷಕ್ಕಾಗಿ ಒಬ್ಬ ಮಂತ್ರಿಯನ್ನು ಪಾಂಡ್ಯರಾಜನ ಹತ್ತಿರ ಇರಲು ಕಳುಹಿಸಿಕೊಟ್ಟನು. ಇದರಿಂದ ರಾಜನಿಗೂ ಸಂತೋಷವಾಯಿತು.

**ಚೋಳರಾಜ್ಞಾ ಪ್ರದತ್ತಶ್ಚ ಪಾಂಡ್ಯಾಯ ಪರಿತುಷ್ಟಯೇ ।**
**ಕುಲಬಂಧನ ಇತ್ಯಾಖ್ಯಾ ವಿಶ್ರುತಾ ತಸ್ಯ ಭೂಭೃತಃ ॥ ೧೫ ॥**

**ಸ್ವಸ್ಯಾಪಿ ಮಂತ್ರಿಣಂ ಕೃತ್ವಾ ಪಾಂಡ್ಯಸ್ತು ಕುಲಬಂಧನಂ ।**
**ಸರ್ವಾಣಿ ರಾಜಕಾರ್ಯಾಣಿ ಕಾರಯಾಮಾಸ ತೇನ ಚ ॥ ೧೬ ॥**

**ಯದಾ ತು ಕುಬ್ಜತಾ ತಸ್ಯ ಜನ್ಮಾಂತರಕೃತಾಂಹಸಾ ।**
**ತಥಾ ಕ್ಷಪಣತಾ ಚಾಸೀದ್ವೈದಿಕೈರಪಿ ನಿಂದಿತಾ ॥ ೧೭ ॥**

**ತಸ್ಯ ಕ್ಷಪಣಸಿದ್ಧಾಂತದೀಕ್ಷಿತಸ್ಯ ಮಹೀಪತೇಃ ।**
**ಆಜ್ಞಯಾ ಭಸ್ಮ ಚ ತ್ಯಕ್ತ್ವಾ ಅಕ್ಷಂ ರಾಜ್ಞೀ ಚ ಮಂತ್ರಿರಾಟ್ ॥ ೧೮ ॥**

**ಭಕ್ತ್ಯಾ ತ್ರಿಪುಂಡ್ರಮಂಭೋಭಿ ಶ್ಶಂಭುಭಕ್ತ್ಯಾ ಚ ತಾವುಭೌ ।**
**ಅಂತರ್ಯಾಗವಿಧಾನೇನ ಶಿವಾರ್ಚಾಮಪಿ ಕುರ್ವತಃ ॥ ೧೯ ॥**

---

೧೫–೧೮. ಪಾಂಡ್ಯದೇಶದಲ್ಲಿ ವಂಶಪರಂಪರೆಯಿಂದ ಕುಲಬಂಧನನೆಂಬುವನು ಪ್ರಸಿದ್ಧನಾದ ಮಂತ್ರಿಯಾಗಿದ್ದನು. ರಾಜನು ಅವನಿಂದ ರಾಜಕಾರ್ಯಗಳೆಲ್ಲವನ್ನೂ ಮಾಡಿಸುತ್ತಿದ್ದನು. ಈ ರಾಜನಿಗೆ ಜನ್ಮಾಂತರದ ಪಾಪದಿಂದ ಉಂಟಾದ ಕುಬ್ಜತನದ ಹಾಗೆ ನಾಸ್ತಿಕತನವೂ ಉಂಟಾಗಿತ್ತು. ಇದರಿಂದ ಈ ರಾಜನು ನಾಸ್ತಿಕ ಸಿದ್ಧಾಂತವನ್ನು ಹೇಳುವ ಗುರುವಿನ ಉಪದೇಶದಂತೆ ನಡೆಯುತ್ತಿದ್ದನು. ಇವನ ಈ ಧರ್ಮಾಚರಣೆಯನ್ನು ವೈದಿಕರು ಒಪ್ಪುತ್ತಿರಲಿಲ್ಲ. ಇವನ ಆಜ್ಞೆಯ ಪ್ರಕಾರವಾಗಿ, ರಾಣಿಯೂ ಮಂತ್ರಿಯೂ ಕೂಡ ಭಸ್ಮಧಾರಣ ರುದ್ರಾಕ್ಷಧಾರಣಗಳನ್ನು ಬಿಟ್ಟು ಇದ್ದರು. ಆದರೆ ಅಂತರ್ಯಾಗ ಕ್ರಮವನ್ನು ಅನುಸರಿಸಿ ಕೇವಲ ಭಕ್ತಿಮಾತ್ರದಿಂದಲೇ ಶಿವಪೂಜೆಯನ್ನು ಅವರಿಬ್ಬರೂ ಮಾಡುತ್ತಿದ್ದರು.

೧೯–೨೧ ಆದರೆ ಇವರಿಬ್ಬರೂ ಸುಂದರೇಶ್ವರನ ದರ್ಶನವನ್ನು ಮಾಡುವುದರಲ್ಲಿ ರಾಜನಿಂದ ಸಮ್ಮತಿಯನ್ನು ಹೊಂದಿದ್ದರು ಇವರು ಪ್ರತಿದಿನವೂ ಸುಂದರೇಶ್ವರನ ದರ್ಶನವನ್ನು ಮಾಡುತ್ತಿದ್ದರು. ಪ್ರಜೆಗಳಿಗೆ ರಾಜನಿಗಿಂತ ಅತಿಶಯ

ಸುಂದರೇಶ್ವರಲಿಂಗಸ್ಯ ದರ್ಶನಂ ತ್ವಾವಯೋರ್ವಿನಾ ।
ನ ಪ್ರಾಣಧಾರಣಮಿತಿ ರಾಜ್ಞಾ ಚಾನುಮತಸ್ಯ ಚ ॥ ೨೦ ॥

ನಿತ್ಯಂ ಚ ದರ್ಶನಂ ಕೃತ್ವಾ ತಾವುಭೌ ತು ವಿಶಿಷ್ಯತಃ ।
ವೇದಬಾಹ್ಯಂ ಚ ತಂ ಭೂಪಂ ಕೇನೋಪಾಯೇನ ವೈದಿಕಂ ॥ ೨೧ ॥

ಕುರ್ಮ ಇತ್ಯನುವೇಲಂ ತಾವಭೂತಾಂ ಚಿಂತಯಾನ್ವಿತೌ ।
ಆಜ್ಞಯಾ ಮಹಿಷೀ ಮಂತ್ರೀ ಪುರಗ್ರಾಮನಿವಾಸಿನಃ ॥ ೨೨ ॥

ಜನಾಶ್ಚ ಭಸ್ಮರುದ್ರಾಕ್ಷಾಂಸ್ತ್ಯಕ್ತ್ವಾಥ ಶಿವಪೂಜನಂ ।
ರಾಜಾನುಮತಮಾಚಾರಂ ಚಕ್ರು ರಂತಶ್ಶು ಚಾನ್ವಿತಾಃ ॥ ೨೩ ॥

ರಾಜದೋಷಾತ್ ಪ್ರನಷ್ಟಾಭೂತ್ಪರ್ಜನ್ಯೋಽಪಿ ನ ವರ್ಷತಿ ।
ದುರ್ಜನಾಸ್ಸುಖಿನೋಽಭೂವನ್ಸಾಧವೋ ದುಃಖಿನೋಽಭವನ್ ॥ ೨೪ ॥

---

ವಾದ ಗೌರವವು ಇವರಲ್ಲಿ ಇತ್ತು. ವೇದೋಕ್ತವಾದ ಧರ್ಮಾಚರಣೆಯಲ್ಲಿ ಆಸಕ್ತಿ ಇಲ್ಲದೆ ಇರುವ ರಾಜನನ್ನು ನಾವು ಯಾವ ಉಪಾಯದಿಂದ ಆಸ್ತಿಕ ಬುದ್ಧಿಯುಳ್ಳವನನ್ನಾಗಿ ಮಾಡಬೇಕೆಂದು ಅವರಿಬ್ಬರೂ ಯೋಚಿಸುತ್ತಿದ್ದರು.

೨೨-೨೬. ರಾಜನ ಆಜ್ಞೆಯಂತೆ ಮಂತ್ರಿಯೂ, ರಾಣಿಯೂ, ನಗರ, ಗ್ರಾಮ ಇವುಗಳಲ್ಲಿರುವ ಜನರೂ ಭಸ್ಮ, ರುದ್ರಾಕ್ಷಿಗಳ ಧಾರಣೆಯನ್ನು ಬಿಟ್ಟಿದ್ದರು ಆದರೆ ಅವರು ಮನಸ್ಸಿನಲ್ಲಿ ದುಃಖಪಡುತ್ತಾ ರಾಜನು ಆಚರಿಸುವಂತೆ ನಾಸ್ತಿಕ ಧರ್ಮವನ್ನು ಆಚರಿಸುತ್ತಿದ್ದರು. ಹೀಗಿರುವ ರಾಜನ ಪ್ರಮಾದದಿಂದ ರಾಜ್ಯದಲ್ಲಿ ಕ್ಷಾಮವು ಉಂಟಾಯಿತು. ಮಳೆಯು ಬೀಳಲಿಲ್ಲ. ಕೆಟ್ಟ ಜನರು ಸುಖದಿಂದ ಇರುತ್ತಿದ್ದರು. ಸತ್ಪುರುಷರು ಕ್ಲೇಶದಿಂದ ಇರುತ್ತಿದ್ದರು. ಹೀಗೆ ಇರುವಾಗ ಶಿವಾನಂದನೆಂಬ ಹೆಸರಿನ ಮಹರ್ಷಿಯು ಚಿದಂಬರ ಕ್ಷೇತ್ರದಿಂದ ಶ್ರೀ ಸುಂದರೇಶ್ವರನನ್ನು ದರ್ಶನ ಮಾಡಲು

ಏವಂ ಕಾಲೇ ವರ್ತಮಾನೇ ಶಿವಾನಂದಮಹಾಮುನಿಃ ।
ಶ್ರೀಹಾಲಾಸ್ಯಪ್ರಭುಂ ನಂತುಮಾಯಯೌ ಸ ಚಿದಂಬರಾತ್ ॥ ೨೫ ॥

ಕುಲಬಂಧನರಾಜ್ಞೀಭ್ಯಾಂ ದೃಷ್ಟಸ್ಸ್ವಶಂಕರಾಲಯೇ ;
ಪೃಷ್ಟಸ್ಸ್ವ ಸ ಮುನಿಃ ಪ್ರಾಹ ಚೋಳದೇಶೋದ್ಭವಾದ್ಭುತಂ ॥ ೨೬ ॥

ಶ್ರೀಮದ್ಬ್ರಹ್ಮಪುರೇ ಪುಣ್ಯೇ ಬ್ರಹ್ಮಣಸ್ತಪಸಸ್ಸ್ಥಲೇ ।
ಶಿವಪಾದಾಬ್ಜಹೃದಯ ಇತಿ ಕಶ್ಚಿದಭೂದ್ದ್ವಿಜಃ ॥ ೨೭ ॥

ಪುತ್ರತಾಮಗಮತ್ತಸ್ಯ ಶರಜನ್ಮಾ ಶಿವಾಜ್ಞಯಾ ।
ಅಶಿವಾಯಾಸಜ್ಜನಾನಾಂ ಸಜ್ಜನಾನಾಂ ಶಿವಾಯ ಚ ॥ ೨೮ ॥

ತಸ್ಮೈ ದದೌ ಸಾ ಸ್ತನ್ಯಂ ಚ ಪಾರ್ವತೀ ಕರುಣಾವತೀ ।
ತತ್ಸ್ತನ್ಯಪಾನಮಾತ್ರೇಣ ಕವೀನಾ ಮಗ್ರಣೀ ರಭೂತ್ ॥ ೨೯ ॥

---

ಮಧುರಾನಗರಕ್ಕೆ ಬಂದನು. ದೇವಾಲಯದಲ್ಲಿ ರಾಣಿಯೂ ಮತ್ತು ಮಂತ್ರಿಯೂ ಅವನನ್ನು ನೋಡಿದರು. ಅವನ ಯೋಗಕ್ಷೇಮವನ್ನು ಅವರಿಬ್ಬರೂ ವಿಚಾರಿಸುವಾಗ ಅವನು ಚೋಳದೇಶದಲ್ಲಿ ನಡೆಯುತ್ತಿರುವ ಆಶ್ಚರ್ಯವನ್ನು ಹೇಳಿದನು

೨೭-೩೦. " ಬ್ರಹ್ಮನು ತಪಸ್ಸನ್ನು ಮಾಡಿದ ಪವಿತ್ರವಾದ ಬ್ರಹ್ಮಪುರದಲ್ಲಿ ಶಿವಪಾದಾಬ್ಜ ಹೃದಯ ಎಂಬ ಹೆಸರಿನ ಬ್ರಾಹ್ಮಣನು ಇದ್ದನು ಅವನಿಗೆ ಶಿವನ ಅಪ್ಪಣೆಯ ಮೇರೆ ಷಣ್ಮುಖನು ಮಗನಾಗಿ ಹುಟ್ಟಿದನು. ದುಷ್ಟ ನಿಗ್ರಹ, ಶಿಷ್ಟ ಪರಿಪಾಲನೆಯು ಅವನಿಂದ ಆಗಬೇಕಾಗಿರುವುದರಿಂದ, ಪಾರ್ವತಿಯು ದಯೆಯಿಂದ ಎದೆ ಹಾಲನ್ನು ಆ ಶಿಶುವಿಗೆ ಕೊಟ್ಟಿರುವಳು. ಇದರಿಂದ ಆ ಹುಡುಗನು ಕವಿಗಳಿಗೆಲ್ಲ ರಿಗಿಂತಲೂ ಶ್ರೇಷ್ಠನಾಗಿರುವನು. ಅವನಿಗೆ ಮೂರು ವರ್ಷ ವಯಸ್ಸು ಮಾತ್ರವೇ ಆಗಿದ್ದರೂ ಅವನು ಜ್ಞಾನ ವಿಜ್ಞಾನಗಳ ಕೊನೆಯನ್ನು ತಿಳಿದಿರುವನು. ಅವನಿಗೆ

ತ್ರಿಸಂವತ್ಸರದೇಶಿಯೋ ಜ್ಞಾನವಿಜ್ಞಾನಸಾಗರಃ ।
ಜ್ಞಾನಸಂಬಂಧ ಇತ್ಯಾಖ್ಯಾಮವಾಪ್ತೋ ಯಥಾರ್ಥತಃ ॥ ೩೦ ॥

ಸ್ಥಾನಾನಾಂ ವೀಕ್ಷಣೇ ಶಂಭೋಸ್ತದಾ ಮತಿರಭೂಚ್ಛುಭಾ ।
ಛತ್ರಂ ಚಾಮರಯುಗ್ಮಂ ಚ ಮುಕ್ತಾಫಲವಿಚಿತ್ರಿತಂ ॥ ೩೧ ॥

ಜನಕಸ್ಕಂಧಮಾರುಹ್ಯ ಪ್ರಾಪ್ಯ ಶಂಭೋಃ ಸ್ಥಲಾನಿ ಚ ।
ಶ್ರೀಗೇಯೈರ್ದ್ರಾವಿಡೈಃ ಶಂಭುಂ ಸ್ತುತ್ವಾ ಭಕ್ತ್ಯಾಽನವದ್ಯಯಾ ॥ ೩೨ ॥

ಚತುರಂ ತಂ ಮಹಾಯಾನಂ ಲಬ್ಧ್ವಾ ಶಂಭೋರನುಗ್ರಹಾತ್ ।
ತತ್ರತ್ಯಾನ್ವೇದಬಾಹ್ಯಾಂಶ್ಚ ಶಿಕ್ಷಯಿತ್ವಾ ದುರಾತ್ಮನಃ ॥ ೩೩ ॥

ಶೈವಸಿದ್ಧಾಂತಿನಾಂ ಸೌಖ್ಯಂ ಅಕರೋಚ್ಛಿಶುರಪ್ಯಸೌ ।
ಅತ್ರತ್ಯಾನಪನೇತುಂ ಚ ಕ್ಷಪಣಾನ್ವೇದದೂಷಕಾನ್ ॥ ೩೪ ॥

---

ಈ ಕಾರಣದಿಂದ ಸಾರ್ಥಕವಾದ ಜ್ಞಾನಸಂಬಂಧ ಎಂದು ಹೆಸರು ಬಂದಿರುವುದು. ಅವನಿಗೆ ಶಿವ ಕ್ಷೇತ್ರಗಳನ್ನು ದರ್ಶನ ಮಾಡಬೇಕೆಂಬ ಒಳ್ಳೆಯ ಬುದ್ಧಿಯು ಉಂಟಾಗಿರುವ ಕಾರಣ ತೀರ್ಥಯಾತ್ರೆಯನ್ನು ಮಾಡಲು, ಅವನು ಹೊರಟಿರುವನು.

೩೧–೩೩. ಛತ್ರಿ, ಮುತ್ತಿನ ಕಟ್ಟನ್ನು ಹಾಕಿರುವ ಚಾಮರಗಳು ಇವೆಲ್ಲವೂ ಅವನಿಗೆ ಮರ್ಯಾದೆಯಾಗಿರುವುವು. ಅವನು ತನ್ನ ತಂದೆಯ ಹೆಗಲಿನಮೇಲೆ ಕೂತುಕೊಂಡು ಶಿವಕ್ಷೇತ್ರಗಳಿಗೆ ಹೋಗುವನು. ಅಲ್ಲಿ ದ್ರಾವಿಡ ಭಾಷೆಯಲ್ಲಿರುವ ಉತ್ತಮವಾದ ಪದ್ಯಗಳನ್ನು ಹೇಳುತ್ತಾ ಭಕ್ತಿಯಿಂದ ಶಿವನನ್ನು ಪೂಜಿಸುವನು. ಇದರಿಂದ ಶಿವನ ಅನುಗ್ರಹವು ಇವನಲ್ಲಿ ಉಂಟಾಗಿ ಪಲ್ಲಕ್ಕಿಯೇ ಮೊದಲಾದ ವೈಭವಗಳು ದೊರೆತಿರುವುವು. ಅಲ್ಲಲ್ಲಿರುವ ದುಷ್ಟರಾದ ವೇದಬಾಹ್ಯ ಜನಗಳನ್ನು ಅವನು ನಿಗ್ರಹಿಸುತ್ತಾ, ಪರಿಶುದ್ಧವಾದ ಶಿವಸಿದ್ಧಾಂತವನ್ನು ಬಲ್ಲವರಿಗೆ ಅವನು ಸುಖವನ್ನು ಉಂಟುಮಾಡುತ್ತಿದ್ದನು.

೩೪–೩೬. ಈ ದೇಶದಲ್ಲಿರುವ ವೇದದೂಷಣೆ ಮಾಡುವವರಾದ ನಾಸ್ತಿಕರನ್ನು ನಿಗ್ರಹ ಮಾಡುವುದಕ್ಕೂ ಹಾಲಾಸ್ಯೇಶ್ವರನನ್ನು ಸೇವಿಸುವುದಕ್ಕೂ ಅವನು ಇಲ್ಲಿಗೂ

ಆಗಮಿಷ್ಯತಿ ಸೋತ್ರಾಪಿ ಹಾಲಾಸ್ಯೇಶಂ ಚ ಸೇವಿತುಂ ।
ಇತಿ ತದ್ವಾಕ್ಸುಧಾಂ ಪೀತ್ವಾ ಶ್ರವಣ್ಯೈಃ ಪಾತ್ರತಾಂ ಗತೈಃ ॥ ೩೫ ॥

ಮಹಿಷೀಮಂತ್ರಿಣಾ ವಾಶು ಮಹಾನಂದಮವಾಪತುಃ ।
ಜ್ಞಾನಪೂರ್ಣ ಜ್ಞಾನಮೂರ್ತೇ ಜ್ಞಾನವಿಜ್ಞಾನಶೇವಧೇ ॥ ೩೬ ॥

ಜ್ಞಾನಸಂಬಂಧ ಭಗವನ್ ಶ್ರೀಮದ್ವೈದಿಕವಾರಣ ।
ಸರ್ವಜ್ಞ ಶುಭರೂಪಾದ್ಯ ಲೋಕಾನುಗ್ರಹಕಾರಕ ॥ ೩೭ ॥

ಭಕ್ತಾನಾಂ ರಕ್ಷಣಾರ್ಥಾಯ ಶಿಕ್ಷಿತುಂ ಕ್ಷಪಣಾನಪಿ ।
ಸುಂದರೇಶಂ ಪ್ರಣಂತುಂ ಚ ಸಮಾಯಾತು ಭವಾನಿಹ ॥ ೩೮ ॥

ಶರಣಂ ತ್ವಾಗತಾವಾವಾಂ ರಾಜ್ಞೀ ಚ ಕುಲಬಂಧನಃ ।
ವಿಲಿಖ್ಯ ಪತ್ರಿಕಾಮೇವಂ ಮಹೀಷೀಮಂತ್ರಿಣಾವುಭೌ ॥ ೩೯ ॥

---

ಬರುವವನಾಗಿರುವನು." ಎಂದು ಹೇಳಿದನು. ಆ ಶಿವಾನಂದನ ಮಾತುಗಳನ್ನು ರಾಣಿಯೂ ಮಂತ್ರಿಯೂ ಕೇಳಿದರು. ಅದರಿಂದ ಅವರಿಗೆ ಬಹಳ ಸಂತೋಷ ವಾಯಿತು. ಜ್ಞಾನ ವಿಜ್ಞಾನ ನಿಪುಣನಾಗಿ ಶಿವಜ್ಞಾನ ಪಾರಂಗತನಾದ ಕೇವಲ ಚಿದ್ರೂಪನಾದ ಜ್ಞಾನಸಂಬಂಧ ಯೋಗಿಯನ್ನು ತಮ್ಮ ದೇಶಕ್ಕೆ ಕರಸುವುದಕ್ಕಾಗಿ ಅವರಿಬ್ಬರೂ ಆಲೋಚಿಸಿದರು. ಕುಲಬಂಧನ ಮಂತ್ರಿಯು ರಾಣಿಯ ಸನ್ನೆಯ ಮೇರೆ ಕಾಗದವನ್ನು ಬರೆದನು.

೩೭-೪೦. "ಪೂಜ್ಯರಾದ, ವೈದಿಕ ಮಾರ್ಗ ಪ್ರವರ್ತಕರಾದ ಮತ್ತು ಸರ್ವಜ್ಞರಾದ, ಈಗ ಲೋಕಾನುಗ್ರಹ ಆಗ್ರಹಗಳನ್ನು ಮಾಡುತ್ತಿರುವ, ಮಂಗಳ ಮೂರ್ತಿಯಾದ ಜ್ಞಾನ ಸಂಬಂಧ ಯೋಗಿಗಳೆಂದು ಪ್ರಸಿದ್ಧರಾದ ನೀವು ಭಕ್ತರನ್ನು ರಕ್ಷಿಸುವುದಕ್ಕೂ ನಾಸ್ತಿಕರನ್ನು ನಿಗ್ರಹ ಮಾಡುವುದಕ್ಕೂ, ಸುಂದರೇಶ್ವರನನ್ನು ಸೇವಿಸುವುದಕ್ಕೂ, ಈ ನಗರಕ್ಕೆ ಬರಬೇಕೆಂದು ರಾಣಿಯಾದ ನಾನೂ, ನಮ್ಮ ಮಂತ್ರಿಯಾದ ಕುಲಸಂಬಂಧನನೂ ಸಹ ನಿಮ್ಮನ್ನು ಬೇಡಿಕೊಂಡಿರುತ್ತೇವೆ. ನಿಮ್ಮನ್ನು ಶರಣು ಹೊಂದಿರುವ ನಮ್ಮಿಬ್ಬರನ್ನೂ ರಕ್ಷಿಸಬೇಕು" ಎಂದು ಆ ಕಾಗದದಲ್ಲಿ ಬರದಿತ್ತು. ಆ ಕಾಗದವನ್ನು ಜ್ಞಾನ ಸಂಬಂಧ ಯೋಗಿಗೆ ತಲಪಿಸುವು ದಕ್ಕಾಗಿ ಅವರಿಬ್ಬರೂ ಬೇಗ ಕಳುಹಿಸಿದರು. ಆ ಯೋಗಿಗೆ ಈ ವಿಷಯವು ಕಾಗದ

ಪ್ರೇಷಯಾಮಾಸತು ಶ್ರೀಘ್ರಂ ಪ್ರತಿ ವೈದಿಕವಾರಣಂ ।
ಸೋಽಪಿ ವಿಜ್ಞಾನವಾನ್ಯೋಗೀ ಮಹಾನ್ವೈದಿಕವಾರಣಃ ॥ ೪೦ ॥

ವಿಜ್ಞಾಯೈವಂವಿಧೋದಂತಂ ಪತ್ರಿಕಾಗಮನಾತ್ಪುರಾ ।
ಸ್ಥಾಪಿತುಂ ವೇದಮಾರ್ಗಂ ಚ ತದನ್ಯಾಂಶ್ಚ ನಿರಾಸಿತುಂ ॥ ೪೧ ॥

ಹಾಲಾಸ್ಯೇಶಂ ಚ ಮೀನಾಕ್ಷೀಂ ಸೇವಿತುಂ ಭಕ್ತಿಸಂಯುತಃ ।
ವಿಚಕ್ಷಣತ್ವಾದಕರೋ ಚ್ಚಿಂತಾ ಮೇವಂವಿಧಾಂ ತವಾ ॥ ೪೨ ॥

ಶಿವಭಕ್ತ್ಯಾತುಲ ಶ್ಚೋಲ ಸ್ತಥಾ ತದ್ದೇಶಜಾ ಜನಾಃ ।
ಪಾಂಡ್ಯೋ ನಗ್ನಾಟಸಿದ್ಧಾಂತೇ ನಿಶರಾಂ ದೃಢಭಕ್ತಿಮಾನ್ ॥ ೪೩ ॥

ತಸ್ಮಾತ್ತದ್ದೇಶಜಾ ಸ್ಸರ್ವೇ ತತ್ಸಮಾ ಅಭವರ್ಜನಾಃ ।
ತಂ ಭೂಪಂ ವೈದಿಕಂ ಕರ್ತುಂ ಗಂತವ್ಯಂ ತ್ವರಿತಂ ಮಯಾ ॥ ೪೪ ॥

ಇತಿ ಚಿಂತಾಸಮಾಯುಕ್ತೇ ತಸ್ಮಿನ್ವೈದಿಕವಾರಣೇ ।
ಸಾ ಪತ್ರಿಕಾಪ್ಯಾಯಯೌ ತಾಂ ವಾಚಯಿತ್ವಾ ಪ್ರತುಷ್ಟವಾನ್ ॥ ೪೫ ॥

---

ಬರುವುದಕ್ಕಿಂತ ಮುಂದಾಗಿ ತಿಳಿದಿತ್ತು. ಅದರಿಂದ ಅವನು ವೇದಮಾರ್ಗವನ್ನು ಪಾಂಡ್ಯದೇಶದ ಜನರಲ್ಲಿ ನೆಲೆಗೊಳಿಸುವುದು, ನಾಸ್ತಿಕರನ್ನು ನಿಗ್ರಹ ಮಾಡುವುದು ಮತ್ತು ಮೀನಾಕ್ಷಿ ಸಹಿತನಾದ ಸುಂದರೇಶ್ವರನನ್ನು ಸೇವಿಸುವುದು ಎಂಬುದಾಗಿ ನಿಶ್ಚಯಿಸಿಕೊಂಡನು. ಆದರೆ ಬುದ್ಧಿವಂತನಾದ ಅವನಿಗೆ ಈ ಯೋಚನೆಯು ಉಂಟಾಯಿತು.

೪೧-೪೫. "ಚೋಳರಾಜನು ಶಿವಭಕ್ತರಲ್ಲಿ ಮೇಲಾದವನು. ಈ ದೇಶದ ಜನರೆಲ್ಲರೂ ಹೀಗೆಯೇ ಇರುವರು. ಪಾಂಡ್ಯರಾಜನು ನಾಸ್ತಿಕ ಸಿದ್ಧಾಂತದಲ್ಲಿ ನಂಬಿಕೆಯುಳ್ಳವನು. ಆ ದೇಶದ ಜನರೆಲ್ಲರೂ ಅವನನ್ನು ಅನುಸರಿಸಿರುವರು. ಪಾಂಡ್ಯರಾಜನನ್ನು ವೈದಿಕನನ್ನಾಗಿ ಮಾಡಲು ನಾನು ಆ ದೇಶಕ್ಕೆ ಬೇಗ ಹೋಗಬೇಕು" ಎಂದು ಅವನು ಯೋಚಿಸುವ ಸಮಯಕ್ಕೆ ಸರಿಯಾಗಿ ಕಾಗದವೂ ಬಂದಿತು. ಅವನು ಅದನ್ನು ಓದಿಕೊಂಡು ಸಂತೋಷಪಟ್ಟನು,

ಸದ್ಯೋ ನಿರ್ಗಂತುಮುದ್ಯುಕ್ತೇ ತಸ್ಮಿನ್ವೈದಿಕವಾರಣೇ ।
ತಿಥಿಶ್ಚ ನವಮೀ ಪ್ರೋಕ್ತಾ ವಾರಂ ಚ ರವಿವಾಸರಂ ॥ ೪೬ ॥

ವಂಚಕಾಃ ಕ್ಷಪಣಾಶ್ಚಾಪಿ ಬಹುಸಾಹಸ್ರಸಂಖ್ಯಕಾಃ ।
ತ್ವಂ ಚ ಬಾಲೋಽಬಾಲ ಏವ ವಿದ್ಯಾಜ್ಞಾನಾದಿಭಿ ಸ್ತದಾ ॥ ೪೭ ॥

ಇತ್ಯಾಪ್ತಾಃ ಕಥಯಾಮಾಸುಃ ಪಿತೃಭ್ರಾತೃಮುಖಾಃ ಪರೇ ।
ಶ್ರುತ್ವಾ ವಚನಮಿತ್ಯುಕ್ತಂ ಕ್ಷಪಣಾನಾಂ ಚ ವಂಚನಾಂ ॥ ೪೮ ॥

ಬಾಂಧವಾನ್ ಕಥಯಾಮಾಸ ಶಿವಂ ಧ್ಯಾಯನ್ ಸದುತ್ತರಂ ।
ತದಾ ತು ಸುಂದರೇಶಸ್ಯ ಮಹದಾಜ್ಞಾವಶೇನ ಚ ॥ ೪೯ ॥

ಸುಂದರೇಶ್ವರಸೇವಾರ್ಥಂ ಪ್ರಸ್ಥಿತಸ್ಯ ಹಿ ಬಾಂಧವಾಃ ।
ಸರ್ವಂ ಚ ತಿಥಿವಾರಾದ್ಯಂ ಶುಭಮೇವ ಭವಿಷ್ಯತಿ ॥ ೫೦ ॥

---

೪೬–೪೮. ಜ್ಞಾನಸಂಬಂಧ ಯೋಗಿಯು ಆಗಲೇ ಹೊರಡಲುದ್ಯುಕ್ತನಾದನು. ಆಗ ಅವನ ಹಿತಚಿಂತಕರಾದ ತಂದೆ, ಅಣ್ಣ ಇವರೇ ಮೊದಲಾದವರು "ಈದಿವಸ ನವಮಿಯಾಗಿರುತ್ತದೆ. ವಾರವೂ ಭಾನುವಾರವಾಗಿರುವುದು. ಬೌದ್ಧರೂ ಸಾವಿರ ಕಟ್ಟಲೆಯಾಗಿರುವರು. ಅವರು ಬಹಳ ಮೋಸಮಾಡತಕ್ಕವರು. ಆದ್ದರಿಂದ ಪ್ರಯಾಣಮಾಡುವದರಲ್ಲಿ ಯೋಚನೆಮಾಡತಕ್ಕದ್ದು. ನೀನು ಹುಡುಗನಾದರೂ ವಿದ್ಯೆ ಮತ್ತು ಜ್ಞಾನ ಇವುಗಳಿಂದ ದೊಡ್ಡವನಾಗಿರುತ್ತೀಯೆ." ಎಂದು ಹೇಳುತ್ತಾ ಪ್ರಯಾಣಕ್ಕೆ ತಡೆಯನ್ನು ಮಾಡಿದರು. ಆಗ ಅವನು ಅವರು ಹೀಗೆ ಹೇಳಿದ ಮಾತನ್ನೂ ಬೌದ್ಧರು ಮಾಡುವ ಮೋಸದ ಕಾರ್ಯಗಳನ್ನೂ ಯೋಚಿಸಿಕೊಂಡು ಶಿವನನ್ನು ಧ್ಯಾನಮಾಡುತ್ತಾ ಅವರಿಗೆ ಸರಿಯಾದ ಉತ್ತರವನ್ನು ಹೇಳಿದನು.

೪೯–೫೧. "ಸುಂದರೇಶ್ವರನ ಆಜ್ಞೆಯಂತೆ ಸುಂದರೇಶ್ವರನನ್ನು ಸೇವಿಸಲು ಹೊರಟಿರುವವನಿಗೆ ತಿಥಿ ವಾರವೇ ಮೊದಲಾದವುಗಳೆಲ್ಲವೂ ಶುಭವಾಗುವುವು" ಎಂದು

ಇತ್ಯುಕ್ತವಂತಂ ತಂ ಬಾಲಮಬಾಲಂ ಚ ಸ್ವಭಾವತಃ ।
ನ ಗಂತವ್ಯಂ ತ್ವಯಾದ್ಯೇತಿ ರೋಧಯಾಮಾಸತುಸ್ತದಾ ॥ ೩೧ ॥

ತಥಾಪಿ ಸುಂದರೇಶಸ್ಯ ಮಹದಾಜ್ಞಾವಶೇನ ಚ ।
ಪ್ರೇರಿತೋ ವಾಯುನಾ ತೂಲ ಇವ ಸೋಽಭೂತ್ಸಮುತ್ಥಿತಃ ॥ ೩೨ ॥

ಪ್ರಣಂತುಂ ಸುಂದರೇಶಾನಂ ಪ್ರಯಾತಸ್ಯ ಮಮಾದ್ಯವೈ ।
ಸರ್ವಂ ಚ ತಿಥಿವಾರಾದ್ಯಮನುಕೂಲಂ ಭವೇನ್ಮಮ ॥ ೩೩ ॥

ಆಮ್ನಾಯಬಾಹ್ಯಾಃ ಕ್ಷಪಣಾಃ ಹಾಲಾಸ್ಯೇಶಪ್ರಸಾದತಃ ।
ಪರಾಜಿತಾ ಭವಿಷ್ಯಂತಿ ಪಕ್ಷೀಶಾತ್ಪನ್ನಗಾ ಇವ ॥ ೩೪ ॥

ಇತ್ಯುಕ್ತ್ವಾ ದಶಗೇಯಾನಿ ಶ್ರೀಮಂತ್ರೀ ಪ್ರೋಚ್ಯ ಭಕ್ತಿತಃ ।
ನಿರ್ಯಯೌ ಜ್ಞಾನಸಂಬಂಧೋ ನಿಗ್ರಹಾನುಗ್ರಹಕ್ಷಮಃ ॥ ೩೫ ॥

---

ಅವನು ಹೇಳಿದನು. ಅದನ್ನು ಕೇಳಿ ಅವನ ಬಂಧುಗಳು ಅವನು ವಯಸ್ಸಿನಿಂದ ಚಿಕ್ಕವನಾಗಿ, ಜ್ಞಾನದಿಂದ ದೊಡ್ಡವನಾಗಿದ್ದರೂ ನೀನು ಈಗ ಹೊರಡಕೂಡದು ಎಂದು ಹೇಳಿ ಅವನನ್ನು ತಡದು ನಿಲ್ಲಿಸಿದರು.

೩೨-೩೪. ಜ್ಞಾನಸಂಬಂಧ ಯೋಗಿಯು ತನ್ನ ಬಂಧುಗಳು ತಡೆದರೂ, ಹತ್ತಿಯು ಗಾಳಿಯ ವೇಗಕ್ಕೆ ಸಿಕ್ಕಿದಹಾಗೆ ಸುಂದರೇಶ್ವರನ ಬಲವಾದ ಆಜ್ಞಾನುಸಾರವಾಗಿ ಪ್ರಯಾಣಮಾಡಲು ಸಿದ್ಧನಾದನು. "ಸುಂದರೇಶ್ವರನನ್ನು ಸೇವಿಸಲು ಹೊರಟಿರುವ ನನಗೆ ಈಗಲೇ ತಿಥಿ ವಾರಾದಿಗಳು ಎಲ್ಲವೂ ಅನುಕೂಲವಾಗುವುವು ವೇದವಿರೋಧಿಗಳಾದ ಬೌದ್ಧರನ್ನು ಸುಂದರೇಶ್ವರನ ಅನುಗ್ರಹದಿಂದ ಗರುಡನು ಹಾವುಗಳನ್ನು ಗೆದ್ದಿರುವಂತೆ ನಾನು ಗೆಲ್ಲುವೆನು." ಎಂದು ಅವನು ಹೇಳುತ್ತಾ ಕಾಂತಿಯುಕ್ತವಾದ ಹತ್ತು ಪದ್ಯಗಳನ್ನು ಭಕ್ತಿಯಿಂದ ಹೇಳಿದನು.

೩೫-೪೯. ನಿಗ್ರಹಾನುಗ್ರಹ ಸಮರ್ಥನಾದ ಜ್ಞಾನ ಸಂಬಂಧಯೋಗಿಯು ಪ್ರಯಾಣಮಾಡಲು ಹೊರಟಾಗ ಅವನ ಸಂಗಡ ಹದಿನಾರು ಸಾವಿರ ಶಿಷ್ಯರು ಹೊರಟರು. ಅವರೆಲ್ಲರೂ ಭಕ್ತಿಯುಳ್ಳವರಾಗಿದ್ದರು. ಶಿವನ ನಾಮಗಳನ್ನು ಯಾವಾಗಲೂ

ಶಿಷ್ಯೈಃ ಷೋಡಶಸಾಹಸ್ರೈಃ ಭಕ್ತರತ್ನಮಹಾರ್ಣವೈಃ ।
ಪ್ರಶಂಸದ್ಭಿಃ ಪ್ರಶಸ್ತಾನಿ ಶಂಭುನಾಮಾನಿ ಸಂತತಂ ॥ ೫೬ ॥

ಭಸ್ಮಪಾಂಡರಗಾತ್ರೈಸ್ತೈಃ ಪರಿತಸ್ಸೇವಿತಸ್ಸುಧೀಃ ।
ಆರುಹ್ಯ ಚತುರಂತಾಖ್ಯಂ ಯಾನವರ್ಯಂ ಚ ಮೌಕ್ತಿಕಂ ॥ ೫೭ ॥

ಛತ್ರೇಣ ಮುಕ್ತಾಚಿತ್ರೇಣ ಚಾಮರಾಭ್ಯಾಂ ಚ ವೀಜಿತಃ ।
ಮುಕ್ತಾಫಲಾದಿಚಿತ್ರೈಶ್ಚ ಭೂಷಣೈಸ್ಸಮಲಂಕೃತಃ ॥ ೫೮ ॥

ಕ್ಷೀರಸಾಗರಸಂಭೂತಚಂದ್ರಮಾ ಇವ ಭೂಗತಃ ।
ಭೂಲೋಕಶಿವಲೋಕಾಖ್ಯಾಮಾಯಯೌ ಮಧುರಾಪುರೀಂ ॥ ೫೯ ॥

ವೈದಿಕಾನುಗ್ರಹಾರ್ಥಂ ಚ ನಗ್ನಾನಾಂ ನಿಗ್ರಹಾಯ ಚ ।
ಸರ್ವಜ್ಞೋಽಯಂ ಬ್ರಹ್ಮಪುರಾದಾಯಯೌ ಕ್ಷಪಣಾಂತಕಃ ॥ ೬೦ ॥

---

ಉಚ್ಚರಿಸುತ್ತಿದ್ದರು. ಜ್ಞಾನಸಂಬಂಧಯೋಗಿಯು ಭಸ್ಮದಿಂದ ಶುಭ್ರವಾದ ಶರೀರವುಳ್ಳ ಆ ಶಿಷ್ಯರ ಮಧ್ಯದಲ್ಲಿ ಮುತ್ತಿನ ಪಲ್ಲಕ್ಕಿಯಲ್ಲಿ ಕೂತುಕೊಂಡು ಬರುತ್ತಿದ್ದನು. ಅವನು ಮುತ್ತಿನ ಆಭರಣಗಳಿಂದ ಅಲಂಕೃತನಾಗಿದ್ದನು. ಮುತ್ತಿನ ಛತ್ರಿ ಮತ್ತು ಚಾಮರಗಳಿಂದ ಅವನನ್ನು ಸೇವಿಸುತ್ತಿದ್ದರು. ಅವನು ಕ್ಷೀರ ಸಮುದ್ರದಲ್ಲಿ ಹುಟ್ಟಿದ ಚಂದ್ರನು ಭೂಮಿಗೆ ಬಂದಹಾಗೆ, ಭೂಲೋಕ ಶಿವಲೋಕವೆಂದು ಹೆಸರುಳ್ಳ ಮಧುರಾ ನಗರಕ್ಕೆ ಬಂದನು.

೬೦-೬೩. "ವೇದ ಬಾಹ್ಯರಾದ ಬೌದ್ಧರಿಗೆ ಯಮನಾಗಿ ಇರುವ ಜ್ಞಾನಸಂಬಂಧ ಯೋಗಿಯು, ಸುಬ್ರಹ್ಮಣ್ಯ ಕುಮಾರಸ್ವಾಮಿಯ, ಅಂಶದಿಂದ ಉತ್ಪನ್ನನಾಗಿರುವನು. ದುಷ್ಟರ ನಿಗ್ರಹವನ್ನೂ ಶಿಷ್ಟರ ಅನುಗ್ರಹವನ್ನೂ ಮಾಡುವ ಕುಮಾರಸ್ವಾಮಿಯೇ ಈ ರೂಪದಿಂದ ಅವತರಿಸಿರುವನು. ಬ್ರಹ್ಮಪುರದಿಂದ ಅವನೇ ಇಲ್ಲಿಗೆ ಬರುವನು.

ಸುಬ್ರಹ್ಮಣ್ಯಾಂಶಸಂಭೂತ ಶ್ರೀಪೂರ್ವಜ್ಞಾನಬಂಧಕಃ ।
ದುಷ್ಟಾನಾಂ ನಿಗ್ರಹಾರ್ಥಾಯ ಶಿಷ್ಟಾನಾಂ ರಕ್ಷಣಾಯ ಚ ॥ ೬೧ ॥

ಆವಿರ್ಭೂತಃ ಕುಮಾರೋಽಯಮನ್ವಾಯಯೌ ಗುಹವಿಗ್ರಹಃ ।
ಚಿಹ್ನಕಾಹಳವಾದ್ಯಾನಿ ಇತಿ ತತ್ಕುಶಲಾಜನಾಃ ॥ ೬೨ ॥

ಪುರತೋ ಘೋಷಯಾಮಾಸು ಸ್ವರ್ಣರಾಜತಕಾನಿ ಚ ।
ಏವಂಭೂತೋ ವಾದ್ಯಘೋಷ ಸ್ಸರ್ವದಿಕ್ಷು ವಿಜೃಂಭಿತಃ ॥ ೬೩ ॥

ಕೋಽಯಮೇವಂವಿಧೇನೈವ ವಾದ್ಯಘೋಷೇಣ ಚಾಗತಃ ।
ಇತಿ ಸಂಭ್ರಾಂತಚಿತ್ತಾದ್ಯೈ ಬೌದ್ಧಾಃ ಕ್ಷಪಣಕಾ ಜನಾಃ ॥ ೬೪ ॥

ಸ್ವದೂತಾನ್ಪ್ರೇಷಯಂತಿ ಸ್ಮ ವಿಜ್ಞಾತವ್ಯ ಇತಿ ದ್ರುತಂ ।
ತೇ ತಮಭ್ಯೇತ್ಯ ವೃತ್ತಾಂತಂ ವಿಜ್ಞಾಯ ಚ ತದೀಯಕಂ ॥ ೬೫ ॥

---

ವೈದಿಕರನ್ನು ಅನುಗ್ರಹಿಸಿ ಬೌದ್ಧರನ್ನು ಇವನು ನಿಗ್ರಹ ಮಾಡುವನು." ಎಂದು ಚಿನ್ನವಾದ, ಚಿನ್ನದ ಮತ್ತು ಬೆಳ್ಳಿಯ ಕಾಹಳ ವಾದ್ಯಗಳನ್ನು ಜನರು ಊದುತ್ತಿದ್ದರು. ಹೀಗೆ ಇರುವ ವಾದ್ಯದ ಧ್ವನಿಯು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿತ್ತು.

೬೪-೬೯ ಈ ಪ್ರಕಾರದಿಂದ ಇರುವ ವಾದ್ಯಗಳಿಂದ ಬರುತ್ತಿರುವವನು ಯಾವನು ಎಂದು ಬೌದ್ಧರೇ ಮೊದಲಾದ ನಾಸ್ತಿಕಜನರು ತಿಳಿಯಲು ಭ್ರಾಂತಚಿತ್ತರಾಗಿ ತಮ್ಮ ದೂತರನ್ನು ಬೇಗನೆ ಕಳುಹಿಸಿದರು. ಅವರು ಜ್ಞಾನಸಂಬಂಧ ಯೋಗಿಯ ಜೊತೆಯಲ್ಲಿ ಬರುತ್ತಿರುವ ಜನರ ಹತ್ತಿರಕ್ಕೆ ಹೋಗಿ, ಎಲ್ಲವನ್ನೂ ವಿಚಾರಿಸಿ ತಿಳಿದುಕೊಂಡು ಅವರಿಗೆ ಎಲ್ಲಾ ಸಂಗತಿಯನ್ನೂ ಕೂಡಲೇ ತಿಳಿಸಿದರು. ಪೂಜ್ಯನಾದ ಜ್ಞಾನಸಂಬಂಧ ಯೋಗಿಯು, ಹಾಲಾಸ್ಯೇಶ್ವರನ ಗೋಪುರವನ್ನೂ ವಿಮಾನವನ್ನೂ ದೂರದಲ್ಲಿಯೇ ನೋಡಿ, ದ್ರಾವಿಡಭಾಷೆಯ ಪದ್ಯಗಳಿಂದ ಸ್ತುತಿಸಿ, ನಮಸ್ಕಾರ ಮಾಡಿದನು. ಅನಂತರದಲ್ಲಿ ವೇಗವತೀನದಿಯ ಹತ್ತಿರಕ್ಕೆ ಬಂದು ಅಲ್ಲಿ

ಆಗತ್ಯ ತಾನರ್ಹತಾಂಶ್ಚ ಜ್ಞಾತಾರ್ಥಾನ್ಸಹಸಾ ವ್ಯಧುಃ ।
ಜ್ಞಾನಪೂರ್ಣೋಽಪಿ ಭಗವಾನ್ ಜ್ಞಾನವಿಜ್ಞಾನವಿತ್ತಮಃ　　॥ ೬೬ ॥

ದೂರೇ ವಿಮಾನಂ ದೃಷ್ಟ್ವಾ ಚ ಹಾಲಾಸ್ಯೇಶಸ್ಯ ಗೋಪುರೇ ।
ನತ್ವಾ ಸ್ತುತ್ವಾ ಪುನರ್ಗೇಯೈಃ ಪ್ರಾಪ್ಯ ವೇಗವತೀನದೀಂ　　॥ ೬೭ ॥

ತತ್ರ ಸ್ನಾತ್ವಾ ಚ ಸಂತರ್ಪ್ಯ ಪಿತೄನ್ದೇವಾನ್ಋಷೀನಪಿ ।
ಸಪ್ತಸಾಗರತೀರ್ಥೇ ಚ ಸ್ನಾತ್ವಾ ದೇವಾನ್ಪಿತೄನ್ ತರ್ಪ್ಯ ಚ　　॥ ೬೮ ॥

ಜ್ಞಾನತೀರ್ಥಂ ಪುನಃ ಪ್ರಾಪ್ಯ ಕರ್ತವ್ಯಂ ತತ್ರ ಕರ್ಮ ಯತ್ ।
ವಿಧಾಯ ವಿಧಿನಾ ಪಶ್ಚಾತ್ ವಿಘ್ನೇಶಂ ಸಂಪ್ರಣಮ್ಯ ಚ　　॥ ೬೯ ॥

ಷಡಾನನಂ ಚ ನತ್ವಾಥ ಮೀನಾಕ್ಷೀಂ ಸಂಪ್ರಣಮ್ಯ ಚ ।
ಸ್ತುತ್ವಾ ಸ್ತೋತ್ರೈಸ್ಸುಗೇಯೈಶ್ಚ ಪ್ರಾದಕ್ಷಿಣ್ಯಕ್ರಮೇಣ ಚ　　॥ ೭೦ ॥

---

ಸ್ನಾನವನ್ನು ಮಾಡಿದನು. ಅಲ್ಲಿ, ದೇವತೆಗಳು, ಪಿತೃಗಳು, ಋಷಿಗಳು, ಇವರೆಲ್ಲರಿಗೂ ಸಪ್ತಸಾಗರ ತೀರ್ಥದ ನೀರಿನಿಂದ ತರ್ಪಣವನ್ನು ಮಾಡಿದನಂತರ ಜ್ಞಾನತೀರ್ಥದ ಹತ್ತಿರಕ್ಕೆ ಬಂದು, ಅಲ್ಲಿ ಮಾಡಬೇಕಾದ ಕರ್ಮಗಳೆಲ್ಲವನ್ನೂ ಮಾಡಿದನು. ಅನಂತರದಲ್ಲಿ ಅವನು ವಿಘ್ನೇಶ್ವರನಿಗೆ ವಂದಿಸಿದನು.

೭೦–೭೪　ಷಡಾನನದೇವ, ಮೀನಾಕ್ಷೀದೇವಿ, ಇವರುಗಳನ್ನು ಪದ್ಯಗಳನ್ನು ಹೇಳಿ ನಮಸ್ಕಾರ ಮಾಡಿದನು. ಅನಂತರದಲ್ಲಿ ಪ್ರದಕ್ಷಿಣೆಯ ಕ್ರಮದಿಂದ ಎಲ್ಲಾ ವಿಧವಾದ ಮಂಗಳವನ್ನೂ ಉಂಟುಮಾಡುವ ಸುಂದರೇಶ್ವರನ ದೇವಾಲಯಕ್ಕೆ ಅವನು ಬಂದನು. ಅವನು ಗಣನಾಥರೂ, ಗಜಗಳೂ, ಸಿಂಹ್ಮಗಳೂ, ವಹಿಸಿರುವ ಇಂದ್ರನು ನಿರ್ಮಿಸಿ ಒಪ್ಪಿಸಿರುವ ಹಾಲಾಸ್ಯೇಶ್ವರನ ವಿಮಾನವನ್ನು ನೋಡಿ ಆಶ್ಚರ್ಯ ಪಟ್ಟನು. ಅನಂತರದಲ್ಲಿ ಅವನು ದೇವಾಲಯದ ವಳಗಡೆಗೆ ಹೋದನು. ದ್ವಾರಪಾಲಕರಿಗೆ ನಮಸ್ಕಾರ ಮಾಡಿದನು. ಆಮೇಲೆ ಅವನು ಸುಂದರೇಶ್ವರನನ್ನು

ಸುಂದರೇಶಾಲಯಂ ಪ್ರಾಪ್ಯ ಸರ್ವಮಂಗಲದಾಯಕಂ ।
ಗಣನಾಥೈರ್ಗಜೈಸ್ಸಿಂಹೈರ್ವಿಧೃತಂ ದಿಗ್ಗಜೈರಪಿ ॥ ೭೧ ॥

ದೃಷ್ಟ್ವಾ ವಿಮಾನಮಾಶ್ಚರ್ಯಂ ದೇವೇಂದ್ರೇಣ ಸಮರ್ಪಿತಂ।
ಅಂತರ್ಧಾಯ ಪ್ರವಿಶ್ಯಾಥ ದ್ವಾರಪಾಲಾನ್ಪ್ರಣಮ್ಯ ಚ ॥ ೭೨ ॥

ತತ್ರ ಹಾಲಾಹಲಧರಂ ಹಾಲಾಸ್ಯಾಧಿಪತಿಂ ಶಿವಂ ।
ಲಿಂಗಮೂರ್ತಿಧರಂ ಚಾದೌ ಸಚ್ಚಿದಾನಂದರೂಪಕಂ ॥ ೭೩ ॥

ಚಿದಾನಂದಾಮೃತಮಯಂ ವಿಶ್ವಲಿಂಗಂ ವಿಮುಕ್ತಿದಂ ।
ವಿಶ್ವಾಲಯಂ ದಯಾಸಿಂಧುಂ ಪಂಚಾಶದ್ವರ್ಣರೂಪಿಣಂ ॥ ೭೪ ॥

ಆಲೋಕ್ಯಾನಂದವಿವಶೋ ನಿಶ್ಚಲಾಂಗ ಸ್ಸ ಸಾಂಜಲಿಃ ।
ಅನುಭೂಯ ಚಿದಾನಂದಮವಾಙ್ಮಾನಸಗೋಚರಂ ॥ ೭೫ ॥

ಸಾನಂದಂ ಜಲಪೂರ್ಣಾಕ್ಷಃ ಪುಲಕಾಂಕ ಕಲೇಬರಃ ।
ಪುರುಹೂತವಿಮಾನಸ್ಥಂ ಪುರಾತನತರಂ ಶಿವಂ ॥ ೭೬ ॥

---

ದರ್ಶನ ಮಾಡಿದನು. ಸುಂದರೇಶ್ವರನು ಹಾಲಾಸ್ಯಕ್ಷೇತ್ರಕ್ಕೆ ಅಧಿಪತಿಯಾಗಿರುವವನು. ಶಿವಲಿಂಗದ ಆಕಾರವನ್ನು ಧರಿಸಿರುವವನು ಸಚ್ಚಿದಾನಂದ ರೂಪವುಳ್ಳವನು. ಕೇವಲ ಚಿದಾನಂದಮಯ ಶರೀರದಿಂದ ಪ್ರಕಾಶಿಸುತ್ತಿರುವವನು. ಮುಕ್ತಿಯನ್ನು ಅವನು ಅನುಗ್ರಹಿಸುವವನು. ಪ್ರಪಂಚವೆಲ್ಲಕ್ಕೂ ಆಶ್ರಯನಾಗಿರುವವನು. ಮತ್ತು ಅಕ್ಷರಗಳ ರೂಪಿನಿಂದ ಇರುತ್ತಾ ದಯಾಸಾಗರನಾಗಿರುವವನು.

೭೫-೭೬. ಈ ಮಹಿಮೆಯುಳ್ಳ ಆ ದೇವ ದೇವನ ದರ್ಶನದಿಂದ ಉಂಟಾದ ಆನಂದದಿಂದ ಅವನು ಎಲ್ಲವನ್ನೂ, ಮರೆತು ಬಗಸೆಯನ್ನು ಕಟ್ಟಿಕೊಂಡು, ಮನಸ್ಸಿಗೂ, ಹೇಳುವುದಕ್ಕೂ ಗೋಚರವಾಗದಿರುವ ಆನಂದವನ್ನು ಅನುಭವಿಸಿದನು. ಆನಂತರದಲ್ಲಿ ಆನಂದ ಬಾಷ್ಪಗಳನ್ನು ಹೊಂದಿ, ರೋಮಾಂಚಿತ ಶರೀರವುಳ್ಳವನಾಗಿ, ಇಂದ್ರನ ವಿಮಾನದ ಮಧ್ಯದಲ್ಲಿರುವ ಶಿವನನ್ನು ಉತ್ತಮವಾದ ಪದ್ಯಗಳಿಂದ ಸ್ತೋತ್ರ ಮಾಡಿದನು.

ಪ್ರಸ್ತುತ್ಯ ಗೇಯವಯ್ಯರ್ಶ್ಚಾದೃಷ್ಟಪೂರ್ವಂ ಮನೋಹರಂ ।
ತಲ್ಲಿಂಗಮಧ್ಯೇ ದೃಷ್ಟ್ವಾಂಬಾಸಹಿತಂ ಪರಮೇಶ್ವರಂ ॥ ೭೭ ॥

ಧ್ಯಾತ್ವಾರ್ಚಯಿತ್ವಾ ವಿಧಿವದನುಜ್ಞಾಪ್ಯ ವಿನಿರ್ಯಯೌ ।
ವಾಗೀಶ ಇತಿ ಕಶ್ಚಿದ್ವೈ ಶಿವಯೋಗೀ ಮಹಾತಪಾಃ ॥ ೭೮ ॥

ಭೂತಿರುದ್ರಾಕ್ಷಧಾರೀ ಸಃ ಶಿವಲಿಂಗಾರ್ಚಕೋಽನಿಶಂ ।
ಮಧುರಾಯಾಂ ಮಠಂ ಕೃತ್ವಾ ತಿಷ್ಠತಿ ಸ್ವೇನ ತೇಜಸಾ ॥ ೭೯ ॥

ಕುಲಬಂಧನರಾಜ್ಞೀಭ್ಯಾಂ ನತ್ವಾ ಸಂಪೂಜಿತಸ್ತದಾ ।
ಶರಣಂ ತ್ವಾ ಸುಸಂಪನ್ನೌ ರಕ್ಷಾವಾಂ ಶಿಷ್ಯಕೋಟಿಷು ॥ ೮೦ ॥

ಆವಾಂ ಮತ್ವಾ ಶಿಷ್ಯಭೂತೌ ರಕ್ಷಾವಾಮಿತಿ ಚೋಚತುಃ ।
ತೇನಾಪಿ ಯೋಗಿನಾ ತಾಭ್ಯಾಂ ದತ್ವಾಽಭಯಂ ಸಮಾನಿತೌ ॥ ೮೧ ॥

---

೭೭-೭೯. ಅನಂತರದಲ್ಲಿ ಆ ಶಿವಲಿಂಗದ ಮಧ್ಯಭಾಗದಲ್ಲಿ ಜಗನ್ಮಾತೆಯಾದ ಪಾರ್ವತಿಯೊಡನೆ ಸುಂದರನಾದ ಪರಮೇಶ್ವರನನ್ನು ಪ್ರತ್ಯಕ್ಷವಾಗಿ ಕಂಡನು. ಅವನನ್ನು ಧ್ಯಾನಮಾಡಿ ಶಾಸ್ತ್ರಕ್ರಮದಿಂದ ಪೂಜಿಸಿದನು. ಅವನ ಅನುಜ್ಞೆಯನ್ನು ಪಡೆದು ದೇವಾಲಯದಿಂದ ಹೊರಗಡೆಗೆ ಹೊರಟನು. ಆಗ ಮಧುರಾ ನಗರದಲ್ಲಿ ವಾಗೀಶನೆಂದು ಹೆಸರುಳ್ಳ ಶಿವಯೋಗಿಯು ಬಹಳ ಹೆಚ್ಚಾದ ತಪಶ್ಶಾಲಿಯಾಗಿ, ಭಸ್ಮ ರುದ್ರಾಕ್ಷಗಳನ್ನು ಧರಿಸಿಕೊಂಡು ಯಾವಾಗಲೂ ಶಿವನನ್ನು ಪೂಜೆಮಾಡುತ್ತಿದ್ದನು. ಅವನು ತನ್ನ ಶಕ್ತಿಗನುಸಾರವಾಗಿ ಒಂದು ಮಠವನ್ನು ಕಟ್ಟಿಕೊಂಡು ವಾಸ ಮಾಡುತ್ತಿದ್ದನು.

೮೦–೮೮. ಕುಲಬಂಧನ ಮಂತ್ರಿಯೂ ರಾಣಿಯಾದ ವನಿತೇಶ್ವರಿ ಎಂಬ ಚೋಳ ರಾಜಪುತ್ರಿಯೂ ಅವನ ಹತ್ತಿರಕ್ಕೆ ಹೋಗಿ ಅವನನ್ನು ಪೂಜಿಸಿ, ನಮಸ್ಕಾರ ಮಾಡಿ "ನಾವಿಬ್ಬರೂ ನಿನ್ನನ್ನು ಶರಣು ಹೊಂದಿರುವೆವು. ನೀನು ಬಹಳ ಮಂದಿ ಶಿಷ್ಯರನ್ನು ರಕ್ಷಿಸುವ ಹಾಗೆ ನಮ್ಮನ್ನು ಶಿಷ್ಯರಂತೆ ಪರಿಗ್ರಹಿಸು. ಶಿಷ್ಯರಾದವರ ಗುಂಪಿನಲ್ಲಿ ನಮ್ಮನ್ನೆಣಿಸಿ ರಕ್ಷಿಸು." ಎಂದು ಅವನನ್ನು ಬೇಡಿಕೊಂಡರು. ಅವನು

ವಾಗೀಶೇನ ಚ ತಾಭ್ಯಾಂ ಚ ಪ್ರಾರ್ಥಿತೋ ಭೋಜನಾಯ ಚ
ಯಯೌ ಚ ತನ್ಮಠಂ ತೇನ ಸರ್ವೈಃ ಶಿಷ್ಯೈಃ ಪ್ರತಾಪವಾನ್ ॥ ೮೨ ॥

ಕುಲಬಂಧನರಾಜ್ಞೀಭ್ಯಾ ಮುಪದಾನೈರನೇಕಶಃ ।
ತನ್ಮಠಂ ಪೂರಿತಂ ಕ್ಷೀರದಧ್ಯಾಜ್ಯಸುಫಲಾದಿಭಿಃ ॥ ೮೩ ॥

ಸರ್ವೇಚ ಪೂಜಿತಾಸ್ತೇನ ಶಿಷ್ಯಾಃ ಷಡ್ರಸಭೋಜನೈಃ ।
ಜ್ಞಾನಸಂಬಂಧನಾಮಾಯಂ ಶ್ರೀಪೂರ್ವಂ ಶಿವಮರ್ಚಯನ್ ॥ ೮೪ ॥

ನಿತರಾಂ ಪೂಜಿತಸ್ತೇನ ಭುಕ್ತ್ವಾ ಶೇತೇ ಶಿವಂ ಸ್ಮರನ್ ।
ನಗರ್ಯಾ ನಾತಿದೂರಸ್ಥಪರ್ವತೇಷು ನಿವಾಸಿನಃ ॥ ೮೫ ॥

ನಗ್ನಾಸ್ಸರ್ವೇ ಚ ಸಂಭೂಯ ಹೋಮಂ ಕೃತ್ವಾಭಿಚಾರಕಂ ।
ಹವ್ಯಕವ್ಯೈಃ ತೋಷಯಿತ್ವಾ ವಹ್ನಿಂ ತು ವಿಧಿವತ್ಪುನಃ ॥ ೮೬ ॥

---

ಅವರಿಗೆ ಅಭಯವನ್ನು ಕೊಟ್ಟು ಮರ್ಯಾದೆಯನ್ನು ಮಾಡಿದನು. ಜ್ಞಾನ ಸಂಬಂಧ ಯೋಗಿಯು ದೇವಾಲಯದಿಂದ ಹೊರಟು ಬರುವಾಗ ವಾಗೀಶ ಶಿವಯೋಗಿಯೂ, ರಾಣಿ, ಕುಲಬಂಧನ ಮಂತ್ರಿ ಇವರುಗಳೂ ವಾಸಕ್ಕೂ, ಭೋಜನಕ್ಕೂ ನಿರ್ಬಂಧ ಮಾಡಿದರು. ಆದಕಾರಣ ಇವನು ತನ್ನ ಶಿಷ್ಯರೊಡನೆ ಆ ವಾಗೀಶ ಮಠದಲ್ಲಿ ವಾಸ ಮಾಡಲು ಒಪ್ಪಿ ಅಲ್ಲಿ ಇದ್ದನು. ಕುಲಬಂಧನ ಮಂತ್ರಿಯೂ, ರಾಣಿಯೂ ಶಿಷ್ಯ ಸಹಿತನಾಗಿರುವ ಜ್ಞಾನಸಂಬಂಧ ಯೋಗಿಗೆ ಬೇಕಾದ ಪದಾರ್ಥವೆಲ್ಲವನ್ನೂ ಕಳುಹಿಸಿ ಕೊಟ್ಟರು. ಅದರಿಂದ ಆ ಮಠವೆಲ್ಲವೂ ತುಂಬಿಹೋಯಿತು. ಎಲ್ಲರಿಗೂ ಷಡ್ರಸ ಪೂರ್ಣವಾದ ಸುಖವಾದ ಭೋಜನವಾಯಿತು. ಜ್ಞಾನಸಂಬಂಧ ಯೋಗಿಯು ಶಕ್ತಿ ಸಹಿತನಾದ ಪರಮೇಶ್ವರನನ್ನು ಪೂಜಿಸುತ್ತಾ ಇದ್ದನು.

೮೫-೮೯. ಅವನು ಶಿವಪೂಜೆಯ ಸುಖವನ್ನು ಅನುಭವಿಸುತ್ತಾ ಶಿವನನ್ನು ಧ್ಯಾನಮಾಡುತ್ತಿದ್ದನು. ಹೀಗೆ ಇರುವಾಗ ಮಧುರಾನಗರದ ಹತ್ತಿರದಲ್ಲಿರುವ ಗುಡ್ಡಗಳಲ್ಲಿ ವಾಸ ಮಾಡುವ ಮಂತ್ರವಾದಿಗಳಾದ ಬೌದ್ಧರು ಒಟ್ಟಾಗಿದ್ದರು. ಅವರು ಅಭಿಚಾರಿಕ ಹೋಮವನ್ನು ಮಾಡಿ ಹವ್ಯಕವ್ಯಗಳಿಂದ ಅಗ್ನಿ

ತಂ ವಹ್ನಿಂ ಪ್ರೇಷಯಾಮಾಸು ರ್ದಗ್ಧುಂ ವೈದಿಕವಾರಣಂ ।
ತೇನಾಗ್ನಿನಾ ಚಾಗತಾಸ್ತೇ ನಗ್ನಶಿಷ್ಯಾಶ್ಚ ಕೇಚನ ॥ ೮೭ ॥

ಸೋಽಗ್ನಿಶ್ಚ ತನ್ಮಠಂ ಪ್ರಾಪ್ಯ ನಿರ್ವೀರ್ಯತ್ವಮುಭವತ್ತದಾ ।
ದಗ್ಧುಂ ಕಿಂಚಿನ್ನ ಶಕ್ತಶ್ಚ ನ ಶಕ್ತಸ್ಸೋಽಪರಿಸ್ಥಿತಃ ॥ ೮೮ ॥

ತೈಃ ಪ್ರೇರಿತೋಽಪಿ ಬಹುಧಾ ಸುಂದರೇಶಸ್ಯ ಚಾಜ್ಞಯಾ ।
ನಗ್ನಾಶ್ಚ ಗೃಹ್ಯ ತಂ ವಹ್ನಿಮಷ್ಟದಿಕ್ಷು ಮಠೇ ಪುನಃ ॥ ೮೯ ॥

ಯೋಜಯನ್ದೀಪಯಿತ್ವಾ ಚ ಪ್ರಯಾಸೇನ ನ ದಹ್ಯತೇ ।
ತಮು ಜಾನನ್ ಜ್ಞಾನಪೂರ್ಣಃ ಶ್ರಾಂತ್ಯಾ ನಿದ್ರಾವಶೇನ ಚ ॥ ೯೦ ॥

ಶಿಷ್ಯಾಷ್ಷೋಡಶಸಾಹಸ್ರಾಃ ಅಪಿ ನಗ್ನವಿಚೇಷ್ಟಿತಂ ।
ವಿಜ್ಞಾಯ ಕರುಣಾಸಿಂಧುಃ ಕದಂಬವನನಾಯಕಃ ॥ ೯೧ ॥

---

ಯನ್ನು ಸಂತೋಷಪಡಿಸಿದರು. ಈ ಅಗ್ನಿಯಿಂದ ಈ ಜ್ಞಾನಸಂಬಂಧ ಯೋಗಿಯನ್ನು ನಾಶಪಡಿಸಲು ಕೆಲವರು ಅಗ್ನಿಯ ಜೊತೆಯಲ್ಲೇ ಬಂದರು. ಆ ಅಗ್ನಿಯು ಜ್ಞಾನ ಸಂಬಂಧಯೋಗಿಯು ವಾಸವಾಗಿರುವ ಮಠದ ಹತ್ತಿರಕ್ಕೆ ಬಂದು, ಅವನನ್ನು ನಾಶಪಡಿಸಲು ತಕ್ಕಷ್ಟು ಶಕ್ತಿಯುಳ್ಳದ್ದಾಗಿ ಇಲ್ಲದೇ ಇತ್ತು. ಸುಂದರೇಶ್ವರನ ಆಜ್ಞೆಯ ಪ್ರಕಾರ ಮಂತ್ರಿಗಳ ಮಂತ್ರದ ಶಕ್ತಿಯು ಅವನನ್ನು ಸುಡಲು ಆಗಲಿಲ್ಲ. ಆಗ ಅಗ್ನಿಯು ವಾಗೀಶ ಮಠದ ಮೇಲುಗಡೆಯಲ್ಲಿ ಹಾಗೆಯೇ ಇತ್ತು. ಅವರೆಲ್ಲರೂ ಅಗ್ನಿಯನ್ನು ಬಹಳ ವಿಧವಾಗಿ ಪ್ರೇರಿಸಿದರು. ಆ ಮಠದ ಎಂಟು ದಿಕ್ಕಿನಲ್ಲಿಯೂ ವಿಂಗಡಿಸಿ ನಿಲ್ಲಿಸಿದರು. ಎಲ್ಲವೂ ಬಹಳವಾಗಿ ಉರಿಯುವಂತೆ ಪ್ರೇರಿಸಿದರು. ಇಷ್ಟಾದರೂ ಜ್ಞಾನಸಂಬಂಧ ಯೋಗಿಗೂ ಅವನ ಶಿಷ್ಯರಿಗೂ ಯಾವತೊಂದರೆಯೂ ಉಂಟಾಗಲಿಲ್ಲ.

೯೦-೯೪. ಜ್ಞಾನಪೂರ್ಣಯೋಗಿಗೆ ಇದು ಯಾವುದೂ ತಿಳಿದಿರಲಿಲ್ಲ. ಆದರೂ ಅವನಿಗೆ ಇದರಿಂದ ಕೊಂಚ ಆಯಾಸವೂ, ನಿದ್ದೆಯೂ ಉಂಟಾಗುತ್ತಿತ್ತು. ಇವನಂತೆಯೇ ಇವನ ಹದಿನಾರು ಸಾವಿರ ಜನ ಶಿಷ್ಯರೂ ಇದ್ದರು. ದಯಾ

ನಿರ್ವೀರ್ಯೋವಮುಕರೋದಗ್ನಿಂ ಮಠೇ ಕಿಂಚಿನ್ನ ದಹ್ಯತೇ ।
ಮಠೋಪರಿ ಸ್ಥಿತಸ್ತೂಷ್ಣೀಂ ಪ್ರದೀಪ ಇವ ಭಾಸುರಃ ॥ ೯೨ ॥

ದೃಷ್ಟ್ವಾ ಶಿಷ್ಯಾಃ ಪುನರ್ವಹ್ನಿಂ ಮಠಸ್ಯೋಪರಿ ದೀಪಿತಂ ।
ಆಚಖ್ಯು ಸ್ಸ್ವಾಮಿನೇ ಜ್ಞಾನಸಂಬಂಧಾಯ ತ್ವರಾನ್ವಿತಾಃ ॥ ೯೩ ॥

ಶಿಷ್ಯೈ ರ್ಬೋಧಿತವೃತ್ತಾಂತ ಸ್ಸಮುತ್ಥಾಯ ಶಿವಂ ಸ್ಮರನ್ ।
ಜ್ಞಾನಪೂರ್ಣ ಸ್ಸ ಭಗವಾನ್ಗೇಯೈಸ್ಸ್ತುತ್ವಾವ ಶಂಕರಂ ॥ ೯೪ ॥

ಸಾಂಬಸ್ಯ ಸುಂದರೇಶಸ್ಯ ಶಾಸನಾದೇವ ಪಾವಕಃ ।
ಉಪೈತಿ ಕುಬ್ಜಪಾಂಡ್ಯಂ ತು ನಗ್ನಸಿದ್ಧಾಂತಿನಂ ಶನೈಃ ॥ ೯೫ ॥

ಜ್ವರರೂಪೇಣ ತಾಪಾಗ್ನಿಪೀಡಿತೋಽಭೂಚ್ಚ ತೇನ ಸಃ
ಇತಿ ಗೇಯಂ ಜಗೌ ಸೋಽಗ್ನಿಃ ಪ್ರಾಪ ಪಾಂಡ್ಯಕಲೇಬರಂ ॥ ೯೬ ॥

---

ಶಾಲಿಯಾದ ಕದಂಬವನಾಧಿಪತಿಯು ಮಾತ್ರ ಇದನ್ನು ತಿಳಿದು ಆ ಅಭಿಚಾರಿ ಕಾಗ್ನಿಯು ಶಕ್ತಿ ಇಲ್ಲದೇ ಇರುವಹಾಗೆ ಮಾಡಿದನು. ಅದರಿಂದ ಮಠದಲ್ಲಿ ಯಾವ ಪದಾರ್ಥವೂ ಸುಡದೆ ಅಗ್ನಿಯು ಮಾತ್ರ ಸುಮ್ಮನೆ ದೀಪವಿಟ್ಟ ಹಾಗೆ ಮಠದ ಮೇಲುಗಡೆಯಲ್ಲಿ ಕಾಣುತ್ತಿತ್ತು ಆಗ ಶಿಷ್ಯರು ಅದನ್ನು ನೋಡಿ ತಮ್ಮ ಜ್ಞಾನ ಸಂಬಂಧ ಗುರುವಿಗೆ ತಿಳಿಸಿದರು. ಶಿಷ್ಯರು ಹೇಳಿದ ವೃತ್ತಾಂತವನ್ನು ಕೇಳಿದ ಕೂಡಲೇ ಅವನು ಬೇಗ ಎಚ್ಚರಗೊಂಡು ಶಿವನನ್ನು ಸ್ಮರಿಸುತ್ತಾ ದ್ರಾವಿಡ ಭಾಷೆಯ ಪದ್ಯಗಳಿಂದ ಸ್ತುತಿ ಮಾಡಿದನು.

೯೫–೯೬. "ಜ್ಞಾನ ಸಂಬಂಧ ಯೋಗಿಯು, ದ್ರಾವಿಡ ಭಾಷೆಯ ಪದ್ಯದಿಂದ ದೇವಿಯೊಡನೆ ಇರುವ ಸುಂದರೇಶ್ವರನ ಆಜ್ಞಾನುಸಾರವಾಗಿ, ಈ ಅಗ್ನಿಯು ನಗ್ನ ಸಿದ್ಧಾಂತಾವಲಂಬಿಯಾದ ರಾಜನಾಗಿರುವ ಕುಬ್ಜ ಪಾಂಡ್ಯನಿಗೆ, ಜ್ವರರೂಪದಿಂದ ತೊಂದರೆಯನ್ನು ಉಂಟು ಮಾಡಲಿ," ಎಂದು ದ್ರಾವಿಡಭಾಷೆಯ ಪದ್ಯವನ್ನು ಹೇಳಿ ಬಿಟ್ಟನು. ಆಕ್ಷಣದಲ್ಲಿಯೇ ಮಠದ ಮೇಲುಗಡೆಯಲ್ಲಿ ಉರಿಯುತ್ತಿದ್ದ ಆ ಅಗ್ನಿಯು

ತೇನೈವ ಜ್ವರರೂಪೇಣ ಪೀಡಿತಃ ಪಾಂಡ್ಯಭೂಪತಿಃ ।
ತಾಪಜ್ವರೇಣ ನಿತರಾಮುತ್ಯುಗ್ರೇಣಾಶನಂ ವಿನಾ ॥ ೯೭ ॥

ಭೂಮೌ ವಿವೇಷ್ಟನಂ ಕುರ್ವನ್ನತಿಸಂತಾಪವಾನ ಭೂತ್ ।
ಕ್ಷಿಪ್ತೋಽಪಿ ವಹ್ನಿರಸ್ಮಾಭಿ ರ್ನ ದದಾಹ ಮಠಂ ಕ್ವಚಿತ್ ॥ ೯೮ ॥

ನೇತದಿತಿ ನಗ್ನಾಸ್ತೇ ಖಿನ್ನಾ ಜಗ್ಮುರ್ಯಥಾ ಗತಂ ।
ಪ್ರೇರಿತಶ್ಚಾಭಿಚಾರಾಗ್ನಿಸ್ತನ್ಮಠಂ ನ ದದಾಹ ಚ ॥ ೯೯ ॥

ಏವಂ ವಿಜ್ಞಾಪಯಾಮಾಸು ರಾಚಾರ್ಯಾಯ ಸ್ವಶಿಷ್ಯಕಾಃ ।
ನಗ್ನಾಸ್ಸಮೀಪ ಮಾಗತ್ಯ ಭೀತಿಯುಕ್ತಾಶ್ಚ ದೇಶಿಕಾಃ ॥ ೧೦೦ ॥

ವಿಚಾರ್ಯಮಾಣಾ ಸ್ಸಂಭೂಯ ಪೀಡಾಂ ಕರ್ತುಂ ಪುನಶ್ಚ ತೇ ।
ಉಠಕೋ ಭುವಿ ಭೂಪಸ್ಯ ಜ್ವರಸ್ಯ ಶಮನಾಯ ಚ ॥ ೧೦೧ ॥

---

ಪಾಂಡ್ಯರಾಜನ ಶರೀರವನ್ನು ಸೇರಿತು. ಬಹಳ ಭಯಂಕರವಾದ ಜ್ವರವು ಕುಬ್ಜ ಪಾಂಡ್ಯರಾಜನಿಗೆ ಬಂದಿತು. ಉಗ್ರವಾದ ಜ್ವರದ ತಾಪದಿಂದ ಅವನು ಆಹಾರವೂ ಇಲ್ಲದೇ ಇದ್ದನು. ಸಂಕಟದಿಂದ ನೆಲದಲ್ಲಿ ಹೊರಳುತ್ತಿದ್ದನು. "ನಾವು ಮಠವನ್ನು ಸುಡುವುದಕ್ಕಾಗಿ ಅಗ್ನಿಯನ್ನು ಪ್ರೇರಿಸಿದೆವು. ಅದು ಮಠವನ್ನು ಸುಡಲಿಲ್ಲ. ರಾಜನಿಗೆ ತೊಂದರೆಯು ಹೆಚ್ಚಾಗಲು ಕಾರಣವೇನು. ಇದು ಯಾತರಿಂದ ಹೀಗಾಯಿತು." ಎಂದು ಯೋಚಿಸುತ್ತಾ ಅಗ್ನಿಯೊಡನೆ ಬಂದಿದ್ದ ಮಂತ್ರವಾದಿಗಳು ಬಂದ ಹಾಗೆ ಹಿಂತಿರುಗಿದರು.

೯೯-೧೦೨. ಮಠವನ್ನು ಸುಡುವುದಕ್ಕಾಗಿ ಕಳುಹಿಸಿದ ಅಗ್ನಿಯು ಮಠವನ್ನು ಸುಡಲಿಲ್ಲವೆಂದು ಶಿಷ್ಯರು ತಮ್ಮ ತಮ್ಮ ಗುರುಗಳಿಗೆ ಹೇಳಿದರು. ಗುರುಗಳಾದವರು ಎಲ್ಲರೂ ಒಟ್ಟಾಗಿ ಸೇರಿ ತಕ್ಕ ಆಲೋಚನೆಯನ್ನು ಮಾಡಲುಪ ಕ್ರಮಿಸಿದರು. ಜ್ವರದ ವೇಗದಿಂದ ಭೂಮಿಯಲ್ಲಿ ಹೊರಳುತ್ತಿರುವ ರಾಜನ

ಚಕ್ರುಃ ಪ್ರತಿಕ್ರಿಯಾಂ ವೈದ್ಯಾಃ ಔಷಧಾರ್ಜನಪೂರ್ವಕೈಃ ।
ಬಹುವೈದ್ಯೌಷಧೈಶ್ಚಾಪಿ ನ ಶಶಾಮ ನೃಪಜ್ವರಃ ॥ ೧೦೨ ॥

ಅಭಿಚಾರೈಸ್ಸಮುದ್ಭೂತೋ ನಗ್ನಾನಾಂ ಸೋಽಗ್ನಿರುತ್ಕಟಃ ।
ಪ್ರವೀಣಾ ಅಪಿ ವೈದ್ಯಾಶ್ಚ ದುಃಖಿತಾಶ್ಚಿಂತಯಾನ್ವಿತಾಃ ॥ ೧೦೩ ॥

ಅಭಿಚಾರೋದ್ಭವಸ್ಸೋಽಗ್ನಿರಿತಿ ಜಾನಂತಿ ನೈವ ತತ್ ।
ನ ಶಾಂತೋ ಜ್ವರ ಇತ್ಯೇವ ಪ್ರಭ್ರೃತ್ಸರ್ವ ಭಿಷಗುತ್ತಮಾನ್ ॥ ೧೦೪ ॥

ಗಚ್ಛಧ್ವಮಿತಿ ಚಾಜ್ಞಾಪ್ಯ ಪ್ರಾಹ ಮಂತ್ರಿಮುಖಾನ್ನೃಪಃ ।
ಮಂತ್ರವಾದರತಾನ್ನಗ್ನಾನಾಹೂಯಾಚಾರ್ಯಪೂರ್ವಕಾನ್ ॥ ೧೦೫ ॥

ಭವಂತೋ ಜ್ವರಶಾಂತಿಂ ಮೇ ಕುರ್ವಂತ್ವಿತ್ಯಬ್ರವೀಚ್ಚ ಸಃ ।
ತೇಽಪಿ ಚಾಹೂಯ ತಾನ್ನಗ್ನಾನ್ಜ್ವರಶಾಂತಿಂ ನೃಪಸ್ಯ ತು ॥ ೧೦೬ ॥

---

ಜ್ವರದ ಪರಿಹಾರಕ್ಕಾಗಿ ಉತ್ತಮವಾದ ಔಷಧಿಗಳಿಂದ ವೈದ್ಯರು ತಕ್ಕ ಚಿಕಿತ್ಸೆಯನ್ನು ಮಾಡುತ್ತಿದ್ದರು. ಬಹಳ ಮಂದಿ ವೈದ್ಯರೂ ಔಷಧಿಗಳನ್ನು ಕೊಟ್ಟರು. ಆದಾಗ್ಯೂ ರಾಜನಿಗೆ ಪ್ರಾಪ್ತವಾಗಿದ್ದ ಜ್ವರವು ಶಾಂತವಾಗಲಿಲ್ಲ.

೧೦೩–೧೦೮. ಮಂತ್ರವಾದಿಗಳ ಅಭಿಚಾರ ಕ್ರಿಯೆಯಿಂದ ಉಂಟಾಗಿರುವ ಕಾರಣ ಜ್ವರವು ಬಹಳ ಹೆಚ್ಚಾದ ವೇಗದಿಂದ ಇತ್ತು. ವೈದ್ಯರು ಬಹಳ ಹೆಚ್ಚಾಗಿ ಶ್ರಮಪಟ್ಟರು. ವೈದ್ಯರು ಬಹಳ ಬುದ್ಧಿವಂತರಾಗಿದ್ದಾಗ್ಯೂ, ಜ್ವರವು ಔಷಧಿಯಿಂದ ಕಡಮೆಯಾಗದಿರುವ ಕಾರಣ ದುಃಖಪಡುತ್ತಿದ್ದರು ಅವರಿಗೆ ಇದು ಅಭಿಚಾರಿಕ ಜ್ವರವೆಂದು ತಿಳಿದಿರಲಿಲ್ಲ ರಾಜನು ಜ್ವರವು ಕಡಿಮೆಯಾಗದಿರುವ ಕಾರಣ ಆ ವೈದ್ಯೋತ್ತಮರೆಲ್ಲರನ್ನೂ ನಿಂದಿಸಿ, ಬೆದರಿಸಿ ಮಂತ್ರಿಗಳ ಮೂಲಕವಾಗಿ ಓಡಿಸಿದನು. ಮಂತ್ರವಾದಿಗಳೆಲ್ಲರಿಗೂ ಗುರುಗಳಾಗಿರುವವರನ್ನು ಕರಸಿ ನನ್ನ ಜ್ವರವು ಶಾಂತವಾಗುವಂತೆ ಮಾಡಿರಿ ಎಂದು ಅವರಿಗೆ ತಿಳಿಸಿದನು. ಮಂತ್ರಿಗಳ ಮೂಲಕ ರಾಜನ ಜ್ವರವನ್ನು ಕಡಿಮೆ ಮಾಡುವುದಕ್ಕಾಗಿ ಚಿಕಿತ್ಸೆ ಮಾಡಲು ಬಂದಿರುವ ಮಂತ್ರವಾದಿಗಳು ತಮ್ಮ ಶಿಷ್ಯರೊಡನೆ ನವಿಲು ಗರಿಗಳ ದೊಂದೆಯನ್ನು

ಕುರ್ವಂತ್ವಿತಿ ಪ್ರೇರಿತಾಶ್ಚ ನಗ್ನಾಚಾರ್ಯಾಸ್ಸ ಶಿಷ್ಯಕಾಃ ।
ತೇ ದೃಷ್ಟ್ವಾ ಜ್ವರಿತಂ ಭೂಪಂ ಪಿಂಛೈಃ ಸ್ಪೃಷ್ಟ್ವಾಭಿಮಂತ್ರ್ಯ ಚ ॥೧೦೭॥

ಪುನಃ ಪುನರ್ಮಹಾಯತ್ನಂ ಭಾವನಾಭಿಶ್ಚ ಚಕ್ರಿರೇ ।
ಕುಂಡಿಕಾಂಬುಪ್ರೋಕ್ಷಣೈಶ್ಚ ಬಹುಯತ್ನೈಃ ಸಮಾಹಿತಾಃ ॥ ೧೦೮ ॥

ತಥಾಪಿ ಜ್ವರ ಏಕಸ್ಯ ಕಿಂಚಿನ್ನೋಪಶಮಂ ಯಯೌ ।
ಅನುಕ್ಷಣಂ ವರ್ಧತೇ ಚ ಬಡಬಾಗ್ನಿರಿವಾಂಭಸಾ ॥ ೧೦೯ ॥

ದೂರೀಕೃತ್ಯ ಚ ತಾಂ ಸರ್ವಾನ್ಪ್ರಭೃತ್ಯಾನ್ಯಾಚಾರ್ಯಕಾನಪಿ ।
ಜ್ವರವೇಗಾಸಹಿಷ್ಣುಶ್ಚ ವೀಕ್ಷ್ಯ ಜಾಯಾಂ ಚ ಮಂತ್ರಿಣಂ ॥ ೧೧೦ ॥

ಪತನ್ಪ್ರಣಷ್ಟಸಂಜ್ಞೋಽಭೂತ್ ಕುಬ್ಜಪಾಂಡ್ಯನುಹೀಪತಿಃ ।
ತದಾ ಮಂತ್ರೀ ಚ ಮಹಿಲಾ ಉಭಾವಭ್ಯೇತ್ಯ ಭೂಪತಿಂ ॥ ೧೧೧ ॥

ಬೋಧಯಾಮಾಸತು ಸ್ತಸ್ಯ ಪುಣ್ಯಪಾಪವಶೇರಿತಾ ।
ಕ್ಷಮಯೇಯಮಿತಿ ಜ್ಞಾತ್ವಾ ನೃಪಸ್ಯ ಚ ಹಿತಾಯ ಚ ॥ ೧೧೨ ॥

---

ಅಭಿಮಂತ್ರಿಸಿ ಭಾವನೆಯನ್ನು ಮಾಡುತ್ತಾ ಬಹಳ ಮಟ್ಟಿನ ಪ್ರಯತ್ನವನ್ನು ಮಾಡಿದರು. ಮತ್ತು ಕಮಂಡಲೋದಕವನ್ನು ಪ್ರೋಕ್ಷಿಸಿದರು. ಆದರೂ ಜ್ವರವು ಕೊಂಚವೂ ಶಾಂತವಾಗಲಿಲ್ಲ ಸಮುದ್ರದಲ್ಲಿ ನೀರಿನಿಂದ ಹೆಚ್ಚುತ್ತಿರುವ ಬಡಬಾಗ್ನಿಯಂತೆ ಜ್ವರವು ಹೆಚ್ಚುತ್ತಿತ್ತು.

೧೦೯-೧೧೨. ಆಗ ರಾಜನು ಬೌದ್ಧ ಮಂತ್ರವಾದಿಗಳು, ಗುರುಗಳು ಇವರೆಲ್ಲರನ್ನೂ ಹೆದರಿಸಿ ಓಡಿಸಿದನು. ರಾಜನು ಜ್ವರದ ವೇಗವನ್ನು ತಡೆಯಲಾರದೆ ತನ್ನ ಮಂತ್ರಿ ಮತ್ತು ಹೆಂಡತಿ ಇವರನ್ನು ನೋಡುತ್ತಾ ಜ್ಞಾನವಿಲ್ಲದವನಾಗಿ ಭೂಮಿಯಲ್ಲಿ ಬಿದ್ದನು. ಆಗ ಮಂತ್ರಿಯೂ, ರಾಣಿಯೂ ದೊರೆಯ ಹತ್ತಿರಕ್ಕೆ ಬಂದು ಅವನ ಪುಣ್ಯ ಪಾಪಗಳಿಂದ ಪ್ರೇರಿತರಾಗಿ ನಾವು ಹೇಳುವುದನ್ನು ಇವನು “ ಈಗ ನಡೆಸುವನು ” ಎಂದು ತಿಳಿದುಕೊಂಡು ಅವನ ಹಿತಕ್ಕಾಗಿ ಹೇಳಿದರು.

ಹೇ ರಾಜನ್ನೋ ಶೃಣು ವಚಃ ಪ್ರಾಣರಕ್ಷಣಹೇತವೇ ।
ಜ್ಞಾನಪೂರ್ಣ ಇತಿ ಖ್ಯಾತಃ ಕಶ್ಚಿದ್ವಿಪ್ರವರಾತ್ಮಜಃ ॥ ೧೧೩ ॥

ಶ್ರೀಹಾಲಾಸ್ಯಶಿವಂ ನಂತುಂ ಆಗತ್ಯಾತ್ರ ಚ ತಿಷ್ಠತಿ ।
ಚೋಲದೇಶಾ ಚ್ಛಿವಾನಂದಯೋಗೀಂದ್ರಸ್ಯ ತು ವೈ ಮಠೇ ॥ ೧೧೪ ॥

ಶಕ್ತಿಮಾನಿತಿ ತಂ ಸರ್ವೇ ಪ್ರಶಂಸಂತಿ ಚ ಸಜ್ಜನಾಃ ।
ಶೈವಸಿದ್ಧಾಂತಿನಾಂ ಶ್ರೇಷ್ಠಶ್ಶೈವಾಚಾರ್ಯಶ್ಚ ಬುದ್ಧಿಮಾನ್ ॥ ೧೧೫ ॥

ವಯಸಾ ಬಾಲರೂಪೋಽಪಿ ಹ್ಯಬಾಲೋ ಜ್ಞಾನವಿದ್ಯಯಾ ।
ಶಂಕರೇತೀವ ಭಕ್ತಶ್ಚ ಶಿವೇನಾನುಗ್ರಹೀಕೃತಃ ॥ ೧೧೬ ॥

ತಮೇವಾಹೂಯ ಕರ್ತವ್ಯಃ ಪ್ರತೀಕಾರೋ ಜ್ವರಸ್ಯ ಹಿ ।
ಇತ್ಯಾವಯೋರ್ಮತಂ ರಾಜನ್ಯದಿಷ್ಟಂ ಕುರು ತತ್ಕ್ಷಣಾತ್ ॥ ೧೧೭ ॥

---

೧೧೩-೧೧೭. ಎಲೈ ರಾಜನೇ "ಪ್ರಾಣವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ನಮ್ಮ ಮಾತನ್ನು ಕೇಳು. ಜ್ಞಾನಪೂರ್ಣನೆಂದು ಹೆಸರುಳ್ಳ ಒಬ್ಬ ಬ್ರಾಹ್ಮಣ ಕುಮಾರನು ಹಾಲಾಸ್ಯೇಶ್ವರನ ಸೇವೆಗಾಗಿ ಚೋಳದೇಶದಿಂದ ಇಲ್ಲಿಗೆ ಬಂದಿರುವನು. ಶಿವಾನಂದ ಯೋಗೀಂದ್ರನ ಮಠವಲ್ಲಿ ಅವನು ಇರುವನು. ಅವನನ್ನು ಎಲ್ಲರೂ ಮಹಿಮೆಯುಳ್ಳವನೆಂದು ಹೇಳುವರು. ಅವನು ಸಣ್ಣವಯಸ್ಸಿನ ಹುಡುಗನಾಗಿದ್ದರೂ ಪೂಜ್ಯನಾಗಿರುವನು. ಶಿವನ ಸಂಬಂಧವಾದ ಸಿದ್ಧಾಂತವನ್ನು ತಿಳಿದವರಲ್ಲಿ ಉತ್ತಮನಾಗಿರುವನು. ಮತ್ತು ಬುದ್ಧಿವಂತನಾಗಿರುವನು. ಶಿವನಲ್ಲಿ ಬಹಳ ಭಕ್ತಿಯುಳ್ಳವನಾಗಿರುವನು. ಶಿವನ ಅನುಗ್ರಹಕ್ಕೂ ಪಾತ್ರನಾಗಿರುವನು. ಆದ್ದರಿಂದ ಅವನನ್ನು ಕರೆದು ಈ ಜ್ವರಕ್ಕೆ ಪ್ರತೀಕಾರವನ್ನು ಮಾಡತಕ್ಕದ್ದು. ಎಂದು ನಾವಿಬ್ಬರೂ ಅಭಿಪ್ರಾಯಪಟ್ಟಿರುವೆವು. ಎಲೈ ಪ್ರಭುವೆ ನಿನ್ನ ಇಷ್ಟದಂತೆ ಕೆಲಸವನ್ನು ಮಾಡುವೆವು." ಎಂದು ಹೇಳಿದರು.

ಏವಂ ತಯೋರ್ವಚಃ ಶ್ರುತ್ವಾ ತದಾ ಪಾಂಡ್ಯಮಹೀಪತಿಃ
ಜ್ವರಿತೋಽಪಿ ರುಷಾಯುಕ್ತಃ ಪ್ರಾಹ ಚೈವಮುಭೌ ಪ್ರಭುಃ ॥ ೧೧೮ ॥

ಆಗತಶ್ಚೇದ್ಭಸ್ಮನಾ ಮಾಂ ನ ಸ್ಪೃಶೇಜ್ಜ್ವರಶಾಂತಯೇ ।
ಅಹಂ ನಗ್ನಾಟಸಿದ್ಧಾಂತೀ ಭಸ್ಮ ನೋ ನಾರ್ಹ ನೋ ವ ಹಿ ॥ ೧೧೯ ॥

ಇತ್ಯುಕ್ತೇ ಸತಿ ಭೂಪಾಲೇ ಪೂರ್ವಜನ್ಮಕೃತಾಂಹಸಾ ।
ತದ್ವಾಕ್ಯಮೇವಂ ಶ್ರುತ್ವಾ ತೌ ಪುನರ್ವಾಚ ಮಥೋಚತುಃ ॥ ೧೨೦ ॥

ವೇದಸಿದ್ಧಂ ಪಾವನಂ ಚ ಭಸ್ಮ ನ ತ್ಯಾಜ್ಯಮೇವ ನಃ ।
ಅವೈದಿಕಾಃ ಪಾಪಿನಸ್ತೇ ನಗ್ನಾಃ ಸತ್ಯಂ ವದಾಮಹೇ ॥ ೧೨೧ ॥

ಭಸ್ಮಾಕ್ಷತ್ಯಾಗಿನಾಂ ನೄಣಾಂ ನಿರಯಂ ಪ್ರಬ್ರುವಂತಿ ಚ ।
ಆಪತ್ಕಾಲೇ ಶೃಣು ವಚಸ್ತವ ತಾಪೋಪಶಾಂತಯೇ ॥ ೧೨೨ ॥

ಸರ್ವಾಘಶಾಂತಯೇ ಚಾಪಿ ಪಿತೃಪ್ರೀತ್ಯೈ ತಾಮಹೈರ್ಧೃತಂ ।
ರುದ್ರಾಕ್ಷಂ ಭಸ್ಮಪೂಜಾ ಚ ಶಿವಸ್ಯ ಸಕಲೇಶಿತುಃ ॥ ೧೨೩ ॥

---

೧೧೮–೧೨೩. ಆಗ ರಾಜನು ಇವರ ಮಾತನ್ನು ಕೇಳಿ ಜ್ವರದ ಸಂಕಟ ವುಳ್ಳವನಾಗಿದ್ದರೂ ಕೋಪದಿಂದ, "ನಾನು ನಾಸ್ತಿಕ ಸಿದ್ಧಾಂತದವನು. ಆದ್ದರಿಂದ ಭಸ್ಮವನ್ನು ನನ್ನ ಜ್ವರದ ಶಾಂತಿಗಾಗಿ ಉಪಯೋಗಿಸಕೂಡದು. ಅದು ನನಗೆ ತಕ್ಕದ್ದಲ್ಲವು." ಎಂದು ಅವರಿಬ್ಬರ ಸಂಗಡ ಹೇಳಿದನು. ರಾಜನು ತನ್ನ ಜನ್ಮಾಂತರದ ಪಾಪಶೇಷಕ್ಕೆ ಒಳಗಾಗಿ ಹೀಗೆ ಹೇಳುತ್ತಿರುವ ಮಾತನ್ನು ಕೇಳಿ, "ಭಸ್ಮವು ವೇದೋಕ್ತವಾದುದು. ಪರಿಶುದ್ಧವಾದದ್ದು. ಆದ್ದರಿಂದ ಅದನ್ನು ತ್ಯಾಗಮಾಡಬಾರದು. ನಾಸ್ತಿಕರು ಪಾಪಿಗಳು. ವೇದಗಳ ವಿಷಯದಲ್ಲಿ ನಂಬಿಕೆಯು ಅವರಿಗಿಲ್ಲವು. ಭಸ್ಮ ರುದ್ರಾಕ್ಷಿಗಳನ್ನು ಬಿಟ್ಟವರಿಗೆ ನರಕವಾಸವು ತಪ್ಪಿದ್ದಲ್ಲವು ಎಂದು ದೊಡ್ಡವರು ಹೇಳುವರು. ಈಗ ಆಪತ್ಕಾಲವಾಗಿರುವುದರಿಂದ ಜ್ವರದ ಉಪಶಾಂತಿಗಾಗಿಯಾದರೂ ನಮ್ಮ ಮಾತನ್ನು ಕೇಳುವುದು ಉತ್ತಮವು.

ನಗ್ನಾಂಸ್ತಾಂಶ್ಚ ಸಮಾಹೂಯ ಪ್ರಾರ್ಥಯ ಜರಶಾಂತಯೇ ।
ಮಧ್ಯೇ ಚ ಕ್ಷಪಣಾಚಾರ್ಯ ವೈದಿಕಾಚಾರ್ಯವರ್ಯಯೋಃ ॥ ೧೨೪ ॥

ಯಃ ಕರಿಷ್ಯತಿ ತಚ್ಛಾಂತಿಂ ತಂ ಗುರುಂ ಕುರುಮೋ ವಯಂ ।
ಇತ್ಯುಕ್ತೇ ಸತಿ ತಾಭ್ಯಾಂ ಸಃ ನಿರ್ಬಂಧಜ್ವರಪೀಡಿತಃ ॥ ೧೨೫ ॥

ತಥಾಸ್ತ್ವಿತಿ ದದಾವಾಜ್ಞಾಂ ನಗ್ನಾನಾಂ ತಸ್ಯ ಹೂತಯೇ ।
ಮಂತ್ರಿಣಾ ಮಹಿತಾ ರಾಜ್ಞಾ ಚಾಹೂತಾಃ ಪ್ರೇಷಿತೈರ್ಜನೈಃ ॥ ೧೨೬ ॥

ನಗ್ನಾಶ್ಚ ಸಂಭ್ರಮ್ಯೋರ್ಯುಕ್ತಾಸ್ಸಮಾಯಾಂತಿ ನೃಪಾಂತಿಕಂ ।
ಅಥ ರಾಜ್ಞೀ ಚ ಮಂತ್ರೀ ಚ ತನ್ಮತಂ ಪ್ರಾಪ್ಯ ಸತ್ವರಂ ॥ ೧೨೭ ॥

ತೌ ತಂ ನತ್ವಾ ಚ ಸಂಪ್ರಾರ್ಥ್ಯ ತಮಾಹೂಯ ಸಮಾಗತೌ ।
ಪ್ರಶಾಂತಸ್ಸರ್ವಸಮಾಯಾತ ಸ್ಸೋಪಿ ವೈದಿಕವಾರಣಃ ॥ ೧೨೮ ॥

---

೧೨೩-೧೨೬. ತಂದೆ ತಾತ ಇವರುಗಳೂ ಭಸ್ಮ ರುದ್ರಾಕ್ಷಿಗಳನ್ನು ಧರಿಸಿದ್ದರು. ಸರ್ವೇಶ್ವರನಾದ ಶಿವನ ಪೂಜೆಯನ್ನು ಮಾಡುತ್ತಿದ್ದರು ಇದರಿಂದ ಪಾಪಗಳೆಲ್ಲವೂ ನಾಶವಾಗುವುದು. ಆದರೆ ಈಗ ನಿನಗೆ ಸನ್ನ ಜ್ವರವು ಶಾಂತವಾಗುವುದಕ್ಕಾಗಿ ಅವೈದೀಕರಾದ ನಾಸ್ತಿಕರೂ, ವೇದದಲ್ಲಿ ನಂಬಿಕೆ ಇರುವ ಆಸ್ತಿಕರೂ ಚಿಕಿತ್ಸೆಯನ್ನು ಮಾಡಲಿ. ಇವರಿಬ್ಬರಲ್ಲಿ ಯಾರಿಂದ ಜ್ವರವು ನಾಶವಾಗುವುದೋ ಅವರನ್ನು ಗುರುವಾಗಿ ನಾವು ತಿಳಿದುಕೊಳ್ಳೋಣ" ಎಂದು ಹೇಳಿದ ಅವರಿಬ್ಬರ ನಿರ್ಬಂಧದ ಮಾತನ್ನು ಕೇಳಿ ಜ್ವರದ ಬಾಧೆಯಿಂದ ರಾಜನು ಒಪ್ಪಿ ಕೊಂಡನು. ಅವನು ಹಾಗೇ ಆಗಲಿ ಎಂದು ಮಂತ್ರವಾದಿಗಳನ್ನು ಕರೆಯುವುದಕ್ಕೆ ಅಪ್ಪಣೆ ಮಾಡಿದನು.

೧೨೭-೧೩೦. ಮಂತ್ರಿಯೂ ಮತ್ತು ರಾಣಿಯೂ ಹೇಳಿ ಕಳುಹಿಸಿದ ಜನಗಳೊಡನೆ ಮಂತ್ರವಾದಿಗಳು ಸಂಭ್ರಮದಿಂದ ರಾಜನ ಹತ್ತಿರಕ್ಕೆ ಬಂದರು. ರಾಜ ಮಂತ್ರಿಯಾದ ಕುಲಬಂಧನನೂ, ವಸಿತೇಶ್ವರಿಯೆಂಬ ರಾಣಿಯೂ ಬೇಗ ಶಿವಾನಂದ

**ಶಿಷ್ಯೈಃ ಷೋಡಶಸಾಹಸ್ರೈರ್ಗಣಸ್ಥೈಶ್ಚ ಯಥಾ ಶಿವಃ ।**
**ಆಸನೇಷೂಪವಿಷ್ಟಾನಾಂ ಕ್ಷಪಣಾನಾಂ ತು ಮಧ್ಯಮೇ ॥ ೧೨೯ ॥**

**ಶಿಷ್ಯಪ್ರದತ್ತಪೀಠೇ ಸ ಸೂಪವಿಷ್ಟಃ ಶಿವಂ ಸ್ಮರನ್ ।**
**ಮತ್ತೇಭಾಷ್ಟಸಹಸ್ರಾಣಾಂ ಮಧ್ಯೇ ಸಿಂಹಶಿಶುರ್ಯಥಾ ॥ ೧೩೦ ॥**

**ತಥೈವಾಸೀತ್ ಜ್ಞಾನಪೂರ್ಣೋ ಜನಾನಾಂ ಪಶ್ಯತಾಮಪಿ ।**
**ಆವಾಭ್ಯಾಮಯ ಮಾಹೂತೋ ಬಾಲೋ ವೈದಿಕವಾರಣಃ ॥ ೧೩೧ ॥**

**ವೇದಬಾಹ್ಯಾ ಇಮೇ ಸರ್ವೇ ನಗ್ನಾಃ ನಂಚನ ಚಂಚವಃ ।**
**ರಾಜ್ಞೋಽಪಿ ಭೃಶಮಿಷ್ಟಾಶ್ಚ ಬಭೂವುಸ್ತರ್ಕಕೋಽತುಲಾಃ ॥ ೧೩೨ ॥**

**ವೈದಿಕಾವೈದಿಕಾನಾಂ ಚ ಮಧ್ಯೇ ಕೇಷಾಂ ಜಯೋಽಧುನಾ ।**
**ಇತಿ ಭೀತೌ ಸಮಾಲೋಕ್ಯ ತೌ ರಾಜ್ಞೀಮಂತ್ರಿಣಾಮಪಿ ॥ ೧೩೩ ॥**

---

ಮಠಕ್ಕೆ ಹೋಗಿ ಜ್ಞಾನಪೂರ್ಣ ಯೋಗಿಯು ರಾಜನ ಹತ್ತಿರಕ್ಕೆ ಬರುವಂತೆ ಪ್ರಾರ್ಥನೆ ಮಾಡಿ ಕರದು ಬಂದರು. ಜ್ಞಾನಪೂರ್ಣಯೋಗಿಯು ಉಪಶಾಂತನಾಗಿ ತನ್ನ ಹದಿನಾರುಸಾವಿರ ಶಿಷ್ಯ ಜನರೊಡನೆ, ಗಣಗಳಿಂದ ಕೂಡಿದ ಶಿವನು ಬಂದಂತೆ ಬಂದನು. ಆಗ ಮಂತ್ರವಾದಿಗಳು ಮುಂಚಿತವಾಗಿ ಬಂದು ಆಸನಗಳಲ್ಲಿ ಕೂತುಕೊಂಡಿದ್ದರು. ಅವರ ಮಧ್ಯದಲ್ಲಿ ಶಿಷ್ಯರು ಹಾಕಿರುವ ಪೀಠದಲ್ಲಿ ಜ್ಞಾನಪೂರ್ಣ ಯೋಗಿಯು ಕೂತು ಕೊಂಡನು. ಎಂಟುಸಾವಿರ ಮದಿಸಿದ ಆನೆಗಳ ಮಧ್ಯದಲ್ಲಿ ಸಿಂಹದ ಮರಿಯಹಾಗೆ ಪ್ರಕಾಶಿಸುತ್ತಿರುವ ಅವನನ್ನು ಜನರೆಲ್ಲರೂ ನೋಡುತ್ತಿದ್ದರು.

೧೩೧–೧೩೭. ನಾವಿಬ್ಬರೂ ಹುಡುಗನಾದ ಜ್ಞಾನಪೂರ್ಣ ಯೋಗಿಯನ್ನು ಬರಮಾಡಿರುವೆವು. ಈ ಮಂತ್ರವಾದಿಗಳೆಲ್ಲರೂ ವೇದ ಬಾಹ್ಯರು. ಇವರುಗಳು ಮೋಸಮಾಡುವುದರಲ್ಲಿ ಸಮರ್ಥರು. ಇವರು ರಾಜನ ಪ್ರೀತಿಗೆ ಬಹಳ ಮಟ್ಟಿಗೆ ಪಾತ್ರರಾಗಿರುವರು. ತರ್ಕದಲ್ಲಿ ಇವರಿಗೆ ಸಮಾನರಾದವರು ಯಾರೂ ಇಲ್ಲ.

ಜ್ಞಾನಪೂರ್ಣಃ ಸ್ತುವನ್ ಗೇಯೈಸ್ಸಾಂಬಂ ಸುಂದರನಾಯಕಂ ।
ಚಿಂತಾದ್ಯ ಯುವಯೋರ್ಮಾಸ್ತು ಮದೀಯಹೃದಯಸ್ಥಿತಃ ॥ ೧೩೪ ॥

ಶ್ರೀಹಾಲಾಸ್ಯಪತಿರ್ಮಾ ಭೈರಿತ್ಯತೋಷಯಯದಿಂಗಿತೈಃ ।
ನಗ್ನಾಸ್ತೇ ತರ್ಕಕುಶಲಾ ಸ್ಸಂಭ್ರಮ್ಯೈಶ್ಚ ಸಗರ್ವಿತಾಃ ॥ ೧೩೫ ॥

ರಾಜ್ಞಶ್ಚ ಮಂತ್ರಿಣಶ್ಚಾಗ್ರೇ ಪ್ರತಿಜ್ಞಾಂ ಚಕ್ರುರಿತ್ಯಪಿ ।
ನೃಪಸ್ಯ ದಕ್ಷಪಾರ್ಶ್ವಸ್ಥಮಯಂ ಶಮಯತು ಜ್ವರಂ ॥ ೧೩೬ ॥

ಶಮಯಾಮೋವಯಂ ವಾಮಭಾಗಸ್ಥಂ ಸಹಸಾ ಜ್ವರಂ ।
ಸಾಮರ್ಥ್ಯಮಸ್ತ್ಯಸ್ಯಸ್ಮಾಕಂ ಪಶ್ಯಂತ್ವತ್ರ ಸ್ಥಿತಾ ಜನಾಃ ॥ ೧೩೭ ॥

ಏವಂ ಪ್ರತಿಜ್ಞಾಮಾಕರ್ಣ್ಯ ನಗ್ನಾನಾಂ ವೈದಿಕಾಗ್ರಣೀಃ ।
ತಥಾಸ್ತ್ವಿತ್ಯನುಮೇನೇ ತಂ ರಾಜ್ಞೀ ಮಂತ್ರೀ ನನಂದ ಚ ॥ ೧೩೮ ॥

---

ಹೀಗಿರುವಲ್ಲಿ ಇವರಿಗೂ, ವೈರಿಕರಿಗೂ, ಈಗ ಜಯವು ಯಾರಿಗಾಗುವುದೋ ತಿಳಿಯದು. ಎಂದು ಹೆದರಿಕೊಂಡಿದ್ದ ಅವರಿಬ್ಬರನ್ನೂ ಜ್ಞಾನ ಪೂರ್ಣಯೋಗಿಯು ನೋಡಿದನು. ಆಗ ಅವನು ದ್ರಾವಿಡ ಭಾಷೆಯ ಪದ್ಯಗಳಿಂದ ಮೀನಾಕ್ಷೀ ಸಹಿತನಾದ ಸುಂದರೇಶ್ವರನನ್ನು ಸ್ತುತಿಮಾಡಿದನು. ನೀವಿಬ್ಬರೂ ಯೋಚನೆ ಮಾಡಬೇಡಿರಿ· ಎಂದು ಅಭಿಪ್ರಾಯವನ್ನು ಸೂಚಿಸಿ ಸಂತೋಷ ಪಡಿಸಿದನು. ತರ್ಕದಲ್ಲಿ ಕುಶಲರಾದ ಮಂತ್ರವಾದಿಗಳು ಅಹಂಕಾರದಿಂದ ಕೂಡಿದವರಾಗಿ ರಾಜ ಮತ್ತು ಮಂತ್ರಿಗಳ ಎದುರಿಗೆ " ರಾಜನ ಬಲಗಡೆಯ ಪಾರ್ಶ್ವದಲ್ಲಿ ಇರುವ ಜ್ವರವನ್ನು ವೈದಿಕರು ನಾಶ ಪಡಿಸಲಿ. ನಾವು ಎಡಭಾಗದಲ್ಲಿರುವದನ್ನು ನಾಶಮಾಡುತ್ತೇವೆ. ಇಲ್ಲಿರುವ ಜನರೆಲ್ಲರೂ ನಮ್ಮ ಶಕ್ತಿಯನ್ನು ನೋಡಲಿ," ಎಂದು ಪ್ರತಿಜ್ಞೆ ಮಾಡಿದರು.

೩೩೮–೧೪೧. ವೈದಿಕರಲ್ಲಿ ಶ್ರೇಷ್ಠನಾದ ಜ್ಞಾನಪೂರ್ಣ ಯೋಗಿಯು ಮಂತ್ರವಾದಿಗಳ ಈ ಪ್ರಕಾರವಾದ ಪ್ರತಿಜ್ಞೆಗೆ ಒಪ್ಪಿಕೊಂಡನು. ಜ್ವರದ ಭಾಧೆಯನ್ನು ಅನುಭವಿಸುತ್ತಿರುವ ರಾಜನು ಪುಣ್ಯಕರ್ಮವಶದಿಂದ ಪ್ರೇರಿತನಾಗಿ ಜ್ಞಾನಪೂರ್ಣ

ಜ್ಞಾನಸಂಬಂಧಸಂಸ್ಪರ್ಶೇ ಜ್ವರಬಾಧಾಪಬಾಧಿತಃ ।
ಸ ಪಾಂಡ್ಯೋಽನುಮತಂ ಚಕ್ರೇ ಪುಣ್ಯಪಾಪಪ್ರಚೋದಿತಃ ॥ ೧೩೯ ॥

ಭಸ್ಮ ತಾವತ್ಸಮಾದಾಯ ಭವಾನ್ಯಾ ಭಾವಯನ್ ಭವಂ ।
ಜ್ವರಿತಂ ಚ ಸುಸಂಸ್ಪ್ರಷ್ಟುಂ ಜ್ಞಾನಪೂರ್ಣಸ್ಸಮುದ್ಯತಃ ॥ ೧೪೦ ॥

ಭಸ್ಮಾದಾನಂ ತದಾ ದೃಷ್ಟ್ವಾ ಜ್ಞಾನಪೂರ್ಣೇನ ತೇಽಪಿ ಚ ।
ತಿಷ್ಠ ತಿಷ್ಠೇತಿ ಗರ್ಜಂತೋ ನಗ್ನಾಃ ಪ್ರಾಹುರ್ನಿರುಧ್ಯ ತಂ ॥ ೧೪೧ ॥

ಔಷಧೇನ ಯುತಂ ಭಸ್ಮ ತಮಾದಾಯ ಸಮುದ್ಯತಃ ।
ಸಮಂತ್ರಶಕ್ತಿಯುಕ್ತೇನ ಭವಾನಜ್ಞಶ್ಚ ಬಾಲಕಃ ॥ ೧೪೨ ॥

ಜ್ವರಂ ಶಮಯಿತುಂ ನಾರ್ಹಃ ತದ್ಭಸ್ಮಕ್ಷೇಪಣಾತ್ಪುನಃ ।
ಜ್ವರಶಾಂತಿ ರ್ಭಸ್ಮನಶ್ಚೇಚ್ಛಕ್ತಿಸ್ತೇನೈವ ತೇಜಸಾ ॥ ೧೪೩ ॥

---

ಯೋಗಿಯು ತನ್ನನ್ನು ಸ್ಪರ್ಶಮಾಡಲು ಅನುಮತಿಯನ್ನು ಕೊಟ್ಟನು. ಆಗ ಜ್ಞಾನಪೂರ್ಣಯೋಗಿಯು ಭಸ್ಮವನ್ನು ತೆಗೆದುಕೊಂಡು ಪಾರ್ವತೀ ಪರಮೇಶ್ವರರನ್ನು ಧ್ಯಾನಮಾಡಿ ಆದರಿಂದ ರಾಜನನ್ನು ಸ್ಪರ್ಶಮಾಡಲು ಸಿದ್ಧನಾದನು. ಭಸ್ಮವನ್ನು ಜ್ಞಾನಪೂರ್ಣ ಯೋಗಿಯಿಂದ ತೆಗೆದುಕೊಳ್ಳಲು ಸಿದ್ಧನಾಗಿರುವ ಅವನನ್ನು ನೋಡಿ ಮಂತ್ರವಾ (ದಿಗಳು) ದ ಮಾಡುವವರು ನಿಲ್ಲು ನಿಲ್ಲು ಎಂದು ಗರ್ಜಿಸುತ್ತಾ ಜ್ಞಾನಪೂರ್ಣಯೋಗಿಯನ್ನು ತಡೆದು ನಿಲ್ಲಿಸಿದರು.

೧೪೨–೧೪೪. " ಔಷಧಿಯಿಂದ ಕೂಡಿರುವ ಭಸ್ಮವನ್ನು ನೀನು ಕೊಡುವುದಕ್ಕೆ ಸಿದ್ಧನಾಗಿರುತ್ತೀಯೆ. ಮಂತ್ರದ ಸಾಮರ್ಥ್ಯದಿಂದ ಕೂಡಿರುವ ಭಸ್ಮವನ್ನು ನೀನು ಕೊಡುವವನಲ್ಲವು. ಇದರಿಂದ ನಿನಗೆ ತಿಳುವಳಿಕೆ ಇಲ್ಲವು. ಮತ್ತು ನೀನು ಇನ್ನೂ ಹುಡುಗನಾಗಿರುತ್ತಿಯೆ. ಹೀಗೆ ಇರುವ ಭಸ್ಮವನ್ನು ಉಪಯೋಗಿಸಿ ಜ್ವರವನ್ನು ನೀನು ನಾಶ ಪಡಿಸಲು ಆಗುವುದಿಲ್ಲ. ಭಸ್ಮದಿಂದಲೇ ಜ್ವರವು ಶಾಂತವಾಗುವಾಗ

ತವ ಹಸ್ತಗತಂ ಮಾಸ್ತು ಭಸ್ಮ ಚೌಷಧಸಂಯುತಂ ।
ಅನ್ಯೇನ ಭಸ್ಮನಾ ಚಾದ್ಯ ಜ್ವರಂ ತಂ ಶಮಯಿಷ್ಯತಿ ॥ ೧೪೪ ॥

ಭಸ್ಮ ತದ್ಗರ್ಹಿತಂ ಪ್ರೋಕ್ತಂ ಸ್ಪರ್ಶನೇ ಚಾಪಿ ನಿಂದಿತಂ ।
ತೇನ ಜ್ವರಂ ಕಥಂ ಶಾಂತಮಿತಿ ವೈತಾದೃಶೇನ ಚ ॥ ೧೪೫ ॥

ಪ್ರವೀಣತಾ ಶಮಯಿತುಂ ಸತ್ಯಂ ಚೇದ್ಭಸ್ಮನೋಽಪಿ ಚ ।
ಅನ್ಯೇನ ಭಸ್ಮನಾ ಶಾಂತಿಂ ಕುರುಷ್ವ ಜ್ವರಮುರ್ಭಕೇ ॥ ೧೪೬ ॥

ತಥೇತಿ ತಾನ್ಪ್ರಾಹ ಬೌದ್ಧಾನ್ಯೋಯಮಾದಾಯ ಭಸ್ಮ ಚ ।
ಪ್ರಯಚ್ಛಂತು ಸಮರ್ಥಾಸ್ತೇ ಹಾಲಾಸ್ಯೇಶಮಹಾನಸಾತ್ ॥ ೧೪೭ ॥

ಭವಂತ ಇತಿ ತಾನ್ಪ್ರಾಹ ನಗ್ನಾನ್ವೈದಿಕವಾರಣಃ ।
ತೇಪ್ಯೂಚು ರ್ಭಸ್ಮನಾಸ್ಮಾಭಿಸ್ಸ್ಪ್ರಷ್ಟವ್ಯ ಮತಿನಿಂದಿತಂ ॥ ೧೪೮ ॥

---

ಮಂತ್ರಶಕ್ತಿಯು, ತನ್ನ ತೇಜಸ್ಸಿನಿಂದ ಹಾಗೆಯೇ ಇರುವುದು. ಆದ್ದರಿಂದ ನೀನು ಹಿಡಿದಿರುವ ಔಷಧಿಯಿಂದ ಕೂಡಿದ ಈ ಭಸ್ಮವನ್ನು ಉಪಯೋಗಿಸ ಕೂಡದು. ಬೇರೆಯ ಭಸ್ಮದಿಂದ ಈ ಜ್ವರವನ್ನು ನೀನು ನಾಶ ಮಾಡುವುದಾದರೆ ಆಗ ಅದೂ ನಿಂದ್ಯವಾದದ್ದು. ನೀನು ಭಸ್ಮವನ್ನು ತೆಗೆದುಕೊಂಡು ಅದರಿಂದ ಸ್ಪರ್ಶಮಾಡುವುದೂ ಸರಿಯಲ್ಲವು.

೧೪೫–೧೪೮. ನಿಂದ್ಯವಾದ ಭಸ್ಮದಿಂದಲೇ ಸ್ಪರ್ಶಮಾಡಿ ಜ್ವರವನ್ನು ನಾಶ ಪಡಿಸುವುದರಲ್ಲಿ ನಿನ್ನ ನಿಪುಣತೆಯು ನಿಜವಾಗಿರುವುದಾದರೆ ಬೇರೆಯ ಭಸ್ಮದಿಂದ ಜ್ವರವನ್ನು ನಿಲ್ಲಿಸು, ಎಂದು ಹೇಳುತ್ತಿದ್ದರು. ನಾಸ್ತಿಕರಾದ ಬೌದ್ಧರ ಮಾತನ್ನು ಒಪ್ಪಿಕೊಂಡು ಜ್ಞಾನಪೂರ್ಣಯೋಗಿಯು "ನೀವೇ ಹಾಲಾಸ್ಯೇಶ್ವರನ ದೇವಾಲಯದ ಅಡಿಗೆ ಮನೆಯಿಂದ ಭಸ್ಮವನ್ನು ತಂದು ನನ್ನ ಹಸ್ತದಲ್ಲಿ ಇರಿಸಿ

ಸ್ಪ್ರಷ್ಟುಂ ಕಥಂ ಶಕ್ಯತೇ ತದಜ್ಞೈಸ್ತ್ವತ್ಸದೃಶೈರ್ಧೃತಂ ।
ತ್ವದೀಯಾ ಅಪಿ ಭೃತ್ಯಾಶ್ಚ ತದಾನಯನಕರ್ಮಣಿ ॥ ೧೪೯ ॥

ನೋಚಿತಾ ಏವ ನಿತರಾಂ ಕುರ್ವಂತ್ವೌಷಧಸಂಕರಂ ।
ಇತಿ ತದ್ವಾಕ್ಯ ಮಾಕರ್ಣ್ಯ ಯುಷ್ಮಾಕಂ ಸುಗತಾ ಜನಾಃ ॥ ೧೫೦ ॥

ಪ್ರಯಚ್ಛಂ ತು ಚ ತದ್ಭಸ್ಮ ಹಸ್ತೇ ಮಮ ಗಿರಾಧುನಾ ।
ಏವಂ ತಸ್ಮಿನ್ನುಕ್ತವತಿ ಪ್ರೇಷಯಾಮಾಸು ರರ್ಹತಾಃ ॥ ೧೫೧ ॥

ನೃಪಸ್ತಾನ್ಪುರುಷಾನ್ಕಾಂಶ್ಚಿತ್ತದ್ಭಸ್ಮಾನಯನೇ ದ್ರುತಂ ।
ಸಮರ್ಪಯಂತ್ಯಂಜಸಾ ತು ಜ್ಞಾನ ಸಂಬಂಧಯೋಗಿನಃ ॥ ೧೫೨ ॥

ಸೋಽಪಿ ಪ್ರಗೃಹ್ಯ ತದ್ಭಸ್ಮ ಹಾಲಾಸ್ಯೇಶಮಹಾನಸಾತ್ ।
ಆನೀತಂ ಪಾಂಡರಂ ಭಸ್ಮ ವಿಶೇಷಾದತಿ ಪಾವನಂ ॥ ೧೫೩ ॥

ಸಾಂಬಸ್ಯ ಹಾಲಾಸ್ಯೇಶಸ್ಯ ಭಾವನಾದಾರ್ಢ್ಯ-ಯೋಗ್ಯತಃ ।
ಕರೋತಿ ಸ್ಪರ್ಶನಂ ತಸ್ಯ ನೃಪಸ್ಯಾಘಪ್ರಶಾಂತಯೇ ॥ ೧೫೪ ॥

---

ಎಂದು ಹೇಳಿದನು. ಅವರು "ನಿಂದಿತವಾದ ಭಸ್ಮವನ್ನು ನಾವು ಮುಟ್ಟುವವರಲ್ಲ. ನೀವಾಗಲಿ ನಿಮ್ಮ ಕಡೆಯ ದೂತರಾಗಲಿ ಅದನ್ನು ತರಲು ಯೋಗ್ಯರಾಗಿರುವರು. ಆದರೆ ಆ ಭಸ್ಮದ ಸಂಗಡ ಔಷಧಿಯನ್ನು ಸೇರಿಸ ಕೂಡದು" ಎಂದು ಹೇಳಿದರು.

೧೫೦–೧೫೪. ಆಗ ಜ್ಞಾನಪೂರ್ಣ ಯೋಗಿಯು ಅವರ ಮಾತನ್ನು ಕೇಳಿ ಬುದ್ಧಿವಂತರಾದ ನೀವುಗಳೇ ಈಗ ಭಸ್ಮವನ್ನು ತಂದು ನನಗೆ ಕೊಡಿರಿ" ಎಂದು ಹೇಳಿದನು. ಆಗ ಬೌದ್ಧರೂ ಮತ್ತು ರಾಜನೂ ಕೂಡ ಕೆಲವು ಜನ ಸೇವಕರನ್ನು ಕರೆದು ಭಸ್ಮವನ್ನು ತಂದು ಜ್ಞಾನಸಂಬಂಧ ಯೋಗಿಯ ಹಸ್ತದಲ್ಲಿರಿಸಲು ಆಜ್ಞೆ ಮಾಡಿದನು. ಜ್ಞಾನಪೂರ್ಣ ಯೋಗಿಯು ಹಾಲಾಸ್ಯೇಶ್ವರ ದೇವಾಲಯದ ಅಡಿಗೆ ಮನೆಯಿಂದ ಅವರು ತಂದುಕೊಟ್ಟ ಬಹಳ ಪವಿತ್ರವಾದ ಭಸ್ಮವನ್ನು ತೆಗೆದು ಕೊಂಡನು. ಅದನ್ನು ಪಾರ್ವತೀ ಸಹಿತನಾದ ಪರಮೇಶ್ವರನ ದೃಢ ಭಾವನೆಯಿಂದ ಅಭಿಮಂತ್ರಿಸಿದನು. ರಾಜನ ಪಾತಕವು ಉಪಶಾಂತವಾಗುವುದಕ್ಕಾಗಿ ರಾಜನನ್ನು ಸ್ಪರ್ಶ ಮಾಡುವುದಕ್ಕೆ ಸಿದ್ಧನಾದನು.

ತೇಜೋಮಯಮಿದಂ ಭಸ್ಮ ಸಾಂಬಸ್ಯೇತಿ ಸ್ಮರನ್ಬುಧಃ ।
ಮನಸಾ ಶಿರಸಾ ರಮ್ಯಂ ಸಾಂಬಂ ತಂ ಸುಂದರೇಶ್ವರಂ ॥ ೧೫೫ ॥

ಜಪ್ತ್ವಾ ಪಂಚಾಕ್ಷರಂ ಮಂತ್ರಂ ಜಪತಾಂ ವಿಜಯಪ್ರದಂ ।
ಭಸ್ಮ ಸ್ತುತಿಮಯಂ ಗೇಯಮಗಾಯ ಜ್ಜ್ವರಶಾಂತಯೇ ॥ ೧೫೬ ॥

ವೇದಬಾಹ್ಯಸ್ಯ ಭೂಪಸ್ಯ ಸ್ಪರ್ಶನಂ ವರ್ಜನೀಯ ನಃ ।
ತಥಾಪಿ ಹಾಲಾಸ್ಯೇಶಸ್ಯ ಭಾವನಾದಾರ್ಢ್ಯವೈಭವಾತ್ ॥ ೧೫೭ ॥

ಕರೋಮಿ ಸ್ಪರ್ಶನಂ ತಸ್ಯ ಪಾಪಭೀತಿಂ ವಿಹಾಯ ಚ ।
ಇತಿ ನಿಶ್ಚಿತ್ಯ ತತ್ಪಾರ್ಶ್ವೇ ಭಸ್ಮ ನಿಕ್ಷಿಪ್ಯ ಸಂಸ್ಮರನ್ ॥ ೧೫೮ ॥

ಜ್ವರೋ ದಕ್ಷಿಣಪಾರ್ಶ್ವಸ್ಥೋ ಹಿತ್ವಾ ತಂ ಭಾಗಮಾಶು ಸಃ ।
ವಾಮಭಾಗಂ ದದಾಹಾಸ್ಯ ತದ್ಭಾಗಜ್ವರಸಂಯುತಃ ॥ ೧೫೯ ॥

---

೧೫೫-೧೬೦. ಈ ಭಸ್ಮವು ತೇಜೋಮಯವಾಗಿರುವುದು. ಶಿವನಿಗೆ ಸಂಬಂಧಪಟ್ಟಿರುವುದು. ಎಂದು ಪಾರ್ವತೀಸಹಿತನಾದ ಪರಮೇಶ್ವರನನ್ನು ಅವನು ಸ್ಮರಿಸಿದನು. ಜಪ ಮಾಡುವವರಿಗೆ ಜಯವನ್ನು ಉಂಟುಮಾಡುವ ಪಂಚಾಕ್ಷರ ಮಂತ್ರವನ್ನು ಜಪಮಾಡಿಕೊಂಡನು. ಜ್ಞಾನಪೂರ್ಣ ಯೋಗಿಯು ಜ್ವರವು ಶಾಂತವಾಗುವದಕ್ಕಾಗಿ ಭಸ್ಮದ ಮಹಿಮೆಯನ್ನು ಹೇಳುವ ದ್ರಾವಿಡಭಾಷೆಯ ಶ್ಲೋಕವನ್ನು ಹೇಳಿದನು. ವೇದಬಾಹ್ಯನಾದ ರಾಜನನ್ನು ನಾವು ಸ್ಪರ್ಶಮಾಡಕೂಡದು. ಆದರೂ ಹಾಲಾಸ್ಯೇಶ್ವರನನ್ನು ದೃಢವಾಗಿ ಭಾವನೆ ಮಾಡಿರುವುದರಿಂದ ಪಾಪದ ಭಯವನ್ನು ಬಿಟ್ಟು ರಾಜನನ್ನು ಸ್ಪರ್ಶಮಾಡುತ್ತೇನೆ. ಎಂದು ನಿಶ್ಚಯಮಾಡಿ ಆ ಭಸ್ಮವನ್ನು ರಾಜನ ಬಲ ಭಾಗದಲ್ಲಿ ಹಾಕಿ, ಅದರಿಂದ ಸ್ಪರ್ಶ ಮಾಡಿದನು. ಆಗ ಜ್ವರವು ಬಲಭಾಗವನ್ನು ಬಿಟ್ಟು ಎಡಬಾಗಕ್ಕೆ ಬೇಗನೆ ಬಂದಿತು. ಆದರಿಂದ ರಾಜನಿಗೆ ಆ ಭಾಗದಲ್ಲಿ ಜ್ವರದ ವೇಗವು ಹೆಚ್ಚಾಯಿತು. ಆಗ ಮಂತ್ರವಾದಿಗಳಾದ

ಯದಾ ಸ್ಪೃಷ್ಟ್ವಾ ಪಿಂಛಪುಚ್ಛೈಃ ಕ್ಷಪಣೈರಭಿಮಂತ್ರಿತಃ ।
ತದಾ ತು ದ್ವಿಗುಣಂ ಭೂತ್ವಾ ಜ್ವರಾಗ್ನಿಸ್ತಂ ದದಾಹ ಚ ॥ ೧೬೦ ॥

ಪ್ರಹರಂತಿ ಪುನಃ ಪಿಂಛೈಃ ನಗ್ನಾಸ್ತಂ ಭಾಗವಾಗ್ರಹಾತ್ ।
ಕುಂಡಿಕಾಂತಸ್ಥಸುಜಲೈಃ ಸೇಚಯಾಂ ಚಕ್ರಿರೇsಧಮಾಃ ॥ ೧೬೧ ॥

ಪಿಂಛವಾತೈಃ ಪ್ರಜಜ್ವಾಲ ಜ್ವರಾಗ್ನಿಸ್ತ್ರಿಗುಣಂ ಪುನಃ ।
ಪಿಂಛಾಗ್ರಾಣಿ ಚ ದಗ್ಧಾನಿ ಭೂಪೋ ನಗ್ನಾನ್ ಅಭರ್ತ್ಸಯತ್ ॥ ೧೬೨ ॥

ನಗ್ನಾಸ್ತದಾನೀಮಿತ್ಯೂಚು ರ್ನಿರ್ಲಜ್ಜಾಃ ಪೃಥಿವೀಪತಿಂ ।
ಅಸ್ಮೃತಂ ಪಾರ್ಶ್ವಮಭ್ಯೇತ್ಯ ಶಮಯತ್ವಯ ಮರ್ಭಕಃ ॥ ೧೬೩ ॥

ವಾಮಭಾಗೋ ವಿಷಾಖ್ಯೋsಯಂ ತಜ್ಜ್ವರಂ ನ ಶಶಾಮ ಚ ।
ವಾಮಭಾಗಜ್ವರಂ ಚಾಪಿ ಶಮಯಿಷ್ಯತಿ ಚೇದಯಂ ॥ ೧೬೪ ॥

---

ಬೌದ್ಧರು ತಮ್ಮ ನವಿಲುಗರಿಯ ದೊಂದೆಗಳಿಂದ ಸ್ಪರ್ಶಮಾಡಲುಪಕ್ರಮ ಮಾಡಿದರು. ಅವರು ಮಂತ್ರವನ್ನು ಹಾಕಿದರೂ ಜ್ವರವು ಕಡಿಮೆಯಾಗದೆ ಮೊದಲಿಗಿಂತಲೂ ಎರಡರಷ್ಟು ವೇಗವನ್ನು ಹೊಂದಿ ರಾಜನಿಗೆ ಬಹಳ ಹಿಂಸೆಯನ್ನು ಉಂಟುಮಾಡುತ್ತಿತ್ತು.

೧೬೧–೧೬೨. ನೀಚರಾದ ಮಂತ್ರವಾದಿಗಳು ರಾಜನ ಶರೀರದಲ್ಲಿ ಜ್ವರವು ಇರುವ ಎಡಭಾಗವನ್ನು ತಮ್ಮ ನವಿಲುಗರಿಯ ದೊಂದೆಗಳಿಂದ ಬಹಳವಾಗಿ ಸ್ಪರ್ಶಮಾಡುತ್ತಿದ್ದರು. ಕಮಂಡಲುವಿನ ನೀರಿನಿಂದ ಪ್ರೋಕ್ಷಿಸುತ್ತಿದ್ದರು. ನವಿಲುಗರಿಯ ಗಾಳಿಯಿಂದ ಜ್ವರದ ವೇಗವು ಮೊದಲಿಗಿಂತಲೂ ಮೂರರಷ್ಟು ಹೆಚ್ಚಾಯಿತು. ಆದರಿಂದ ನವಿಲುಗರಿಯ ತುದಿಯು ಸುಟ್ಟುಹೋಯಿತು. ರಾಜನು ಅವರೆಲ್ಲರನ್ನೂ ನಿಂದಿಸಿದನು.

೧೬೩–೧೬೬. ಆಗ ನಾಚಿಕೆಯಿಲ್ಲದಿರುವ ಆ ಮಂತ್ರವಾದಿಗಳು, ಎಲೈ ರಾಜನೆ, ಅಸ್ಮೃತಮಯವಾದ ಶರೀರಬಲಭಾಗದ ಜ್ವರವನ್ನು ಆ ಹುಡುಗನು ವಾಸಿ

ತದಾ ಮಹಾಂಶ್ಚ ಬಾಲೋ ಹಿ ಭರ್ತ್ಸಯಾಸ್ಮಾಂಸ್ತದಾ ನೃಪ ।
ಇತ್ಯುಕ್ತವತಿ ನಿರ್ಲಜ್ಜೈಃ ಕ್ಷಪಣೈಃ ಪೀಡಿತೋ ನೃಪಃ ॥ ೧೬೫ ॥

ವಾಮಭಾಗಜ್ವರಂ ಚಾಪಿ ನಾಶಯ ತ್ವಂ ಶಿವೋಽಸಿ ನಃ ।
ಜ್ಞಾನಸಂಬಂಧಭಗವನ್ ಪ್ರಾಣಾನ್ರಕ್ಷ ಮಮ ಪ್ರಭೋ ॥ ೧೬೬ ॥

ಇತಿ ಸಂಪ್ರಾರ್ಥಿತೇ ಭೂಪೇ ಜ್ಞಾನಸಂಬಂಧದೇಶಿಕಃ ।
ವಾಮಭಾಗಜ್ವರಂ ಚಾಪಿ ಶಮಯಿಷ್ಯೇ ಜ್ವರಂ ತವ ॥ ೧೬೭ ॥

ಮಾ ಭಯಂ ನೃಪ ತೇ ಭೂಯಾದಾಗತೇ ಮಯಿ ಸಾಂಪ್ರತಂ ।
ಇತ್ಯುಕ್ತ್ವಾ ತಂ ಚ ಭಾಗಂ ಸ ಪಸ್ಪರ್ಶ ಭಸಿತೇಂಗಕೇ ॥ ೧೬೮ ॥

ಜ್ವರಃ ಪ್ರಾಣೇನ ನಗ್ನಾನಾಂ ವಾಮಭಾಗಾಚ್ಚಮಂ ಯಯೌ ।
ಸರ್ವಾತ್ಮನಾ ಜ್ವರಾಗ್ನಿಸ್ಸ ನಾಶಿತೋ ನೃಪದೇಹಗಃ ॥ ೧೬೯ ॥

---

ಮಾಡಿರುವನು. ಎಡಭಾಗವು ವಿಷವಾಗಿರುವುದು. ಆದ್ದರಿಂದ ಜ್ವರವು ಶಾಂತವಾಗಲಿಲ್ಲ ಈ ಹುಡುಗನೇ ಎಡಭಾಗದ ಜ್ವರವನ್ನೂ ವಾಸಿಮಾಡುವುದಾದರೆ ಆಗ ಅವನನ್ನು ಪೂಜ್ಯನೆಂದು ತಿಳಿಯಬೇಕು. ಆಗ ನಮ್ಮನ್ನು ನೀನು ನಿಂದೆ ಮಾಡತಕ್ಕದ್ದು." ಎಂದು ಹೇಳಿದರು. ಜ್ವರದ ತೊಂದರೆಗೆ ಸಿಕ್ಕಿದ್ದ ರಾಜನು ಆ ಮಂತ್ರವಾದಿಗಳ ನಿರ್ಬಂಧಕ್ಕೆ ಒಳಗಾಗಿ, "ಎಲೈ ಪೂಜ್ಯನಾದ ಜ್ಞಾನಸಂಬಂಧ ಯೋಗಿಯೇ, ಎಲೈ ಮಹಿಮೆಯುಳ್ಳ ಪ್ರಭುವೇ ನೀನು ಮಂಗಳಕರನಾಗಿರುತ್ತೀಯೆ. ನನ್ನ ಶರೀರದ ಎಡಭಾಗದ ಜ್ವರವನ್ನೂ ವಾಸಿಮಾಡಿ, ನನ್ನ ಪ್ರಾಣಗಳನ್ನು ರಕ್ಷಿಸು." ಎಂದು ಜ್ಞಾನಸಂಬಂಧ ಯೋಗಿಯನ್ನು ಬೇಡಿಕೊಂಡನು.

೧೬೭–೧೭೦. ರಾಜನು ಹೀಗೆ ಬೇಡುತ್ತಿರುವಾಗ ಜ್ಞಾನಸಂಬಂಧ ಯೋಗಿಯು "ನಾನು ನಿನ್ನ ಎಡಭಾಗದ ಜ್ವರವನ್ನು ವಾಸಿಮಾಡುತ್ತೇನೆ. ನಾನು ಬಂದಿರುವಾಗ ನೀನು ಹೆದರಬೇಡ" ಎಂದು ಹೇಳುತ್ತಾ ಭಸ್ಮದಿಂದ ಜ್ವರವಿರುವ ಆ ಭಾಗವನ್ನು ಸ್ಪರ್ಶಮಾಡಿದನು. ಆಗ ಮಂತ್ರವಾದಿಗಳು ಗುಣಪಡಿಸಬೇಕಾದ ಆ ಭಾಗದ ಜ್ವರವು

ಜ್ವರನಾಶಾನ್ನೃಪಸ್ಯಾಂಗಂ ಕೀಲಾಲಂ ಬಲಸಂಯುತಂ ।
ಪೂರ್ವಸ್ಮಾದಧಿಕಂ ಸೌಖ್ಯಂ ಪುಷ್ಟಿಂ ಚಾಪಿ ಸ ಪಾಂಡ್ಯರಾಟ್ ॥ ೧೭೦ ॥

ರಾಜಾಥ ರಾಜ್ಞೀಂ ಸಚಿವಂ ಪ್ರಶಸ್ಯ ಚ ಪುನಃ ಪುನಃ ।
ರಾಜಾಥ ನತ್ವಾ ಸಾಷ್ಟಾಂಗಂ ತದಾ ವೈದಿಕವಾರಣಂ ॥ ೧೭೧ ॥

ಜ್ಞಾನಪೂರ್ಣಮಿತಿ ಪ್ರಾಹ ಮುದ್ಯಾಹಂಕಾರವರ್ಜಿತಃ ।
ಸ್ವಾಮಿನ್ಸರ್ವಜ್ಞ ಮನ್ನಾಥ ಜಗನ್ನಾಥ ಜಗದ್ಗುರೋ ॥ ೧೭೨ ॥

ಬಾಲೋಪ್ಯಬಾಲ ಏವಾಸಿ ವಾಣ್ಯಾ ಚ ಪರಯಾ ಪ್ರಭೋ ।
ತತ್ವಜ್ಞಾನೇನ ಭಕ್ತ್ಯಾ ಚ ಶಿವಸ್ಯ ಪರಮಾತ್ಮನಃ ॥ ೧೭೩ ॥

ತ್ವತ್ಸಮೋ ನ ಹಿ ಲೋಕೇಷು ಸಮಸ್ತೇಷ್ವಪರೋ ಬುಧಃ ।
ತ್ವದ್ದರ್ಶನೇನ ಚಾಸ್ಮಾಕಮಜ್ಞಾನ ಮಗಮದ್ವ್ಯಯಂ ॥ ೧೭೪ ॥

---

ನಾಶವಾಯಿತು. ಎರಡು ಭಾಗದಲ್ಲಿಯೂ ಜ್ವರವು ಶಾಂತವಾದಕಾರಣ ರಾಜನ ಶರೀರದಲ್ಲಿ ಅವಯವಗಳು ಶಕ್ತಿಯುಳ್ಳವುಗಳಾದವು. ರಕ್ತಪುಷ್ಟಿಯು ಹೆಚ್ಚಿತು ಆ ರಾಜನು ಮೊದಲಿಗಿಂತಲೂ ಹೆಚ್ಚಾದ ಕಾಂತಿಯನ್ನೂ ಸೌಖ್ಯವನ್ನೂ ಹೊಂದಿದನು.

೧೭೧–೧೭೫. ಆಗ ಕುಬ್ಜಪಾಂಡ್ಯ ರಾಜನು ರಾಣಿಯನ್ನೂ ಮಂತ್ರಿಯನ್ನೂ ಶ್ಲಾಘಿಸಿದನು. ವೈದಿಕ ಶ್ರೇಷ್ಠನಾದ ಜ್ಞಾನಸಂಬಂಧ ಯೋಗಿಗೆ ನಮಸ್ಕಾರವನ್ನು ಮಾಡಿದನು. ಮತ್ತು ಅಹಂಕಾರವನ್ನು ಬಿಟ್ಟನು. ಆಗ ಅವನು “ ಎಲೈ, ಜ್ಞಾನಪೂರ್ಣಯೋಗಿಯೇ ? ಸರ್ವಜ್ಞನೇ, ಜಗತ್ಪ್ರಭುವೇ, ಜಗದ್ಗುರುವೇ ನೀನು ಹುಡುಗನಾದಾಗ್ಯೂ ಶ್ರೇಷ್ಠವಾದ ವಾಕ್ಸಿದ್ಧಿಯಿಂದ ಪೂಜ್ಯನಾಗಿರುತ್ತೀಯೆ. ತತ್ವಜ್ಞಾನವೂ, ಪರಮಾತ್ಮನಾದ ಶಿವನಲ್ಲಿ ಭಕ್ತಿಯೂ ಉಳ್ಳವನು ನಿನಗಿಂತಲೂ ಬೇರೆಯಾದವನು ಲೋಕದಲ್ಲಿ ಇಲ್ಲ. ನಿನ್ನ ದರ್ಶನದಿಂದ ನನ್ನ ಅಜ್ಞಾನವು ಎಲ್ಲವೂ

ಸುಜ್ಞಾನಮುಸ್ಯೋಧತೇ ತ್ವಂ ಶಿವ ಏವ ನ ಚಾಪರಃ ।
ಆಶ್ರಿತ್ಯ ನಗ್ನಸಿದ್ಧಾಂತಂ ಪುರಾವರ್ತಾಮಹೇ ವಯಮ್ ॥ ೧೭೫ ॥

ತ್ವತ್ಕೃಪಾ ದಕ್ಷಿಣೇನಾ ಸ್ಮಾನ್ರಕ್ಷ ರಕ್ಷ ಕೃಪಾನಿಧೇ ;
ಇತ್ಯುಕ್ತವತಿ ಭೂಪಾಲೇ ಸ್ವಪುಣ್ಯಪರಿಪಾಕತಃ ॥ ೧೭೬ ॥

ಜ್ಞಾನಪೂರ್ಣೋಽಥ ಭಗವಾರ್ಜ್ಞಾನವಿಜ್ಞಾನಸದ್ಗುರುಃ ।
ವಿಧಾಯ ಚಾಕ್ಷುಷೀಂ ದೀಕ್ಷಾಂ ಕುಬ್ಜಪಾಂಡ್ಯಸ್ಯ ತಸ್ಯ ತು ॥ ೧೭೭ ॥

ಕುಬ್ಜತಾಕುತ್ಸಿತಂ ಗಾತ್ರಂ ಭಸ್ಮನೋದ್ಧೂಲ್ಯ ಹಸ್ತತಃ ।
ಕುಬ್ಜತಾಂ ನಾಶಯಾಮಾಸ ಸುಂದರಂ ಚ ತನುಂ ವ್ಯಧಾತ್ ॥ ೧೭೮ ॥

ಪಂಚಕರ್ಣೋಪದೇಶಂ ಚಾಕರೋದ್ವೈದಿಕವಾರಣಃ ।
ಶಿವಲಿಂಗಂ ತಸ್ಯ ದತ್ವಾ ಪೂಜಾಂ ಚಾಪ್ಯುಪದಿಷ್ಟವಾನ್ ॥ ೧೭೯ ॥

---

ಹೋಯಿತು. ಸರಿಯಾದ ಜ್ಞಾನವು ಹೆಚ್ಚುತ್ತಾ ಇದೆ. ಇದರಿಂದ ನೀನು ಶಿವನೇ ಆಗಿರುತ್ತೀಯೆ ಎಂದು ತಿಳಿದು ಇರುವೆನು. ನಾನು ನಾಸ್ತಿಕರ ಸಿದ್ಧಾಂತವನ್ನು ನಂಬಿಕೊಂಡು ಇದುವರಿಗೂ ಇದ್ದೆನು. ಈಗ ದಯಾನಿಧಿಯಾದ ನೀನು ದಯೆಯಿಂದ ನನ್ನನ್ನು ರಕ್ಷಿಸು." ಎಂದು ಹೇಳಿದನು.

೧೭೬–೧೭೯. ಕುಬ್ಜ ಪಾಂಡ್ಯರಾಜನು ತನ್ನ ಪುಣ್ಯ ಪರಿಪಾಕದಿಂದ ಹೀಗೆ ಹೇಳಿದ ಮಾತನ್ನು ಕೇಳಿ, ಜ್ಞಾನಪೂರ್ಣಯೋಗಿಯು ಆ ರಾಜನಿಗೆ ಚಾಕ್ಷುಷ ದೀಕ್ಷೆಯನ್ನು ಅನುಗ್ರಹಿಸಿದನು. ಜ್ಞಾನ ಮತ್ತು ವಿಜ್ಞಾನಗಳಲ್ಲಿ ಗುರುವಾದ ಅವನು, ಕುಬ್ಜನಾದ ಆ ರಾಜನ ಶರೀರವನ್ನು ಭಸ್ಮದಿಂದ ಕೂಡಿರುವ ಹಸ್ತದಿಂದ ಸ್ಪರ್ಶ ಮಾಡಿ, ಆ ರಾಜನು ಸೌಂದರ್ಯ ಶಾಲಿಯಾಗಿರುವ ಹಾಗೆ ಮಾಡಿದನು. ಮತ್ತು ಆ ರಾಜನಿಗೆ ಪಂಚಾಕ್ಷರ ಮಂತ್ರವನ್ನು ಉಪದೇಶಮಾಡಿದನು. ರಾಜನ ಶರೀರವು ಚಿನ್ನದ ಬಣ್ಣವುಳ್ಳದ್ದಾಯಿತು. ಅದನ್ನು ನೋಡಿ ಜನರೆಲ್ಲರೂ, ಆಶ್ಚರ್ಯ ಪಟ್ಟರು.

ಅತ್ಯಾಶ್ಚರ್ಯಂ ಚ ತದ್ದೃಷ್ಟ್ವಾ ರಾಜ್ಞಸ್ಸ್ವರ್ಣಮಯಂ ವಪುಃ ।
ಹಾ ಹೇತಿ ವಿಸ್ಮಿತಾಸ್ಸಂತೋ ಜನಾಸ್ಸರ್ವೇ ಮುದಾನ್ವಿತಾಃ ॥ ೧೮೦ ॥

ಜ್ಞಾನಪೂರ್ಣಂ ಚ ಸರ್ವಜ್ಞಂ ನನಂದು ಹೃಷ್ಟಮಾನಸಾಃ ।
ರಾಜಾಂತಿಕಸ್ಥಾಸ್ತು ಜನಾ ದಧುಃ ಫಾಲೇಷು ಭಸ್ಮ ಚ ॥ ೧೮೧ ॥

ಅಂತರ್ಜಗಾಮಾಜ್ಞತಾ ಚ ತಯಾ ಕುಬ್ಜತಯಾ ಸಹ ।
ಸೌಂದರ್ಯಮತುಲಂ ವೀರ್ಯಮಭೂದ್ರಾಜ್ಞೋ ವಿಶೇಷತಃ ॥ ೧೮೨ ॥

ರಾಜಸುಂದರಪಾಂಡ್ಯಾಖ್ಯೋ ಲೋಕೇ ಭೂಯಾ ಇತಃಪರಂ ।
ಇತಿ ಚ ಪ್ರಾಹ ಭಗವಾನ್ವಪುಷಾ ವಯಸಾ ಗುರುಃ ॥ ೧೮೩ ॥

ವಿಹಾಯ ಕಬ್ಜ ಇತ್ಯಾಖ್ಯಾಂ ಜನ್ಮಪ್ರಭೃತಿವಿಶ್ರುತಾಂ ।
ಸೋಽಭೂತ್ಸುಂದರಪಾಂಡ್ಯಾಖ್ಯೋ ನಾಮತಃ ಪರಮಾರ್ಥತಃ ॥ ೧೮೪ ॥

---

೧೮೦-೧೮೪. ಅವರು ಜ್ಞಾನಪೂರ್ಣ ಯೋಗಿಯು ಸರ್ವಜ್ಞನೆಂದು ತಿಳಿದು ಸಂತೋಷವುಳ್ಳವರಾಗಿದ್ದರು. ಆಗ ರಾಜನ ಹತ್ತಿರದಲ್ಲಿರುವವರೂ ಕೂಡ ಹಣೆಯಲ್ಲಿ ಭಸ್ಮವನ್ನು ಧರಿಸಲು ಪ್ರಾರಂಭಿಸಿದರು. ರಾಜನಿಗೆ ಶರೀರದ ಕುಬ್ಜತ್ವವೂ, ಮನಸ್ಸಿನ ದಡ್ಡತನವೂ, ಹೋದದ್ದಲ್ಲದೆ, ಶಕ್ತಿ ಮತ್ತು ಸೌಂದರ್ಯಗಳು ಹೆಚ್ಚಿದವು. ಆಗ ಪೂಜ್ಯನಾದ ಜ್ಞಾನಪೂರ್ಣ ಯೋಗಿಯು "ಎಲೈ ರಾಜನೆ, ನೀನು ಇನ್ನು ಮುಂದೆ ನಿನ್ನ ವಯಸ್ಸು ಮತ್ತು ಶರೀರ ಇವುಗಳಿಗೆ ಅನುಸಾರವಾಗಿ ಲೋಕದಲ್ಲಿ ಸುಂದರ ಪಾಂಡ್ಯನೆಂಬ ಹೆಸರಿನಿಂದ ಪ್ರಸಿದ್ಧನಾಗಿರು. ನೀನು ಹುಟ್ಟಿದ ಮೊದಲುಗೊಂಡು ಬಂದಿರುವ ಕುಬ್ಜಪಾಂಡ್ಯನೆಂಬ ಹೆಸರು ತಪ್ಪಿಹೋಗಲಿ" ಎಂದು ಹೇಳಿದನು. ಇದರಿಂದ ಆ ರಾಜನಿಗೆ ಅನುಗುಣವಾದ ಸುಂದರ ಪಾಂಡ್ಯನೆಂಬ ಹೆಸರು ಪ್ರಸಿದ್ಧವಾಯಿತು.

ರಾಜಾ ಸುಂದರಪಾಂಡ್ಯಾಖ್ಯಃ ಜ್ಞಾನಸಂಬಂಧದೇಶಿಕಂ ।
ಭದ್ರಾಸನಂ ಸಮಾರೋಪ್ಯ ಭದ್ರಾಕಾರಂ ಜಗದ್ಗುರುಂ ॥ ೧೮೫ ॥

ಶಿವವತ್ಪೂಜಯಿತ್ವಾ ತಂ ಗಂಧಪುಷ್ಪಾದಿಭೂಷಣೈಃ ।
ಭೂಷಯಿತ್ವಾ ಪೂಜಯಿತ್ವಾ ವಸ್ತ್ರೈಸ್ಸೂಕ್ಷ್ಮೈಶ್ಚ ಭೂಷಣೈಃ ॥ ೧೮೬ ॥

ಛತ್ರಧ್ವಜೈಶ್ಚಾಮರಾದ್ಯೈಃ ತೌರ್ಯತ್ರಿಕಸಮನ್ವಿತೈಃ ।
ಚತುರಂತಸುಯಾನೇ ಚ ಸ್ಥಾಪ್ಯ ಮುಕ್ತಸ್ಯ ಚಾಗ್ರತಃ ॥ ೧೮೭ ॥

ಕೃತ್ವಾ ಮಹೋತ್ಸವಂ ತಸ್ಯ ಜ್ಞಾನಪೂರ್ಣಸ್ಯ ಭೂಪತಿಃ ।
ಮಂದಂ ಮಂದಂ ಚ ನಗರೀಪ್ರದಕ್ಷಿಣ ಮಕಾರಯತ್ ॥ ೧೮೮ ॥

ಮಠೇ ಸಂಸ್ಥಾಪ್ಯ ಭೂಯಶ್ಚ ಸೋಪಚಾರಂ ಸಶಿಷ್ಯಕಂ ।
ಸ್ವಮಂದಿರಂ ಪ್ರೇಷಯಿತ್ವಾ ರಾಜಾನಂ ಜ್ಞಾನದೇಶಿಕಃ ॥ ೧೮೯ ॥

---

೧೮೫–೧೮೮. ಸುಂದರ ಪಾಂಡ್ಯರಾಜನು ಮಂಗಳಕರವಾದ ಆಕಾರವುಳ್ಳ ಜ್ಞಾನಸಂಬಂಧಯೋಗಿ ಎಂದು ಪ್ರಸಿದ್ಧನಾದ ಈ ಜಗದ್ಗುರುವನ್ನು ಭದ್ರಪೀಠದಲ್ಲಿ ಕೂರಿಸಿದನು. ಅವನನ್ನು ಗಂಧ, ಹೂವು, ಆಭರಣಗಳು, ಸೂಕ್ಷ್ಮವಾದ ವಸ್ತ್ರಗಳು, ಇವುಗಳಿಂದ ಅಲಂಕರಿಸಿದನು. ಮತ್ತು ಛತ್ರಿ, ಚಾಮರ, ಧ್ವಜ ಪಟ ಇವುಗಳಿಂದಲೂ. ಅನೇಕ ವಿಧವಾದ ವಾದ್ಯಗಳಿಂದಲೂ ಅವನನ್ನು ಪೂಜಿಸಿದನು. ಅನಂತರದಲ್ಲಿ ಮುತ್ತಿನ ಪಲ್ಲಕ್ಕಿಯಲ್ಲಿ ಅವನನ್ನು ಕೂರಿಸಿ ಮಧುರಾನಗರದಲ್ಲಿ ಎಲ್ಲಾ ಕಡೆಯಲ್ಲಿಯೂ ಪ್ರದಕ್ಷಿಣಾಕಾರವಾಗಿ ಮೆರವಣಿಗೆ ಮಾಡಿಸಿದನು.

೧೮೯–೧೯೨ ಆ ಗುರುವನ್ನು ಅವನ ಶಿಷ್ಯರೊಡನೆ ಶಿವಾನಂದ ಮಠಕ್ಕೆ ಕಳುಹಿಸಿದನು. ರಾಜನು ಮಠದಲ್ಲಿಯೂ ಶಿಷ್ಯರೊಡನೆ ಇರುವ ಜ್ಞಾನಸಂಬಂಧ ಗುರುವನ್ನು ಮನೆಯಲ್ಲಿರುವಂತೆ ಇರಿಸಿದನು. ಜ್ಞಾನಸಂಬಂಧ ಗುರುವು ಸಂತೋಷವುಳ್ಳವನಾಗಿ, ಭಕ್ತರಿಗೆ ಅಧೀನನಾಗಿರುವ ಪರಾತ್ಪರನಾದ ಮೀನಾಕ್ಷೀಸಹಿತನಾಗಿ

ಸೋऽಪಿ ಶ್ರೀಜ್ಞಾನಸಂಬಂಧಃ ಪರಿತೋಷೇಣ ಸಂಯುತಃ ।
ಮೀನಾಕ್ಷೀಂ ಸುಂದರೇಶಂ ಚ ಭಕ್ತಾಧೀನಂ ಪರಾತ್ಪರಂ ॥ ೧೯೦ ॥

ಪರಿತೋಷ್ಯ ಸ್ತವೈರ್ನವ್ಯೈರ್ಗೇಯೈಃ ಶ್ಲಕ್ಷ್ಣಾರ್ಥಕೋಮಲೈಃ ।
ಜನೈಃ ಪ್ರಶಸ್ಯಮಾನಸ್ಸನ್ ಜ್ಞಾನಪೂರ್ಣೋ ಮಠಂ ಯಯೌ ॥ ೧೯೧ ॥

ಸ ರಾಜ್ಞೀ ಸ ಚ ಮಂತ್ರೀ ಚ ಪರಿಪೂರ್ಣಮನೋರಥೌ ।
ಉಪದಾಭಿರನರ್ಘ್ಯಾಭಿ ಸ್ತೋಷಯಾಮಾಸತು ಶ್ಚ ತಂ ॥ ೧೯೨ ॥

ನಗ್ನಾಸ್ತು ಖಿನ್ನಮನಸಃ ವ್ರೀಲಾವನತಕಂಧರಾಃ ।
ನಿರಸ್ತಾಶ್ಚೈವ ಪಾಂಡ್ಯೇನ ಭರ್ತ್ಸಿತಾ ಗರ್ಹಿತಾ ಜನೈಃ ॥ ೧೯೩ ॥

ವಿಲೋಕಯಂತೋ ವಕ್ತ್ರಾಣಿ ಭೂಮಿಂ ಚಾಪಿ ಪರಸ್ಪರಂ ।
ಪ್ರಯಯುರ್ಭೀತಿಸಂಯುಕ್ತಾಃ ಸ್ವಂ ಸ್ವಮಾವಾಸಪರ್ವತಂ ॥ ೧೯೪ ॥

---

ಇರುವ ಸುಂದರೇಶನನ್ನು, ಹೊಸದಾಗಿ ಕವನಮಾಡಿರುವ ಮೃದುವಾದ ಶಬ್ದಗಳಿಂದ ಕೂಡಿರುವ ಸ್ತೋತ್ರಗಳಿಂದ ಸ್ತುತಿಮಾಡಿ, ಸಂತೋಷಪಡಿಸಿದನಂತರ ಮಠಕ್ಕೆ ಬಂದನು. ರಾಣಿಯೂ, ಮತ್ತು ಮಂತ್ರಿಯೂ ಅವರ ಇಷ್ಟವು ನೆರವೇರಿದ ಕಾರಣ ಬಹಳ ಬೆಲೆಬಾಳುವ ಕಾಣಿಕೆಗಳಿಂದ ಆ ಯೋಗಿಯನ್ನು ಸಂತೋಷ ಪಡಿಸಿದರು.

೧೯೩-೧೯೪. ಮಂತ್ರವಾದಿಗಳನ್ನು ಪಾಂಡ್ಯರಾಜನು ನಿಂದಿಸಿದನು ಮತ್ತು ಅವರು ತನ್ನ ಸಮೀಪಕ್ಕೆ ಬರಕೂಡದೆಂದು ಅಪ್ಪಣೆಮಾಡಿದನು. ಜನರೆಲ್ಲರೂ ಇವರನ್ನು ನಿಂದಿಸಿದರು. ಇದರಿಂದ ಅವರು ನಾಚಿಕೆಯನ್ನು ಹೊಂದಿ ಕುತ್ತಿಗೆಯನ್ನು ತಗ್ಗಿಸಿಕೊಂಡು ದುಃಖವುಳ್ಳ ಮನಸ್ಸಿನಿಂದ ಪರಸ್ಪರವಾಗಿ ತಮ್ಮ ತಮ್ಮ ಮುಖ ಗಳನ್ನು ನೋಡುತ್ತಿದ್ದರು. ಭೂಮಿಯನ್ನು ಕೆಲವರು ನೋಡುತ್ತಿದ್ದರು. ಅವರು ಹೀಗೆ ಇರುತ್ತಾ ಭಯದಿಂದ ಕೂಡಿದವರಾಗಿ ತಮ್ಮ ವಾಸ ಸಳವಾದ್ಧ ಬೆಟ್ಟಗಳನ್ನು ಸೇರಿದರು.

ರಾಜಾ ಸುಂದರಪಾಂಡ್ಯಸ್ತು ಸುಂದರೇಶಂ ಸದಾ ಸ್ಮರನ್ ।
ತಸ್ಮೈ ಜಗನ್ನಾಯಕಾಯ ಶ್ರೀಮಂತ್ಯಾಭರಣಾನಿ ಚ ॥ ೧೯೫ ॥

ಪ್ರಭಾಂ ಹಿರಣ್ಮಯೀಂ ಕಲ್ಪವೃಕ್ಷೇಣ ಸುಮನೋಹರಾಂ ।
ವಾಹನಾನಿ ಚ ಸರ್ವಾಣಿ ವೃಷರಾಜಮುಖಾನಿ ಚ ॥ ೧೯೬ ॥

ಮೌಕ್ತಿಕಂ ಹೇಮಕಂ ಚಾಪಿ ಪೀಠಂ ಸಿಂಹಾಸನಾದಿ ಚ ।
ಛತ್ರಚಾಮರವೃಂದಂ ಚ ಕ್ಷೇತ್ರಾಣಿ ಸುಬಹೂನ್ಯಪಿ ॥ ೧೯೭ ॥

ದತ್ವಾ ಸಂಪ್ರೀಣಯಾಮಾಸ ಮೀನಾಕ್ಷೀಂ ಸುಂದರೇಶ್ವರಂ ।

॥ ಅಗಸ್ತ್ಯ ಉವಾಚ ॥

ಇತಿ ಸುಂದರಪಾಂಡ್ಯಸ್ತು ಶಿವಭಕ್ತಿಶಿಖಾಮಣಿಃ ।
ಅಭವತ್ ಜ್ಞಾನಪೂರ್ಣೇನ ಕ್ಷಪಣತ್ವಂ ವಿಹಾಯ ಚ ॥ ೧೯೮ ॥

ಶಂಭೋರ್ದ್ವಿಷಷ್ಟಿಲೀಲೇಯಂ ದಂಭೋಲಿಃ ಪಾಪಭೂಭೃತಾಂ ।
ಜ್ಞಾನವಿಜ್ಞಾನಲಾಭಾಯ ಶ್ರೋತವ್ಯಾ ಸಜ್ಜನೈಸ್ಸದಾ ॥ ೧೯೯ ॥

---

೧೯೫-೧೯೭ ಸುಂದರ ಪಾಂಡ್ಯರಾಜನು. ಯಾವಾಗಲೂ ಸುಂದರೇಶನನ್ನು ಸ್ಮರಿಸುತ್ತಾ ಜಗತ್ಪತಿಯಾದ ಆ ದೇವನಿಗೆ ಬೆಲೆಬಾಳುವ ಆಭರಣಗಳನ್ನೂ ಚಿನ್ನದ ಪ್ರಭಾವಳಿ, ಕಲ್ಪವೃಕ್ಷ, ವೃಷಭವೇ ಮೊದಲಾದ ಅನೇಕ ವಾಹನಗಳನ್ನೂ ಒಪ್ಪಿಸಿದನು. ಆ ರಾಜನು ಮುತ್ತಿನಪೀಠ. ಸಿಂಹಾಸನ. ಛತ್ರ, ಚಾಮರ, ಇದೇ ಮೊದಲಾದುವುಗಳನ್ನೂ, ಬಹಳ ಬೆಲೆಯುಳ್ಳ ಭೂಮಿಯನ್ನೂ ಒಪ್ಪಿಸಿ ಮೀನಾಕ್ಷೀ ಸಹಿತನಾದ ಸುಂದರೇಶ್ವರನನ್ನು ಸೇವೆ ಮಾಡಿ ಸಂತೋಷ ಪಡಿಸಿದನು.

೧೯೮-೧೯೯. ಅಗಸ್ತ್ಯ ಋಷಿಯು ಹೇಳಿದನು:—ಸುಂದರ ಪಾಂಡ್ಯರಾಜನು ನಾಸ್ತಿಕನಾಗಿರುವುದನ್ನು ಬಿಟ್ಟು ಜ್ಞಾನಪೂರ್ಣಯೋಗಿಯಿಂದ ಶಿವಭಕ್ತರಲ್ಲಿ ಶ್ರೇಷ್ಠನಾದನು. ಪರ್ವತದಂತೆ ಇರುವ ಪಾಪಗಳಿಗೆ ವಜ್ರಾಯುಧದಂತೆ ಇರುವ ಶಿವನು ಆಚರಿಸಿದ ಅರುವತ್ತೆರಡನೆಯ ಲೀಲೆಯನ್ನು ಸಜ್ಜನರು ಕೇಳಿ, ಜ್ಞಾನ ವಿಜ್ಞಾನಗಳನ್ನು ಹೊಂದುವರು.

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಕುಬ್ಜಪಾಂಡ್ಯಜ್ವರಶಮನಂ ನಾಮ
ಅಷ್ಟಷಷ್ಟಿತಮೋಽಧ್ಯಾಯಃ

---

ಸಂಪದ್ಯುಕ್ತವಾದ ಸ್ಕಾಂದ ಪುರಾಣದ ಅಗಸ್ತ್ಯ ಸಂಹಿತೆಯ ಹಾಲಾಸ್ಯ
ಮಾಹಾತ್ಮ್ಯೆಯಲ್ಲಿ ಕುಬ್ಜ ಪಾಂಡ್ಯ ಜ್ವರಶಮನವೆಂದು ಹೆಸರುಳ್ಳ
ಅರವತ್ತೆಂಟನೆಯ ಅಧ್ಯಾಯವು ಮುಗಿದಿರುವುದು



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕೋನಸಪ್ತತಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಜ್ಞಾನಪೂರ್ಣೇನ ಭೂತೇಶ ಸ್ತ್ರರುಶೂಲಾಧಿರೋಹಣಂ ।
ನಗ್ನಾನಾಂ ಕಾರಯಾಮಾಸ ಸಾ ಲೀಲಾದ್ಯ ಮಯೋಚ್ಯತೆ ॥ ೧ ॥

ಕುಲಬಂಧನಮಂತ್ರೀ ಚ ರಾಜ್ಞೀ ಚ ವನಿತೇಶ್ವರೀ ।
ಜ್ಞಾನಪೂರ್ಣಂ ಸಮಭ್ಯೇತ್ಯ ರಹಸ್ಯೇವಮುವೋಚತಾಂ ॥ ೨ ॥

ಶ್ರೀಜ್ಞಾನಪೂರ್ಣಸಂಬಂಧ ಶ್ರೀಮದ್ವೈದಿಕವಾರಣ ।
ವೈದಿಕಾನಾಂ ಸ್ಥಾಪನಾಯ ವೇದೇತರಕುಮಾರ್ಗಿಣಾಂ ॥ ೩ ॥

---

### ಅರವತ್ತೊಂಬತ್ತನೆಯ ಅಧ್ಯಾಯವು

೧-೨. ಅಗಸ್ತ್ಯಋಷಿಯು ಹೇಳಿದನು :—ಪರಮೇಶ್ವರನು ಜ್ಞಾನಪೂರ್ಣ ಯೋಗಿಯ ಮೂಲಕವಾಗಿ ಬೌದ್ಧ ಮಂತ್ರವಾದಿಗಳನ್ನು ಶೂಲಕ್ಕೆ ಹಾಕಿಸಿದ ಲೀಲೆಯನ್ನು ವಿವರಿಸುವೆನು. ಕುಲಬಂಧನ ಮಂತ್ರಿಯೂ, ರಾಣಿಯಾದ ವನಿತೇಶ್ವರಿಯೂ ಜ್ಞಾನಪೂರ್ಣ ಯೋಗಿಯ ಹತ್ತಿರಕ್ಕೆ ಬಂದು ರಹಸ್ಯವಾಗಿ ಹೇಳಿದರು.

೩-೬. "ವೈದಿಕ ಮಾರ್ಗದಲ್ಲಿ ಪ್ರವರ್ತಕನಾದ ಜ್ಞಾನಪೂರ್ಣ ಯೋಗಿಯೇ ಎಲೈ ಪೂಜ್ಯನೇ ನೀನು ವೇದಮಾರ್ಗವನ್ನು ಭೂಮಿಯಲ್ಲಿ ಸ್ಥಾಪಿಸುವುದಕ್ಕಾಗಿಯೂ

**ಅನುಗ್ರಹಾಯ ಶಿಕ್ಷಾರ್ಥಂ ಭುವನೇ ಧೃತವಿಗ್ರಹಃ ।**
**ರಕ್ಷಾರ್ಥ ಮಾವಯೋಶ್ಚೈವ ಪಾಂಡ್ಯರಾಜಾವನಾಯ ಚ ॥ ೪ ॥**

**ಪಾಂಡ್ಯದೇಶಜಭಕ್ತಾನಾಂ ರಕ್ಷಣಾಯಾಗತೋಽಸಿ ಭೋ ।**
**ಲೋಕೇ ನಗ್ನಾದಿಭೂಯಿಷ್ಠೈಃ ಶೈವಃ ಪ್ರಮುಷಿತೋ ಮತಃ ॥ ೫ ॥**

**ತಸ್ಮಾಚ್ಚಾಸ್ಮಾಸ್ತ್ವಯಾ ನಗ್ನಾ ಉಪಾಯೈರ್ಬುದ್ಧಿನುತ್ತಮೈಃ ।**
**ರಾಜ್ಞಃ ಸ್ನೇಹೋ ನ ವಿಶ್ವಾಸ್ಯಃ ಸ್ವಚ್ಛಂದಸ್ಯ ಮಹೀಕ್ಷಿತಃ ॥ ೬ ॥**

**ಅತಸ್ತ್ವಂ ಕುರು ನಗ್ನಾನಾಂ ಶಾಸನಂ ಜ್ಞಾನಪೂರ್ವಕಂ ।**
**ಶೃಣು ರಾಜನ್ಗುರೋಸ್ವಾಮಿನ್ನಾವಯೋ ರ್ಗುಣವಿಗ್ರಹ ॥ ೭ ॥**

**ಕ್ಷಪಣಾಸ್ತೇ ಮಹಾಪಾಪಾ ಸ್ಸಂಖ್ಯಯಾಷ್ಟಸಹಸ್ರಕಾಃ ।**
**ವಶ್ಯಾಕರ್ಷಣವಿದ್ವೇಷಸ್ತಂಭನೋಚ್ಚಾಟನಾದಿಷು ॥ ೮ ॥**

---

ವೇದಬಾಹ್ಯರಾದ ನಾಸ್ತಿಕರನ್ನು ನಿಗ್ರಹ ಮಾಡುವುದಕ್ಕಾಗಿಯೂ, ಜನ್ಮವನ್ನು ಹೊಂದಿರುತ್ತೀಯೆ. ನೀನು ನಮ್ಮನ್ನೂ, ಪಾಂಡ್ಯರಾಜನನ್ನೂ, ಪಾಂಡ್ಯ ದೇಶದ ಶಿವ ಭಕ್ತರನ್ನೂ ರಕ್ಷಿಸುವುದಕ್ಕಾಗಿ ಮಧುರಾನಗರಕ್ಕೆ ಬಂದಿರುತ್ತೀಯೆ. ಈಗ ಭೂಲೋಕದಲ್ಲಿ ವೇದನಿಂದಕರಾದ ಜನಗಳು ಹೆಚ್ಚಿರುವ ಕಾರಣ ಶೈವ ಮಾರ್ಗವು ನಶಿಸಿ ಹೋಗುತ್ತಿರುವುದು. ಆದ್ದರಿಂದ ನೀನು ವೇದ ದೂಷಕರಾದವರನ್ನು ಬುದ್ಧಿವಂತಿಕೆಯಿಂದ ಕೂಡಿರುವ ಉಪಾಯಗಳಿಂದ ನಿಗ್ರಹವನ್ನು ಮಾಡು. ರಾಜನ ವಿಶ್ವಾಸವು ನಂಬತಕ್ಕದ್ದಲ್ಲವು. ಅವನು ಯಾವಾಗಲೂ ತನ್ನ ಇಚ್ಛಾನುಸಾರವಾಗಿ ಇರುವವನು.

೭–೧೧. ಈ ಕಾರಣದಿಂದ ವೇದಬಾಹ್ಯರ ನಿಗ್ರಹವು ನಿನ್ನಿಂದಲೇ ಆಗ ಬೇಕಾಗಿರುವುದು. ಎಲೈ ಗುರುವೇ ಜ್ಞಾನಪೂರ್ಣ ಯೋಗಿಯೇ? ಗುಣವಂತನೇ? ಕೇಳು. ಈ ಮಂತ್ರವಾದಿಗಳು ಎಂಟು ಸಾವಿರ ಜನರು ಇರುವರು. ಇವರು ಬಹಳ

ಕರ್ಮಸ್ವತಿಪ್ರವೀಣಾಶ್ಚ ಘೃಣಾರಹಿತಬುದ್ಧಯಃ ।
ತೇಷಾಂ ಚರಿತ್ರಂ ಕಥಿತು ಮಾವಯೋರ್ಭಯ ಮಾವಿಶೇತ್ ॥ ೯ ॥

ಸಹಾಯಭೂತ ಶ್ಚಾಸ್ಮಾಕ ಮತ್ರ ಕೋಽಪಿ ನ ವಿದ್ಯತೇ ।
ಕೃತ್ವಾ ಚ ಶಾಸನಂ ತೇಷಾಂ ಪಶ್ಚಾದ್ಗಂತುಂ ತ್ವಮರ್ಹಸಿ ॥ ೧೦ ॥

ಶ್ರೀಮದ್ವ್ಯಾಘ್ರಪುರಂ ಬ್ರಹ್ಮಾವಸ ತ್ವಂ ವತ್ಸರಂ ತ್ವಿಹ ।
ರಕ್ಷಣಾರ್ಥಂ ಪ್ರಾರ್ಥನಯಾ ಆವಯೋರಿತಿ ಚೋಚತುಃ ॥ ೧೧ ॥

ಇತಿ ತತ್ಪ್ರಾರ್ಥನಾಂ ಶ್ರುತ್ವಾ ಮಹಾನ್ವೈದಿಕವಾರಣಃ ।
ಪ್ರಾಹ ಪ್ರಗಲ್ಭಯಾ ವಾಚಾ ಶಂಕರಂ ಹೃದಿ ಭಾವಯನ್ ॥ ೧೨ ॥

ಯಸ್ಯೇಶ್ವರಬಲೋಽಲ್ಪೋಽಪಿ ವಿದ್ಯತೇ ತಸ್ಯ ಜನ್ಮನಃ ।
ಸಿಧ್ಯಂತಿ ಸರ್ವಕಾರ್ಯಾಣಿ ಸದ್ಯೋ ನಶ್ಯಂತಿ ವೈರಿಣಃ ॥ ೧೩ ॥

---

ಪಾಪ ಕೆಲಸಗಳನ್ನು ಮಾಡುವರು. ಜನರಿಗೆ ಹಿಂಸೆಯನ್ನು ಉಂಟುಮಾಡುವ ವಶ, ಆಕರ್ಷಣ, ವಿದ್ವೇಷಣ, ಸ್ತಂಭನ, ಉಚ್ಚಾಟನ, ಮಾರಣ ಎಂಬ ಕೆಲಸಗಳನ್ನು ಮಾಡುವುದರಲ್ಲಿ ನಿಪುಣರು. ಇವರಿಗೆ ಪ್ರಾಣಿಗಳ ವಿಷಯದಲ್ಲಿ ದಯೆಯು ಕೊಂಚವೂ ಇರುವುದಿಲ್ಲ. ಇವರ ನಡತೆಯನ್ನು ಹೇಳುವ ನಮಗೆ ಭಯವು ಉಂಟಾಗುತ್ತಿರುವುದು. ಇಲ್ಲಿ ನಮಗೆ ಸಹಾಯ ಮಾಡುವವರು ಯಾರೂ ಇಲ್ಲವು. ಆದ್ದರಿಂದ ನೀನು ಇವರೆಲ್ಲರನ್ನೂ ನಿಗ್ರಹ ಮಾಡಿದ ನಂತರ ಇಲ್ಲಿಂದ ಪ್ರಯಾಣ ಮಾಡು. ಚಿದಂಬರಕ್ಕೆ ಹೋಗುನವರಿಗೂ ಒಂದು ವರ್ಷ ನಮ್ಮ ರಕ್ಷಣೆಗಾಗಿ ಇಲ್ಲಿಯೇ ವಾಸಮಾಡು ಎಂದು ನಾವು ಪ್ರಾರ್ಥಿಸುತ್ತಿರುವೆವು."

೧೨–೧೫. ಜ್ಞಾನಪೂರ್ಣಯೋಗಿಯು ಇವರ ಪ್ರಾರ್ಥನೆಯನ್ನು ಕೇಳಿಶಿವನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ, ಪರಮೇಶ್ವರನ ಅನುಗ್ರಹವು ಕೊಂಚಮಟ್ಟಿಗೆ ಇದ್ದರೂ ಅದರಿಂದ ಕಾರ್ಯಸಿದ್ಧಿಯು ಉಂಟಾಗುವುದು. ಮತ್ತು ಶತ್ರುಗಳೆಲ್ಲರೂ ನಾಶವನ್ನು ಹೊಂದುವರು, ಎಂದು ನಿಶ್ಚಯ ಮಾಡಿಕೊಂಡು ಯಾವ

ಇತಿ ನಿಶ್ಚಿತ್ಯ ಸುದೃಢಂ ವರ್ತಧ್ವಂ ಚಿಂತಯಾ ವಿನಾ ।
ಲಬ್ಧ್ವಾ ನುಜ್ಞಾಮುಮೇಶಸ್ಯ ಸುಂದರೇಶಸ್ಯ ಶಾಸನೇ　　॥ ೧೪ ॥

ನಗ್ನಾನಾಂ ಶ್ವಃ ಕರೋಮ್ಯದ್ಯ ಗಮ್ಯತಾಂ ಮಂದಿರಂ ಪ್ರತಿ ।
ಧೈರ್ಯಾದ್ಯುಕ್ತ್ವಾ ಚ ತಾವೇವ ಪ್ರೇಷಯಾಮಾಸತುರ್ದಿನೇ　　॥ ೧೫ ॥

ಪರೇದ್ಯುಃ ಪ್ರಾತರುತ್ಥಾಯ ಮಹಾನ್ವೈದಿಕವಾರಣಃ ।
ನಿತ್ಯಕರ್ಮಾಣಿ ಸರ್ವಾಣಿ ಯಮಾಂಶ್ಚ ವಿನಿಧಾಯ ಚ　　॥ ೧೬ ॥

ಶಂಭೋರನುಜ್ಞಾಂ ನಗ್ನಾನಾಂ ಹಿಂಸಾಯೈ ಲಬ್ಧುಮುದ್ಯತಃ
ರಾಜ್ಞಃ ಕಲತ್ರಮಂತ್ರಿಭ್ಯಾಂ ಸಹಿತಃ ಪ್ರಯಯೌ ಶಿವಂ　　॥ ೧೭ ॥

ಮೀನಾಕ್ಷೀಂ ಸಂಪ್ರಣಮ್ಯ ಇಭಂ ವಿಘ್ನೇಶಮೇವ ಚ ।
ಸುಂದರೇಶಾಲಯಂ ಪ್ರಾಪ್ಯ ಸರ್ವಾವರಣದೈವತೈಃ　　॥ ೧೮ ॥

---

ಯೋಚನೆಯನ್ನೂ ಮಾಡದೆ ನೆಮ್ಮದಿಯಿಂದ ನೀವು ವಾಸಮಾಡಿರಿ. ಪಾರ್ವತೀ ಪರಮೇಶ್ವರರ ಸಮ್ಮತಿಯಿಂದ ನಾಳೆಯದಿನ ಮಂತ್ರವಾದಿಗಳ ನಿಗ್ರಹವನ್ನು ಮಾಡುವೆನು. ನೀವು ಮನೆಗೆ ಹೋಗಿರಿ, ಎಂದು ಧೈರ್ಯದಿಂದ ಹೇಳಿ ಜ್ಞಾನ ಪೂರ್ಣಯೋಗಿಯು ಅವರನ್ನು ಕಳುಹಿಸಿದನು.

೧೬-೧೮. ಮಾರನೆಯ ದಿವಸ ಬೆಳಗಾದ ಕೂಡಲೇ ಎದ್ದು ಜ್ಞಾನಪೂರ್ಣ ಯೋಗಿಯು ನಿತ್ಯಕರ್ಮಗಳೆಲ್ಲವನ್ನೂ ಮತ್ತು ತನ್ನ ನಿಯಮದಿಂದ ಮಾಡ ಬೇಕಾದ ಕಾರ್ಯಗಳೆಲ್ಲವನ್ನೂ ನೆರವೇರಿಸಿಕೊಂಡನು. ಅನಂತರ ಮಂತ್ರವಾದಿಗಳನ್ನು ನಿಗ್ರಹ ಮಾಡುವುದಕ್ಕಾಗಿ ಸುಂದರೇಶ್ವರನ ಅನುಜ್ಞೆಯನ್ನು ಹೊಂದಲು ಪ್ರಯತ್ನ ಪಟ್ಟನು. ಅವನು ಮಂತ್ರಿ ಮತ್ತು ರಾಣಿ ಇವರೊಡನೆ ಸುಂದರೇಶ್ವರನ ದೇವಾಲಯಕ್ಕೆ ಹೋದನು. ಮೀನಾಕ್ಷೀದೇವಿ, ವಿಘ್ನೇಶ್ವರ ಇವರನ್ನು ನಮಸ್ಕರಿಸಿ ದನು. ಆವರಣ ದೇವತೆಗಳೊಡನೆ ಇರುವ ಸುಂದರೇಶ್ವರನನ್ನು ಸ್ತೋತ್ರಮಾಡಿ ನಮಸ್ಕರಿಸಿ ಪ್ರಾರ್ಥಿಸಿದನು.

ನತ್ವಾ ಸ್ತುತ್ವಾ ಸುಂದರೇಶಮೇವಂ ಸಂಪ್ರಾರ್ಥಯಚ್ಛಿವಂ।
ಸ್ವಾಮಿನ್ ಸರ್ವ ಜಗನ್ನಾಥ ಸರ್ವಜ್ಞ ಶಶಿಶೇಖರ ॥ ೧೯ ॥

ಸುಂದರೇಶ್ವರ ಭಕ್ತಾನಾಮಿಷ್ಟಸಿದ್ಧಿಪ್ರದಾಯಕ ।
ಕ್ಷಪಣಾನಷ್ಟಸಾಹಸ್ರಾನ್ ಪರ್ವತೇ ಷ್ವಷ್ಟಸುಸ್ಥಿತಾನ್ ॥ ೨೦ ॥

ಪ್ರಧಾನಭೂತಾನಾಚಾರ್ಯಾಂ ಸ್ತಚ್ಛಿಷ್ಯಾನಪರಾನಪಿ ।
ವಯಂ ಶಿಕ್ಷಿತುಮಿಚ್ಛಾಮೋ ವೈದಿಕಸ್ಥೈರ್ಯಹೇತವೇ ॥ ೨೧ ॥

ತವಾಪಿ ತತ್ಕ್ರಿಯೇಷ್ಟಾ ಚೇದಸ್ಮಾನಾಜ್ಞಾಪಯ ಪ್ರಭೋ ।
ವಿಜಯಂ ಚಾಪಿ ವಾದೇಷು ಕ್ರಿಯಾಸ್ವಪಿ ಚ ನಃ ಕುರು ॥ ೨೨ ॥

ಇತ್ಯುಕ್ತ್ವಾ ನಿಶ್ಚಲಸ್ತಸ್ಥೌ ಸಾಂಬಂ ಹೃದಿ ಸುಭಾವಯನ್ ।
ತದಾ ವ್ಯೋಮ್ನಿ ಪ್ರಾದುರಾಸೀದ್ವಾಣೀ ನೀಪಾಟವೀಶಿತುಃ ॥ ೨೩ ॥

---

೧೯-೨೩. "ಎಲೈ ಪ್ರಭುವೇ, ಸರ್ವಲೋಕಾಧಿಪನೇ, ಸರ್ವಜ್ಞನೇ, ಚಂದ್ರಶೇಖರನೇ, ವೇದ ದೂಷಕರಾದ ಮಂತ್ರವಾದಿಗಳು ಎಂಟುಸಾವಿರ ಜನರು ಇರುವರು. ಇವರು ಎಂಟು ಪರ್ವತಗಳಲ್ಲಿ ವಾಸಮಾಡುತ್ತಿರುವರು. ಇವರಲ್ಲಿ ಮುಖ್ಯರಾದ ಗುರುಗಳು, ಶಿಷ್ಯರು, ಇವರೇ ಮೊದಲಾದವರೆಲ್ಲರನ್ನೂ ವೇದಮಾರ್ಗದ ರಕ್ಷಣೆಗಾಗಿ ನಿಗ್ರಹ ಮಾಡಲು ನಾವು ಇಚ್ಛೆಯುಳ್ಳವರಾಗಿ ಇರುತ್ತೇವೆ. ಈ ಕಾರ್ಯವನ್ನು ನಾವು ಮಾಡುವುದು ನಿನಗೆ ಸಮ್ಮತವಾಗಿದ್ದಲ್ಲಿ-ನಮಗೆ ಆಜ್ಞೆಯನ್ನು ಅನುಗ್ರಹಿಸು. ಇವರ ಸಂಗಡ ನಾವು ನಡೆಸುವ ವಾದದಲ್ಲಿ ನಮಗೆ ಜಯವಾಗಲಿ. ನಮ್ಮ ಕಾರ್ಯವೂ ಸಿದ್ಧಿಯನ್ನು ಹೊಂದಲಿ." ಎಂದು ಜ್ಞಾನಪೂರ್ಣಯೋಗಿಯು ಶಿವನನ್ನು ಬೇಡಿಕೊಂಡು, ಶಿವನನ್ನು ಧ್ಯಾನಮಾಡುತ್ತಾ ನಿಂತನು. ಆಗ ನೀಪಾರಣ್ಯಪ್ರಭುವಾದ ಸುಂದರೇಶ್ವರನು ಆಕಾಶವಾಣಿಯ ಮೂಲಕವಾಗಿ ಹೇಳಿದನು.

ಮದ್ಭಕ್ತಾನಾಮಭೀಷ್ಟಂ ಯತ್ತನ್ಮಮಾಭೀಷ್ಟಮೇವ ಹಿ ।
ನಿಗ್ರಹಾಯಾವೈದಿಕಾನಾಂ ವೈದಿಕಾನುಗ್ರಹಾಯ ಚ　　॥ ೨೪ ॥

ಜಯೋ ಭವತು ಯುಷ್ಮಾಕಂ ನಗ್ನಾನಾಂ ಚ ಪರಾಜಯಃ ।
ಇತಿ ಶ್ರುತ್ವಾ ಶಂಭುವಾಕ್ಯಂ ಜ್ಞಾನಸಂಬಂಧಪೂರ್ವಕಾಃ　　॥ ೨೫ ॥

ಪುನಸ್ತಸ್ಥು ರ್ಮುದಾ ಯುಕ್ತಾ ಶ್ಶಂಭೋರಗ್ರೇ ಶಿವಂ ಸ್ಮರನ್ ।
ಪುನಶ್ಚ ವಾಣೀ ಸಾ ಸಾಮ್ಯಕ್ ಸುವ್ಯಕ್ತಂ ಶೃಣ್ವತಾಮಿಹ　　॥ ೨೬ ॥

ಯೂಯಂ ಬುಧ್ವಾ ವಾಕ್ಯಮಿದಂ ಸಾಧ್ವಸಂ ಪ್ರವಿಹಾಯ ಚ ।
ಪಾಂಡ್ಯಭೂಪಸ್ಯ ಪುರತೋ ಭವದ್ಭಿರ್ವಿಜಯೈಷಿಭಿಃ　　॥ ೨೭ ॥

ತೈರ್ವಿವಾದಶ್ಚ ಕರ್ತವ್ಯಃ ಕುತರ್ಕಕಶಲ್ಯೈರ್ಜನೈಃ ।
ಕಲಹಾಯಾಗಮಿಷ್ಯಂತಿ ನಗ್ನಾ ಆಸನ್ನಮೃತ್ಯವಃ　　॥ ೨೮ ॥

ಸ್ವಯಮೇವಾಗಮಿಷ್ಯಂತಿ ತೇ ಸರ್ವೇsಪ್ಯಾಜ್ಞಯಾ ಮಮ ।
ಭವಿಷ್ಯತ್ಯೇವ ತೇಷಾಂ ಚ ತರುಶೂಲಾಧಿರೋಹಣಂ　　॥ ೨೯ ॥

---

೨೪-೩೦. "ನಿಮಗೆ ಜಯವಾಗುವುದು. ಬೌದ್ಧರಿಗೆ ಅಪಜಯವು ಆಗುವುದು." ಎಂದು ತಿಳಿಸಿದ ಶಿವನ ಮಾತನ್ನು ಕೇಳಿ ಜ್ಞಾನಸಂಬಂಧ ಯೋಗಿಯೇ ಮೊದಲಾದವರು ಸಂತೋಷದಿಂದ ಶಿವನ ಮುಂದುಗಡೆಯಲ್ಲಿ ಪರಮೇಶ್ವರನನ್ನು ಸ್ಮರಿಸುತ್ತಾ ನಿಂತಿದ್ದರು. ಆಗ ಅವರೆಲ್ಲರೂ ಚನ್ನಾಗಿ ಕೇಳುವಂತೆ ಸ್ಪಷ್ಟವಾಗಿ ಆಕಾಶವಾಣಿಯು ಪುನಃ ಹೇಳಲುಪಕ್ರಮಿಸಿತು. "ನೀವು ಈ ಮಾತುಗಳನ್ನು ಚನ್ನಾಗಿ ನೆನಪಿನಲ್ಲಿಡಿರಿ. ನೀವು ಹೆದರಿಕೆಯನ್ನು ಬಿಟ್ಟು ಪಾಂಡ್ಯರಾಜನ ಸಂಗಡ ಇರುತ್ತಾ ಕೆಟ್ಟ ಮಾರ್ಗದಿಂದ ಶಾಸ್ತ್ರವಿಚಾರವನ್ನು ಮಾಡುವ ನಾಸ್ತಿಕರೊಡನೆ ವಿವಾದವನ್ನು ಮಾಡಿರಿ. ನಿಮಗೆ ನಿಮ್ಮ ಇಷ್ಟದಂತೆ ಜಯವು ಉಂಟಾಗುವುದು. ಆ ಮಂತ್ರವಾದಿಗಳೆಲ್ಲರೂ ನನ್ನ ಆಜ್ಞಾನುಸಾರವಾಗಿ ನಿಮ್ಮೊಡನೆ ವಿವಾದ ಮಾಡುವುದಕ್ಕೆ ತಾವಾಗಿಯೇ ಬರುವರು. ಅವರಿಗೆ ಮರಣಕಾಲವೂ ಹತ್ತಿರದಲ್ಲಿ ಇರುವುದು. ಅವರಿಗೆ ಮರದಲ್ಲಿ ಮಾಡಿರುವ ಶೂಲಕ್ಕೇರಿಸುವ ಶಿಕ್ಷೆಯೂ ಆಗುವುದು. ನನ್ನ

ಮದ್ಭಕ್ತಾನಾಮಶೇಷಾಣಾಂ ವಿಜಯ ಶ್ಚ ಭವಿಷ್ಯತಿ ।
ಇತ್ಯುದೀರಿತಮಾಕರ್ಣ್ಯ ಶಂಭುನಾ ವ್ಯೋಮಮೂರ್ತಿನಾ ॥ ೩೦ ॥

ಮಂತ್ರಿಣಾ ವನಿತೇಶ್ವರ್ಯಾ ಸಾರ್ಧಂ ವೈದಿಕವಾರಣಃ ।
ಲಬ್ಧ್ವಾ ಸಂಜ್ಞಾ ಮನಂತಾಂ ಚ ಪ್ರಣಮ್ಯೇಶಂ ಪುನಃ ಪುನಃ ॥ ೩೧ ॥

ತಯೋರಾನನಮನ್ವೀಕ್ಷ್ಯ ಕೃತಕೃತ್ಯ ಇವಾಭವತ್ ।
ವಿಶ್ವಾಸಾತಿಶಯೇನೈವ ಜ್ಞಾನಪೂರ್ಣಶ್ಚ ತಾವುಭೌ ॥ ೩೨ ॥

ತ್ರಯಸ್ತೇ ಬಂಧಯಾಮಾಸುಶ್ಚೇಲಾಂತೇ ವಾಙ್ಮಯಂ ಮಣಿಂ ।
ಅಥ ಪ್ರಣಮ್ಯ ಪ್ರಸ್ತುತ್ಯ ಸುಂದರೇಶಂ ಸಸಾದರಂ ॥ ೩೩ ॥

ಸ್ವಂ ಸ್ವಮಾವಾಸಮುಪ್ಯಾಶು ಕೃತಾಹಾರಾಃ ಕೃತೋದ್ಯಮಾಃ ।
ಪುನಶ್ಚ ಚಿಂತಯಾಮಾಸು ಸ್ಸಾಯಂ ಸಂಭೂಯ ಮಂಟಪೇ ॥ ೩೪ ॥

---

ಭಕ್ತರಿಗೆಲ್ಲರಿಗೂ ಜಯವು ಆಗುವುದು ಸತ್ಯವಾದದ್ದು." ಆಕಾಶ ಮೂರ್ತಿಯಾಗಿರುವ ಹಾಲಾಸ್ಯೇಶ್ವರನಾದ ಶಿವನು ಆಕಾಶವಾಣಿಯಿಂದ ಹೇಳಿದ ಈ ಮಾತುಗಳನ್ನು ಕುಲ ಬಂಧನ ರಾಜನೂ, ವನಿತೇಶ್ವರಿ ರಾಣಿಯೂ, ಜ್ಞಾನಸಂಬಂಧ ಯೋಗಿಯೂ ಈ ಮೂರು ಜನರೂ ಕೇಳಿದರು.

೩೧–೩೪. ಆಗ ಅವನು ಈಶ್ವರನಿಗೆ ಅನೇಕಸಾರಿ ನಮಸ್ಕಾರವನ್ನು ಮಾಡಿ ಅನುಜ್ಞೆಯನ್ನು ಹೊಂದಿ, ಅವರಿಬ್ಬರ ಮುಖವನ್ನು ನೋಡಿ ಕೃತಕೃತ್ಯನಾದವನಂತೆ ಸಂತೋಷವಾಗಿದ್ದನು. ಬಹಳ ವಿಶ್ವಾಸವುಳ್ಳವರಾದ ಅವರು ಮೂರು ಜನಗಳೂ, ಈ ಪ್ರತಿಜ್ಞೆಮಾಡಿದರು. ಮುಂದೆ ಕಾರ್ಯವನ್ನು ನೆರವೇರಿಸುವ ವಿಚಾರದಲ್ಲಿ ಪರಸ್ಪರ ವಾಗಿ ಮಾತನ್ನು ನಿಷ್ಕರ್ಷೆ ಮಾಡಿಕೊಂಡರು. ಅನಂತರದಲ್ಲಿ ಅವರು ಸುಂದರೇಶ್ವರ ನನ್ನು ಸ್ತೋತ್ರಮಾಡಿದರು. ತಮ್ಮ ತಮ್ಮ ಮನೆಗಳಿಗೆ ಬಂದು ಬೇಗನೆ ಭೋಜ ನಾದಿ ಕಾರ್ಯಗಳನ್ನು ನೆರವೇರಿಸಿಕೊಂಡು ಸಾಯಂಕಾಲದಲ್ಲಿ ಮಂಟಪದಲ್ಲಿ ಮೂರು ಜನಗಳೂ ಸೇರಿ ಮಂತ್ರಾಲೋಚನೆಯನ್ನು ಮಾಡಿದರು.

ಸ್ತ್ರೀವಚಃ ಶೃಣ್ವತಾಂ ಪುಂಸಾಮತ್ಯನರ್ಥೋ ಭವಿಷ್ಯತಿ ।
ಇತಿ ಬ್ರುವಂತೋ ನಗ್ನಾಸ್ತೇ ಪ್ರಯಯುಃ ಮಧುರಾಂ ಪ್ರತಿ ॥ ೩೨ ॥

ಅಥ ಸರ್ಪಾಸ್ಸೃಗಾಲಾಶ್ಚ ಬಿಡಾಲಾ ವಿಧವಾಧಯಃ ।
ಆಯಾತಾಭಿಮುಖಾಸ್ಸರ್ವೇ ಕ್ರಮಾದ್ದುಃಶಕುನ್ಯಾಭವನ್ ॥ ೩೩

ಪಕ್ಷಿಣೋಽಪಿ ಪುರಸ್ತಿರ್ಯಗ್ಯಯುಶ್ಚ ವಿಪರೀತತಃ ।
ಗವಾಕ್ಷುತಂ ಮಾನುಷಂ ಚ ಪ್ರಯಾಣೇತ್ಯಂತಗರ್ಹಿತಂ ॥ ೩೪ ॥

ದೃಷ್ಟ್ವಾಽಪಿ ಪ್ರಯಯು ಸ್ಸರ್ವೇ ನಗ್ನಾ ಆಹೂತಮೃತ್ಯವಃ ।
ತೇಷಾಂ ಶಿಷ್ಯಪ್ರಶಿಷ್ಯಾಶ್ಚ ಪುರಸ್ತಾತ್ ತಾನ್ಪ್ರಣಮ್ಯ ಚ ॥ ೩೫ ॥

ಪ್ರೋಚುಃ ದುಶ್ಶಕುನೈರ್ಭೀತಾ ನಗಂತವ್ಯಮಿತಿ ಸ್ಫುಟಂ ।
ತಥಾಪ್ಯಗಚ್ಛನ್ ಕ್ಷಪಣಾಃ ಕಾರ್ಯಾಕಾರ್ಯಮಚಿಂತ್ಯ ಚ ॥ ೩೬ ॥

---

ಹಾಕಿದರು. "ಪ್ರಯಾಣ ಕಾಲದಲ್ಲಿಯಾಗಲಿ, ಯಾವಾಗಲಾದರೂ, ಹೆಂಗಸರ ಮಾತನ್ನು ಕೇಳಿದವರಿಗೆ ಬಹಳ ಕೆಡಕು ಉಂಟಾಗುವುದು." ಎಂದು ಹೇಳುತ್ತಾ ಅವರು ಮಧುರಾ ನಗರಕ್ಕೆ ಹೊರಟರು. ಇವರಿಗೆ ದಾರಿಯಲ್ಲಿ ಹಾವುಗಳೂ ನರಿಗಳೂ, ಬೆಕ್ಕುಗಳೂ, ವಿಧವೆಯರೂ ಎದುರಾಗಿ ಬಂದರು. ಹೀಗೆಯೇ ಕೆಟ್ಟ ಶಕುನಗಳಾದವು. ಹಕ್ಕಿಗಳು ಮುಂದುಗಡೆಯಲ್ಲಿಯೂ, ಅಡ್ಡಲಾಗಿಯೂ, ವಿಪರೀತವಾಗಿಯೂ ಸಂಚರಿಸಿದುವು ದನಗಳು ಸೀನುವುದು, ಮನುಷ್ಯರು ಸೀನುವುದು, ಇವುಗಳು ಪ್ರಯಾಣ ಕಾಲದಲ್ಲಿ ಕೆಟ್ಟ ಶಕುನಗಳಾಗಿರುವುವು. ಇವೆಲ್ಲವನ್ನೂ ಲೆಕ್ಕ ಮಾಡದೆ ಮಂತ್ರವಾದಿಗಳು ಮೃತ್ಯುವು ಕರೆದುಕೊಂಡು ಹೋಗುವಂತೆ ಮಧುರಾ ನಗರದ ಕಡೆಗೆ ಹೋಗುತ್ತಿದ್ದರು.

೩೫–೪೦. ಈ ಮಂತ್ರವಾದಿಗಳ ಶಿಷ್ಯರೂ, ಪ್ರಶಿಷ್ಯರೂ ಇವರ ಹತ್ತಿರಕೆ ಬಂದು ನಮಸ್ಕಾರ ಮಾಡಿ, ಈ ಅಪಶಕುನಗಳನ್ನು ನೋಡುತ್ತಾ ನೀವು ಹೆದರಬೇಡಿ ಎಂದು ಹೇಳಿದರು. ಆದಾಗ್ಯೂ ಅವರು ಲೆಕ್ಕಮಾಡದೆ ಯಾವ

ಇತಿ ನಿಶ್ಚಿತ್ಯ ತಂ ಪ್ರಾಪ್ಯ ತಸ್ಮೈ ತತ್ಕಾರ್ಯಮಬ್ರುವನ್ ।
ರಾಜಾಪಿ ತನ್ಮತಂ ಶ್ರುತ್ವಾನುಮೋನೇ ನಗ್ನಭಂಜನಂ ॥ ೪೧ ॥

ಲಬ್ಧ್ವಾssದೇಶಂ ಸುಂದರೇಶಾನ್ನೃಪಾಜ್ಞಾಂ ಚ ಪ್ರಪದ್ಯ ಚ ।
ಪ್ರಹರ್ಷಾತಿಶಯೇನೈವ ಜಹೌ ನಿದ್ರಾಂ ಚ ತನ್ನಿಶಿ ॥ ೪೨ ॥

ಕಲತ್ರಪುತ್ರಶಿಷ್ಯಾದ್ಯೈಃ ಸ್ವಜನೈಶ್ಚಾಪಿ ನಿಂದಿತಾಃ ।
ವ್ಯಲೀಕಾತಿಶಯೇನೈವ ನಗ್ನಾ ಅಪಿ ಚ ತಾಂ ಜಹುಃ ॥ ೪೩ ॥

ಪಾಂಡ್ಯಜ್ವರಂ ಶಮಯಿತುಂ ನ ಕ್ಷಮಾಃ ಕ್ಷಪಣಾ ಜನಾಃ ।
ತಿರಸ್ಕೃತಾ ನಿಂದಿತಾಶ್ಚ ಜ್ಞಾನಪೂರ್ಣಪರಾಜಿತಾಃ ॥ ೪೪ ॥

ವಿವಿಶುಃ ಸ್ವಂ ಸ್ವಮಾವಾಸಂ ವ್ರೀಳಾವನತಕಂಧರಾಃ ।
ಅಥೇತ್ಯಾಹುಸ್ತತ್ಕಲತ್ರಬೃಂದಾ ಸ್ತಾನ್ನಿರ್ದಯಾನ್ವಿತಾಃ ॥ ೪೫ ॥

---

ಧರ್ಮಾಚರಣೆಯ ಮಾರ್ಗವನ್ನು ರಕ್ಷಿಸಬೇಕು, ಎಂದು ಅವರು ಮೂರು ಜನರೂ ನಿಶ್ಚಯ ಮಾಡಿ, ರಾಜನ ಹತ್ತಿರಕ್ಕೆ ಹೋಗಿ, ತಾವು ಮಾಡಬೇಕೆಂದು ಇರುವ ಕೆಲಸ ಗಳೆಲ್ಲವನ್ನೂ ತಿಳಿಸಿದರು. ರಾಜನೂ ಅವರ ಅಭಿಪ್ರಾಯವನ್ನು ತಿಳಿದು ನಾಸ್ತಿಕರನ್ನು ನಾಶಮಾಡುವ ಕಾರ್ಯವನ್ನು ಮಾಡಲು ಒಪ್ಪಿದನು. ಜ್ಞಾನಪೂರ್ಣ ಯೋಗಿಯು ಸುಂದರೇಶ್ವರನ ಆಜ್ಞೆಯನ್ನೂ ರಾಜನ ಅಪ್ಪಣೆಯನ್ನೂ ಹೊಂದಿರುವ ಕಾರಣ ಬಹಳ ಸಂತೋಷವನ್ನು ಹೊಂದಿದನು. ಈ ಸಂತೋಷದಿಂದ ಅವನಿಗೆ ಆರಾತ್ರಿಯಲ್ಲಿ ನಿದ್ರೆಯು ಬರಲಿಲ್ಲ. ಆಯಾಸ ಉಂಟಾಗದೆ ಮನಸ್ಸಿನಲ್ಲಿ ಔತ್ಸುಕ್ಯವು ಹೆಚ್ಚಿತು.

೪೩–೪೫. ಪಾಂಡ್ಯರಾಜನ ಜ್ವರವನ್ನು ನಾಶಮಾಡುವುದಕ್ಕಾಗಿ ಜ್ಞಾನ ಪೂರ್ಣಯೋಗಿಯಿಂದ ಪರಾಜಿತರಾದ ನಾಸ್ತಿಕರಾದ ಮಂತ್ರವಾದಿಗಳು ಎಲ್ಲರೂ ತಮ್ಮ ತಮ್ಮ ಹೆಂಡತಿ, ಶಿಷ್ಯರು, ಮಕ್ಕಳು, ಇವರಿಂದಲೂ ತಿರಸ್ಕಾರವನ್ನು ಹೊಂದಿದರು. ಅದರಿಂದ ಅವರಿಗೆ ಬಹಳ ನಾಚಿಕೆಯು ಉಂಟಾಯಿತು. ಅವರು ನಿದ್ರೆಯನ್ನು ಮಾಡದೆ ವ್ಯಸನ ಪಡುತ್ತಿದ್ದರು. ಇವರು ತಮ್ಮ ಮನೆಯಲ್ಲಿ ವಾಸ ಮಾಡುತ್ತಿರುವಾಗ ಇವರ ಪೋಷಣೆಗೆ ಒಳಗಾದ ಪತ್ನಿಯೇ ಮೊದಲಾದವರು ಕೊಂಚವೂ ದಯವಿಲ್ಲದವರಾಗಿ ಇವರನ್ನು ನಿಂದಿಸಿದರು.

ಪ್ರವೀಣೈಃ ಕ್ಷಪಣಾಚಾರ್ಯೈಃ ಪ್ರಥಿತೈಃ ಪಿಂಛಭೂಷಿತೈಃ ।
ಪದವಾಕ್ಯಪ್ರಮಾಣಜ್ಞೈಃ ಪೂರ್ವಂ ಕೈಶ್ಚಿನ್ನ ನಿರ್ಜಿತೈಃ ॥ ೪೬ ॥

ಅಸ್ಮದ್ವಂಶಭವೈಃ ಪೂರ್ವೈರಾರ್ಜಿತಂ ಯದ್ಯಶೋ ಮಹತ್ ।
ಯುಷ್ಮಾಭಿರ್ನಿಹತಂ ಸದ್ಯಃ ಕುಪುತ್ರೈರಿವ ಸತ್ಕುಲಂ ॥ ೪೭ ॥

ಬಾಲೇನಾಪಜಯಂ ಲಬ್ಧ್ವಾ ಯೂಯಂ ಸರ್ವೇ ಹ್ರಿಯಾ ವಿನಾ ।
ರಾಜ್ಞಸ್ಸಕಾಶಾದಸ್ಮಾಕಂ ವಿಶೇಷೇಣ ತು ಸನ್ನಿಧೌ ॥ ೪೮ ॥

ಕಿಮರ್ಥಮಾಗತಾ ಯೂಯಂ ಜಲ್ಪದ್ವಂ ಮರಣಂ ವಿನಾ ।
ಗರ್ವಂ ಯದಾಸೀತ್ಪೂರ್ವಂ ತದಾಭಿಚಾರೇಣ ನಾಶಿತಂ ॥ ೪೯ ॥

ಗಜಸ್ಯ ಸೃಷ್ಟಿರ್ನಾಗಸ್ಯ ಸೃಷ್ಟಿ ರ್ಭೂತಸ್ಯ ಸೃಷ್ಟಿ ರಥಾದ್ಭುತಾ ।
ಅಸ್ಮತ್ಪೂರ್ವೈ ರಯುಕ್ತೇವ ಸುಕೃತಾ ಮಂತ್ರವೈಭವಾತ್ ॥ ೫೦ ॥

---

೪೬–೪೯. ನೀವೆಲ್ಲರೂ ನಾಸ್ತಿಕ ಸಿದ್ಧಾಂತದಲ್ಲಿ ನಿಪುಣರಾಗಿ ಬಹಳ ಪ್ರಸಿದ್ಧರಾದವರು. ನೀವು ನವಲುಗರಿಯ ದೊಂದೆಯನ್ನು ಅಲಂಕಾರವಾಗಿ ಧರಿಸಿ ಇರುತ್ತೀರಿ ನಿಮ್ಮ ವಂಶದ ಪೂರ್ವಿಕರು ಪದವಾಕ್ಯ ಪ್ರಮಾಣಜ್ಞರೆಂದು ಹೆಸರನ್ನು ಸಂಪಾದಿಸಿದ್ದರು ಅವರು ನಿಮ್ಮಂತೆ ಯಾರಿಂದಲೂ ಪರಾಜಿತರಾಗಿರಲಿಲ್ಲ. ನಿಮ್ಮ ವಂಶದ ಪೂರ್ವಿಕರು ಸಂಪಾದಿಸಿದ ಬಹಳವಾದ ಕೀರ್ತಿಯನ್ನು ನೀಚರಾದ ಮಕ್ಕಳಿಂದ ಕುಲವನ್ನು ಕೆಡಿಸುವಂತೆ ನೀವು ಹಾಳು ಮಾಡಿದಿರಿ. ಒಬ್ಬ ಸಣ್ಣ ವಯಸ್ಸಿನ ಹುಡುಗನಿಗೆ ನೀವು ಸೋತಿರುವಿರಿ. ನಿಮಗೆ ನಾಚಿಕೆಯೂ ಇರುವುದಿಲ್ಲ. ರಾಜನ ಎದುರಿನಲ್ಲಿಯೇ ನಿಮಗೆ ಅವಮಾನವಾಗಿರುವಾಗ ನಮ್ಮ ಜೊತೆಯಲ್ಲಿ ವಾಸಮಾಡಲು ಬಂದಿರುತ್ತೀರಿ. ನೀವು ಹೀಗೆ ಸುಮ್ಮನೆ ಮಾತನಾಡುತ್ತಿರುವುದಕ್ಕಿಂತಲೂ ನಿಮಗೆ ಮರಣವೇ ಉತ್ತಮವಾಗಿರುವುದು. ಮೊದಲು ನಿಮಗೆ ಬಹಳ ಅಹಂಕಾರವು ಇತ್ತು. ನೀವು ಮಾಡುವ ಆಭಿಚಾರಿಕ ಕೃತ್ಯದಿಂದ ಅದೂ ಹೋಯಿತು.

೫೦–೫೩. ಆನೆಯನ್ನು ಮಂತ್ರದಿಂದ ನಿರ್ಮಿಸುವುದು, ಹಾವನ್ನು ನಿರ್ಮಿಸುವುದು, ಎಲ್ಲರಿಗೂ ಆಶ್ಚರ್ಯವಾಗುವಂತೆ ಭೂತವನ್ನು ನಿರ್ಮಿಸುವುದು, ಇವೆಲ್ಲವನ್ನೂ

ನ ವಿದ್ಯತೇ ಕಿಂ ಯುಷ್ಮಾಕಂ ಅದ್ಯ ತನ್ಮಂತ್ರವೈಭವಂ ।
ವಶ್ಯಾದ್ಯನೇಕಕೃತ್ಯೇಷು ಯುಷ್ಮಾಕಂ ಯಾ ಪ್ರವೀಣತಾ ॥ ೫೧ ॥

ಪ್ರಥಿತಾ ಸಾ ವಿನಷ್ಟಾ ಕಿಮದ್ಯಾರ್ಭಕಪರಾಜಿತಾಃ ।
ಇಂದ್ರಜಾಲಮಹಾಜಾಲಮಂತ್ರಜಾಲವಿಚಕ್ಷಣಾಃ ॥ ೫೨ ॥

ಮೂಢಾ ಇವ ಭವಂತೋದ್ಯ ತೂಷ್ಣೀಂ ತಿಷ್ಠಂತಿ ಕೇನ ಹಿ ।
ಅನ್ಯಾಽನೇಕವಿಧಾ ಶಕ್ತಿರಪಿ ಯುಷ್ಮಾಕಮಸ್ತಿ ಹಿ ॥ ೫೩ ॥

ನಾನಾರ್ಥಕಾರಿಣೀ ಸಾ ಚ ಕ್ವ ಗತಾ ಶಕ್ತಿರದ್ಭುತಾ ।
ಇತಃ ಪೂರ್ವಂ ಕುಶಲತಾ ಭವತಾಂ ನೈವ ದೂಷಿತಾ ॥ ೫೪ ॥

ಬಾಲಃ ಕಶ್ಚಿತ್ತ್ವಾನಿದಾನೀಮತ್ಯಂತಂ ದೂಷಯತ್ಯಹೋ ।
ಅಸ್ಮಾಕಮಪ್ಯಭೂಲ್ಲಜ್ಜಾ ಯುಷ್ಮಾಕಂ ತು ಪರಾಜಯಾತ್ ॥ ೫೫ ॥

---

ತಮ್ಮ ಮಂತ್ರ ಶಕ್ತಿಗಳಿಂದ ಸುಲಭವಾಗಿ ಮಾಡುತ್ತಿದ್ದರು. ವಶ್ಯವೇ ಮೊದಲಾದ ಅನೇಕ ಕೆಲಸಗಳಲ್ಲಿ ನಿಮಗೆ ಇದ್ದ ಬುದ್ಧಿವಂತಿಕೆಯೂ, ಮಂತ್ರದ ಶಕ್ತಿಯೂ ಈಗ ಏನಾಯಿತು? ಒಬ್ಬ ಹುಡುಗನಿಗೆ ನೀವು ಸೋತ ಕಾಲದಲ್ಲಿ ಅದೂ ಹೋಯಿತೇ? ಇಂದ್ರಜಾಲ ಮಹಾಜಾಲ, ಮಂತ್ರಜಾಲ, ಇವುಗಳಲ್ಲಿ ನೀವೆಲ್ಲರೂ ನಿಪುಣರಾಗಿದ್ದರೂ ಈಗ ದಡ್ಡರ ಹಾಗೆ ಸುಮ್ಮನೆ ಯಾತಕ್ಕೆ ಇರುತ್ತೀರಿ. ಇದಲ್ಲದೆ ಬೇರೆಯ ವಿಧವಾದ ಶಕ್ತಿಯು ನಿಮಗೆ ಇಲ್ಲವೇ?

೫೪–೫೭ ಅನೇಕ ವಿಧವಾದ ಕಾರ್ಯಗಳನ್ನು ಮಾಡುವ ನಿಮ್ಮ ಉತ್ತಮವಾದ ಆ ಶಕ್ತಿಯು ಏನಾಯಿತು. ಇದಕ್ಕಿಂತ ಮುಂಚಿತವಾಗಿ ನೀವು ನಿಮ್ಮ ಜ್ಞಾನದ ವಿಷಯದಲ್ಲಿ ಯಾರಿಂದಲೂ ನಿಂದೆಯನ್ನು ಹೊಂದಿರಲಿಲ್ಲ. ಹೀಗಿರುವಾಗ ಒಬ್ಬ ಸಣ್ಣ ಹುಡುಗನು ನಿಮ್ಮನ್ನು ಗೆದ್ದಿರುವನೆಂದರೆ ನಿಮ್ಮ ಅವಮಾನದಿಂದ ನಮಗೆ ನಾಚಿಕೆಯೂ ಅವಮಾನವೂ ಉಂಟಾಗುತ್ತಾ ಇರುವುದು. ನೀವು ಮರ್ಯಾದೆವಂತರಲ್ಲಿ ಮುಂದಾಳುಗಳಾಗಿರುವ ಕಾರಣ ನಿಮಗೆ ನಾಚಿಕೆ ಇಲ್ಲವೇ? ಯಾವುದಾದರೂ

ಸಾ ಲಜ್ಜಾ ನಹಿ ವಃ ಕಿಂ ವಾ ಮಾನಿನಾಮುಗ್ರಯಾಯಿನಾಂ ।
ಯೇನ ಕೇನಾ ಪ್ಯುಪಾಯೇನ ತಂ ನ ನಿರ್ಜಿತ್ಯ ವಸ್ಸುಖಂ ॥ ೫೬ ॥

ನ ಭವಿಷ್ಯತಿ ಕುತ್ರಾಪಿ ಕರ್ತವ್ಯಸ್ತ್ವಜ್ಞಯ ಸ್ತ್ವತಃ ।
ತೂಷ್ಣೀಂ ತಿಷ್ಠಂತಿ ಚೇದದ್ಯ ಗೃಹೇ ಲಜ್ಜಾವಶಾದ್ವಯಂ ॥ ೫೭ ॥

ವಿಸೃಜಾಮ ಖುತಂ ಪ್ರಾಣಾಸಂದೇಹೋ ನಹಿ ವಿದ್ಯತೇ ।
ಇತಿ ತೈರ್ಭರ್ತ್ಸಿತಾಸ್ಸಂತಃ ಕಲತ್ರಾದ್ಯೈಸ್ತು ಕುತ್ಸಿತಾಃ ॥ ೫೮ ॥

ವಿಹಾಯ ಭೋಜನಾದ್ಯಂ ಚ ನಿರ್ನಿದ್ರಾಃ ಕ್ಷಪಣಾಧಮಾಃ ।
ಅವೃದ್ಧಂ ಜ್ಞಾನವೃದ್ಧಂ ತಂ ನಗ್ನಾ ಆರ್ಜಯ್ಯೈಷಿಣಃ ॥ ೫೯ ॥

ಅಥಾಪರೇದ್ಯುರಖಿಲಾ ಆರ್ಹತಾನಾಂ ಚ ದೇಶಿಕಾಃ ।
ಅಗ್ನಿಸ್ತಂಭಜಲಸ್ತಂಭಪ್ರಮುಖೈಶ್ಚಿತ್ರಕರ್ಮಭಿಃ ॥ ೬೦ ॥

---

ಉಪಾಯದಿಂದ ಆ ಹುಡುಗನನ್ನು ನೀವು ಗೆಲ್ಲದಿದ್ದರೆ ನಿಮಗೆ ಸುಖವು ಉಂಟಾಗುವುದಿಲ್ಲ ಆದ್ದರಿಂದ ನೀವು ಎಲ್ಲಿಯಾದರೂ ಸುಖದಿಂದ ಇರಬೇಕಾದರೆ ಆ ಹುಡುಗನನ್ನು ಮೊದಲು ಗೆಲ್ಲಲೇ ಬೇಕು.

೫೮-೫೯. ನೀವು ನಾಚಿಕೆಯಿಂದ ಸುಮ್ಮನೆ ಮನೆಯಿಲ್ಲಿರುವುದಾದರೆ ನಾವು ಪ್ರಾಣವನ್ನು ಬಿಡುವೆವು. ಇದರಲ್ಲಿ ಸಂಶಯವಿಲ್ಲವು" ಎಂದು ಮುಂತಾಗಿ ಆ ಮಂತ್ರವಾದಿಗಳ ಹೆಂಡತಿಯರೇ ಮೊದಲಾದವರು ನಿಂದಿಸುತ್ತಿರುವ ಮಾತುಗಳನ್ನು ಕೇಳಿದರು. ಮಂತ್ರವಾದಿಗಳು ನಿದ್ರಾಹಾರಾದಿಗಳನ್ನು ಬಿಟ್ಟು ಜ್ಞಾನದಿಂದ ದೊಡ್ಡವನಾದ ಜ್ಞಾನಪೂರ್ಣ ಯೋಗಿಯನ್ನು ಜಯಿಸಬೇಕೆಂದು ಇಚ್ಛೆಯನ್ನು ಹೊಂದಿದರು.

೬೦-೬೩. ಅನಂತರದಲ್ಲಿ ಮಾರನೆಯ ದಿವಸ ಬೌದ್ಧರ ಗುರುಗಳೆಲ್ಲರೂ ಅಗ್ನಿಸ್ತಂಭ ಜಲಸ್ತಂಭ ಮೊದಲಾದ ಆಶ್ಚರ್ಯಕರವಾದ ಕೆಲಸಗಳಲ್ಲಿಯಾದರೂ ಜ್ಞಾನ

ಜೇತುಂ ತಂ ಜ್ಞಾನಸಂಬಂಧಂ ನಿರ್ಯಯುಸ್ಸ್ವಗೃಹಾಚ್ಚ ತೇ ।
ತದಾನೀಂ ತತ್ಕಲತ್ರಾಣಿ ದುಸ್ಸ್ವಪ್ನಾನಿ ಬಹೂನಿ ಚ ॥ ೬೧ ॥

ನಿಶಿ ದೃಷ್ಟ್ವಾನ್ಯಕಥಯರ್ನಸ್ವಂ ಸ್ವಂ ಪ್ರಾಹುಃ ಪತಿಂ ಪ್ರತಿ ।
ಸರ್ವಾನ್ನಗ್ನಾನ್ಪಾಲಜಿತಾರ್ನ ರಾಜಾಜ್ಞಾಕಾರಿಣೋ ಭಟಾಃ ॥ ೬೨ ॥

ಪ್ರಹೃತ್ಯ ಕಶಯಾ ಶಸ್ತ್ರೈಃ ಪರಶ್ವಥ ಮುಖ್ಯೈರಪಿ ।
ಮುಷ್ಟಿಭಿಸ್ತಾಡನಾದ್ಯೈಶ್ಚ ಪ್ರಹೃತ್ಯ ಚ ಪುನಃ ಪುನಃ ॥ ೬೩ ॥

ಶೂಲೇಷ್ವಾರೋಪಯಾಮಾಸು ರ್ಮೃತಾಸ್ತಿಷ್ಠಂತಿ ತೇಷು ಚ ।
ವಯಂ ಚ ವನಿತಾಸ್ಸರ್ವಾ ವಕ್ಷಸ್ತಾಡ್ಯ ದುಃಖಿತಾಃ ॥ ೬೪ ॥

ವಿಲೋಕ್ಯ ಸ್ವ ಸ್ವಭರ್ತಾರಂ ಭ್ರಾತರಂ ದೇವರಂ ಸುತಂ ।
ಶೂಲಪ್ರೋತಂ ಮೃತಂ ಚಾಪಿ ನಿಮಗ್ನಾಃ ಶೋಕಸಾಗರೇ ॥ ೬೫ ॥

ತಸ್ಮಾದದ್ಯ ನ ಗಂತವ್ಯಂ ಯುಷ್ಮಾಭಿಸ್ತಜ್ಜಯಂ ಪ್ರತಿ ।
ದೃಷ್ಟೋ ಸ್ಮಾಭಿರುಷಃಕಾಲೇ ಸ್ವಪ್ನಸ್ಸತ್ಯಂ ಭವಿಷ್ಯತಿ ॥ ೬೬ ॥

---

ಸಂಬಂಧ ಯೋಗಿಯನ್ನು ಗೆಲ್ಲಬೇಕೆಂದು ತಮ್ಮ ಮನೆಯಿಂದ ಹೊರಟರು. ಆಗ ಅವರ ಹೆಂಡತಿಯರು ರಾತ್ರಿಯಲ್ಲಿ ತಾವು ನೋಡಿದ ಕೆಟ್ಟ ಸ್ವಪ್ನಗಳನ್ನು ಎಲ್ಲವನ್ನೂ ತಮ್ಮ ತಮ್ಮ ಪತಿಗಳ ಸಂಗಡ ಹೇಳಿದರು. " ಜ್ಞಾನಪೂರ್ಣ ಯೋಗಿಯಿಂದ ಪರಾಜಿತರಾದ ನಾಸ್ತಿಕ ಮಂತ್ರವಾದಿಗಳಲ್ಲಿ ಸಿಕ್ಕಿದವರೆಲ್ಲರನ್ನೂ ರಾಜನ ಅಪ್ಪಣೆಯಂತೆ ರಾಜದೂತರು ಚಾವಟಿಯಿಂದ ಹೊಡೆದು, ಕೊಡಲಿಯೇ ಮುಂತಾದ ಆಯುಧ ಗಳಿಂದಲೂ, ಮುಷ್ಟಿಯೇ ಮುಂತಾದವುಗಳಿಂದಲೂ ಹೊಡೆಯುತ್ತಾ, ಶೂಲದಲ್ಲಿ ಏರಿಸುತ್ತಿದ್ದರು. ಅವರುಗಳು ಅಲ್ಲಿ ಮೃತರಾಗಿದ್ದರು.

೬೪–೬೭. ನಾವುಗಳು ಎಲ್ಲರೂ ಹೆಂಗಸರಾಗಿರುವೆವು. ಆದ್ದರಿಂದ ಬಹಳ ದುಃಖದಿಂದ ಕೂಡಿದವರಾಗಿ ಇರುವೆವು. ಆದ್ದರಿಂದ ನೀವು ಆ ಹುಡುಗನನ್ನು

ಇತ್ಯುಕ್ತಾಃ ಕ್ಷಪಣಾಚಾರ್ಯೋಃ ನಿರ್ಗತಾ ಸ್ವಗೃಹಾಂಕಣಾತ್ ।
ನಾರ್ಯೋ ನಿರೋಧಯಾಮಾಸು ಸ್ತೇಷಾಂ ಸಾಶ್ರುವಿಲೋಚನಾಃ ॥ ೬೭ ॥

ಏವಂ ನಾನಾವಿಧಾಸ್ವಪ್ನಾನುಕ್ತ್ವಾ ಚಾತಿಭಯಂಕರಾನ್ ।
ಪಾಣಿನಾಕೃಷ್ಯ ಭರ್ತ್ರ್ಣಾಮುರುಂಧ್ರ ಕ್ಷಪಣಸ್ತ್ರಿಯಃ ॥ ೬೮ ॥

ಕ್ರೂದ್ಧಾಃ ನಿರ್ಭತ್ಸಿತಾಃ ಪೂರ್ವಂ ಪುನಃ ಪಾರುಷ್ಯಭಾಷಿಣಃ ।
ಭವಿಷ್ಯಂತಿ ಪ್ರತಿದಿನಂ ಸ್ತ್ರಿಯಸ್ತನ್ಮರಣಂ ವರಂ ॥ ೬೯ ॥

ಇತಿ ಸಂಭಾಷ್ಯ ತೇ ಸರ್ವೇ ಬಾಲಾನಾದಾಯ ಪಾಣಿಭಿಃ ।
ಪ್ರಸ್ಥಿತಾಃ ಕ್ಷಪಣಾಸ್ಸರ್ವೇ ತತ್ಪಾರುಷ್ಯಾಸಹಿಷ್ಣವಃ ॥ ೭೦ ॥

ಅನಾದೃತ್ಯಾತ್ಮವಚನಂ ಪ್ರಸ್ಥಿತಾನಾತ್ಮನಾಯಕಾನ್ ।
ಯುಷ್ಮಾಕಂ ತು ಜಯೋ ನಾಸ್ತೀತ್ಯಶಪಂಸ್ತಾಸ್ತ್ರಿಯಃ ಕ್ರುಧಾ ॥ ೭೧ ॥

---

ಜಯಿಸುವುದಕ್ಕಾಗಿ ಇಲ್ಲಿಂದ ಹೋಗಕೂಡದು. ಉಷಃಕಾಲದಲ್ಲಿ ನಾವು ನೋಡಿದ ಸ್ವಪ್ನವು ಯಾವಾಗಲೂ ಸತ್ಯವಾದದ್ದು," ಎಂದು ಹೇಳುತ್ತಾ ನಾಸ್ತಿಕರ ಮನೆಯ ಹೆಂಗಸರು ಅವರು ಹೊರಗಡೆಗೆ ಹೋಗದಂತೆ ಕಣ್ಣಿನಲ್ಲಿ ನೀರು ಸುರಿಸುತ್ತಾ ತಡೆದರು.

೬೮-೭೦. ನಾಸ್ತಿಕ ಮಂತ್ರವಾದಿಗಳ ಸ್ತ್ರೀಯರು ಭಯಂಕರವಾದ ಸ್ವಪ್ನವನ್ನು ಹೇಳಿ ಗಂಡಸರ ಕೈಯ್ಯನ್ನು ಹಿಡಿದು ಎಳದುಕೊಂಡು ಹೊರಡದಂತೆ ನಿಲ್ಲಿಸಿದರು. ಈ ಹೆಂಗಸರು ಮೊದಲು ಕ್ರೂರವಾಗಿ ನಿಂದಿಸುವುದು. ಬೈಯ್ಯುವುದು, ಮುಂತಾದ ಕಾರ್ಯವನ್ನು ಪ್ರತಿದಿನವೂ ತಪ್ಪದೆ ಮಾಡುತ್ತಿದ್ದುದರಿಂದ ಇಲ್ಲಿರುವುದಕ್ಕಿಂತಲೂ ನಮಗೆ ಮರಣವೇ ಶ್ರೇಯಸ್ಕರವೆಂದು ತಿಳಿದು ಮಂತ್ರವಾದಿಗಳು ಆ ಹೆಂಗಸರ ಕ್ರೌರ್ಯವನ್ನು ಸಹಿಸಲಾರದೆ ಮಕ್ಕಳನ್ನು ಎತ್ತಿ ಕೊಂಡು ಹೊರಟರು.

೭೧-೭೪. "ನಮ್ಮ ಮಾತನ್ನು ತಿರಸ್ಕರಿಸಿ ಹೊರಟರೆ ನಿಮಗೆ ಜಯವು ಉಂಟಾಗುವುದಿಲ್ಲವೆಂದು" ಆ ಹೆಂಗಸರು ತಮ್ಮ ಗಂಡಂದಿರಿಗೆ ಕೋಪದಿಂದ ಶಾಪ

ಲೋಕಾ ಕ್ಷಪಣಸಿದ್ಧಾಂತನಿರತಾಸ್ಸರ್ವ ಏವ ಹಿ ।
ನ ಕೃತ ಶ್ಚೇತ್ಪ್ರತೀಕಾರಃ ಸ ಸಿದ್ಧಾಂತ ಸ್ಸಮೇಧತೇ ॥ ೩೫ ॥

ಶ್ರುತ್ಯುಕ್ತಶ್ಶೈವಸಿದ್ಧಾಂತೋ ಪ್ಯಂತಮೇಷ್ಯತ್ಯ ಸಂಶಯಂ ।
ತತ್ಸಿದ್ಧಾಂತವಿನಾಶೇ ತು ನಿಖಿಲಂ ಕರ್ಮ ವೈದಿಕಂ ॥ ೩೬ ॥

ವೇದೋಕ್ತಮಶ್ವಮೇಧಾಂತಂ ಕ್ರಮಾತ್ಕಾಲೇನ ನಶ್ಯತಿ ।
ತನ್ನಾಶೇಂದ್ರಾದಿದೇವಾಶ್ಚ ನಿರಾಹಾರಾಃ ಸುಕೋಪಿತಾಃ ॥ ೩೭ ॥

ಅನಾವೃಷ್ಟಿಂ ಕರಿಷ್ಯಂತಿ ಹ್ಯನಾವೃಷ್ಟ್ಯಾ ಭವೇದ್ಭಯಂ ।
ಜನಾನಾಂ ಪಾಪವೃದ್ಧಿಶ್ಚ ಭವಿಷ್ಯತಿ ನ ಸಂಶಯಃ ॥ ೩೮ ॥

ನೃಪೋಽಪಿ ವೈದಿಕಧ್ವಂಸಾದಯಂ ಪತನಮೇಷ್ಯತಿ ।
ತದಧಃಪತನಾತ್ಸರ್ವೇ ಪತಿಷ್ಯಂತಿ ನ ಸಂಶಯಃ ॥ ೩೯ ॥

ಇಮಮರ್ಥಂ ವೇದಯಿತ್ವಾ ರಾಜ್ಞೇ ತೇನೋದಿತಾಃ ಕ್ರಿಯಾಃ ।
ಅಸ್ಮಾಭಿರಥ ಕರ್ತವ್ಯಾ ರಾಜಾ ಧರ್ಮಸ್ಯ ಕಾರಣಂ ॥ ೪೦ ॥

---

೩೫–೩೯. ಜನಗಳೆಲ್ಲರೂ ವೇದ ಬಾಹ್ಯರಾದ ನಾಸ್ತಿಕರ ಸಿದ್ಧಾಂತದಲ್ಲಿ ಆಸ್ತಿಕತೆಯಿಂದ ಇರುವರು. ಇದು ತಪ್ಪುವಂತೆ ಮಾಡದಿದ್ದರೆ ಆ ಸಿದ್ಧಾಂತವು ಪ್ರತಿದಿನದಲ್ಲಿಯೂ ವೃದ್ಧಿಯನ್ನು ಹೊಂದುತ್ತದೆ. ವೇದದಲ್ಲಿ ಹೇಳಿರುವ ಶೈವ ಸಿದ್ಧಾಂತವು ಹಾಳಾಗುವುದರಲ್ಲಿ ಸಂಶಯವಿಲ್ಲವು. ಕ್ರಮವಾಗಿ ಅಶ್ವಮೇಧಾಂತವಾಗಿ ಇರುವ ಕರ್ಮಮಾರ್ಗವು ನಶಿಸಿಹೋಗುವುದರಿಂದ ಇಂದ್ರಾದಿ ದೇವತೆಗಳಿಗೆ ಆಹಾರ ವಿಲ್ಲದೆ ಹೋಗುವುದು. ದೇವತೆಗಳಿಗೆ ಕೋಪವು ಬಂದು, ಮಳೆಯು ಆಗದೆ ಕ್ಷಾಮವು ಬರುವುದು. ಜನಗಳು ಕೆಟ್ಟ ಕೆಲಸಗಳನ್ನು ಮಾಡುವರು. ಈ ಪ್ರಕಾರವಾಗಿ ವೈದಿಕ ಮಾರ್ಗವು ನಿಂತು ಹೋದಲ್ಲಿ ರಾಜನು ಹೀನಸ್ಥಿತಿಯನ್ನು ಹೊಂದುವನು. ರಾಜನ ಹೀನಸ್ಥಿತಿಗನುಸಾರವಾಗಿ ಪ್ರಜೆಗಳು ಎಲ್ಲರೂ ದುರ್ದಶೆಯನ್ನು ಹೊಂದುವರು.

೪೦–೪೩. ಈ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿಯೇ ರಾಜನು ಧರ್ಮ ದಿಂದ ಇರುವಂತೆ ಇರಿಸಲು ಕಾರಣನಾಗಿ ಇರುವುದರಿಂದ, ನಾವು ಈಗ ವೈದಿಕರ

ಶ್ಯಾಮುಲಾಃ ಕೃಕಲಾಸಾಶ್ಚ ಅಪತನ್ ಬೌದ್ಧಮೂರ್ಧನಿ ।
ಸ್ಖಲನಂ ಚ ಪ್ರತಿಪದಮಭೂತ್ತೇಷಾಂ ದುರಾತ್ಮನಾಂ ॥ ೭೭ ॥

ವಾಮಂ ಚಕ್ಷುಃ ಸ್ಫುರತಿ ಚ ವಾಮಪಾರ್ಶ್ವಕರಸ್ತಥಾ ।
ಮಧುರಾಯಾಃ ಪ್ರಾಂತದೇಶೇ ಸರ್ವೇ ಸಂಭೂಯ ಜೀವಕಾಃ ॥ ೭೮ ॥

ನಿಶ್ಚಿತ್ಯ ಕಾರ್ಯಂ ಕರ್ತವ್ಯಂ ಪೂರ್ವಂ ಪ್ರಾಪುಶ್ಚ ಭೂಪತಿಂ ।
ಬಾಲೇನ ಜ್ಞಾನವೃದ್ಧೇನ ವಿವಾದಂ ಕರ್ತುಮಾಗತಾಃ ॥ ೭೯ ॥

ಕುರುಧ್ವಮಿತಿ ತೇನೋಕ್ತೇ ಪಾಂಡ್ಯಭೂಪೇನ ಗರ್ವಿತಾಃ ।
ಅಭ್ಯೇತ್ಯಾಜ್ಞಾಂ ನೃಪಸ್ಯಾಥ ಜಗ್ಮುರ್ವೈದಿಕವಾರಣಂ ॥ ೮೦ ॥

ಸೋಽಪಿ ಪ್ರಾತಃ ಪ್ರಣಮ್ಯೇಶಂ ಪ್ರಸ್ಥಿತಃ ಸ್ವಮಠಂ ಪ್ರತಿ ।
ಮಧ್ಯೇ ಮಾರ್ಗೇ ನಿರುದ್ಧಸ್ತೈಸ್ಸಾರ್ಧಂ ಪ್ರಾಪ್ಯ ಪಾಂಡ್ಯಪಂ ॥ ೮೧ ॥

---

ಯೋಚನೆಯನ್ನೂ ಮಾಡದೆ ಪ್ರಯಾಣ ಮಾಡುತ್ತಿದ್ದರು. ಆಗ ಇವರ ತಲೆಯ ಮೇಲೆ ಕಪ್ಪಗಿರುವ ಹೆಂಟೆಯ ಗೊದ್ದಗಳು ಬಿದ್ದವು. ಪ್ರತಿ ಹೆಜ್ಜೆಯಲ್ಲಿಯೂ ಇವರು ಎಡವಿ ಮುಗ್ಗರಿಸುತ್ತಿದ್ದರು ಇವರಿಗೆ ಎಡಗಡೆಯ ಕಣ್ಣುಗಳು ಹಾರುತ್ತಿದ್ದುವು. ಎಡಗಡೆಯ ಪಾರ್ಶ್ವವೂ ಎಡಗಡೆಯ ಭುಜವೂ ಹಾರುತ್ತಾ ಇತ್ತು. ಇವರೆಲ್ಲರೂ ಮಧುರಾನಗರದ ಹತ್ತಿರ ಪ್ರದೇಶದಲ್ಲಿ ಒಟ್ಟಾಗಿ ಸೇರಿ ತಾವು ಮಾಡಬೇಕಾದ ಕಾರ್ಯವನ್ನು ನಿಶ್ಚಯಮಾಡಿಕೊಂಡು, ಮೊದಲು ರಾಜನ ಹತ್ತಿರಕ್ಕೆ ಹೋದರು. ಮತ್ತು ಅವರು ನಾವುಗಳು ಹುಡುಗನಾಗಿರುವ ಜ್ಞಾನಪೂರ್ಣ ಯೋಗಿಯ ಸಂಗಡ ವಾದಮಾಡಲು ಬಂದಿರುವೆವು, ಎಂದು ತಿಳಿಸಿದರು. ರಾಜನ ಸಮ್ಮತಿಯನ್ನು ಹೊಂದಿದ ಅವರು ಅನಂತರ ಜ್ಞಾನಪೂರ್ಣಯೋಗಿಯ ಹತ್ತಿರಕ್ಕೆ ಬಂದರು.

೮೧–೮೪. ಆಗ ಅವನು ಪ್ರಾತಃಕಾಲದಲ್ಲಿ ಸುಂದರೇಶ್ವರನಿಗೆ ನಮಸ್ಕಾರ ಮಾಡಿ ತನ್ನ ಮಠಕ್ಕೆ ಬರುತ್ತಿದ್ದನು. ಇವರೆಲ್ಲರೂ ಅವನು ಬರುತ್ತಿದ್ದ ದಾರಿಯ ಮಧ್ಯದಲ್ಲಿ ಅವನನ್ನು ತಡೆದರು. ಆಗ ಅವರೆಲ್ಲರೂ ರಾಜನ ಹತ್ತಿರಕ್ಕೆ ಬಂದರು. ಜ್ಞಾನಪೂರ್ಣಯೋಗಿಯನ್ನು ರಾಜನೂ, ರಾಣಿಯೂ, ಅರಮನೆಯಲ್ಲಿ ಪೂಜಿಸಿದರು.

ಸಭಾಯಾಂ ರಾಜಸದನೇ ರಾಜ್ಞಾ ರಾಜ್ಞ್ಯಾ ಚ ಪೂಜಿತಃ ।
ಸೋऽಪಿ ಸ್ವ ಭದ್ರಪೀಠಂ ತಮತ್ಯುನ್ನತಮನೂಪಮಂ ॥ ೮೨ ॥

ಸ್ವರ್ಣರತ್ನಮಯಂ ಚಾರು ಆರುರೋಹ ಗುಹಾಂಶಕಃ ।
ತಸ್ಯ ರಾಟ್ ತಂ ಪ್ರಣಮ್ಯಾಥ ಸಾಷ್ಟಾಂಗಂ ತತ್ಪದಾಬ್ಜಯೋಃ ॥ ೮೩ ॥

ಸ್ವರ್ಣಪುಷ್ಪೈಶ್ಚ ಪೂಜ್ಯಾರ್ಚ್ಯ ಪ್ರಣತಿಂ ಚ ಪುನಃಪುನಃ ।
ತಸ್ಯ ರಾಟ್ಸಾಂಜಲಿಸ್ತಸ್ಥೌ ರಾಜಾ ಪಾಂಡ್ಯಮಹೀಪತಿಃ ॥ ೮೪ ॥

ಭಕ್ತ್ಯಾ ಚ ಸ್ವಕಲತ್ರೇಣ ಮಂತ್ರಿಣಾ ಚ ಸಮನ್ವಿತಃ ।
ನಗ್ನಾಸ್ತದಾನೀಮಭ್ಯೇತ್ಯ ನಿರ್ಲಜ್ಜಾ ನಿರ್ದಯಾಧಮಾಃ ॥ ೮೫ ॥

ಜ್ಞಾನಸಂಬಂಧಮಭ್ಯೇತ್ಯ ವಿನಾ ಭೀತಿಂ ನೃಪಾಗ್ರತಃ ।
ಏನ ಮೂಚತುರತ್ಯುಗ್ರಾ ಹಸಂತಶ್ಚ ಪುನಃ ಪುನಃ ॥ ೮೬ ॥

---

ನವರತ್ನ ಖಚಿತವಾದ ಉತ್ತಮವಾದ ಎತ್ತರವಾದ ಭದ್ರಪೀಠದಲ್ಲಿ ಕುಮಾರ ಸ್ವಾಮಿಯ ಅಂಶದಿಂದಿರುವ ಆ ಯೋಗಿಯು ಕೂತುಕೊಂಡನು. ರಾಜನು ಆ ಯೋಗಿಯ ಕಮಲದಂತಿರುವ ಕಾಲುಗಳಿಗೆ ನಮಸ್ಕರಿಸಿದನು. ಚಿನ್ನದ ಹೂವು ಗಳಿಂದ ಪೂಜಿಸಿದನಂತರ ಬಗಸೆಯನ್ನು ಕಟ್ಟಿಕೊಂಡು ಅವನ ಹತ್ತಿರದಲ್ಲಿ ಭಕ್ತಿ ಯಿಂದ ಇದ್ದನು.

೮೫–೮೮. ಪಾಂಡ್ಯರಾಜನ ಸಂಗಡ ಮಂತ್ರಿಯೂ. ರಾಣಿಯೂ. ಇದ್ದರು. ನೀಚರಾದ ಮಂತ್ರವಾದಿಗಳು, ಕೊಂಚದಯವೂ, ನಾಚಿಕೆಯೂ, ಇಲ್ಲದವರಾಗಿ ಸ್ವಲ್ಪವೂ ಹೆದರದೆ ರಾಜನ ಎದುರಿನಲ್ಲಿ ನಗುತ್ತಾ ಹೇಳಿದರು. " ಬ್ರಹ್ಮಚಾರಿಯೇ ? ವಟುವೇ! ನಿನಗೆ ಮಂತ್ರವೇ ಮೊದಲಾದದ್ದು ಯಾವುದೂ ಇಲ್ಲ. (ಘುಣಾಕ್ಷರ ನ್ಯಾಯದಿಂದ) ದುಂಬಿಯು ಮರವನ್ನು ಕೊರೆಯುವಾಗ ಅದು ಅಕ್ಷರವಾದಂತೆ ಜಯವು ಉಂಟಾಯಿತು. ಕಾಕತಾಳನ್ಯಾಯದಿಂದ ಉಂಟಾದ ಜಯವನ್ನು ನಿನ್ನ

ಮಂತ್ರೋ ನಾಸ್ತಿ ತವ ವಟೋ ಘುಣಾಕ್ಷರಲಿಪಿರ್ಯಥಾ ।
ಸ ಕಾಕತಾಲನ್ಯಾಯೇನ ತನ್ಮಂತ್ರಂ ಫಲಿತಂ ತವ ॥ ೮೭ ॥

ತ್ವಜ್ಜಯಂ ನ ಜಯಶ್ಚೈವ ತ್ವಾಂ ಜೇತುಂ ವಯಮಾಗತಾಃ ।
ತ್ಯಜ ಗರ್ವಂ ತೇನ ಜಾತಂ ಪುನಶ್ಚ ಫಲಿತ ಸ್ಸಚೇತ್ ॥ ೮೮ ॥

ಯುಷ್ಮತ್ತ್ವತ್ಕಲತಾ ಸಮ್ಯಕ್ ನೋ ಚೇದ್ವಿಜಯ ಏವ ನಃ ।
ತ್ವನ್ಮಂತ್ರಮಸ್ಮನ್ಮಂತ್ರಂ ಚ ಪತ್ರಿಕಾಸು ವಿಲಿಖ್ಯ ಚ ॥ ೮೯ ॥

ತಾಸು ಕ್ಷಿಪ್ತಾಸು ವಹ್ನೌ ಯೋ ದಗ್ಧಪತ್ರಃ ಪರಾಜಿತಃ ।
ಅಗ್ನೌ ನ ದಗ್ಧಂ ಯತ್ಪತ್ರಂ ಸ ಏವ ವಿಜಯೀರಿತಃ ॥ ೯೦ ॥

ಇತಿ ಪ್ರತಿಜ್ಞಾಂ ಕುರ್ವತ್ಸು ಸಗ್ನಾಚಾರ್ಯೇಷು ಸಕ್ರಿತಃ ।
ತಥಾಸ್ತ್ವಿತ್ಯಬ್ರವೀನ್ಮಂದಂ ಜ್ಞಾನಪೂರ್ಣಶ್ಶಿವಂ ಸ್ಮರನ್ ॥ ೯೧ ॥

---

ಮಂತ್ರದ ಫಲವೆಂದು ನೀನು ತಿಳಿದಿರುತ್ತೀಯೆ ಇದು ನಿಜವಾಗಿಯೂ ಜಯವಾಗಿರುವುದಿಲ್ಲ. ಈಗ ನಾವು ನಿನ್ನನ್ನು ಜಯಿಸಲು ಬಂದಿರುವೆವು. ನಿನ್ನ (ಹೆಮ್ಮೆಯನ್ನು) ಅಹಂಕಾರವನ್ನು ಬಿಡು ಪುನಃ ನಿನಗೆ ಜಯವುಂಟಾದಾಗ ಅದು ಜಯವೆನಿಸುವುದು. ಆಗ ನಿನ್ನ ಬುದ್ಧಿವಂತಿಕೆಯು ಪ್ರಕಟವಾಗುವುದು. ಈಗ ಇದನ್ನು ನಿಶ್ಚಯವಮಾಡಲು ನಾವು ಒಂದು ಉಪಾಯವನ್ನು ಹೇಳುವೆವು.

೮೯–೯೦. "(ನಿನ್ನ ಮಂತ್ರವನ್ನು) ನೀನು ಅಭ್ಯಾಸ ಮಾಡುತ್ತಿರುವ ಮಂತ್ರವನ್ನೂ, ನಾವು ತಿಳಿದಿರುವ ಮಂತ್ರವನ್ನೂ ಸಮನಾಗಿರುವ ಕಾಗದದಲ್ಲಿ ಬರದು. ಆ ಕಾಗದಗಳನ್ನು ಅಗ್ನಿಯಲ್ಲಿ ಹಾಕಿದಾಗ, ಸುಡದಿರುವ ಕಾಗದ ಉಳ್ಳವರಿಗೆ ಜಯವೆಂತಲೂ, ಇತರರಿಗೆ ಅಪಜಯವೆಂತಲೂ ತಿಳಿಯತಕ್ಕದ್ದು. ಎಂದು ಮಂತ್ರವಾದಿಗಳು ಪ್ರತಿಜ್ಞೆಯನ್ನು ಮಾಡಿದರು. ಅವರ ಪ್ರತಿಜ್ಞೆಯನ್ನು ಕೇಳಿ ಜ್ಞಾನಪೂರ್ಣ ಯೋಗಿಯು ಮಂದಹಾಸ ಮಾಡುತ್ತಾ ಶಿವನನ್ನು ಸ್ಮರಿಸುವವನಾಗಿ ಹಾಗೇ ಆಗಲಿ ಎಂದು ಉತ್ತರವನ್ನು ಅವರಿಗೆ ಹೇಳಿದನು.

೯೧–೯೨. ರಾಜನನ್ನು ಆಶ್ರಯಿಸಿಕೊಂಡಿರುವವರು "ಅಗ್ನಿಕುಂಡವನ್ನು ಮಾಡಿರಿ" ಎಂದು ಹೇಳಿದರು. ಆ ಮಾತಿನಂತೆ ಅಗ್ನಿಕುಂಡವನ್ನು ಮಾಡಲು ಉಪ

ಇಹೈವ ಚಾಗ್ನೇಃ ಕುರ್ವಂತು ಕುಂಡಂತ್ವಿತಿ ನೃಪಾಶ್ರಿತಾಃ ।
ಇತ್ಯುಕ್ತೇ ಹೋಮಕುಂಡಂ ಚ ಕರ್ತುಂ ತತ್ರ ಸಮುದ್ಯತೇ ॥ ೯೨ ॥

ನಗ್ನಾಃ ಪುನರಿತಿ ಪ್ರಾಹುಸ್ತಂ ವಂಚಯಿತು ಮುದ್ಯತಾಃ ।
ಶಂಕರಾತಿಪ್ರಿಯಂ ಕ್ಷೇತ್ರಂ ತದ್ಭಕ್ತಾನಾ ಮಭೀಷ್ಟದಂ ॥ ೯೩ ॥

ಹಿತ್ವಾನ್ಯತ್ರೈವ ಗಂತವ್ಯಂ ದ್ರಷ್ಟುಮಸ್ಮತ್ಪ್ರವೀಣತಾಂ ।
ತತ್ಕ್ಷೇತ್ರಾತ್ಪ್ರಾಗುದಗ್ದೇಶೇ ವಿಶಾಲಂ ಸ್ಥಲಮಸ್ತಿ ಚ ॥ ೯೪ ॥

ಪಂಚಕ್ರೋಶಾದ್ಬಹಿಶ್ಚೈವ ದ್ವಿಗುಣಂ ಚ ಪುನಸ್ತಥಾ ।
ತತ್ರ ಗತ್ವಾ ಮಹತ್ಕುಂಡಂ ಕೃತ್ವಾ ತಸ್ಮಿನ್ಹುತಾಶನಂ ॥ ೯೫ ॥

ಸಾರದಾರುಮಯೈಃ ಕಾಷ್ಠೈಃ ಪ್ರಜ್ವಾಲ್ಯಾಜ್ಯಾದಿಭಿಃ ಪುನಃ ।
ವರ್ಧಿತೇ ಸತಿ ತದ್ವಹ್ನೌ ಅಸ್ಮಾಭಿರಪಿ ಚ ತ್ವಯಾ ॥ ೯೬ ॥

ಕೃತ್ವಾ ಪ್ರತಿಜ್ಞಾ ಕರ್ತವ್ಯೇತ್ಯುಕ್ತ್ವಾ ಜಗ್ಮುಶ್ಚ ತತ್ಸ್ಥಲಂ ।
ಪರಿಹಾಸಂ ಚ ಕುರ್ವಂತೋ ಜ್ಞಾನಪೂರ್ಣಂ ಪರಸ್ಪರಂ ॥ ೯೭ ॥

---

ಕ್ರಮಿಸಿದ್ದಾಗ ಮಂತ್ರವಾದಿಗಳು ಜ್ಞಾನಪೂರ್ಣ ಯೋಗಿಯನ್ನು ಮೋಸಗೊಳಿಸುವ ಉದ್ದೇಶದಿಂದ " ಈ ಕ್ಷೇತ್ರವು ಶಿವನಿಗೆ ಬಹಳ ಇಷ್ಟವಾದದ್ದು. ಶಿವಭಕ್ತರಾದವರಿಗೆ ಇಲ್ಲಿ ಇಷ್ಟಸಿದ್ಧಿಯು ಉಂಟಾಗುವುದು ಖಂಡಿತವು. ನಮ್ಮ ಪಾಂಡಿತ್ಯವನ್ನು ಬೇರೆಯ ಪ್ರದೇಶದಲ್ಲಿ ನಾವು ಪ್ರಕಟಮಾಡುತ್ತೇವೆ. ಈ ಕ್ಷೇತ್ರದ ಪೂರ್ವದಿಕ್ಕಿನಲ್ಲಿ ವಿಸ್ತಾರವಾದ ಪ್ರದೇಶವು ಇರುತ್ತದೆ. ಆ ಪ್ರದೇಶವು ಇಲ್ಲಿಗೆ ಏಳು ಹರದಾರಿ ದೂರವಾಗಿರುವುದು. ಅಲ್ಲಿ ಬಹಳ ದೊಡ್ಡದಾದ ಅಗ್ನಿಕುಂಡವನ್ನು ಸಿದ್ಧಪಡಿಸಿ, ಅದರಲ್ಲಿ ಅಗ್ನಿಯನ್ನು ಪ್ರತಿಷ್ಠೆಮಾಡಿ, ಘಟ್ಟಿಯಾದ ಕಟ್ಟಿಗೆಗಳಿಂದ ಅಗ್ನಿಯು ಚೆನ್ನಾಗಿ ಉರಿಯುವುದಕ್ಕೆ ಸಿದ್ಧವಾದನಂತರ ನಾವೂ, ನೀನೂ ಈ ಪರೀಕ್ಷೆಯನ್ನು ಮಾಡತಕ್ಕದ್ದು. ಎಂದು ಹೇಳಿ ಆ ಪ್ರದೇಶಕ್ಕೆ ಮಂತ್ರವಾದಿಗಳು ಹೋದರು. ಅವರು ಅಲ್ಲಿಗೆ ಹೋಗುವಾಗ ಜ್ಞಾನಪೂರ್ಣ ಯೋಗಿಯನ್ನು ಅಪಹಾಸ್ಯ ಮಾಡಿಕೊಂಡು ನಗುತ್ತಿದ್ದರು.

ಹುತ್ವಾಗ್ನಿಂ ಕುಂಡಮಧ್ಯೇ ತು ತಸ್ಥುಃ ಕ್ಷಪಣಪುಂಗವಾಃ ।
ಮಂತ್ರಿಣಾ ವನಿತಾ ರಾಜ್ಞ್ಯಾ ಶಿಷ್ಯೈರನ್ಯೈಶ್ಶಿವಾಶ್ರಿತೈಃ ॥ ೯೮ ॥

ಸಾರ್ಧಂ ಜಗಾಮ ತಂ ದೇಶಂ ಸೋಽಪಿ ವೈದಿಕದೇಶಿಕಃ ।
ವತ್ಸಂ ಸ್ವೈರಂ ಪ್ರಧಾವಂತಮನುಧಾವತಿ ಗೌರ್ಯಥಾ ॥ ೯೯ ॥

ತಥಾ ಹಾಲಾಸ್ಯನಾಥೋಽಪಿ ತಂ ಬಾಲಮನುಧಾವತಿ ।
ತೇಷಾಂ ತಸ್ಯ ಚ ಕೃತ್ಯಂ ಚ ದಿದೃಕ್ಷುಃ ಸಪರಿಚ್ಛದಃ ॥ ೧೦೦ ॥

ಪಾಂಡ್ಯಭೂಪೋಽಪಿ ಸಂಪ್ರಾಪ ವಿಶಾಲಾಂ ತಾಂ ಭುವಸ್ಥಲೀಂ ।
ನಗ್ನಾ ಹ್ಯಾಶ್ಚಾಷ್ಟಸಾಹಸ್ರಾ ಮಂತ್ರಯಂತ್ರವಿಶಾರದಾಃ ॥ ೧೦೧॥

ಅಬಾಲತಾಲಪತ್ರೇಷು ಸಾಂದ್ರೇಷು ಸುದೃಢೇಷು ಚ ।
ವಿಲಿಖ್ಯ ಮಂತ್ರಾನ್ ಸಂಸಿದ್ಧಾನ್ ಚಿರಕಾಲಜಪಾರ್ಜಿತಾನ್ ॥ ೧೦೨ ॥

---

೯೮-೧೦೧. ಆ ಮಂತ್ರವಾದಿಗಳು ಅಗ್ನಿಕುಂಡದ ಮಧ್ಯದಲ್ಲಿ ಹೋಮವನ್ನು ಮಾಡಿಕೊಂಡು ಇದ್ದರು. ಜ್ಞಾನಪೂರ್ಣ ಯೋಗಿಯು ಮಂತ್ರಿ, ರಾಣಿ, ತನ್ನ ಶಿಷ್ಯರು, ಮತ್ತು ಇತರ ಶಿವಭಕ್ತರು ಇವರೊಡನೆ ಆ ಪ್ರದೇಶಕ್ಕೆ ಬಂದು ಸೇರಿದನು ಕರುವನ್ನು ಅದರ ತಾಯಿಯಾದ ಹಸುವು ಅನುಸರಿಸುವ ಹಾಗೆ ಸಣ್ಣ ಹುಡುಗನಾದ ಆ ಯೋಗಿಯನ್ನು ಅನುಸರಿಸಿಕೊಂಡು ಹಾಲಾಸ್ಯನಾಥನು ಅಲ್ಲಿಗೆ ಬಂದನು. ಅವರವರು ಮಾಡುವ ಕಾರ್ಯವನ್ನು ನೋಡಲಿಚ್ಛೆಯುಳ್ಳವನಾಗಿ ತನ್ನ ಪರಿವಾರದವರೊಡನೆ ರಾಜನು ವಿಸ್ತಾರವಾದ ಆ ಪ್ರದೇಶಕ್ಕೆ ಬಂದು ಸೇರಿದನು. ಯಂತ್ರ ಮಂತ್ರಗಳನ್ನು ತಿಳಿದಿರುವ ಮಂತ್ರವಾದಿಗಳು ಎಂಟುಸಾವಿರ ಜನರಿದ್ದರು.

೧೦೨-೧೦೪. ಅವರು ಬಹಳ ದಿನಗಳಿಂದಲೂ ಜಪಮಾಡಿಕೊಂಡು ಸಿದ್ಧಪಡಿಸಿರುವ ಆ ಮಂತ್ರಗಳನ್ನು ದೃಢವಾಗಿರುವ ತಾಳೆಯಗರಿಯಲ್ಲಿ ಚನ್ನಾಗಿ ಬರದು ತಾವು ಸಿದ್ಧಮಾಡಿರುವ ಅಗ್ನಿಯಲ್ಲಿ ಹಾಕಿದರು. ಆಗ ಚಿಕ್ಕ ವಯಸ್ಸಿನ ಹುಡುಗನಾದ ಜ್ಞಾನ

ತಾನಿ ಪತ್ರಾಣಿ ತದ್ವಹ್ನೌ ಅಕ್ಷಿಪಸ್ಸರಸೈವ ತೇ ।
ಜ್ಞಾನಪೂರ್ಣಸ್ತ್ವಪೂರ್ಣೋಽಪಿ ವಯಸಾ ಪರಿಪೂರ್ಣಕಃ ॥ ೧೦೩ ॥

ಮೀನಾಕ್ಷೀಶಂ ಹೃದಿ ಧ್ಯಾಯನ್ಪತ್ರಂ ಚಿಕ್ಷೇಪ ಚಾತ್ಮನಃ ।
ಸ್ವಪುಸ್ತಕಸ್ಥಿತೇಷ್ವೇಕಂ ಸರ್ವೇಷಾಮಪಿ ಪಶ್ಯತಾಂ ॥ ೧೦೪ ॥

ಪತ್ರಾಣ್ಯಷ್ಟಸಹಸ್ರಾಣಿ ಕ್ಷಪಣಾನಾಂ ದುರಾತ್ಮನಾಂ ।
ದಗ್ಧಾನೀ ಕ್ಷುದಲಾನೀವ ಕ್ಷಿಪ್ತಮಾತ್ರೇಣ ಸತ್ವರಂ ॥ ೧೦೫ ॥

ಜ್ಞಾನಪೂರ್ಣೇನ ತತ್ಪತ್ರಂ ಕ್ಷಿಪ್ತಂ ಪ್ರಜ್ವಲಿತಾನಲೇ ।
ಜಲೇ ಸ್ಥಿತಮಿವಾಭಾತಿ ವಿಕಾರರಹಿತಂ ಚ ತತ್ ॥ ೧೦೬ ॥

ಸರ್ವೇ ಜನಾಸ್ತದಾಶ್ಚರ್ಯಂ ದೃಷ್ಟ್ವಾ ವಿಸ್ಮಿತಮಾನಸಾಃ ।
ಜ್ಞಾನಪೂರ್ಣಂ ಪ್ರಶಂಸಂತಿ ಸಾಕ್ಷಾದ್ಗುಹ ಇವ ಸ್ವಯಂ ॥ ೧೦೭ ॥

ಭಕ್ತ್ರಾಯತ್ತಂ ಶಿವಂ ಚಾಪಿ ಮೀನಾಕ್ಷೀರಮಣಂ ಪ್ರಭುಂ ।
ಅಥ ನಗ್ನಾ ಏವಮೂಚುರ್ದೃಷ್ಟ್ವಾ ವೈದಿಕವಾರಣಂ ॥ ೧೦೮ ॥

---

ಪೂರ್ಣ ಯೋಗಿಯು, ಮೀನಾಕ್ಷೀದೇವಿಗೆ ಪತಿಯಾದ ಸುಂದರೇಶ್ವರನನ್ನು ಹೃದಯದಲ್ಲಿ ಧ್ಯಾನಮಾಡುತ್ತಾ, ತನ್ನ ಪುಸ್ತಕವನ್ನು ತೆಗೆದುಕೊಂಡು ಎಲ್ಲರ ಎದುರಿಗೆ ಅದರಲ್ಲಿ ಬರದು ಅದನ್ನು ಅಗ್ನಿಯಲ್ಲಿ ಹಾಕಿದನು.

೧೦೫–೧೦೮. ನೀಚರಾದ ಎಂಟುಸಾವಿರ ಮಂತ್ರವಾದಿಗಳ ಪತ್ರಿಕೆಗಳೆಲ್ಲವೂ ಕಬ್ಬಿನಗರಿಯು ಅಗ್ನಿಯಲ್ಲಿ ಉರಿದಂತೆ ಬೇಗ ಉರಿದು ಹೋದವು. ಜ್ಞಾನಪೂರ್ಣ ಯೋಗಿಯು ಅಗ್ನಿಯಲ್ಲಿ ಹಾಕಿದ ಆ ಪತ್ರಿಕೆಯು ಮಾತ್ರ ಬೆಂಕಿಯು ಚನ್ನಾಗಿ ಉರಿಯುತ್ತಿದ್ದರೂ, ನೀರಿನ ಮಧ್ಯದಲ್ಲಿ ಇರುವಂತೆ ಕೊಂಚವೂ (ವ್ಯತ್ಯಾಸ) ವಿಕಾರವನ್ನು ಹೊಂದದೆ ಮೊದಲಿದ್ದ ಹಾಗೆಯೇ ಇತ್ತು. ಜನರೆಲ್ಲರೂ ಈ ಆಶ್ಚರ್ಯವನ್ನು ನೋಡಿದರು. ಅವರೆಲ್ಲರೂ ಕುಮಾರಸ್ವಾಮಿಯೇ ತಾನಾಗಿ ಈ ರೂಪದಿಂದ ಬಂದಿರುವನೆಂದು ಜಾ ನಪೂರ್ಣ ಯೋಗಿಯನ್ನು ಶ್ಲಾಘಿಸಿದರು. ಮತ್ತು ಭಕ್ತರನ್ನು ರಕ್ಷಿಸುತ್ತಿರುವ ಮೀನಾಕ್ಷೀದೇವಿಯ ಪತಿಯಾದ ಸುಂದರೇಶ್ವರನನ್ನು ಹೊಗಳಿದರು.

ಭವಾನ್ಪ್ರಾಯೋ ಮಹಾನ್ಕ್ರೂರಃ ವಹ್ನಿಸ್ತಂಭನಮಂತ್ರವಿತ್ ।
ಪೂರ್ವಮೇವ ಮತೇಽಸ್ಮಾಭಿಃ ಕ್ಷಿಪ್ತೋ ವಹ್ನಿಶ್ಚ ನಶ್ಯತಿ　　॥ ೧೦೯ ॥

ಯನ್ಮಂತ್ರಾಣ್ಯಸ್ಮದೀಯಾನಿ ದಗ್ಧಾನಿ ತತ್ಕಿಮನ್ಯಥಾ ।
ತಸ್ಮಾತ್ತವ ಜಯೋ ನಾಸ್ತಿ ಕಾಪಟ್ಯೇನ ಜಯೈಷಿಣಃ　　॥ ೧೧೦ ॥

ಪುನಶ್ಚ ಮಂತ್ರಪತ್ರಾಣಿ ಸಮ್ಯಗ್ಲಿಖ್ಯನದೀರಯೋ ।
ಪ್ರಕ್ಷಿಪಾಮೋ ವಯಂ ಗತ್ವಾ ತ್ವಂ ಚಾಗತ್ಯ ತಥಾ ಕುರು　　॥ ೧೧೧ ॥

ಜೇತುಸ್ತವ ಭವಂತ್ಯದ್ಯ ಭೃತ್ಯಾಸ್ಸರ್ವೇ ಪರಾಜಿತಾಃ ।
ವಯಂ ಶಿಷ್ಯಾ ಭವಿಷ್ಯಾಮಸ್ತ್ವಜ್ಜಯೇ ತ್ವಂ ಮತಂ ಕುರು　　॥ ೧೧೨ ॥

ಅಸ್ಮಜ್ಜಯೇ ಭವ ತ್ವಂ ಹಿ ಭೃತ್ಯೋ ಭವ ಮತಂ ಹಿ ನಃ ।
ಇತಿ ತದ್ವಾಕ್ಯ ಮಾಕರ್ಣ್ಯ ಪ್ರಾಹ ವೈದಿಕವಾರಣಃ　　॥ ೧೧೩ ॥

---

೧೦೯-೧೧೩. ಆಗ ಮಂತ್ರವಾದಿಗಳು ಜ್ಞಾನಪೂರ್ಣ ಯೋಗಿಯನ್ನು ನೋಡಿ "ನೀನು ಅಗ್ನಿಸ್ತಂಭ ಮಂತ್ರವಿದ್ಯೆಯನ್ನು ಕಲಿತಿರುತ್ತೀಯೆ. ಮತ್ತು ಕ್ರೂರವಾದ ಶತ್ರುವಾಗಿ ಇರುತ್ತೀಯೆ. ಮೊದಲು ಮರಕ್ಕೆ ನಾವುಗಳು ಅಗ್ನಿಯನ್ನು ಹಾಕಿದ್ದಾಗ ಅದನ್ನು ವಶಮಾಡಿಕೊಂಡು ಇದ್ದೆ. ಆದ್ದರಿಂದಲೇ ನಮ್ಮ ಪತ್ರಗಳೆಲ್ಲವೂ ಈಗ ಅಗ್ನಿಯಲ್ಲಿ ಸುಟ್ಟುಹೋದವು. ನೀನು ಮೋಸದಿಂದ ಜಯವನ್ನು ಅಪೇಕ್ಷಿಸುತ್ತಿರುವ ಕಾರಣ ನಿನಗೆ ಇದು ಜಯವಲ್ಲವು. ಆದ್ದರಿಂದ ನಾವೆಲ್ಲರೂ ಬೇರೆಯ ಪತ್ರಿಕೆಗಳನ್ನು ಬರದು ನದಿಯ ನೀರು ಹರಿಯುವ ಪ್ರದೇಶದಲ್ಲಿ ಹಾಕಿದಾಗ ಆ ಕಾಗದವು ನದಿಯ ವೇಗಕ್ಕೆ ಅನುಸಾರವಾಗಿ ಹೋದಲ್ಲಿ ಅವರಿಗೆ ಅಪಜಯವೆಂದು ತಿಳಿಯ ತಕ್ಕದ್ದು. ನೀನು ನಮ್ಮಂತೆಯೇ ಪತ್ರಿಕೆಯನ್ನು ಬರದು ಹೊಳೆಯನೀರಿನಲ್ಲಿ ಹಾಕಬೇಕು. ನಿನಗೆ ಜಯವಾದಲ್ಲಿ ಜಯಶೀಲನಾದ ನಿನಗೆ ಸೋತುಹೋದ ನಾವೆಲ್ಲರೂ ದಾಸರಾಗಿರುವೆವು. ಮತ್ತು ಶಿಷ್ಯರಾಗುವೆವು. ನಮಗೆ ಜಯವಾದರೆ ನೀವೆಲ್ಲರೂ ನಾವು ಈಗ ಹೇಳುವಂತೆ ನಮಗೆ ಶಿಷ್ಯರಾಗತಕ್ಕದ್ದು" ಎಂದು ನಮ್ಮ ಅಭಿಪ್ರಾಯವಿರುವುದು.'' ಎಂದು ಹೇಳಿದರು.

ದಾಸಾಪೇಕ್ಷಾ ನಾಸ್ತಿ ಮಮ ದಾಸಸಂಘವತೋಽದ್ಯ ತು ।
ಶಿವಾಜ್ಞಯಾ ವಿಜೇತಾ ಚೇದ್ಯುಷ್ಮಾನ್ ಶ್ರೀಭಸ್ಮದೂಷಕಾನ್ ॥ ೧೧೪ ॥

ಶೂಲಾನಾರೋಪಯಿಷ್ಯಾಮಿ ಸಾರದಾರುವಿನಿರ್ಮಿತಾನ್ ।
ತಥಾಸ್ತ್ವಿತ್ಯವದನ್ ಸರ್ವೇ ಕ್ಷಪಣಾ ವಿಧಿಚೋದಿತಾಃ ॥ ೧೧೫ ॥

ಕೃತಿತಾನ್ವೇದಬಾಹ್ಯಾಂಶ್ಚ ಧಿಗ್ಧಿಕ್ಛಬ್ದಂ ಪ್ರಯುಜ್ಯ ಸಃ ।
ಶೂಲಾಂಸ್ತೀಕ್ಷ್ಣಾನನೇಕಾಂಶ್ಚ ಜ್ಞಾನಪೂರ್ಣೋ ಹಸನ್ಮುಖಃ ॥ ೧೧೬ ॥

ರಾಜಭೃತ್ಯೈಶ್ಚಕಾರಾಡ್ಯೈರಯಸ್ಕಾರೈಸ್ತಥೈವ ಚ ।
ಆಜ್ಞಯಾ ತೇಽಪಿ ಶೀಘ್ರೇಣ ಕ್ಷಣಾಚ್ಛೂಲಾನಕಾರಯನ್ ॥ ೧೧೭ ॥

ಅಷ್ಟಸಾಹಸ್ರಸಂಖ್ಯಾತಾ ನಧಿಕಾನ್ ದ್ವಿಗುಣಾನಪಿ ।
ಭೂಮೌ ಸುರೋಪಿತಾಃ ಪಂಙ್ಕ್ತ್ಯಾ ದೃಷ್ಟಾನಾಮಪಿ ಭೀತಿದಾಃ ॥ ೧೧೮ ॥

---

೧೧೪--೧೧೭ ಜ್ಞಾನಪೂರ್ಣ ಯೋಗಿಯು ಅವರ ಮಾತನ್ನು ಕೇಳಿ "ನನಗೆ ನಿಮ್ಮನ್ನು ದಾಸರನ್ನಾಗಿ ಮಾಡಿಕೊಳ್ಳುವ ಆಸೆಯು ಇಲ್ಲವು. ನೀವೆಲ್ಲರೂ ಮಂಗಳ ಕರವಾದ ಭಸ್ಮವನ್ನು ನಿಂದಿಸುತ್ತಿರುವಕಾರಣ ಶಿವನಾಜ್ಞೆಯಂತೆ ನಿಮ್ಮನ್ನು ಸೋಲಿಸಿ ಗಟ್ಟಿಯಾದ ಮರದಿಂದ ಮಾಡಿದ ಶೂಲಕ್ಕೆ ಹಾಕಿಸುತ್ತೇನೆ." ಎಂದು ಹೇಳಿದನು. ಈ ಮಾತಿಗೆ ಅವರು ಸಮ್ಮತಿಯನ್ನು ಕೊಟ್ಟರು. ಆಗ ಮಂತ್ರವಾದಿಗಳಿಗೆ ಪ್ರತಿ ಕೂಲವಾದ ದೈವಗತಿಯು ಅವರನು ಹಾಗೆ ಸಮ್ಮತಿಸುವಂತೆ ಮಾಡಿತು. ಜ್ಞಾನ ಪೂರ್ಣಯೋಗಿಯು ಆ ಮಂತ್ರವಾದಿಗಳ ವಿಷಯದಲ್ಲಿ ಧಿಕ್ಕಾರವನ್ನು ಮಾಡುತ್ತಾ ರಾಜಭಟರಿಗೆ ತೀಕ್ಷ್ಣವಾದ ಶೂಲಗಳನ್ನು ಮಾಡಲು ಆಜ್ಞೆಯನ್ನು ಮಾಡಿದನು. ಅವನು ಸಂತೋಷದಿಂದ ನಗುತ್ತಾ ಹೇಳಿದ ಮಾತಿನಂತೆ ರಾಜದೂತರು ಕಬ್ಬಿಣದ ಕೆಲಸ ಮಾಡುವವರನ್ನು ಕರಸಿ ಕಬ್ಬಿಣದ ಅಲಗುಗಳನ್ನು ಹಾಕಿರುವ ಶೂಲಗಳನ್ನು ಒಂದುಕ್ಷಣದಲ್ಲಿ ಸಿದ್ಧ ಪಡಿಸಿದರು.

೧೧೮-೧೨೦. ಶೂಲಗಳು ಎಂಟುಸಾವಿರಕ್ಕಿಂತಲೂ ಹೆಚ್ಚಾಗಿದ್ದವು. ಅದರ ಸಂಖ್ಯೆಯು ಕ್ರಮದಿಂದ ಬಹಳವಾಗಿ ಭೂಮಿಯಲ್ಲಿ ಸಾಲು ಸಾಲಾಗಿ ಇರಿಸಿರುವುದರಿಂದ

ಪುನಶ್ಚ ತಾನ್ಕೃಪಾಧೀನೋ ನಗ್ನಾನ್ ವೈದಿಕವಾರಣಃ ।
ಕ್ಷಪಣಾನ್ ಭೋಧಯಾಮಾಸ ಸತ್ಯಯಾ ಸಾಂತ್ವಯಾ ಗಿರಾ ॥ ೧೧೯ ॥

ಅಜ್ಞಾ ಏವ ಭವಂತೋದ್ಯ ನ ಜಾನಂತಿ ಹಿತಾಹಿತಂ ।
ತಸ್ಮಾದ್ವದಾಮ್ಯಹಂ ಕಾರ್ಯಂ ಯುಷ್ಮಾಕಂ ಹಿತಮುತ್ತಮಂ ॥ ೧೨೦ ॥

ವೇದಾಃ ಪ್ರಮಾಣಂ ಶಾಸ್ತ್ರೇಷು ಇತರೇ ನರಕಪ್ರದಾಃ ।
ಅತಿನಿಂದ್ಯಾ ಕ್ಷಪಣತಾ ಮೂರ್ಖಮಾರ್ಗಾಸ್ಸುದುಃಖದಾಃ ॥ ೧೨೧ ॥

ತಸ್ಮಾದ್ವೇದೋಕ್ತಮಾರ್ಗೇಣ ಪರಲೋಕಹಿತಾಯ ಚ ।
ರಕ್ಷಾಂ ರುದ್ರಾಕ್ಷಮಾಲಾಂ ಚ ಧಾರಯಧ್ವಂ ಗಿರಾ ಮಮ ॥ ೧೨೨ ॥

ಮುಕ್ತ್ವಾ ಮಾನಂ ಚ ಮದ್ವಾಕ್ಯಾದ್ಯೂಯಂ ಮೃತ್ಯುಪದಪ್ರದಂ ।
ತಯೋರ್ಧಾರಣಮದ್ಯೈವ ಕಾಂಯೇನಾಥ ಕರಿಷ್ಯಥ ॥ ೧೨೩ ॥

---

ಅದನ್ನು ನೋಡಿದ ಮಾತ್ರದಿಂದಲೇ ಭಂಗವಾಗುತ್ತಿತ್ತು. ಆಗ ಆಸ್ತಿಕ ಶಿರೋಮಣಿಯಾದ ಜ್ಞಾನಪೂರ್ಣ ಯೋಗಿಯು ಆ ಮಂತ್ರವಾದಿಗಳ ವಿಷಯದಲ್ಲಿ ತುಂಬಾ ದಯೆಯುಳ್ಳವನಾಗಿ ಬುದ್ಧಿವಾದವನ್ನು ಹೇಳಿದನು. "ನೀವು ಯಾವುದೋ ಒಂದು ಮಾತನ್ನು ನಂಬಿಕೊಂಡು ಇರುತ್ತೀರಿ. ಇದು ಸತ್ಯವಾದದ್ದು. ಆದರೆ ನೀವು ಕೊಂಚವೂ ತಿಳಿವಳಿಕೆ ಇಲ್ಲದೆ ಇರುತ್ತೀರಿ. ಇದರಿಂದ ನಿಮಗೆ ಒಳ್ಳೆಯದು ಕೆಟ್ಟದ್ದು ಯಾವುದೂ ತಿಳಿಯುವುದಿಲ್ಲ. ಆದ್ದರಿಂದ ನಾನು ನಿಮಗೆ ಬಹಳ ಮಟ್ಟಿಗೆ ಸುಖವಾಗುವಂತೆ ಹಿತವಾಗುವ ಮಾತುಗಳನ್ನು ಹೇಳುತ್ತೇನೆ.

೧೨೧-೧೨೪. ಶಾಸ್ತ್ರಗಳಲ್ಲಿ ವೇದವಾಕ್ಯಗಳು ಸರಿಯಾದ ಜ್ಞಾನವನ್ನು ಉಂಟುಮಾಡಿ ಕೊಡುವುವು. ಪ್ರಾಮಾಣಿಕನಾದ ವೇದವಾಕ್ಯದ ಅರ್ಥವನ್ನು ಆಚರಿಸಲು ತಪ್ಪಿ ಬೇರೆಯ ಮಾರ್ಗವನ್ನು ಆಚರಿಸಿದ್ದರಿಂದ ನರಕವು ತಪ್ಪಿದ್ದಲ್ಲವು. ಈಗ ನೀವು ನಂಬಿಕೊಂಡು ಆಚರಿಸುತ್ತಿರುವ ಮಾರ್ಗವು (ಕ್ಷಪಣ) ಬಹಳ ನಿಂದಾಸ್ಪದವಾದದ್ದು. ತಿಳವಳಿಕೆ ಇಲ್ಲದವರು ಈ ಮಾರ್ಗವನ್ನು ಆಶ್ರಯಿಸಬೇಕು. ಇದರಿಂದ ದುಃಖ ಉಂಟಾಗುವುದೇ ಹೊರತು ಸುಖವು ಉಂಟಾಗುವುದಿಲ್ಲ.

ವೇದಮೂಲೇನ ಸಹಿತಂ ವೇದಸಾರಷಡಕ್ಷರಂ ।
ಜಪಂತು ಭುಕ್ತಿಮುಕ್ತ್ಯರ್ಥಂ ಭವಂತೋ ಮಂತ್ರಮೈಶ್ವರಂ ॥ ೧೨೪ ॥

ಭಕ್ತ್ಯಾ ಚ ಸರ್ವಧರ್ಮಾರ್ಥಕಾಮಮೋಕ್ಷಪ್ರಸಿದ್ಧಯೇ ।
ಅರ್ಹಣಾಮಪಿ ವಿಷ್ಣ್ವಾದ್ಯೈರರ್ಚಿತಸ್ಯ ಮಹೇಶಿತುಃ ॥ ೧೨೫ ॥

ಏವಂ ವೇದೋಕ್ತಕರ್ಮಾಣಿ ಕೃತ್ವಾ ನಿತ್ಯಂ ವಿಧಾನತಃ ।
ಮುಕ್ತಿಂ ಲಭಧ್ವಂ ಪರಮಾಂ ಸತ್ಯಜ್ಞಾನಸುಖಾತ್ಮಿಕಾಂ ॥ ೧೨೬ ॥

ಶ್ರುತಂ ಚೇನ್ಮಮ ಸದ್ವಾಕ್ಯಂ ವಿಸೃಜಾಮಿ ಮೃತಂ ವಿನಾ ।
ಯುಷ್ಮಾನ್ ಸರ್ವಾನನ್ಯಥಾ ಚೇಚ್ಛೂಲೇಷ್ವಾರೋಪಯಾಮಿ ವಃ ॥೧೨೭॥

ಇತಿ ತದ್ಗಿರಮಾಕರ್ಣ್ಯ ಕ್ಷಪಣಾ ವೇದನಿಂದಕಾಃ ।
ಕೋಪಾವೇಶವಶಾತ್ಕ್ರೂರೈ ರ್ಲೋಚನೈಸ್ತಂ ವಿಲೋಕ್ಯ ಚ ॥ ೧೨೮ ॥

---

ಈ ಮಾರ್ಗದಲ್ಲಿ ಇತರರಿಗೆ ಹಿಂಸೆಯೇ ಹೆಚ್ಚಾಗಿ ಉಂಟಾಗುವುದು. ಇತರರಿಗಾಗಿ ಹಿಂಸೆಯ ಕಾರ್ಯವನ್ನು ಮಾಡುವವನ ಮನಸ್ಸಿನಲ್ಲಿ ಉಪಶಾಂತಿಯು ಉಂಟಾಗದೆ ಇರುವುದು. ಆದ್ದರಿಂದ ವೇದೋಕ್ತವಾದ ಮಾರ್ಗವನ್ನು ಆಚರಿಸಿದಲ್ಲಿ ಜನರಿಗೆ ಹಿತವು ಉಂಟಾಗುವುದು ರಕ್ಷೆಯನ್ನು ಉಂಟುಮಾಡುವ ಭಸ್ಮವನ್ನು ನೀವು ಧರಿಸಿರಿ. ರುದ್ರಾಕ್ಷವನ್ನು ನೀವು ಧರಿಸಿರಿ. ನೀವು ಅಹಂಕಾರವನ್ನು ಬಿಟ್ಟು ನನ್ನ ಮಾತನ್ನು ಕೇಳಿರಿ. ನೀವು ನಂಬಿರುವ ಮಾರ್ಗಾಚರಣೆಯಿಂದ ನಿಮಗೆ ಬಹಳ ತೊಂದರೆಯುಂಟಾಗುವುದು. ಆದ್ದರಿಂದ ನೀವು ವೇದೋಕ್ತವಾದ ಭಸ್ಮ,ರುದ್ರಾಕ್ಷಗಳನ್ನು ಧರಿಸಿ, ವೇದಮೂಲವಾಗಿರುವ ವೇದಸಾರಷಡಕ್ಷರ ಮಂತ್ರವನ್ನು ಜಪಮಾಡಿರಿ. ಶಿವಸಂಬಂಧವಾದ ಈ ಮಂತ್ರದ ಜಪದಿಂದ ನಿಮಗೆ ಭುಕ್ತಿ ಮುಕ್ತಿಗಳು ತಪ್ಪದೆ ಉಂಟಾಗುವುವು.

೧೨೫–೧೨೬. ವಿಷ್ಣುವೇ ಮೊದಲಾದ ದೇವತೆಗಳು ಪೂಜಿಸಿರುವ ಮಹೇಶ್ವರನ ಪೂಜೆಯನ್ನು ಭಕ್ತಿಯಿಂದ ಆಚರಿಸಿರಿ. ಅದರಿಂದ ಎಲ್ಲಾ ವಿಧವಾದ ಪುರುಷಾರ್ಥಗಳೂ ಉಂಟಾಗುವುವು. ನಾನು ಹೇಳುತ್ತಿರುವ ಈ ಪ್ರಕಾರವಾದ ವೇದೋಕ್ತ ಕರ್ಮಗಳನ್ನು ನೀವು ಪ್ರತಿದಿನವೂ ಆಚರಿಸುತ್ತಾ ಇದ್ದಲ್ಲಿ ನಿಮಗೆ ಸತ್ಯ ಜ್ಞಾನ ಸುಖ ರೂಪವಾದ ಮುಕ್ತಿಯು ಉಂಟಾಗುವುದರಲ್ಲಿ ಸಂಶಯವಿಲ್ಲವು·

**ಅತ್ಯರ್ಥಂ ಭರ್ತ್ಸಯಾಮಾಸು ಜ್ಞಾನಪೂರ್ಣಂ ಚ ಶಂಕರಂ ।**
**ಷಡಕ್ಷರಂ ಚ ರುದ್ರಾಕ್ಷಂ ರಕ್ಷಾಂ ಮೋಕ್ಷೈಕಸಾಧನಂ ॥ ೧೨೯ ॥**

**ಇತಿ ತದ್ವಾಕ್ಯಮಾಕರ್ಣ್ಯ ಪ್ರಾಹುಸ್ಸರ್ವೇ ಪ್ರಧಾನತಃ ।**
**ಮುಕ್ತ್ವಾರ್ಭಕಂ ಜ್ಞಾನಹೀನಂ ತ್ವಾಂ ಹನಿಷ್ಯಾಮಹೇ ವಯಂ ॥ ೧೩೦ ॥**

**ಉತ್ತಿಷ್ಠ ಮಂತ್ರಪತ್ರಂ ಚ ಕ್ಷೇಪಯಾಮೋ ನದೀರಯೇ ।**
**ತದಾಹ ಜ್ಞಾನಸಂಬಂಧೋ ರಾಜಾನಮಿತರಾನಪಿ ॥ ೧೩೧ ॥**

**ಭೂಪ ಏತೇ ಹಿ ನಿರ್ಭಾಗ್ಯಾ ನ ಶೃಣ್ವಂತಿ ಹಿತಂ ವಚಃ ।**
**ಮಂತ್ರಿಣಾ ವನಿತೇಶ್ವರ್ಯಾ ಚೋದಿತಸ್ತತ್ಕ್ಷಣೇನ ಸಃ ॥ ೧೩೨ ॥**

**ಸೂಚೀಮುಖಸುತೀಕ್ಷ್ಣಾಗ್ರಾ ಸುದೃಢಾನ್ದಾರುಶೂಲಕಾನ್ ।**
**ಶಂಭುಭಕ್ತೈರನೇಕೈಶ್ಚ ಭೂಪತೇಃ ಪುರುಷೈರಪಿ ॥ ೧೩೩ ॥**

---

ನನ್ನ ಈ ಮಾತನ್ನು ನೀವು ಕೇಳುವುದಾದರೆ ನಿಮ್ಮನ್ನು ಬಿಡುತ್ತೇನೆ. ಇಲ್ಲದಿದ್ದರೆ ನಿಮ್ಮನ್ನು ಶೂಲಕ್ಕೆ ಹಾಕಿಸುತ್ತೇನೆ "ಎಂದು ಹೇಳಿದನು." ಈ ಮಾತನ್ನು ಕೇಳಿದ ಮಂತ್ರವಾದಿಗಳಿಗೆ ಬಹಳ ಕೋಪವು ಬಂದಿತು. ಅವರು ಆ ಶಿವಯೋಗಿಯನ್ನು ಕ್ರೂರವಾದ ದೃಷ್ಟಿಯಿಂದ ನೋಡಿದರು. ಅವರು ಆಗ ಆ ಯೋಗಿಯನ್ನೂ, ಶಿವನನ್ನೂ ಬಹಳ ಮಟ್ಟಿಗೆ ನಿಂದಿಸಿದರು.

೧೩೦–೧೩೪. ಮಂತ್ರವಾದಿಗಳು ಎಲ್ಲರೂ ಸೇರಿ, "ನೀನು ಎಳೆಯ ಹುಡುಗನಾಗಿರುತ್ತೀಯೆ. ನಿನಗೆ ಒಂದೂ ತಿಳಿಯದು. ಆದ್ದರಿಂದ ನಿನ್ನನ್ನು ಬಿಟ್ಟು ಉಳಿದವರೆಲ್ಲರನ್ನೂ ನಾವು ಹೊಡೆಯುತ್ತೇವೆ. ಆದ್ದರಿಂದ ಈ ಮಾತುಗಳನ್ನು ನಮ್ಮ ಸಂಗಡ ಹೇಳದೆ, ಬೇಗನೆ ಮೇಲಕ್ಕೆ ಎದ್ದು ನದಿಯ ಪ್ರವಾಹದ ವೇಗದಲ್ಲಿ ನೀನು ನಮ್ಮಂತೆ ಪತ್ರಿಕೆಯನ್ನು ಹಾಕು "ಎಂದು ಹೇಳಿದರು. ಆಗ ಜ್ಞಾನಸಂಬಂಧ ಯೋಗಿಯು ರಾಜನೊಡನೆಯೂ ಮತ್ತು ಇತರರ ಸಂಗಡಲೂ ಹೇಳಿದನು. "ಎಲೈ ರಾಜನೆ, ಇವರು ಅದೃಷ್ಟವಿಲ್ಲದವರು. ನಾನು ಹೇಳಿದ ಹಿತಕರವಾದ ಮಾತನ್ನು ಕೇಳುವುದಿಲ್ಲ" ಎಂದು ಹೇಳಿದನು. ಅವನ ಮಾತನ್ನು ಕೇಳಿ ಕುಲಬಂಧನ ಮಂತ್ರಿಯೂ ವನಿತೇಶ್ವರಿ ಎಂಬ ರಾಣಿಯೂ, ಆ ಕ್ಷಣದಲ್ಲಿ ಸೂಜಿಯ ತುದಿಯಂತೆ ಸೂಕ್ಷ್ಮವಾದ

ಸ್ಥಾಪಯಾಮಾಸ ಸುದೃಢಾನ್ಭೂಮಿಷ್ವತ್ಯಂತಭೀತಿದಾನ್ ।
ಜ್ಞಾನಪೂರ್ಣೋಽಥ ಭಗವಾನ್ ಗುಹಾಂಶಶ್ಚ ಶಿವಂ ಸ್ಮರನ್ ॥ ೧೩೪ ॥

ಶಿಷ್ಯೈಃ ಪ್ರಾಪ ನದೀತೀರಂ ರಾಜ್ಞಾ ಸಹ ಚ ಮಂತ್ರಿಣಾ ।
ನಗ್ನಾಸ್ತತ್ಪ್ರಥಮಂ ಗತ್ವಾ ವೇಗಾದ್ವೇಗವತೀಂ ನದೀಂ ॥ ೧೩೫ ॥

ಮಂತ್ರ್ಯೃಶ್ಚ ಮಂತ್ರಯಾಮಾಸುಸ್ತದ್ವೇಗಪರಿಶಾಂತಯೇ ।
ಅಥ ತೇ ಮಂತ್ರಪತ್ರಾಣಿ ಮಂತ್ರಜ್ಞಾ ಹ್ಯಭಿಮಂತ್ರ್ಯ ಚ ॥ ೧೩೬ ॥

ತಂ ನದ್ಯಾಂ ಪಾತಯಾಮಾಸುರ್ಜಲಸ್ತಂಭಾದಿಕೋವಿದಾಃ ।
ತತ್ಕ್ಷಣಾಜ್ಞಾನಪೂರ್ಣೋಽಪಿ ಸ್ವಸ್ಯ ಪುಸ್ತಕಮಧ್ಯಗಂ ॥ ೧೩೭ ॥

ಪತ್ರಂ ಚಾಪಾತಯನ್ನದ್ಯಾಂ ಮೀನಾಕ್ಷೀಶಂ ಶಿವಂ ಸ್ಮರನ್ ।
ಮೀನಾಕ್ಷೀಮಪಿ ಶರ್ವಾಣೀಂ ಸರ್ವಲೋಕೈಕಮಾತರಂ ॥ ೧೩೮ ॥

---

ಹರಿತವಾದ ಅಲಗುಗಳುಳ್ಳದ್ದಾದ ಮರದ ಶೂಲಗಳನ್ನು ಶಿವಭಕ್ತರಿಂದಲೂ ರಾಜದೂತರಿಂದಲೂ ಭೂಮಿಯಲ್ಲಿ ನೆಡಿಸುವಂತೆ ಸಮ್ಮತಿಯನ್ನು ಕೊಟ್ಟರು. ಷಣ್ಮುಖನ ಅಂಶದಿಂದ ಇರುವ ಜ್ಞಾನಪೂರ್ಣ ಯೋಗಿಯು ಶಿವನನ್ನು ಸ್ಮರಿಸುತ್ತಾ ಅವುಗಳನ್ನು ಗಟ್ಟಿಯಾಗಿ ಭೂಮಿಯಲ್ಲಿ ನೆಡಿಸಿದನು. ಇದನ್ನು ನೋಡಿದ ಕೂಡಲೇ ಹೆದರಿಕೆಯು ಉಂಟಾಗುತ್ತಿತ್ತು.

೧೩೫-೧೩೮. ಅನಂತರದಲ್ಲಿ ಅವನು ರಾಜ ಮತ್ತು ಮಂತ್ರಿಗಳೊಡನೆಯೂ ಶಿಷ್ಯರೊಡನೆಯೂ ನದಿಯ ತೀರಕ್ಕೆ ಬಂದನು. ಮಂತ್ರವಾದಿಗಳು ಇವನಿಗಿಂತ ಮುಂಚಿತವಾಗಿ ವೇಗವತೀನದಿಯ ತೀರಕ್ಕೆ ಬಂದಿದ್ದರು. ಅವರು ಅಲ್ಲಿ ನದಿಯ ಪ್ರವಾಹವು ಕಡಿಮೆಯಾಗುವುದಕ್ಕಾಗಿ ಮಂತ್ರಗಳಿಂದ ಅಭಿಮಂತ್ರಿಸಿದ್ದರು. ಆಮೇಲೆ ಅವರು ಮಂತ್ರದಿಂದ ಅಭಿಮಂತ್ರಿಸಿದ ತಮ್ಮ ಪತ್ರಗಳನ್ನು ಮಂತ್ರಜ್ಞರಾಗಿ ಜಲಸ್ತಂಭ ವಿದ್ಯೆಯನ್ನು ತಿಳಿದವರಾದ ಕಾರಣ ನದಿಯಲ್ಲಿ ಹಾಕಿದರು. ಜ್ಞಾನಪೂರ್ಣ ಯೋಗಿಯೂ ಕೂಡ ಆ ಕ್ಷಣದಲ್ಲಿ ತನ್ನ ಪುಸ್ತಕದ ಮಧ್ಯದಿಂದ ಒಂದು ಪತ್ರವನ್ನು ತೆಗೆದುಕೊಂಡು ಜಗನ್ಮಾತೆಯಾದ ಮೀನಾಕ್ಷೀದೇವಿಯನ್ನೂ, ಮೀನಾಕ್ಷೀ ಸಮೇತನಾದ ಸುಂದರೇಶ್ವರನನ್ನೂ ಸ್ಮರಿಸುತ್ತಾ ನದಿಯಲ್ಲಿ ಹಾಕಿದನು.

ನೃಪಮಂತ್ರಿಮುಖ್ಯೈ ಸ್ಸರ್ವೈಃ ಪಶ್ಯಮಾನಂ ಶಿವಾಜ್ಞಯಾ ।
ತತ್ಪತ್ರಂ ಶರವೇಗಂ ಚ ಪರಿಗೃಹ್ಯಾವಿಲಂಬಿತಂ　　　॥ ೧೩೯ ॥

ಸರ್ವಲೋಕಸ್ಯ ರಕ್ಷಾರ್ಥಂ ಪ್ರಯಯೌ ಪಶ್ಚಿಮಾಂ ದಿಶಂ ।
ನದೀರಯಾತಿ ಕೃಷ್ಣಾನಿ ವಾಯುವೇಗಯುತಾನಿ ಚ ·　　　॥ ೧೪೦ ॥

ಪತ್ರಾಣಿ ಕ್ಷಪಣಾನಾಂ ಚ ಜಗ್ಮುಃ ಪ್ರಾಚೀಂ ದಿಶಂ ಪ್ರತಿ ।
ಜಲಪ್ರವಾಹೈಶ್ಶೀರ್ಣಾನಿ ಗತಾನ್ಯುದಧಿಪಾಥಸಿ　　　॥ ೧೪೧ ॥

ತಂ ವಿಸ್ಮಯಂ ಜನಾ ದೃಷ್ಟ್ವಾ ವ್ಯಧುಃ ಸಿಂಹರವಂ ಮುದಾ ।
ರಾಜಾ ರಾಜ್ಞೀ ಚ ಮಂತ್ರೀ ಚ ಶಂಭುಭಕ್ತಾ ಅನೇಕಶಃ　　　॥ ೧೪೨ ॥

ಜ್ಞಾನಪೂರ್ಣ ಸ್ಸಶಿಷ್ಯಶ್ಚ ತೇ ಸರ್ವೇಽತಿಮುದಂ ದಧುಃ ।
ನಗ್ನಾಚಾರ್ಯಾ ಸ್ಸಶಿಷ್ಯಾಶ್ಚ ಶೋಕಾರ್ತಿವಿನತಾನನಾಃ　　　॥ ೧೪೩ ॥

---

೧೩೯-೧೪೨ ಆಗ ರಾಜನೂ, ಮಂತ್ರಿಯೂ, ಇವರೆಲ್ಲರನ್ನೂ ನೋಡು ತ್ತಿದ್ದರು. ಆ ಪತ್ರವು ಶಿವನ ಅಪ್ಪಣೆಯಂತೆ ಲೋಕಗಳ ಹಿತಕ್ಕಾಗಿ ಬೇಗನೆ ಪೂರ್ವ ದಿಕ್ಕಿಗೆ ಹರಿಯುವ ನದಿಯ ವೇಗಕ್ಕೆ ಸಿಕ್ಕದೆ, ಅದಕ್ಕೆ ಎದುರಾಗಿ ಪಶ್ಚಿಮಕ್ಕೆ ಹೋಗಲು ಪ್ರಾರಂಭಿಸಿತು. ಮಂತ್ರವಾದಿಗಳು ಹಾಕಿರುವ ಪತ್ರಗಳು ಎಲ್ಲವೂ, ಹೊಳೆಯ ವೇಗಕ್ಕೆ ಸಿಕ್ಕಿ ಪ್ರವಾಹದ ಗಾಳಿಗೆ ಅನುಸಾರವಾಗಿ ಪೂರ್ವದಿಕ್ಕಿಗೆ ಹೋಗುತ್ತಿದ್ದುವು. ಅವುಗಳು ಅಲ್ಲಲ್ಲಿ ನದೀ ವೇಗದಿಂದ ಹರಿದು ಹೋಗಿ ಕ್ರಮವಾಗಿ ಸಮುದ್ರದ ನೀರನ್ನು ಸೇರಿದವು. ಅಲ್ಲಿ ಸೇರಿರುವ ಜನಗಳು ಈ ಆಶ್ಚರ್ಯವನ್ನು ನೋಡಿ ಸಂತೋಷದಿಂದ ಸಿಂಹನಾದವನ್ನು ಮಾಡಿದರು. ರಾಜನೂ, ಮಂತ್ರಿಯೂ, ರಾಣಿಯೂ, ಶಿವಭಕ್ತರಾದ ಬಹಳ ಜನಗಳೂ, ಜ್ಞಾನಪೂರ್ಣ ಯೋಗಿಯೂ ಅವನ ಶಿಷ್ಯರೂ ಇವರೆಲ್ಲರಿಗೂ ಬಹಳ ಸಂತೋಷವಾಯಿತು.

೧೪೩–೧೪೯. ಆಗ ಮಂತ್ರವಾದಿಗಳೂ ಗುರುಗಳೂ, ಶಿಷ್ಯರೂ ದುಃಖದಿಂದ ತಮ್ಮ ತಮ್ಮ ಮುಖಗಳನ್ನು ತಗ್ಗಿಸಿಕೊಂಡು ಜ್ಞಾನಸಂಬಂಧ ಯೋಗಿಯ ಸಂಗಡ

ವೇದಮೂಲೇನ ಸಹಿತಂ ವೇದಸಾರಷಡಕ್ಷರಂ ।
ಜಪಂತು ಭುಕ್ತಿಮುಕ್ತ್ಯರ್ಥಂ ಭವಂತೋ ಮಂತ್ರಮೈಶ್ವರಂ || ೧೨೪ ||

ಭಕ್ತ್ಯಾ ಚ ಸರ್ವಧರ್ಮಾರ್ಥಕಾಮಮೋಕ್ಷಪ್ರಸಿದ್ಧಯೇ ।
ಅರ್ಚಣಾಮಪಿ ವಿಷ್ಣ್ವಾದ್ಯೈರರ್ಚಿತಸ್ಯ ಮಹೇಶಿತುಃ || ೧೨೫ ||

ಏವಂ ವೇದೋಕ್ತಕರ್ಮಾಣಿ ಕೃತ್ವಾ ನಿತ್ಯಂ ವಿಧಾನತಃ ।
ಮುಕ್ತಿಂ ಲಭಧ್ವಂ ಪರಮಾಂ ಸತ್ಯಜ್ಞಾನಸುಖಾತ್ಮಿಕಾಂ || ೧೨೬ ||

ಶ್ರುತಂ ಚೇನ್ಮಮ ಸದ್ವಾಕ್ಯಂ ವಿಸೃಜಾಮಿ ಮೃತಂ ವಿನಾ ।
ಯುಷ್ಮಾನ್ ಸ್ಸರ್ವಾನನ್ಯಥಾ ಚೇಚ್ಛೂಲೇಷ್ವಾರೋಪಯಾಮಿ ವಃ ||೧೨೭||

ಇತಿ ತದ್ಗಿರಮಾಕರ್ಣ್ಯ ಕ್ಷಪಣಾ ವೇದನಿಂದಕಾಃ ।
ಕೋಪಾವೇಶವಶಾತ್ಕ್ರೂರೈರ್ಲೋಚನೈಸ್ತಂ ವಿಲೋಕ್ಯ ಚ || ೧೨೮ ||

---

ಈ ಮಾರ್ಗದಲ್ಲಿ ಇತರರಿಗೆ ಹಿಂಸೆಯೇ ಹೆಚ್ಚಾಗಿ ಉಂಟಾಗುವುದು. ಇತರರಿಗಾಗಿ ಹಿಂಸೆಯ ಕಾರ್ಯವನ್ನು ಮಾಡುವವನ ಮನಸ್ಸಿನಲ್ಲಿ ಉಪಶಾಂತಿಯು ಉಂಟಾಗದೆ ಇರುವುದು. ಆದ್ದರಿಂದ ವೇದೋಕ್ತವಾದ ಮಾರ್ಗವನ್ನು ಆಚರಿಸಿದಲ್ಲಿ ಜನರಿಗೆ ಹಿತವು ಉಂಟಾಗುವುದು ರಕ್ಷೆಯನ್ನು ಉಂಟುಮಾಡುವ ಭಸ್ಮವನ್ನು ನೀವು ಧರಿಸಿರಿ. ರುದ್ರಾಕ್ಷವನ್ನು ನೀವು ಧರಿಸಿರಿ. ನೀವು ಅಹಂಕಾರವನ್ನು ಬಿಟ್ಟು ನನ್ನ ಮಾತನ್ನು ಕೇಳಿರಿ. ನೀವು ನಂಬಿರುವ ಮಾರ್ಗಾಚರಣೆಯಿಂದ ನಿಮಗೆ ಬಹಳ ತೊಂದರೆಯುಂಟಾಗುವುದು. ಆದ್ದರಿಂದ ನೀವು ವೇದೋಕ್ತವಾದ ಭಸ್ಮ ರುದ್ರಾಕ್ಷಗಳನ್ನು ಧರಿಸಿ, ವೇದಮೂಲವಾಗಿರುವ ವೇದಸಾರಷಡಕ್ಷರ ಮಂತ್ರವನ್ನು ಜಪಮಾಡಿರಿ. ಶಿವಸಂಬಂಧವಾದ ಈ ಮಂತ್ರದ ಜಪದಿಂದ ನಿಮಗೆ ಭುಕ್ತಿ ಮುಕ್ತಿಗಳು ತಪ್ಪದೆ ಉಂಟಾಗುವುವು.

೧೨೫-೧೨೬. ವಿಷ್ಣುವೇ ಮೊದಲಾದ ದೇವತೆಗಳು ಪೂಜಿಸಿರುವ ಮಹೇಶ್ವರನ ಪೂಜೆಯನ್ನು ಭಕ್ತಿಯಿಂದ ಆಚರಿಸಿರಿ. ಅದರಿಂದ ಎಲ್ಲಾ ವಿಧವಾದ ಪುರುಷಾರ್ಥಗಳೂ ಉಂಟಾಗುವುವು. ನಾನು ಹೇಳುತ್ತಿರುವ ಈ ಪ್ರಕಾರವಾದ ವೇದೋಕ್ತ ಕರ್ಮಗಳನ್ನು ನೀವು ಪ್ರತಿದಿನವೂ ಆಚರಿಸುತ್ತಾ ಇದ್ದಲ್ಲಿ ನಿಮಗೆ ಸತ್ಯ ಜ್ಞಾನ ಸುಖ ರೂಪವಾದ ಮುಕ್ತಿಯು ಉಂಟಾಗುವುದರಲ್ಲಿ ಸಂಶಯವಿಲ್ಲವು.

ಅತ್ಯರ್ಥಂ ಭರ್ತ್ಸಯಾಮಾಸು ಜ್ಞಾನಪೂರ್ಣಂ ಚ ಶಂಕರಂ ।
ಷಡಕ್ಷರಂ ಚ ರುದ್ರಾಕ್ಷಂ ರಕ್ಷಾಂ ಮೋಕ್ಷೈಕಸಾಧನಂ ॥ ೧೨೯ ॥

ಇತಿ ತದ್ವಾಕ್ಯಮಾಕರ್ಣ್ಯ ಪ್ರಾಹುಸ್ಸರ್ವೇ ಪ್ರಧಾನತಃ ।
ಮುಕ್ತ್ವಾರ್ಭಕಂ ಜ್ಞಾನಹೀನಂ ತ್ವಾಂ ಹನಿಷ್ಯಾಮಹೇ ವಯಂ ॥ ೧೩೦ ॥

ಉತ್ತಿಷ್ಠ ಮಂತ್ರಪತ್ರಂ ಚ ಕ್ಷೇಪಯಾಮೋ ಸದೀರಯೋ ।
ತದಾಹ ಜ್ಞಾನಸಂಬಂಧೋ ರಾಜಾನಮಿತರಾನಪಿ ॥ ೧೩೧ ॥

ಭೂಪ ಏತೇ ಹಿ ನಿರ್ಭಾಗ್ಯಾ ನ ಶೃಣ್ವಂತಿ ಹಿತಂ ವಚಃ ।
ಮಂತ್ರಿಣಾ ವನಿತೇಶ್ವರ್ಯಾ ಚೋದಿತಸ್ತತ್ಕ್ಷಣೇನ ಸಃ ॥ ೧೩೨ ॥

ಸೂಚೀಮುಖಸುತೀಕ್ಷ್ಣಾಗ್ರಾ ಸುದೃಢಾನ್ದಾರುಶೂಲಕಾನ್ ।
ಶಂಭುಭಕ್ತೈರನೇಕೈಶ್ಚ ಭೂಪತೇಃ ಪುರುಷೈರಪಿ ॥ ೧೩೩ ॥

---

ನನ್ನ ಈ ಮಾತನ್ನು ನೀವು ಕೇಳುವುದಾದರೆ ನಿಮ್ಮನ್ನು ಬಿಡುತ್ತೇನೆ. ಇಲ್ಲದಿದ್ದರೆ ನಿಮ್ಮನ್ನು ಶೂಲಕ್ಕೆ ಹಾಕಿಸುತ್ತೇನೆ " ಎಂದು ಹೇಳಿದನು." ಈ ಮಾತನ್ನು ಕೇಳಿದ ಮಂತ್ರವಾದಿಗಳಿಗೆ ಬಹಳ ಕೋಪವು ಬಂದಿತು. ಅವರು ಆ ಶಿವಯೋಗಿಯನ್ನು ಕ್ರೂರವಾದ ದೃಷ್ಟಿಯಿಂದ ನೋಡಿದರು. ಅವರು ಆಗ ಆ ಯೋಗಿಯನ್ನೂ, ಶಿವನನ್ನೂ ಬಹಳ ಮಟ್ಟಿಗೆ ನಿಂದಿಸಿದರು.

೧೩೦–೧೩೪. ಮಂತ್ರವಾದಿಗಳು ಎಲ್ಲರೂ ಸೇರಿ, " ನೀನು ಎಳೆಯ ಹುಡುಗನಾಗಿರುತ್ತೀಯೆ. ನಿನಗೆ ಒಂದೂ ತಿಳಿಯದು. ಆದ್ದರಿಂದ ನಿನ್ನನ್ನು ಬಿಟ್ಟು ಉಳಿದವರೆಲ್ಲರನ್ನೂ ನಾವು ಹೊಡೆಯುತ್ತೇವೆ. ಆದ್ದರಿಂದ ಈ ಮಾತುಗಳನ್ನು ನಮ್ಮ ಸಂಗಡ ಹೇಳದೆ, ಬೇಗನೆ ಮೇಲಕ್ಕೆ ಎದ್ದು ನದಿಯ ಪ್ರವಾಹದ ವೇಗದಲ್ಲಿ ನೀನು ನಮ್ಮಂತೆ ಪತ್ರಿಕೆಯನ್ನು ಹಾಕು " ಎಂದು ಹೇಳಿದರು. ಆಗ ಜ್ಞಾನಸಂಬಂಧ ಯೋಗಿಯು ರಾಜನೊಡನೆಯೂ ಮತ್ತು ಇತರರ ಸಂಗಡಲೂ ಹೇಳಿದನು. " ಎಲೈ ರಾಜನೆ, ಇವರು ಅದೃಷ್ಟವಿಲ್ಲದವರು. ನಾನು ಹೇಳಿದ ಹಿತಕರವಾದ ಮಾತನ್ನು ಕೇಳುವುದಿಲ್ಲ" ಎಂದು ಹೇಳಿದನು. ಅವನ ಮಾತನ್ನ ಕೇಳಿ ಕುಲಬಂಧನ ಮಂತ್ರಿಯೂ ವನಿತೇಶ್ವರಿ ಎಂಬ ರಾಣಿಯೂ, ಆ ಕ್ಷಣದಲ್ಲಿ ಸೂಜಿಯ ತುದಿಯಂತೆ ಸೂಕ್ಷ್ಮವಾದ

ಸ್ಥಾಪಯಾಮಾಸ ಸುದೃಢಾನ್ಭೂಮಿಷ್ವತ್ಯಂತಭೀತಿದಾನ್ ।
ಜ್ಞಾನಪೂರ್ಣೋಽಥ ಭಗವಾನ್ ಗುಹಾಂಶಶ್ಚ ಶಿವಂ ಸ್ಮರನ್ ॥ ೧೩೪ ॥

ಶಿಷ್ಯೈಃ ಪ್ರಾಪ ನದೀತೀರಂ ರಾಜ್ಞಾ ಸಹ ಚ ಮಂತ್ರಿಣಾ ।
ನಗ್ನಾಸ್ತತ್ಪ್ರಥಮಂ ಗತ್ವಾ ವೇಗಾದ್ವೇಗವತೀಂ ನದೀಂ ॥ ೧೩೫ ॥

ಮಂತ್ರೈಶ್ಚ ಮಂತ್ರಯಾಮಾಸುಸ್ತದ್ವೇಗಪರಿಶಾಂತಯೇ ।
ಅಥ ತೇ ಮಂತ್ರಪತ್ರಾಣಿ ಮಂತ್ರಜ್ಞಾ ಹ್ಯಭಿಮಂತ್ರ್ಯ ಚ ॥ ೧೩೬ ॥

ತಂ ನದ್ಯಾಂ ಪಾತಯಾಮಾಸುರ್ಜಲಸ್ತಂಭಾದಿಕೋವಿದಾಃ ।
ತತ್ಕ್ಷಣಾಜ್ಞಾನಪೂರ್ಣೋಽಪಿ ಸ್ವಸ್ಯ ಪುಸ್ತಕಮಧ್ಯಗಂ ॥ ೧೩೭ ॥

ಪತ್ರಂ ಚಾಪಾತಯನ್ನದ್ಯಾಂ ಮೀನಾಕ್ಷೀಶಂ ಶಿವಂ ಸ್ಮರನ್ ।
ಮೀನಾಕ್ಷೀಮಪಿ ಶರ್ವಾಣೀಂ ಸರ್ವಲೋಕೈಕಮಾತರಂ ॥ ೧೩೮ ॥

---

ಹರಿತವಾದ ಅಲಗುಗಳುಳ್ಳದ್ದಾದ ಮರದ ಶೂಲಗಳನ್ನು ಶಿವಭಕ್ತರಿಂದಲೂ ರಾಜದೂತರಿಂದಲೂ ಭೂಮಿಯಲ್ಲಿ ನೆಡಿಸುವಂತೆ ಸಮ್ಮತಿಯನ್ನು ಕೊಟ್ಟರು. ಷಣ್ಮುಖನ ಅಂಶದಿಂದ ಇರುವ ಜ್ಞಾನಪೂರ್ಣ ಯೋಗಿಯು ಶಿವನನ್ನು ಸ್ಮರಿಸುತ್ತಾ ಅವುಗಳನ್ನು ಗಟ್ಟಿಯಾಗಿ ಭೂಮಿಯಲ್ಲಿ ನೆಡಿಸಿದನು. ಇದನ್ನು ನೋಡಿದ ಕೂಡಲೇ ಹೆದರಿಕೆಯು ಉಂಟಾಗುತ್ತಿತ್ತು.

೧೩೫-೧೩೮. ಅನಂತರದಲ್ಲಿ ಅವನು ರಾಜ ಮತ್ತು ಮಂತ್ರಿಗಳೊಡನೆಯೂ ಶಿಷ್ಯರೊಡನೆಯೂ ನದಿಯ ತೀರಕ್ಕೆ ಬಂದನು. ಮಂತ್ರವಾದಿಗಳು ಇವನಿಗಿಂತ ಮುಂಚಿತವಾಗಿ ವೇಗವತೀನದಿಯ ತೀರಕ್ಕೆ ಬಂದಿದ್ದರು. ಅವರು ಅಲ್ಲಿ ನದಿಯ ಪ್ರವಾಹವು ಕಡಿಮೆಯಾಗುವುದಕ್ಕಾಗಿ ಮಂತ್ರಗಳಿಂದ ಅಭಿಮಂತ್ರಿಸಿದ್ದರು. ಆಮೇಲೆ ಅವರು ಮಂತ್ರದಿಂದ ಅಭಿಮಂತ್ರಿಸಿದ ತಮ್ಮ ಪತ್ರಗಳನ್ನು ಮಂತ್ರಜ್ಞರಾಗಿ ಜಲಸ್ತಂಭ ವಿದ್ಯೆಯನ್ನು ತಿಳಿದವರಾದ ಕಾರಣ ನದಿಯಲ್ಲಿ ಹಾಕಿದರು. ಜ್ಞಾನಪೂರ್ಣ ಯೋಗಿಯೂ ಕೂಡ ಆ ಕ್ಷಣದಲ್ಲಿ ತನ್ನ ಪುಸ್ತಕದ ಮಧ್ಯದಿಂದ ಒಂದು ಪತ್ರವನ್ನು ತೆಗೆದುಕೊಂಡು ಜಗನ್ಮಾತೆಯಾದ ಮೀನಾಕ್ಷೀದೇವಿಯನ್ನೂ, ಮೀನಾಕ್ಷೀ ಸಮೇತನಾದ ಸುಂದರೇಶ್ವರನನ್ನೂ ಸ್ಮರಿಸುತ್ತಾ ನದಿಯಲ್ಲಿ ಹಾಕಿದನು.

ನೃಪಮಂತ್ರಿಮುಖ್ಯೈ ಸ್ಸರ್ವೈಃ ಪಶ್ಯಮಾನಂ ಶಿವಾಜ್ಞಯಾ ।
ತತ್ಪತ್ರಂ ಶರವೇಗಂ ಚ ಪರಿಗೃಹ್ಯಾನಿಲಂಬಿತಂ ॥ ೧೩೯ ॥

ಸರ್ವಲೋಕಸ್ಯ ರಕ್ಷಾರ್ಥಂ ಪ್ರಯಯೌ ಪಶ್ಚಿಮಾಂ ದಿಶಂ ।
ನದೀರಯಾತಿ ಕೃಷ್ಟಾನಿ ವಾಯುವೇಗಯುತಾನಿ ಚ ॥ ೧೪೦ ॥

ಪತ್ರಾಣಿ ಕ್ಷಪಣಾನಾಂ ಚ ಜಗ್ಮುಃ ಪ್ರಾಚೀಂ ದಿಶಂ ಪ್ರತಿ ।
ಜಲಪ್ರವಾಹೈಶ್ಶೀರ್ಣಾನಿ ಗತಾನ್ಯುದಧಿಪಾಥಸಿ ॥ ೧೪೧ ॥

ತಂ ವಿಸ್ಮಯಂ ಜನಾ ದೃಷ್ಟ್ವಾ ವ್ಯಧುಃ ಸಿಂಹರವಂ ಮುದಾ ।
ರಾಜಾ ರಾಜ್ಞೀ ಚ ಮಂತ್ರೀ ಚ ಶಂಭುಭಕ್ತಾ ಅನೇಕಶಃ ॥ ೧೪೨ ॥

ಜ್ಞಾನಪೂರ್ಣ ಸ್ಸಶಿಷ್ಯಶ್ಚ ತೇ ಸರ್ವೇऽತಿಮುದಂ ದಧುಃ ।
ನಗ್ನಾಚಾರ್ಯಾ ಸ್ಸಶಿಷ್ಯಾಶ್ಚ ಶೋಕಾರ್ತಿವಿನತಾನನಾಃ ॥ ೧೪೩ ॥

---

೧೩೯-೧೪೨ ಆಗ ರಾಜನೂ, ಮಂತ್ರಿಯೂ, ಇವರೆಲ್ಲರನ್ನೂ ನೋಡು ತ್ತಿದ್ದರು. ಆ ಪತ್ರವು ಶಿವನ ಅಪ್ಪಣೆಯಂತೆ ಲೋಕಗಳ ಹಿತಕ್ಕಾಗಿ ಬೇಗನೆ ಪೂರ್ವ ದಿಕ್ಕಿಗೆ ಹರಿಯುವ ನದಿಯ ವೇಗಕ್ಕೆ ಸಿಕ್ಕದೆ, ಅದಕ್ಕೆ ಎದುರಾಗಿ ಪಶ್ಚಿಮಕ್ಕೆ ಹೋಗಲು ಪ್ರಾರಂಭಿಸಿತು. ಮಂತ್ರವಾದಿಗಳು ಹಾಕಿರುವ ಪತ್ರಗಳು ಎಲ್ಲವೂ, ಹೊಳೆಯ ವೇಗಕ್ಕೆ ಸಿಕ್ಕಿ ಪ್ರವಾಹದ ಗಾಳಿಗೆ ಅನುಸಾರವಾಗಿ ಪೂರ್ವದಿಕ್ಕಿಗೆ ಹೋಗುತ್ತಿದ್ದುವು. ಅವುಗಳು ಅಲ್ಲಲ್ಲಿ ನದೀ ವೇಗದಿಂದ ಹರಿದು ಹೋಗಿ ಕ್ರಮವಾಗಿ ಸಮುದ್ರದ ನೀರನ್ನು ಸೇರಿದವು. ಅಲ್ಲಿ ಸೇರಿರುವ ಜನಗಳು ಈ ಆಶ್ಚರ್ಯವನ್ನು ನೋಡಿ ಸಂತೋಷದಿಂದ ಸಿಂಹನಾದವನ್ನು ಮಾಡಿದರು. ರಾಜನೂ, ಮಂತ್ರಿಯೂ, ರಾಣಿಯೂ, ಶಿವಭಕ್ತರಾದ ಬಹಳ ಜನಗಳೂ, ಜ್ಞಾನಪೂರ್ಣ ಯೋಗಿಯೂ ಅವನ ಶಿಷ್ಯರೂ ಇವರೆಲ್ಲರಿಗೂ ಬಹಳ ಸಂತೋಷವಾಯಿತು.

೧೪೩-೧೪೯. ಆಗ ಮಂತ್ರವಾದಿಗಳೂ ಗುರುಗಳೂ, ಶಿಷ್ಯರೂ ದುಃಖದಿಂದ ತಮ್ಮ ತಮ್ಮ ಮುಖಗಳನ್ನು ತಗ್ಗಿಸಿಕೊಂಡು ಜ್ಞಾನಸಂಬಂಧ ಯೋಗಿಯ ಸಂಗಡ

ಪರಾಜಿತಾ ವಯಮಿತಿ ಪ್ರಾಹುಸ್ತಂ ವೈದಿಕದ್ವಿಪಂ ।
ಕರ್ತುಂ ಪಲಾಯನಂ ರಾಜಪುರುಷಾನ್ನೈವ ಚಕ್ರಿರೇ ॥ ೧೪೪ ॥

ಏಕೈಕಸ್ಯ ತು ಚತ್ವಾರಃ ಪುರುಷಾಃ ಪ್ರತಿರೋಧಿನಃ ।
ಸೋಽಪಿ ಜಾತದಯೋ ಭೂತ್ವಾ ದಯಾಲುರ್ವೈದಿಕೇಶ್ವರಃ ॥ ೧೪೫ ॥

ಇದಾನೀಂ ವಾ ಮಮ ವಚಃ ಶೃಣುಧ್ವಂ ಪಾಮರಾ ಜನಾಃ ।
ಏಕಕಾಲೇ ಮೃತಿಯುತಾನ್ ಪ್ರಾಹೇತಿಕ್ಷಪಣಾನ್ ಪುನಃ ॥ ೧೪೬ ॥

ಭವಂತೋಽದ್ಯ ವೃಥಾ ಪ್ರಾಣಾನ್ಮತ್ಯಜಧ್ವಂ ಮುಜಾ ಇವ ।
ಮದುಕ್ತಂ ವಚನಂ ಶ್ರುತ್ವಾ ಕರ್ಮ ಕುರ್ವಂತು ವೈದಿಕಂ ॥ ೧೪೭ ॥

ಭವಚ್ಚಿಹ್ನಂ ತು ಪಿಂಛಾದ್ಯಂ ತ್ಯಕ್ತ್ವಾ ಸರ್ವಂ ಹ್ರಿಯಾ ವಿನಾ ।
ಪರಮಂ ಪಾವನಂ ಭಸ್ಮ ಧಾರಯಂತ್ವಕ್ಷಮಾಲಯಾ ॥ ೧೪೮ ॥

ಭವಂತ್ವಥ ಕೃತಾರ್ಥಾಶ್ಚ ತಯೋರ್ಧಾರಣಮಾತ್ರತಃ ।
ನ ದ್ವಿಜಾ ವರ್ಣತಶ್ಚಾಪಿ ಸಂಕರಾ ಯೂಯಮಾಹ ತಾನ್ ॥ ೧೪೯ ॥

---

"ನಾವು ಸೋತಿದ್ದೇವೆ" ಎಂದು ಹೇಳಿದರು. ಅವರು ಓಡಿಹೋಗುವುದಕ್ಕೆ ಅವಕಾಶವನ್ನು ರಾಜದೂತರು ಕೊಡಲಿಲ್ಲ. ಒಬ್ಬೊಬ್ಬ ಮಂತ್ರವಾದಿಗೆ ನಾಲ್ಕು ಜನರಂತೆ ರಾಜದೂತರು ತಡೆಗಟ್ಟಿ ನಿಂತರು ದಯೆಯಿಂದ ಕೂಡಿದವನಾಗಿ ವೈದಿಕ ಶಿರೋಮಣಿಯಾದ ಜ್ಞಾನಸಂಬಂಧ ಯೋಗಿಯು ಒಂದೇ ಕಾಲದಲ್ಲಿ ಒಟ್ಟಿಗೆ ಮರಣಕ್ಕೆ ಸಿದ್ಧರಾಗಿರುವ ಮಂತ್ರವಾದಿಗಳನ್ನು "ಎಲೈ ಮೂರ್ಖರೇ ನೀವು ಈಗಲಾದರೂ ನನ್ನ ಮಾತನ್ನು ಕೇಳಿರಿ. ಸುಮ್ಮನೆ ಆಡಿನಂತೆ ನಿಮ್ಮ ಪ್ರಾಣವನ್ನು ಕಳೆದುಕೊಳ್ಳ ಬೇಡಿರಿ. ನೀವು ನಾಚಿಕೆಯನ್ನು ಬಿಟ್ಟು ನಿಮ್ಮ ಗುರುತಾಗಿರುವ ನವಿಲುಗರಿಯ ದೊಂಡೆಯೇ ಮುಂತಾದವುಗಳನ್ನು ತ್ಯಜಿಸಿ, ಪರಮ ಪವಿತ್ರವಾದ ಭಸ್ಮ ರುದ್ರಾಕ್ಷಿಗಳನ್ನು ಧರಿಸಿರಿ. ಅವುಗಳನ್ನು ನೀವು ಧರಿಸಿದ ಮಾತ್ರದಿಂದಲೇ ಕೃತಾರ್ಥರಾಗುತ್ತೀರಿ. ನೀವು ಜನ್ಮದಿಂದ ದ್ವಿಜರಾಗಿಲ್ಲ. ಆದ್ದರಿಂದ ವರ್ಣಾಶ್ರಮ ಧರ್ಮಗಳನ್ನು ವೇದೋಕ್ತ ಕ್ರಮದಿಂದ ನೀವು ಆಚರಿಸಲು ಅವಕಾಶವಿಲ್ಲ. ಆದ್ದರಿಂದಲೇ ನೀವು ಸಂಕರ ಜಾತಿಯವರಾಗಿರುತ್ತೀರಿ. ಭಸ್ಮಧಾರಣಾದಿಗಳಿಗೂ ಯೋಗ್ಯರಲ್ಲದ ಕಾರಣ ನಿಮಗೆ ನಾನು ಹೇಳಬೇಕಾಗಿರುತ್ತದೆ." ಎಂದು ಹೇಳಿದನು.

ಆಚಾರೇ ನಾಧಿಕಾರಾಶ್ಚ ವೇದೋಕ್ತಾನಾಂ ಚ ಕರ್ಮಣಿ ।
ಭಸ್ಮಾದಿಧಾರಣಾಯೋಗ್ಯಾ ಯೂಯಂ ತಸ್ಮಾದ್ಧ್ರವೀಮ್ಯಹಂ　|| ೧೫೦ ||

ಇತಿ ತದ್ವಾಕ್ಯ ಮಾಕರ್ಣ್ಯ ಕ್ಷಪಣಾಃ ಪಾಪಬುದ್ಧಯಃ ।
ಜೀವಿತಾಶಾಮಪಿ ತ್ಯಕ್ತ್ವಾ ಪ್ರೋಚುಸ್ತೇ ಮೃತಿಚೋದಿತಾಃ　|| ೧೫೧ ||

ಭೀತಿಂ ವಿಹಾಯ ಪ್ರತ್ಯಸ್ಮಾನ್ನಿಮಕ್ತ್ರ್ಯೋಕ್ತಂ ತ್ವಯಾರ್ಭಕೇ ।
ಭಸ್ಮಸ್ಪೃಷ್ಟಿಶ್ಚ ನ ಸ್ಯಾತ್ಯಾಜ್ಯಾ ಶಕ್ಯಂ ತದ್ಧಾರಣಂ ಕಥಂ　|| ೧೫೨ ||

ವದಸ್ಯೇವಮಕಲ್ಯಾಣೀರ್ವಾಚ ಸ್ತ್ವಂ ಪ್ರಭುಸಂಶ್ರಯಾತ್ ।
ಪ್ರಭರ್ತ್ಸ್ಯ ತಂ ಜ್ಞಾನಪೂರ್ಣಂ ದಯಾರ್ದ್ರ ಹಿತವಾದಿನಂ　|| ೧೫೩ ||

ಸ್ವಯಮೇವಾರುರುಹು ಸ್ತಾಂಚ್ಛೂಲಾನ್ನಗ್ನಸುದೇಶಿಕಾಃ ।
ತತ ಆರೋಪಯಾಮಾಸು ಶ್ಯೇಷಾನ್ನಗ್ನಾ ಶಿವಾಶ್ರಿತಾಃ　|| ೧೫೪ ||

ತೇಷಾಂ ಶಿಸ್ಯಾಃ ಪ್ರಶಿಷ್ಯಾದ್ಯಾ ಬಾಂಧವಾಃ ಪರಿಚಾರಕಾಃ ।
ದಧುಃ ಪ್ರಾಣಭಯಾದ್ಭಸ್ಮ ಸದ್ಯಃ ಫಾಲೇಷು ಲೌಕಿಕಂ　|| ೧೫೫ ||

---

೧೫೦--೧೫೪. ಕೆಟ್ಟ ಬುದ್ಧಿಯುವರಾದ ಮಂತ್ರವಾದಿಗಳು ಮರಣಕ್ಕೆ ಸಿದ್ಧರಾಗಿ ಬದುಕುವ ಆಸೆಯನ್ನೂ ಬಿಟ್ಟು, "ಎಲೈ ಬಾಲಕನೇ, ನೀನು ಭಯವಿಲ್ಲದೆ ನಮ್ಮ ವಿಷಯದಲ್ಲಿ ಈ ಪ್ರಕಾರವಾದ ಮಾತನ್ನಾಡುತ್ತೀಯೆ. ನಾವು ಭಸ್ಮವನ್ನು ಸ್ಪರ್ಶಮಾಡಕೂಡದು ಹೀಗಿರುವಾಗ ಅದನ್ನು ಹೇಗೆ ಧರಿಸುವುದು ಧೊರೆಯ ಆಶ್ರಯದಿಂದ ಈ ಬಗೆಯ ಕೆಟ್ಟಮಾತುಗಳನ್ನು ಆಡುತ್ತಿರುವೆ." ಎಂದು ದಯೆಯಿಂದ ಹಿತವನ್ನು ಹೇಳುವ ಜ್ಞಾನಪೂರ್ಣಯೋಗಿಯನ್ನು ನಿಂದಿಸಿದರು. ಮಂತ್ರವಾದಿಗಳ ಗುರುಗಳು ತಾವಾಗಿಯೇ ಶೂಲವನ್ನು ಏರಿದರು. ಉಳಿದವರನ್ನು ಶಿವ ಭಕ್ತರು ಶೂಲಕ್ಕೆ ಹಾಕಿದರು. ಅವರ ಶಿಷ್ಯರೂ ಪರಿಚಾರಕರೂ ಪ್ರಶಿಷ್ಯರೂ ಬದುಕ ಬೇಕೆಂಬ ಆಶೆಯಿಂದ ಲೌಕಿಕ ಭಸ್ಮವನ್ನು ಹಣೆಯಲ್ಲಿ ಧರಿಸಿದರು.

೧೫೫-೧೫೮. ಮತ್ತೆ ಕೆಲವರಿಗೆ ಭಸ್ಮವು ಸಿಕ್ಕಲಿಲ್ಲವಾದ ಕಾರಣ ಅವರು ಗೋಮಯವನ್ನು ತ್ರಿಪುಂಡ್ರವಾಗಿ ಧರಿಸಿ ಶೂಲಕ್ಕೆ ಹಾಕಲು ಬಂದವರಿಗೆ ನಮಸ್ಕಾರ

ಭಸ್ಮಾಭಾವೇ ಭಯಾತ್ಕೇಚಿತ್ತ್ರಿಯರ್ಕಪ್ಪೆಂಡ್ರಂ ಚ ಗೋಮಯೈಃ ।
ವಿಧಾಯ ಪ್ರಣತಿಂ ಚಕ್ರುಃ ಶೂಲೈರ್ಬಾಧಿತು ಮುದ್ಯತಾನ್ ॥ ೧೫೬ ॥

ತಾನ್ಸರ್ವಾನ್ಮುಮುಚು ಜ್ಞಾನಸಂಬಂಧಸ್ಯಾಜ್ಞಯಾ ಭಟಾಃ ।
ಅಪರೇ ಗೋಮಯಾಭಾವೇ ಗೋವತ್ಸಾನಂಸದೇಶತಃ । ॥ ೧೫೭ ॥

ಭಸ್ಮಹೇತವ ಇತ್ಯುಕ್ತ್ವಾ ಧೃತ್ವಾ ಚೇರುಶ್ಚ ನಿರ್ಭಯಾಃ ।
ತಾನ್ಮುಕ್ತ್ವಾ ಚಾಪರಾನ್ ಶೂಲೈರ್ಬಾಧಯಾಮಾಸುರಾಜ್ಞಯಾ ॥ ೧೫೮ ॥

ಜ್ಞಾನಪೂರ್ಣಸ್ಯ ಸಾಂಡ್ಯೇಂದ್ರಭಟಾ ಶ್ಯೈವಾಶ್ಚ ಭೋ ದ್ವಿಜಾಃ ।
ಏವಮನ್ಯೈರ್ಬಹುವಿಧೈರುಪಾಯೈ ಸ್ತದಪಾಯತಃ ॥ ೧೫೯ ॥

ರಕ್ಷಾಂ ಚಕ್ರು ಶ್ಚಾತ್ಮನ್ಯೈವ ಬಹುಲಾಶ್ಚ ಮನಾಶ್ರಿತಾಃ ।
ಭಸ್ಮಗೋಮಯವತ್ಸಾದ್ಯೈರಂಕಿತಾನ್ ನಗ್ನಬಾಂಧವಾನ್ ॥ ೧೬೦ ॥

---

ವನ್ನು ಮಾಡಿದರು. ಇವರೆಲ್ಲರನ್ನೂ ಜ್ಞಾನಸಂಬಂಧ ಯೋಗಿಯ ಅಪ್ಪಣೆಯಂತೆ ರಾಜದೂತರು ಶೂಲಕ್ಕೆ ಹಾಕಲಿಲ್ಲ. ಇನ್ನು ಕೆಲವರು ಗೋಮಯವು ಸಿಕ್ಕದಿರುವ ಕಾರಣ ಹಸುವಿನ ಕರುಗಳ ಚಿಹ್ನೆಯನ್ನು ಗೋಮಯಕ್ಕೆ ಬದಲಾಗಿ ಭುಜದಲ್ಲಿ ಧರಿಸಿಕೊಂಡು ಭಯವಿಲ್ಲದೆ ತಿರುಗಾಡುತ್ತಿದ್ದರು. ಅವರು ಇವುಗಳು ಭಸ್ಮಕ್ಕೆ ಕಾರಣವೆಂದು ಉತ್ತರವನ್ನು ಹೇಳುತ್ತಿದ್ದರು ಇವರನ್ನು ಬಿಟ್ಟು ರಾಜದೂತರು ಬೇರೆಯವರನ್ನು ಶೂಲಕ್ಕೆ ಹಾಕುತ್ತಿದ್ದರು.

೧೫೯-೧೬೨. ಜ್ಞಾನಪೂರ್ಣ ಯೋಗಿಯ ಕಡೆಯವರೂ, ರಾಜಭಟರೂ, ಶಿವ ಭಕ್ತರೂ, ಬಹಳ ವಿಧವಾದ ಉಪಾಯಗಳಿಂದಲೂ ಭಸ್ಮ, ಗೋಮಯ, ಗೋವತ್ಸ ಇದೇ ಮೊದಲಾದ ಚಿಹ್ನೆಗಳನ್ನು ಕಲ್ಪಿಸಿ ಮಂತ್ರವಾದಿಗಳ ಬಂಧುಗಳನ್ನು ರಕ್ಷಿಸಿದರು. ಈ ಚಿಹ್ನೆಗಳು ಇರುವವರನ್ನು ಬಿಟ್ಟು, ಈ ಶಿವ ಭಕ್ತರು ಉಳಿದವರನ್ನು ತೊಂದರೆ ಪಡಿಸುತ್ತಿದ್ದರು. ಶೂಲಕ್ಕೆ ಹಾಕಿರುವ ಶರೀರವುಳ್ಳ ಮಂತ್ರವಾದಿಗಳು ಶೂಲದಿಂದ ಎದೆಯಲ್ಲಿ ಚುಚ್ಚಿದವರಾಗಿ ಹಲ್ಲುಗಳನ್ನು ಬಿಟ್ಟುಕೊಂಡು ಪಿಶಾಚಿಗಳ

ಮುಕ್ತ್ವಾ ಹ್ಯನ್ಯಾನ್ಬಾಧಯಂತಿ ಸರ್ವಾಣ ಶಂಕರಕಿಂಕರಾಃ ।
ದಂತಾನ್ನಿದರ್ಶಯಂತಶ್ಚ ಶೂಲೇಷು ಪ್ರೋತವಕ್ಷಸಃ ॥ ೧೬೧ ॥

ಕ್ಷಪಣಾಸ್ತೇ ಗತಪ್ರಾಣಾಃ ಪಿಶಾಚಾ ಇವ ಭೀತಿದಾಃ ।
ಶೂಲೇ ಪ್ರಲಂಬಮಾನಾಶ್ಚ ಸ್ಥಿತಾಸ್ತತ್ರ ಪ್ರದೇಶಕೇ ॥ ೧೬೨ ॥

ಖಗಾಶ್ಚ ಗೃಧ್ರಪ್ರಮುಖಾ ಸ್ಸೃಗಾಲಾದ್ಯಾಃ ಪಿಶಾಚಕಾಃ ।
ಅಭಕ್ಷಯನ್ನಶುಚಿಭಿ ರ್ಗಂಧೈರತ್ಯಂತದೂಷಿತಾನ್ ॥ ೧೬೩ ॥

ಯತ್ರಾಗ್ನೌ ಜ್ಞಾನಸಂಬಂಧಃ ಪತ್ರಂ ಕ್ಷಿಪ್ತ್ವಾವ್ಯಜಯಚ್ಚತಾನ್ ।
ತತ್ಸ್ಥಾನಮಾಸೀತ್ಪ್ರಥಿತಂ ಜ್ಞಾನಸಂಬಂಧ ಮಿತ್ಯಪಿ ॥ ೧೬೪ ॥

ನೃಪಾದ್ಯಾ ಸ್ಸಜ್ಜನಾಃ ಸರ್ವೇಽಪ್ಯಸಜ್ಜನಹರಂ ಗುಹಂ ।
ನನಂದು ಜ್ಞಾನಸಂಬಂಧಂ ಶಿರಃಕಂಪೈರ್ಹೃದಾ ಗಿರಾ ॥ ೧೬೫ ॥

---

ಹಾಗೆ ಭಂಗವನ್ನು ಉಂಟುಮಾಡುತ್ತಿದ್ದರು ಅವರು ಶೂಲದಲ್ಲಿ ಜೋಲಾಡುವ ಶರೀರ ಉಳ್ಳವರಾಗಿ ಅಲ್ಲಿ ಇದ್ದರು. ಹದ್ದುಗಳು, ನರಿಗಳು, ಪಿಶಾಚಿಗಳು, ಇವೇ ಮೊದಲಾದುವುಗಳು ಅಪರಿಶುದ್ಧವಾದ, ದುರ್ವಾಸನೆಯುಳ್ಳ ಇವರ ಶರೀರವನ್ನು ತಿನ್ನುತ್ತಿದ್ದುವು.

೧೬೪-೧೬೫. ಜ್ಞಾನಸಂಬಂಧ ಯೋಗಿಯು ಅಗ್ನಿಯಲ್ಲಿ ಪತ್ರವನ್ನು ಹಾಕಿ ನಾಸ್ತಿಕರನ್ನು ಜಯಿಸಿದ ಪ್ರದೇಶಕ್ಕೆ ಜ್ಞಾನಸಂಬಂಧ ಕ್ಷೇತ್ರವೆಂದು ಹೆಸರಾಯಿತು. ರಾಜನೇ ಮೊದಲಾದ ಸತ್ಪುರುಷರು ಎಲ್ಲರೂ "ಈ ಜ್ಞಾನಸಂಬಂಧ ಯೋಗಿಯು ದುಷ್ಟರನ್ನು ನಿಗ್ರಹಮಾಡುವ ಷಣ್ಮುಖನಾಗಿರುವನು." ಎಂದು ತಲೆಯನ್ನು ಅಲ್ಲಾಡಿಸುತ್ತಾ ಮನಸ್ಸಿನಿಂದ ಶ್ಲಾಘಿಸುತ್ತಿದ್ದರು. ಅನಂತರದಲ್ಲಿ ಪಾಂಡ್ಯರಾಜನು ಬಹಳ ಭಕ್ತಿಯುಳ್ಳವನಾಗಿ ಜ್ಞಾನಸಂಬಂಧ ಯೋಗಿಗೆ ನಮಸ್ಕಾರ ಮಾಡಿ, "ನೀನು ನದಿಯಲ್ಲಿ ಹಾಕಿದ ಪತ್ರಿಕೆಯು ಎಲ್ಲಿಗೆ ಹೋಯಿತು?" ಎಂದು ಪ್ರಶ್ನೆ ಮಾಡಿದನು.

ಪಾಂಡ್ಯೋಽಥ ಪರಯಾ ಭಕ್ತ್ಯಾ ನತ್ವಾ ವೈದಿಕವಾರಣಂ ।
ತ್ವತ್ಪತ್ರಿಕಾ ನದೀಕ್ಷಿಪ್ತಾ ಕ್ವೇತ್ಯಪೃಚ್ಛತ್ಪುನಶ್ಚ ತಂ ॥ ೧೬೬ ॥

ನದೀಪ್ರವಾಹಾಭಿಮುಖಂ ಪ್ರಯಾತಾ ಪತ್ರಿಕೇತಿ ಚ ।
ಪ್ರಾಹ ಸರ್ವೇಷು ಪಶ್ಯತ್ಸು ಸುಂದರೇಶಸ್ಯ ಚಾಜ್ಞಯಾ ॥ ೧೬೭ ॥

ಶ್ರುತ್ವಾ ತದ್ವಚನಂ ಜ್ಞಾನಪೂರ್ಣಸ್ಯ ನೃಪತಿಶ್ಚ ತಂ ।
ತ್ವತ್ಪತ್ರಿಕಾಯಾನಯನಂ ಕುರು ಮತ್ತುಷ್ಟಯೇ ಪುನಃ ॥ ೧೬೮ ॥

ಸ ಚ ಪಾಂಡ್ಯನೃಪಸ್ಯೋಕ್ತಂ ಶ್ರುತ್ವಾ ತತ್ಪ್ರಾರ್ಥನಾಂ ಬುಧಃ ।
ಈಶಾಜ್ಞಯಾ ನಯಿಷ್ಯಾಮೀತ್ಯುಕ್ತ್ವಾ ಪಶ್ಚಿಮತೋ ಯಯೌ ॥ ೧೬೯ ॥

ಪತ್ರಿಕಾಪ್ಯಥ ತೇನೈವ ಪ್ರಕ್ಷಿಪ್ತಾ ವಿಪರೀತಗಾ ।
ಅರ್ಧಯೋಜನಾಮಾತ್ರೇ ತಿರೋಭೂತಾ ಜಲಾಂತರೇ ॥ ೧೭೦ ॥

---

"ಆ ಪತ್ರಿಕೆಯು ಸುಂದರೇಶ್ವರನ ಅಪ್ಪಣೆಯಂತೆ ಹೊಳೆಯ ಪ್ರವಾಹಕ್ಕೆದುರಾಗಿ ಎಲ್ಲರೂ ನೋಡುತ್ತಿರುವಾಗಲೇ ಹೋಯಿತು" ಎಂದು ರಾಜನಿಗೆ ಅವನು ಉತ್ತರವನ್ನು ಹೇಳಿದನು.

೧೬೮–೧೭೦. ಪಾಂಡ್ಯರಾಜನು ಅವನ ಮಾತನ್ನು ಕೇಳಿ, "ನನ್ನನ್ನು ಸಂತೋಷಪಡಿಸುವುದಕ್ಕಾಗಿ ಆ ಪತ್ರಿಕೆಯನ್ನು ತಂದು ಕೊಡು" ಎಂದು ಜ್ಞಾನಪೂರ್ಣ ಯೋಗಿಯ ಸಂಗಡ ಹೇಳಿದನು. ಅವನು ರಾಜನ ಪ್ರಾರ್ಥನೆಯಂತೆ ಈಶ್ವರನ ಅನುಜ್ಞೆಯಿಂದ "ಪತ್ರಿಕೆಯನ್ನು ತರಿಸಿ ಕೊಡುತ್ತೇನೆ" ಎಂದು ಹೇಳಿ ಆ ಪ್ರದೇಶಕ್ಕಿಂತ ಪಶ್ಚಿಮಕ್ಕೆ ಹೋದನು. ಅಲ್ಲಿಯೇ ಅವನು ಪತ್ರಿಕೆಯನ್ನು ಹಾಕಿದ್ದನು. ಅದು ಅಲ್ಲಿಂದ ಅರ್ಧ ಯೋಜನದಷ್ಟು ದೂರ ಮೇಲಕ್ಕೆ ಹೋಗಿ ಅಲ್ಲಿ ನೀರಿನಲ್ಲಿ ಮುಳುಗಿ ಹೋಯಿತು. ತಾನು ನೀರಿನಲ್ಲಿ ಹಾಕಿದ ಪತ್ರವು ವಿಪರೀತ ಗತಿಯಿಂದ ಹೋಗುತ್ತಿರುವುದನ್ನು ತಿಳಿದು ಸಂತೋಷದಿಂದ ಜ್ಞಾನಪೂರ್ಣ ಯೋಗಿಯು

ಪಾಂಡ್ಯೋಽಥ ಪರಯಾ ಭಕ್ತ್ಯಾ ನತ್ವಾ ವೈದಿಕವಾರಣಂ ।
ತ್ವತ್ಪತ್ರಿಕಾ ನದೀಕ್ಷಿಪ್ತಾ ಕ್ವೇತ್ಯಪೃಚ್ಛತ್ಪುನಶ್ಚ ತಂ ॥ ೧೬೬ ॥

ನದೀಪ್ರವಾಹಾಭಿಮುಖಂ ಪ್ರಯಾತಾ ಪತ್ರಿಕೇತಿ ಚ ।
ಪ್ರಾಹ ಸರ್ವೇಷು ಪಶ್ಯತ್ಸು ಸುಂದರೇಶಸ್ಯ ಚಾಜ್ಞಯಾ ॥ ೧೬೭ ॥

ಶ್ರುತ್ವಾ ತದ್ವಚನಂ ಜ್ಞಾನಪೂರ್ಣಸ್ಯ ನೃಪತಿಶ್ಚ ತಂ ।
ತ್ವತ್ಪತ್ರಿಕಾಯಾನಯನಂ ಕುರು ಮತ್ತುಷ್ಟಯೇ ಪುನಃ ॥ ೧೬೮ ॥

ಸ ಚ ಪಾಂಡ್ಯನೃಪಸ್ಯೋಕ್ತಂ ಶ್ರುತ್ವಾ ತತ್ಪ್ರಾರ್ಥನಾಂ ಬುಧಃ ।
ಈಶಾಜ್ಞಯಾ ನಯಿಷ್ಯಾಮೀತ್ಯುಕ್ತ್ವಾ ಪಶ್ಚಿಮತೋ ಯಯೌ ॥ ೧೬೯ ॥

ಪತ್ರಿಕಾಸ್ಯಥ ತೇನೈನ ಪ್ರಕ್ಷಿಪ್ತಾ ವಿಪರೀತಗಾ ।
ಅತ್ಯರ್ಧಯೋಜನಾಮಾತ್ರೇ ತಿರೋಭೂತಾ ಜಲಾಂತರೇ ॥ ೧೭೦ ॥

---

"ಆ ಪತ್ರಿಕೆಯು ಸುಂದರೇಶ್ವರನ ಅಪ್ಪಣೆಯಂತೆ ಹೊಳೆಯ ಪ್ರವಾಹಕ್ಕೆದುರಾಗಿ ಎಲ್ಲರೂ ನೋಡುತ್ತಿರುವಾಗಲೇ ಹೋಯಿತು" ಎಂದು ರಾಜನಿಗೆ ಅವನು ಉತ್ತರವನ್ನು ಹೇಳಿದನು.

೧೬೮–೧೭೦. ಪಾಂಡ್ಯರಾಜನು ಅವನ ಮಾತನ್ನು ಕೇಳಿ, "ನನ್ನನ್ನು ಸಂತೋಷಪಡಿಸುವುದಕ್ಕಾಗಿ ಆ ಪತ್ರಿಕೆಯನ್ನು ತಂದು ಕೊಡು" ಎಂದು ಜ್ಞಾನಪೂರ್ಣ ಯೋಗಿಯ ಸಂಗಡ ಹೇಳಿದನು. ಅವನು ರಾಜನ ಪ್ರಾರ್ಥನೆಯಂತೆ ಈಶ್ವರನ ಅನುಜ್ಞೆಯಿಂದ "ಪತ್ರಿಕೆಯನ್ನು ತರಿಸಿ ಕೊಡುತ್ತೇನೆ" ಎಂದು ಹೇಳಿ ಆ ಪ್ರದೇಶಕ್ಕಿಂತ ಪಶ್ಚಿಮಕ್ಕೆ ಹೋದನು. ಅಲ್ಲಿಯೇ ಅವನು ಪತ್ರಿಕೆಯನ್ನು ಹಾಕಿದ್ದನು. ಅದು ಅಲ್ಲಿಂದ ಅರ್ಧ ಯೋಜನದಷ್ಟು ದೂರ ಮೇಲಕ್ಕೆ ಹೋಗಿ ಅಲ್ಲಿ ನೀರಿನಲ್ಲಿ ಮುಳುಗಿ ಹೋಯಿತು. ತಾನು ನೀರಿನಲ್ಲಿ ಹಾಕಿದ ಪತ್ರವು ವಿಪರೀತ ಗತಿಯಿಂದ ಹೋಗುತ್ತಿರುವುದನ್ನು ತಿಳಿದು ಸಂತೋಷದಿಂದ ಜ್ಞಾನಪೂರ್ಣ ಯೋಗಿಯು

ತುಷ್ಟಾ ಸಾ ಜ್ಞಾನಪೂರ್ಣೇನ ಶ್ರೀಗಾನ್ಯೈಶ್ಚ ನಿರೋಧಿತಾ ।
ಮುಗ್ನಾ ಸಂದೃಶ್ಯತೇ ತತ್ರ ಸ್ಥಿತೋ ವೈದಿಕವಾರಣಃ ॥ ೧೭೧ ॥

ನೃಪಶ್ಚ ತತ್ಸ್ಥಲೇ ನ್ಯೈವ ಜನ್ಯೈಃ ಪಶ್ಯನ್ಸ್ಥಿತಸ್ತದಾ ।
ಜ್ಞಾನಪೂರ್ಣಶ್ಚ ತತ್ರೈವ ಸ್ಥಿತಶ್ಶಿಷ್ಯೈಃ ಸ್ವಯಂ ಪುನಃ ॥ ೧೭೨ ॥

ರಾಜಾಥ ಪತ್ರಿಕಾಂ ದ್ರಷ್ಟುಮುತ್ಸುಕಃ ಪ್ರಾರ್ಥಯಚ್ಚ ತಂ ।
ಗುರುಂ ಸೋಽಪಿ ತತೋ ಪಶ್ಯತ್ಕಾಂಶ್ಚಿದ್ಗೋಪಾಲಪೂರ್ವಕಾನ್ ॥ ೧೭೩ ॥

ಅತ್ರ ದೇಶೇ ವಿಶೇಷಃ ಕಿಂ ಇತಿ ತಾನ್ಪೃಚ್ಛತಿ ಸ್ಮ ಸಃ ।
ತೇಽಪಿ ತದ್ವಾಕ್ಯಮಾಕರ್ಣ್ಯ ವದಂತೀತಿ ವಚೋ ಗುರುಂ ॥ ೧೭೪ ॥

ವಯಂ ಗಾಃ ಪಾಲಯಾಮೋತ್ರ ನೇತಿ ದೃಷ್ಟೋ ವಿಶೇಷತಃ ।
ತೇನೈವಮುಕ್ತೋಽಪಿ ತದಾ ವಿಸ್ಮಿತೋ ವಿಮಲಾಶಯಃ ॥ ೧೭೫ ॥

---

ದ್ರಾವಿಡ ಭಾಷೆಯ ಪದ್ಯಗಳಿಂದ ಶಿವನನ್ನು ಸ್ತುತಿ ಮಾಡಿ ತಡೆದಿರುವ ಕಾರಣ, ಅದು ಮುಳುಗಿತು ಆ ಯೋಗಿಯು, ತನ್ನ ಶಿಷ್ಯರೂ, ಪಾಂಡ್ಯರಾಜನೂ, ಇತರ ಜನಗಳೂ ಇವರೊಡನೆ ಆಗ ಆ ಪ್ರದೇಶಕ್ಕೆ ಬಂದು ನೋಡುತ್ತಾ ನಿಂತಿದ್ದನು

೧೭೩–೧೭೬. ಪಾಂಡ್ಯರಾಜನು ಆ ಪತ್ರಿಕೆಯನ್ನು ನೋಡಲು ಗುರುವನ್ನು ಪ್ರಾರ್ಥಿಸಿದನು. ಆಗ ಗುರುವು ಅಲ್ಲಿರುವ ಕೆಲವು ಗೋಪಾಲಕರನ್ನು ನೋಡಿ “ ಈ ಪ್ರದೇಶದಲ್ಲಿ ವಿಶೇಷವೇನಿರುವುದು ” ಎಂದು ಪ್ರಶ್ನೆ ಮಾಡಿದನು. ಅವರು ಆ ಮಾತನ್ನು ಕೇಳಿ “ ನಾವು ಗೋವುಗಳನ್ನು ರಕ್ಷಿಸುತ್ತಿರುವೆವು. ಇಲ್ಲಿ ಯಾವ ವಿಶೇಷವನ್ನೂ ಕಾಣಲಿಲ್ಲ.” ಎಂದು ಜ್ಞಾನಸಂಬಂಧ ಗುರುವಿನ ಸಂಗಡ ಹೇಳಿದರು. ಅದನ್ನು ಕೇಳಿ ಪರಿಶುದ್ಧವಾದ ಮನಸ್ಸುಳ್ಳ ಆ ಯೋಗಿಯು ಆಶ್ಚರ್ಯ ಪಡುತ್ತಾ “ ಇಲ್ಲಿ ವಿಶೇಷವು ಇರುವುದು. ” ಎಂದು ನಿಶ್ಚಯದಿಂದ ದ್ರಾವಿಡ ಭಾಷೆಯ ಕೆಲವು

ವಿಶೇಷೋಽಸ್ತೀತಿ ನಿಶ್ಚಿತ್ಯ ಜಗೌ ಗೇಯಾನಿ ಪಂಙ್ಕ್ತಿಶಃ ।
ಮಹೇಶ್ವರಾನುಗ್ರಹೇಣ ಲಿಂಗಂ ಮಾಹೇಶ್ವರಂ ವರಂ ॥ ೧೭೬ ॥

ದೃಷ್ಟಂ ತೇನ ಸ್ವಯಂಭೂತ ಮಾರಾದುನ್ನತಭೂತಲೇ ।
ನದ್ಯಾಸ್ತೀರೇ ಚೋತ್ತರೇ ಚ ಪುನಃ ಪ್ರೀತಿಕರಂ ಶಿವಂ ॥ ೧೭೭ ॥

ತಲ್ಲಿಂಗಾಂತಿಕಮಾಗತ್ಯ ವಟುರ್ವೈದಿಕವಾರಣಃ ।
ಭಕ್ತ್ಯಾ ಪ್ರದಕ್ಷಿಣೀಕೃತ್ಯ ನತ್ವಾ ತತ್ಸನ್ನಿಧೌ ಸ್ಥಿತಃ ॥ ೧೭೮ ॥

ಪಾಂಡ್ಯೋಽಪ್ಯನುಚರೈಸ್ಸಾರ್ಧಂ ಮಂತ್ರಿಣಾ ಜಾಯಯಾ ಸಹ ।
ಅತಿಷ್ಠದ್ಯತ್ರ ದೇಶೇ ತು ತತ್ರ ವೈದಿಕವಾರಣಃ ॥ ೧೭೯ ॥

ಸ್ವಯಂಭೂತೇ ತ್ವತ್ರ ಲಿಂಗೇ ಯಸ್ತಿಷ್ಠತಿ ಪರಶ್ಶಿವಃ ।
ತಮಸ್ತೌಷೀದ್ದ್ರಾವಿಡೈರ್ಜ್ಞಾನಪೂರ್ಣಶ್ಶಿವೇಕ್ಷಕಃ ॥ ೧೮೦ ॥

---

ಪದ್ಯಗಳನ್ನು ಕ್ರಮವಾಗಿ ಹೇಳಿದನು. ಆಗ ಅವನು ಎತ್ತರವಾದ ಆ ಭೂಮಿಯ ಪ್ರದೇಶದಲ್ಲಿ ನೋಡಿದಾಗ ಒಂದು ಶ್ರೇಷ್ಠವಾದ ಶಿವಲಿಂಗವು ಮಹೇಶ್ವರನ ಅನುಗ್ರಹದಿಂದ ಅವನಿಗೆ ಗೋಚರವಾಯಿತು

೧೭೭-೧೮೧. ನದಿಯ ಉತ್ತರ ತೀರದಲ್ಲಿ ತಾನಾಗಿ ಉದ್ಭವವಾದ ಆ ಶಿವ ಲಿಂಗದ ಹತ್ತಿರಕ್ಕೆ ಹೋಗಿ ಜ್ಞಾನಪೂರ್ಣ ಯೋಗಿಯು ಭಕ್ತಿಯಿಂದ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದನು. ಅದರ ಹತ್ತಿರದಲ್ಲಿ ಇದ್ದನು ಪಾಂಡ್ಯರಾಜನೂ ಮಂತ್ರಿಯೂ ಮತ್ತು ರಾಣಿಯೂ, ಪರಿವಾರದ ಜನರೂ, ಜ್ಞಾನಪೂರ್ಣ ಯೋಗಿಯು ಇದ್ದ ಪ್ರದೇಶದಲ್ಲಿಯೇ ಇದ್ದರು. ತಾನಾಗಿ ಉದ್ಭವಿಸಿದ ಶಿವಲಿಂಗದಲ್ಲಿ ಸನ್ನಿಧಿಯನ್ನು ಉಂಟುಮಾಡಿರುವ ಪರಮೇಶ್ವರನನ್ನು ದರ್ಶನ ಮಾಡುತ್ತಿರುವ ಜ್ಞಾನಪೂರ್ಣ ಯೋಗಿಯು, ದ್ರಾವಿಡ ಭಾಷೆಯ ಪದ್ಯಗಳಿಂದ ಸ್ತುತಿ ಮಾಡಿದನು. ಅವನ

ತೇನೋಕ್ತೈಗಾನ್ಯೈ ಸ್ತುಷ್ಟಸ್ಸಪ್ಸರಿಪೂರ್ಣಃ ಪರಶ್ಶಿವಃ ।
ಅಶೀತಿವೃದ್ಧವಿಪ್ರಸ್ಯ ಲಿಂಗಾತ್ ಪ್ರತ್ಯಕ್ಷಿತೋಽಭವತ್ ॥ ೧೮೧ ॥

ಭೂತಿರುದ್ರಾಕ್ಷಧಾರೀ ಚ ವೇದವಾಕ್ಯಂ ಪಠನ್ ಸ್ವರಾನ್ ।
ತದ್ಬಾಲಫಾಲಂ ಭಸ್ಮಾಂಕಂ ಕೃತ್ವಾ ಪಂಚಾಕ್ಷರೇಣ ಸಃ ॥ ೧೮೨ ॥

ವತ್ಸ ತುಷ್ಟೋಽಸ್ಮಿ ಕಿಂ ತೇದ್ಯ ದಾಸ್ಯಾಮಿ ವದ ತನ್ಮಮ ।
ಉಕ್ತೇ ತತ್ಪಂಚಶಾಖಂ ಸಮುಗೃಹ್ಯಾ ಪ್ರಣಮ ಚ್ಛಿವಂ ॥ ೧೮೩ ॥

ಶಿವ ಏವೇತಿ ನಿಶ್ಚಿತ್ಯ ಮಹಾನ್ಮಜ್ಞನಕೋ ಮಮ ।
ಕರ್ಷಮಾಣಃ ಸ್ವಕಂ ದೇಹಂ ತಂ ಚ ಲಿಂಗಂ ರುದನ್ಮುದಾ ॥ ೧೮೪ ॥

---

ಪದ್ಯಗಳಿಂದ ಸಂತುಷ್ಟನಾಗಿ ಪರಿಪೂರ್ಣನಾದ ಪರಶಿವನು ಎಂಭತ್ತು ವರ್ಷ ವಯಸ್ಸುಳ್ಳ ಮುದುಕನಾದ ಬ್ರಾಹ್ಮಣನ ಆಕಾರವನ್ನು ಧರಿಸಿ ಆ ಶಿವಲಿಂಗದಿಂದ ಪ್ರತ್ಯಕ್ಷವಾಗಿ ಕಾಣಿಸಿಕೊಂಡನು.

೧೮೨-೧೮೪. ಅವನು ಭಸ್ಮ ರುದ್ರಾಕ್ಷಿಗಳನ್ನು ಧರಿಸಿಕೊಂಡು ವೇದ ವಾಕ್ಯಗಳನ್ನು ಸರಿಯಾದ ಸ್ವರದಿಂದ ಹೇಳುತ್ತಿದ್ದನು ಅವನು ಹುಡುಗನಾದ ಜ್ಞಾನ ಸಂಬಂಧ ಯೋಗಿಯ ಹಣೆಗೆ ಪಂಚಾಕ್ಷರ ಮಂತ್ರದಿಂದ ಅಭಿಮಂತ್ರಿಸಿದ ಭಸ್ಮದಿಂದ ರಕ್ಷೆಯನ್ನು ಮಾಡಿದನು. ಅನಂತರದಲ್ಲಿ ಅವನು "ಎಲೈ ಮಗುವೆ, ನಿನ್ನಲ್ಲಿ ನನಗೆ ಬಹಳ ಪ್ರೀತಿ ಇರುವುದು. ನಿನಗೆ ಬೇಕಾದ್ದನ್ನು ಕೊಡುವೆನು. ನೀನು ಕೇಳು." ಎಂದು ಹೇಳಿದನು. ಆ ಮಾತನ್ನು ಕೇಳಿ ಜ್ಞಾನಪೂರ್ಣ ಯೋಗಿಯು ಅವನ ಕೈಯನ್ನು ಹಿಡಿದುಕೊಂಡು ಶಿವಲಿಂಗಕ್ಕೆ ನಮಸ್ಕಾರ ಮಾಡಿದನು. ಆಗ ಆ ಯೋಗಿಗೆ ಈಗ ಬಂದಿರುವವನು, "ಶಿವನೇ ಆಗಿರುವನು. ಇವನು ಪೂಜ್ಯನು. ನನ್ನ ತಂದೆಯಾದ ಶಿವನು. ಇವನು ಶಿವಲಿಂಗವನ್ನು ಭೇದಿಸಿಕೊಂಡು ತನ್ನ ಈ ಶರೀರದಿಂದ ಕಾಣಿಸುತ್ತಿರುವನು" ಎಂದು ನಿಶ್ಚಯವು ಉಂಟಾಯಿತು. ಆದ್ದರಿಂದ "ನನ್ನನ್ನು ನೀನು ರಕ್ಷಿಸು, ರಕ್ಷಿಸು" ಎಂದು ಜ್ಞಾನಸಂಬಂಧ ಯೋಗಿಯು ಅವನ ಸಂಗಡ ಹೇಳಿದನು.

ರಕ್ಷ ರಕ್ಷೇತ್ಯವೋಚತ್ತಂ ಜ್ಞಾನಸಂಬಂಧಬಾಲಕಃ ।
ಕರ್ಷಮಾಣಸ್ಸತೇನೈವಂ ಶಿವೋ ವಾಕ್ಯಮಥಾಬ್ರವೀತ್ ॥ ೧೮೫ ॥

ವತ್ಸ ಪ್ರಜ್ಞಾವತಾಂ ಶ್ರೇಷ್ಠಃ ವಿದ್ಯಯಾ ಹ್ಯನವದ್ಯಯಾ ।
ಶಂಭುಭಕ್ತ್ಯಾ ತ್ವತುಲಯಾ ತ್ವತ್ಸಮೋ ನ ಜಗತ್ತ್ರಯೇ ॥ ೧೮೬ ॥

ಜ್ಯೋತಿರ್ಮಯಂ ವಪುರ್ಧೃತ್ವಾ ಬಾಲಾವಸ್ಥಾತಿಕೋಮಲಾ ।
ಪೂರ್ಣಚಂದ್ರಾಭವದನೋ ನಿಷ್ಕಳಂಕೋತಿನಿರ್ಮಲಃ ॥ ೧೮೭ ॥

ಭಸ್ಮಾಭಿರಾಮಫಾಲಸ್ತ್ವಂ ಪ್ರತಿಭಾಸಿ ಗುಹೋ ಯಥಾ ।
ಸ ಬಾಲಶ್ಶ್ರೋತ್ರನೇತ್ರಾಭ್ಯಾಂ ಪೀತ್ವಾ ತದ್ವಚನಾಮೃತಂ ॥ ೧೮೮ ॥

ತಂ ವೃದ್ಧಮೀಶ್ವರಂ ಜ್ಞಾತ್ವಾ ಪ್ರಾಹ ಪ್ರಜ್ಞಾವತಾಂ ವರಃ ।
ದರ್ಶನಾದೇವ ಮೇ ಲಬ್ಧಮಿದಮೇವ ವರಂ ಮಮ ॥ ೧೮೯ ॥

---

೧೮೫-೧೮೭. ಆ ಹುಡುಗನ ಮಾತನ್ನು ಕೇಳಿ ಶಿವನು, "ಎಲೈ ಮಗುವೆ, ನೀನು ದೋಷರಹಿತವಾದ ವಿದ್ಯೆಯಿಂದ ಜ್ಞಾನಿಗಳೆಲ್ಲರಿಗಿಂತಲೂ ಶ್ರೇಷ್ಠನಾಗಿರುತ್ತೀಯೆ. ನಿನಗೆ ಶಿವನಲ್ಲಿರುವ ಭಕ್ತಿಯು ಬಹಳ ಹೆಚ್ಚಾಗಿರುವುದು. ಇದರಿಂದ ಮೂರು ಲೋಕದಲ್ಲಿಯೂ ನಿನಗೆ ಸಮರಾದವರು ಯಾರೂ ಇಲ್ಲವು. ನೀನು ತೇಜೋರೂಪವನ್ನು ಧರಿಸಿ, ಹುಡುಗನ ವಯಸ್ಸಿಗೆ ತಕ್ಕ ಕೋಮಲವಾದ ಪೂರ್ಣಚಂದ್ರನಂತಿರುವ ಮುಖದಿಂದ ಪ್ರಕಾಶಿಸುತ್ತಿರುವೆ. ಭಸ್ಮದಿಂದ ಕೂಡಿರುವ ಹಣೆಯುಳ್ಳವನಾಗಿ ನೀನು ಷಣ್ಮುಖನಂತೆ ಪ್ರಕಾಶಿಸುತ್ತಿರುತ್ತೀಯೆ." ಎಂದು ಹೇಳಿದನು.

೧೮೮-೧೯೨. ಆಗ ಜ್ಞಾನಪೂರ್ಣ ಯೋಗಿಯು, ಹೀಗೆ ಹೇಳುತ್ತಿರುವ ಅವನ ಮಾತನ್ನು ಕೇಳಿ, ಅವನನ್ನು ಚೆನ್ನಾಗಿ ನೋಡಿ ಅವನು ಈಶ್ವರನೆಂದು ತಿಳಿದು, ನಿನ್ನ ದರ್ಶನಮಾತ್ರದಿಂದಲೇ ನನಗೆ ಈ ಪ್ರಕಾರವಾದ ವರವು ಪ್ರಾಪ್ತವಾಯಿತು. ನನ್ನ ಪತ್ರಿಕೆಯು ಸರ್ವಜ್ಞರಾದ ನಿನ್ನ ಮಕ್ಕಳ ಹತ್ತಿರದಲ್ಲಿ ಇರಲು

ಮದೀಯಾ ಪತ್ರಿಕಾ ನಾರ್ಹಾ ಸೂನ್ವೋಃ ಸ್ಸರ್ವಜ್ಞಯೋ ಸ್ತವ ।
ವೃದ್ಧ ಸ್ಸರ್ವಜ್ಞ ಏವ ತ್ವಂ ಪತ್ರಿಕಾಂ ತಾಂ ಪ್ರಯಚ್ಛ ಮೇ ॥ ೧೯೦ ॥

ದದಸ್ವ ಭಕ್ತಿಂ ತ್ವತ್ಪಾದಯುಗ್ಮೇ ಶಂಕರ ಸರ್ವದಾ ।
ರಾಜ್ಞಾ ಸಂಪ್ರಾರ್ಥಿತಂ ಪತ್ರಂ ದೇಹೀತಿ ಶಿವಭಕ್ತಿತಃ ॥ ೧೯೧ ॥

ತಸ್ಮಾಚ್ಚ ಕಾರಣಾದ್ರಾಜ್ಞಃ ದರ್ಶನೀಯೈವ ಪತ್ರಿಕಾ ।
ತಾಮಾದಾತುಂ ಪ್ರದಾತುಂ ಚ ಕಃ ಪ್ರವೀಣಸ್ತ್ವಯಾ ವಿನಾ ॥ ೧೯೨ ॥

ಭಕ್ತಿಯುಕ್ತಂ ಯುಕ್ತಿಯುಕ್ತಂ ಶ್ರುತ್ವಾ ತದ್ವಚನಂ ಶಿವಃ ।
ಮುದಾ ಚ ದಯಯಾ ಯುಕ್ತೋ ವೃದ್ಧಃ ಸ್ಮಿತ್ವಾಬ್ರವೀದ್ವಚಃ ॥ ೧೯೩ ॥

ಸರ್ವಜ್ಞಯೋರ್ಮತ್ಸುತಯೋ ರ್ನಾರ್ಹಾ ಸಾ ಪತ್ರಿಕೇತಿ ಚ ।
ಸಮ್ಯಗುಕ್ತಂ ತ್ವಯಾ ವತ್ಸ ಕಥಂ ಚೈವ ವಚಸ್ತವ ॥ ೧೯೪ ॥

---

ಯೋಗ್ಯವಾದದ್ದಲ್ಲವು. ನೀನೂ ವೃದ್ಧನಾಗಿ ಸರ್ವಜ್ಞನಾಗಿರುತ್ತೀಯೆ. ಆ ಪತ್ರಿಕೆಯನ್ನು ನನಗೆ ಕೊಡು. ಮತ್ತು ನಿನ್ನ ಪಾದ ಪದ್ಮಗಳಲ್ಲಿ ಯಾವಾಗಲೂ ಇರುವ ಭಕ್ತಿಯನ್ನು ಅನುಗ್ರಹಿಸು. ರಾಜನು ಪತ್ರಿಕೆಯನ್ನು ನೋಡಲಪೇಕ್ಷಿಸುತ್ತಿರುವನು. ಅವನು ಶಿವಭಕ್ತಿಯಿಂದ ನಂಬಿಕೆಯುಳ್ಳ ಕಾರಣ ರಾಜನಿಗೆ ಪತ್ರಿಕೆಯನ್ನು ತೋರಿಸಬೇಕಾಗಿರುವುದು. ಆ ಪತ್ರಿಕೆಯನ್ನು ತೆಗೆದುಕೊಳ್ಳುವುದಕ್ಕೂ, ಹಿಂತಿರುಗಿ ಕೊಡುವುದಕ್ಕೂ, ನಿನಗಿಂತಲೂ ನಿಪುಣರು ಬೇರೆಯಾದವರು ಯಾರೂ ಇರುವುದಿಲ್ಲ" ಎಂದು ವಿಜ್ಞಾಪಿಸಿಕೊಂಡನು.

೧೯೩-೧೯೭. ಭಕ್ತಿಯಿಂದಲೂ, ಯುಕ್ತಿಯಿಂದಲೂ ಕೂಡಿ ಇರುವ ಅವನ ಮಾತನ್ನು ಶಿವನು ಕೇಳಿದನು. ಅವನಿಗೆ ಸಂತೋಷವು ಉಂಟಾಯಿತು. ಆಗ ಅವನು ದಯೆಯಿಂದ ಕೂಡಿದವನಾಗಿ " ಸರ್ವಜ್ಞರಾದ ನನ್ನ ಮಕ್ಕಳಿಗೆ ಆ ಪತ್ರಿಕೆಯು ಬೇಕಾಗಿಲ್ಲ, ಎಂದು ನೀನು ಹೇಳಿರುವುದು ಚೆನ್ನಾಗಿರುವುದು. ಎಲೈ ಮಗುವೇ, ನೀನು ಸರ್ವಜ್ಞನೇ ಆಗಿ ಇರುತ್ತೀಯೆ. ಹೀಗೆ ಇರುವ ಮಾತನಾಡುವ ನೀನು

ತ್ವಂ ಚ ಸರ್ವಜ್ಞ ಏವಾಸಿ ಗುಹಾಂಶತ್ವಾನ್ಮಹಾನ್ಧ್ರುವಂ ।
ವಟುಸ್ಸನ್ಪಟುರೇವಾಸಿ ಸರ್ವಾಞ್ಛತ್ರೂನ್ವಿಜಿತ್ಯ ಚ ॥ ೧೯೫ ॥

ಸಂಸ್ಥಾಪ್ಯ ವೈದಿಕಾನ್ಮಾರ್ಗಾನ್ ಜೀವ ತ್ವಂ ಶರದಾಂ ಶತಂ ।
ಅನುಭೂಯಾತುಲಂ ಸೌಖ್ಯಮಂತೇ ಗುಹಮವಾಪ್ಸ್ಯಸಿ ॥ ೧೯೬ ॥

ಶ್ರೀಪೂರ್ವಜ್ಞಾನಸಂಬಂಧಮನುಗೃಹ್ಯಾನುಶಾಸ್ಯ ಚ ।
ವಾಙ್ಮನೋಗೋಚರಸ್ತಸ್ಯ ಸುಂದರೇಶಃ ಪ್ರಿಯಂ-ಕರಃ ॥ ೧೯೭ ॥

ಪ್ರದಾಯ ಪತ್ರಿಕಾಂ ತಾಂ ಚ ತಸ್ಮಿನ್ಲಿಂಗೇ ಸ್ವಯಂಭುವೇ ।
ಅಂತರ್ದಧೇ ವೃದ್ಧರೂಪಸ್ಸರ್ವೇಷಾಮಪಿ ಪಶ್ಯತಾಂ ॥ ೧೯೮ ॥

ಜ್ಞಾನಪೂರ್ಣೋಽಪಿ ಹೃಷ್ಟಸ್ಸನ್ನೃಪಂ ವೀಕ್ಷ್ಯ ದಯಾದೃಶಾ ।
ದರ್ಶಯಿತ್ವಾ ದದೌ ತಸ್ಮೈ ಪತ್ರಿಕಾಂ ವಿಸ್ಮಿತಾಯ ಸಃ ॥ ೧೯೯ ॥

---

ಕುಮಾರನ ಅಂಶದಿಂದ ಕೂಡಿ ಪೂಜ್ಯನೇ ಆಗಿರುತ್ತೀಯೆ. ಪರಮಾರ್ಥದಿಂದ ನೀನು ಸರ್ವಜ್ಞನೇ ಆಗಿರುವೆ. ಆದರೂ ನೀನು ಬ್ರಹ್ಮಚಾರಿಯಾಗಿರುವ ಕಾರಣ ವಟುವಾಗಿಯೇ ಇದ್ದುಕೊಂಡು, ಶತ್ರುಗಳೆಲ್ಲರನ್ನೂ ನಿಗ್ರಹಿಸಿ, ವೈದಿಕ ಮಾರ್ಗವನ್ನು ರಕ್ಷಿಸುತ್ತಾ, ನೂರು ವರ್ಷಗಳ ವರೆಗೂ ಸುಖವಾಗಿ ಇದ್ದು ಅಪರಿಮಿತವಾದ ಸುಖಗಳನ್ನು ಅನುಭವಿಸಿ ಕೊನೆಯಲ್ಲಿ ಕುಮಾರಸ್ವಾಮಿಯಲ್ಲಿ, ನೀನು ಐಕ್ಯವಾಗುತ್ತೀಯೆ" ಎಂದು ಅನುಗ್ರಹವನ್ನು ಮಾಡಿದನು.

೧೯೭-೧೯೮. ವಾಙ್ಮನೋ ಅಗೋಚರನಾದ, ಹಿತಕರನಾದ ಸುಂದರೇಶ್ವರನು ಅವನಿಗೆ ಹೀಗೆ ಬುದ್ಧಿಯನ್ನು ಹೇಳಿ ಆ ಪತ್ರಿಕೆಯನ್ನು ಅವನಿಗೆ ಕೊಟ್ಟು ಎಲ್ಲರೂ ನೋಡುತ್ತಿರುವಾಗಲೇ ತನ್ನ ವೃದ್ಧರೂಪದಿಂದ ಆ ಸ್ವಯಂಭೂಲಿಂಗದಲ್ಲಿ ಅದೃಶ್ಯನಾದನು.

೧೯೯-೨೦೧. ಜ್ಞಾನಪೂರ್ಣಯೋಗಿಯು ಸಂತೋಷವುಳ್ಳವನಾಗಿ ರಾಜನನ್ನು ದಯೆಯಿಂದ ನೋಡುತ್ತಾ ಆ ಪತ್ರಿಕೆಯನ್ನು ಆಶ್ಚರ್ಯದಿಂದ ಇರುವ ಅವನಿಗೆ

ಲಿಂಗಮೂರ್ತಿಧರಃ ಶಂಭುಃ ಪತ್ರಿಕಾಂ ವೃದ್ಧವೇಷಧೃಕ್ ।
ಅತ್ರಾಗತ್ಯ ದದೌ ಮಹ್ಯಮಿತಿ ಪ್ರಾಹ ಸ ಪಾಂಡ್ಯಪಂ ॥ ೨೦೦ ॥

ದೃಷ್ಟ್ವಾ ನೃಪೋಽಪಿ ತತ್ಸರ್ವಂ ಪತ್ರಿಕಾಂ ಪ್ರಾಪ್ಯ ವಾಚಯನ್ ।
ಹೃಷ್ಟೋ ಬಭೂವ ನಿತರಾಂ ಜ್ಞಾನಪೂರ್ಣಂ ಸ್ತುವನ್ನಮನ್ ॥ ೨೦೧ ॥

ಶ್ರುತ್ವಾ ನೃಪೋಽಥ ಮಾಹಾತ್ಮ್ಯಂ ತಲ್ಲಿಂಗಸ್ಯ ಸ್ಥಲಸ್ಯ ಚ ।
ಕಥಾಂ ಪೂರ್ವಂ ದ್ವಿಜಮುಖಾತ್ಕಸ್ಯಚಿಚ್ಛಿವಯೋಗಿನಃ ॥ ೨೦೨ ॥

ಶ್ರೀಜ್ಞಾನಸಂಬಂಧಮುಖಾತ್ಪ್ರಾಪ್ಯಾನುಜ್ಞಾಂ ಚ ಸ ನೃಪಃ ।
ಪ್ರಾಸಾದಂ ಕಾರಯಾಮಾಸ ರಾಜಾ ಶ್ರೀಪತ್ರಿಕೇಶಿತುಃ ॥ ೨೦೩ ॥

ಮಹಾಪಾಪಪ್ರಶಾಂತ್ಯೈ ಚ ಸರ್ವಕಾಮಸ್ಯ ಸಿದ್ಧಯೇ ।
ಶ್ರೀಪತ್ರಿಕಾಪುರಮಿತಿ ಖ್ಯಾತಂ ತಚ್ಚ ಮಹಾಪುರಂ ॥ ೨೦೪ ॥

ಶ್ರೀಪತ್ರಿಕಾಪುರೀಶಾಖ್ಯಾಂ ಚಕಾರೇಶಸ್ಯ ಸ ನೃಪಃ ।
ಪುರಾ ಕ್ಷಪಣಸಿದ್ಧಾಂತದೀಕ್ಷಿತಸ್ಯ ಮಹೈನಸಃ ॥ ೨೦೫ ॥

---

ಕೊಟ್ಟನು. ಶಿವಲಿಂಗದ ರೂಪದಿಂದ ಇರುವ ಶಿವನು ಮುದುಕನಾದವನ ವೇಷವನ್ನು ಧರಿಸಿ ಬಂದು, ನನಗೆ ಪತ್ರಿಕೆಯನ್ನು ಕೊಟ್ಟನು. ಎಂದು ಅವನು ರಾಜನ ಸಂಗಡ, ಹೇಳಿದನು ಅಲ್ಲಿ ನಡೆದದ್ದೆಲ್ಲವನ್ನೂ ನೋಡಿ. ರಾಜನು ಆ ಪತ್ರಿಕೆಯನ್ನು ಓದಿದನು. ಜ್ಞಾನಪೂರ್ಣಯೋಗಿಯನ್ನು ಸ್ತುತಿಸಿ ನಮಸ್ಕರಿಸಿದನು.

೨೦೨–೨೦೫. ಶಿವಯೋಗಿಯಾದ ಒಬ್ಬ ಬ್ರಾಹ್ಮಣನಿಂದ ಆ ಪ್ರದೇಶದ ಮತ್ತು ಆ ಶಿವಲಿಂಗದ ಮಹಿಮೆಯನ್ನು ಕೇಳಿದ ರಾಜನು, ಜ್ಞಾನಸಂಬಂಧ ಯೋಗಿಯ ಸಮ್ಮತಿಯಂತೆ ಶ್ರೀ ಪತ್ರಿಕೇಶ್ವರನ ದೇವಾಲಯವನ್ನು ಕಟ್ಟಿಸಿದನು. ಮಹಾಪಾತಕಗಳು ನಾಶವಾಗುವುದಕ್ಕೂ ಎಲ್ಲಾ ಇಷ್ಟಗಳು ಸಿದ್ಧವಾಗುವುದಕ್ಕೂ ಅಲ್ಲಿ ಶ್ರೀ ಪತ್ರಿಕಾಪುರವೆಂದು ಹೆಸರಿನ ನಗರವನ್ನು ಕಟ್ಟಿಸಿದನು ಇದರಿಂದ ಅಲ್ಲಿರುವ ಶಿವಲಿಂಗವು ಶ್ರೀ ಪತ್ರಿಕೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾಯಿತು

ಶಾಂತಯೇ ಪೂಜಯಾಮಾಸ ರಾಜಾ ಶ್ರೀಪತ್ರಿಕೇಶ್ವರಂ ।
ಮಹಾಪಾಪಪ್ರಶಾಂತ್ಯೈ ಚ ಸರ್ವಕಾಮಪ್ರಸಿದ್ಧಯೇ ॥ ೨೦೬ ॥

ಮೃತ್ಯೋರ್ಮರಣನಾಶಾಯ ಸಂಸೇವ್ಯ ಸ್ಸಶಿವೋ ಜನೈಃ ।
ವಿಷ್ಣುನಾ ವೈನತೇಯೇನ ಶೇಷೇಣಾಪಿ ಕೃತಾದಿಷು ॥ ೨೦೭ ॥

ಯುಗೇಷು ಪೂಜಿತಃ ಶಂಭುಃ ಕತೌ ಸಕಲಸಜ್ಜನೈಃ ।
ಪ್ರಾಸಾದಂ ಕಾರಯಾಮಾಸ ಪ್ರಾಕಾರದ್ವಾರಗೋಪುರೈಃ ॥ ೨೦೮ ॥

ಪಿಂಡಿಕಾಮಪಿ ಸಂಯೋಜ್ಯ ತದ್ವಿಧಿಜ್ಞೈರ್ವಿಧಾನತಃ ।
ಮಹಾಲಿಂಗಂ ಪೂಜಯಿತುಂ ಕಲ್ಪಯಿತ್ವಾ ಶಿವದ್ವಿಜಾನ್ ॥ ೨೦೯ ॥

ಪುರೀಂ ಚ ತತ್ರ ನಿರ್ಮಾಯ ಜನೈಸ್ಸರ್ವೈ ಸ್ಸಹೋಷಿತಃ ।
ಕೃತ್ವಾ ಚ ವಸತಿಂ ಸ್ವಸ್ಯ ಸೇವಯಿತ್ವಾ ಚ ತಂ ಶಿವಂ ॥ ೨೧೦ ॥

---

೨೦೬–೨೦೭. ಮಂತ್ರ ವಾದಿಗಳಾದ ನಾಸ್ತಿಕರನ್ನು ನಿಗ್ರಹಿಸಿದ ಮಹಾ ಪಾತಕವು ಹೋಗುವುದಕ್ಕಾಗಿ ಶ್ರೀ ಪತ್ರಿಕೇಶ್ವರನನ್ನು ಜ್ಞಾನಪೂರ್ಣಯೋಗಿಯು ಪೂಜಿಸಿದನು. ಶಿವನನ್ನು ಪೂಜಿಸುವವರಿಗೆ ಮಹಾಪಾಪಗಳು ಹೋಗುವುವು. ಇಷ್ಟಗಳೆಲ್ಲವೂ ಸಿದ್ಧವಾಗುವುವು. ಮರಣ ಭಯವು ತಪ್ಪುವುದು. ಕೃತಯುಗವೇ ಮೊದಲಾದ ಯುಗಗಳಲ್ಲಿ ವಿಷ್ಣುವೂ, ಗರುಡನೂ, ಆದಿಶೇಷನೂ ಶಿವನನ್ನು ಪೂಜಿಸಿರುವರು.

೨೦೮–೨೦೯. ಕಲಿಯುಗದಲ್ಲಿ ಸತ್ಪುರುಷರೆಲ್ಲರೂ ಶಿವನನ್ನು ಪೂಜಿಸುವರು. ಶ್ರೀ ಪತ್ರಿಕೇಶ್ವರನ ದೇವಾಲಯ, ಪ್ರಾಕಾರ, ಗೋಪುರ ಇವುಗಳೆಲ್ಲವನ್ನೂ ಪಾಂಡ್ಯರಾಜನು ಕಟ್ಟಿಸಿದನು. ಶಿವಲಿಂಗಕ್ಕೆ ಪೀಠವನ್ನು ಕಟ್ಟಿಸಿ ಆ ಪೀಠದಲ್ಲಿ ಶಿವ ಲಿಂಗವನ್ನು ಸೇರಿಸಿ, ಶಾಸ್ತ್ರಕ್ರಮದಿಂದ ಪೂಜೆಯು ಶಿವದ್ವಿಜರಿಂದ ನಡೆಯುವಂತೆ ಪಾಂಡ್ಯರಾಜನು ಮಾಡಿದನು.

೨೧೦–೨೧೩. ಆ ಪ್ರದೇಶದಲ್ಲಿ ಪಟ್ಟಣವನ್ನು ಕಟ್ಟಿಸಿ ಎಲ್ಲಾ ಜನರೊಡನೆ ರಾಜನೂ ವಾಸಸ್ಥಳವನ್ನು ಮಾಡಿಕೊಂಡು ತಾನೂ ವಾಸಮಾಡುತ್ತಿದ್ದನು.

ಜ್ಞಾನಪೂರ್ಣೋಽಪಿ ಭಗವಾನ್ಪರಿಪೂಜ್ಯ ಚ ತಂ ಶಿವಂ ।
ನತಿಭಿ ಸ್ಸ್ತುತಿಭಿ ರ್ನಿತ್ಯಮಾಸ್ತೇ ಪಾಂಡ್ಯನೃಪೇಣ ಸಃ । ॥ ೨೧೧ ॥

ಸಂವತ್ಸರಾಂತೇ ತತ್ಸ್ಥಾನಾನ್ನಿರ್ಗತ್ಯ ಸಹ ಭೂಭುಜಾ ।
ಸಂಬಂಧನಾಥ ಸ್ಸಂಪ್ರಾಪ ಜೀವನ್ಮುಕ್ತಿಪ್ರದಾಂ ಪುರೀಂ ॥ ೨೧೨ ॥

ತತ್ರ ರಾಜಾ ಚ ರಾಜ್ಞೀ ಚ ಸಚಿವಾದ್ಯೈಶ್ಚ ಸಜ್ಜನೈಃ ।
ಸಮ್ಯಕ್ಸಮಾರಾಧಿ ತಸ್ಸ್ವ ವರ್ತತೇಽಸ್ಮಾತ್ಥ ವತ್ಸರಂ ॥ ೨೧೩ ॥

ಶಿಷ್ಯೈಷ್ಪೋಡಶಸಾಹಸ್ರೈ ರ್ಮುದಾಯುಕ್ತೈಶ್ಚ ಪೂಜಿತಃ ।
ತದ್ದೇಶಸ್ಥ ಜನಾ ಸ್ಸರ್ವೇ ಶಿವಸಿದ್ಧಾಂತಮಾಶ್ರಿತಾಃ ॥ ೨೧೪ ॥

ರುದ್ರಾಕ್ಷಮಾಲಾಂ ರಕ್ಷಾಂ ಚ ಅಗ್ನಿಹೋತ್ರಾದಿನಾ ಭೃತಾಂ ।
ಹಾಲಾಸ್ಯೇಶಪ್ರಿಯಕರಂ ಶ್ರೀಮತ್ಪಂಚಾಕ್ಷರಂ-ಮನುಂ ॥ ೨೧೫ ॥

---

ಜ್ಞಾನಪೂರ್ಣಯೋಗಿಯು ಆ ಶ್ರೀಪತ್ರಿಕೇಶ್ವರನನ್ನು ಪೂಜಿಸುತ್ತಾ, ಪಾಂಡ್ಯ ರಾಜನೊಡನೆ ಶಿವನನ್ನು ಸ್ತೋತ್ರಮಾಡಿ ನಮಸ್ಕಾರ ಮಾಡುತ್ತಿದ್ದನು. ಅವನು ಒಂದು ವರ್ಷದವರಿಗೆ ಅಲ್ಲಿ ಸುಖದಿಂದ ಇದ್ದು, ನಂತರ ಜೀವನ್ಮುಕ್ತಿ ನಗರಕ್ಕೆ ಬಂದು ಸೇರಿದನು. ಅಲ್ಲಿ ರಾಜ, ರಾಣಿ, ಮಂತ್ರಿ ಇವರಿಂದಲೂ ಸತ್ಪುರುಷ ರಿಂದಲೂ ಸೇವಿತನಾಗಿ ಜ್ಞಾನಪೂರ್ಣಯೋಗಿಯು ವಂದು ವರ್ಷಕಾಲ ಇದ್ದನು. ಶಿಷ್ಯರೂ ಇವನನ್ನು ಸೇವಿಸುತ್ತಿದ್ದರು.

೨೧೪-೨೧೬. ಆ ದೇಶದ ಜನರೆಲ್ಲರೂ ಶಿವಸಂಪ್ರದಾಯವನ್ನು ಅನುಸರಿಸಿ ದರು. ಭಸ್ಮ, ರುದ್ರಾಕ್ಷಿಗಳನ್ನು ಧರಿಸಿಕೊಂಡು ಅಗ್ನಿಹೋತ್ರಾದಿಗಳನ್ನು ಮಾಡು ತ್ತಿದ್ದರು. ಶಿವಪಂಚಾಕ್ಷರಮಂತ್ರವನ್ನು ಜಪಮಾಡಿಕೊಂಡು ಮನೋವಾಕ್ಕಾಯ ಗಳಿಂದಲೂ ಶಿವನನ್ನು ಸೇವಿಸುತ್ತಿದ್ದರು. ಆದರೆ ಒಂದು ಕ್ಷಣವಾದರೂ ಶಿವನ

ಕಾಯೈರ್ಮನೋಭಿ ರ್ವಾಗ್ಭಿಶ್ಚನ ತ್ಯಜಂತಿ ಕದಾಚನ ।
ಏವಂ ವೈದಿಕಮತ್ತೇಭಃ ಕದಂಬವನಮಾಶ್ರಿತಃ ॥ ೨೧೬ ॥

ವಿಶೇಷಾತ್ಪ್ರಮುದಂ ಪ್ರಾಪ ಭಗ್ನೀಕೃತ್ವಾರ್ಹತದ್ರುಮಾನ್ ।
ಶ್ರೀಹಾಲಾಸ್ಯಪ್ರಭುಂ ಶಂಭುಂ ಸಾಂಬಂ ಸಕಲಕಾಮದಂ ॥ ೨೧೭ ॥

ವೇದಾರ್ಥಗರ್ಭಿತೈರ್ಗೇಯೈರನೇಕೈಸ್ಸುಸ್ತವಸ್ಸ್ರವೈಃ ।
ಅವಾಪ್ಯಾಖಿಲಕಾಮಾಂಶ್ಚ ಹಾಲಾಸ್ಯೇಶಪ್ರಸಾದತಃ ॥ ೨೧೮ ॥

ಜ್ಞಾನವಿಜ್ಞಾನಸಿದ್ಧಸ್ಸ ಜೀವನ್ಮುಕ್ತಿದಶಾಂ ಗತಃ ।
ಅಥ ಹಾಲಾಸ್ಯನಾಥಸ್ಯ ಲಬ್ಧ್ವಾನುಜ್ಞಾಂ ಮಹೇಶಿತುಃ ॥ ೨೧೯ ॥

ಅಪೃಚ್ಛತ್ಪಾಂಡ್ಯಭೂಪಾದೀನ್ ಭಕ್ತಾನ್ಸಂಬಂಧನಾಯಕಃ ।
ಶ್ರೀಮದ್ವೇಣುವನಂ ಗತ್ವಾ ಶಿವಲಿಂಗಮಯಂ ಪರಂ ॥ ೨೨೦ ॥

---

ಸೇವೆಯನ್ನು ಬಿಡುತ್ತಿರಲಿಲ್ಲ. ಜ್ಞಾನಸಂಬಂಧಯೋಗಿಯು, ಜೈನಸಿದ್ಧಾಂತಿಗಳನ್ನು ಈ ಪ್ರಕಾರದಿಂದ ನಾಶಮಾಡಿದವನಾಗಿ ಮಧುರಾನಗರದಲ್ಲಿ ಬಹಳ ಸಂತೋಷದಿಂದ ಇದ್ದನು

೨೧೭-೨೨೧. ಎಲ್ಲಾ ಇಷ್ಟಾರ್ಥಗಳನ್ನೂ ಅನುಗ್ರಹಿಸುವ ಜಗನ್ಮಾತೆಯೊಡನೆ ಇರುವ, ಹಾಲಾಸ್ಯೇಶ್ವರನನ್ನು ವೇದಾರ್ಥಗಳಿಂದ ಕೂಡಿರುವ ದ್ರಾವಿಡ ಭಾಷೆಯ ಪದ್ಯಗಳಿಂದ ಅವನು ಸ್ತುತಿಮಾಡುತ್ತಿದ್ದನು. ಆ ದೇವದೇವನ ಅನುಗ್ರಹದಿಂದ ಸಕಲ ವಿಧವಾದ ಇಷ್ಟಸಿದ್ಧಿಗಳನ್ನೂ ಹೊಂದಿದ ಜ್ಞಾನ ಪೂರ್ಣಯೋಗಿಯು ಜ್ಞಾನ ವಿಜ್ಞಾನಗಳಿಂದ ಸಿದ್ಧನಾಗಿ ಜೀವನ್ಮುಕ್ತನಾಗಿದ್ದನು. ಅನಂತರದಲ್ಲಿ ಅವನು ಹಾಲಾಸ್ಯೇಶ್ವರನ ಅನುಜ್ಞೆಯನ್ನು ಪಡೆದು ಪಾಂಡ್ಯ ರಾಜನೇ ಮೊದಲಾದವರ ಸಮ್ಮತಿಯನ್ನು ಹೊಂದಿ ವೇಣುವನಕ್ಕೆ ಬಂದನು. ಆ ವೇಣುವನದಲ್ಲಿ ಶಿವಲಿಂಗಗಳು

ತತ್ರಾಪಿ ಜೈನಾನ್ನಿರ್ಜಿತ್ಯ ಶಿಕ್ಷಯಿತ್ವಾ ಪುನಶ್ಚ ತಾನ್ ।
ತತ್ರಾಪ್ಯುಷಿತ್ವಾ ಷಣ್ಮಾಸಂ ಶಿಷ್ಯೈಃ ಸರ್ವೈಃ ಪ್ರಮೋದಿತಃ ॥ ೨೨೧ ॥

ತೋಷಯಿತ್ವಾ ವೈದಿಕಾಂಶ್ಚ ಸ್ಥಾಪಯಿತ್ವಾ ಚ ವೈದಿಕಂ ।
ಮಾರ್ಗಮನ್ಯಂ ನಿರೀಕ್ಷ್ಯಾಥ ಶಿಷ್ಯರಕ್ಷಣದೀಕ್ಷಿತಃ ॥ ೨೨೨ ॥

ತತ್ರ ತತ್ರ ಚ ಸಂಸ್ಥಾಪ್ಯ ಶಂಭುಲಿಂಗಾನಿ ವೀಕ್ಷ್ಯ ಸಃ ।
ಅದೃಷ್ಟಾನ್ಯತಿಚಿತ್ರಾಣಿ ವಿಚಿತ್ರಾಣಿ ವರಾಣಿ ಚ ॥ ೨೨೩ ॥

ಶಿವಕ್ಷೇತ್ರಾಣ್ಯನಂತಾನಿ ವಿಶಿಷ್ಟಾನಿ ಚ ವೀಕ್ಷಿತುಂ ।
ಪ್ರತೀತಗುಣವಿಜ್ಞಾನೈರ್ಜ್ಞಾನಪೂರ್ಣ ಉದಙ್ಮುಖಃ ॥ ೨೨೪ ॥

ಪ್ರಾಗ್ದೇಶಂ ಪ್ರಾಪ ರಾಮೇಶಂ ವೇದಾರಣ್ಯೇಶ್ವರಂ ತಥಾ ।
ವಲ್ಮೀಕೇಶಂ ತ್ಯಾಗರಾಜಂ ಶ್ರೋಣಾರಣ್ಯಂ ತಥೈವ ಚ ॥ ೨೨೫ ॥

---

ಬಹಳ ಇದ್ದವು, ಅಲ್ಲಿಯೂ ಅವನು ಜೈನರನ್ನು ವಾದದಲ್ಲಿ ಗೆದ್ದನು. ಅವರನ್ನು ಶಿಕ್ಷಿಸಿದನು. ಅಲ್ಲಿ ಅವನು ಆರುತಿಂಗಳ ಕಾಲದವರಿಗೂ ತನ್ನ ಶಿಷ್ಯರೆಲ್ಲರೊಡನೆಯೂ ಇದ್ದನು.

೨೨೨-೨೨೫. ಶಿವಯೋಗಿಯು ಅಲ್ಲಿರುವಾಗಲೂ ವೈದಿಕಮಾರ್ಗವನ್ನು ಸ್ಥಾಪಿಸಿ, ವೈದಿಕರನ್ನು ಸಂತೋಷ ಪಡಿಸಿದನು. ಶಿಷ್ಯರನ್ನು ರಕ್ಷಿಸುವ ವ್ರತವುಳ್ಳ ಅವನು ತಾನು ಇದುವರಿಗೆ ಇದ್ದಮಾರ್ಗಕ್ಕಿಂತಲೂ ಬೇರೆಯ ಮಾರ್ಗವನ್ನು ಆಶ್ರಯಿಸಿದನು. ಅಲ್ಲಲ್ಲಿ ಶಿವಲಿಂಗಗಳನ್ನು ಪ್ರತಿಷ್ಠೆಮಾಡಿದನು. ಪವಿತ್ರವಾದ ಆಶ್ಚರ್ಯಕರವಾದ ತಾನು ನೋಡದೆ ಇರುವ ಉತ್ತಮವಾದ ಶಿವಕ್ಷೇತ್ರಗಳೆಲ್ಲವನ್ನೂ ನೋಡುವುದಕ್ಕಾಗಿ ಹೊರಟನು. ಅವನು ವಾಸಮಾಡುತ್ತಿದ್ದ ಪ್ರದೇಶಕ್ಕೆ ಉತ್ತರ ಮುಖನಾಗಿ ಹೊರಟನು. ಪೂರ್ವದಿಕ್ಕಿನ ದೇಶಗಳಲ್ಲಿ ಮೊದಲು ರಾಮೇಶ್ವರಕ್ಕೆ ಬಂದನು. ಅನಂತರ ವೇದಾರಣ್ಯೇಶ್ವರನನ್ನು ದರ್ಶನಮಾಡಿದನು. ವಲ್ಮೀಕೇಶ್ವರ, ತ್ಯಾಗರಾಜ, ಶ್ರೋಣಾರಣ್ಯ, ಆ ಪುರೇಶ್ವರ ಇವೇ ಮೊದಲಾದ ಕ್ಷೇತ್ರದಲ್ಲಿರುವ ಶಿವಲಿಂಗಗಳನ್ನು ದರ್ಶನ ಮಾಡಿ ಸೇವಿಸಿದನು.

ವಟಾರಣ್ಯಾದಿಕಂ ಸೇವ್ಯಮಾಪುರೇಶಂ ಪ್ರಣಮ್ಯ ಚ ।
ತಥಾಮೃತಘಟೇಶಾನಂ ಶ್ವೇತಾರಣ್ಯೇಶ್ವರಂ ತಥಾ ॥ ೨೨೬ ॥

ಏವಮನ್ಯಾನ್ಯನೇಕಾನಿ ಪ್ರಥಿತಾನಿ ಚ ಸೇವ್ಯ ಚ ।
ಸಂಪ್ರಾಪ ಪ್ರಥಿತೈ ಶ್ಶಿಷ್ಯೈಃ ಪ್ರಾಜ್ಞೈಃ ಪ್ರಮಥಸನ್ನಿಭೈಃ ॥ ೨೨೭ ॥

ಶ್ರೀಮದ್ಬ್ರಹ್ಮಪುರೇ ಪುಣ್ಯಂ ವಿಜಯೀ ವೈದಿಕೇಶ್ವರಃ ।
ಶಿವಪಾದಾಬ್ಜಹೃದಯಂ ಪಿತರಂ ಪ್ರಾಪ ತನ್ನರ್ಮ ॥ ೨೨೮ ॥

ತತ್ರೈವ ವಸತಿಂ ಚಕ್ರೇ ಶಿವಸ್ಥಾನಾನಿ ವೀಕ್ಷ್ಯ ಸಃ ।
ಪಾಂಡ್ಯೋಽಪಿ ಪುತ್ರೈಃ ಪೌತ್ರೈಶ್ಚ ಕಲತ್ರೈಶ್ಚಾಪಿ ಮಂತ್ರಿಭಿಃ ॥ ೨೨೯ ॥

ಜೀವನ್ಮುಕ್ತಿಪುರೇ ಪುಣ್ಯೇ ಜೀವನ್ಮುಕ್ತಸ್ಥಿತಶ್ಚ ಸಃ ।
ಮಧುರೇಶ್ವರಪಾಂಡ್ಯೇ ಚ ರಾಜ್ಯಭಾರಂ ವಿಹಾಯ ಸಃ ॥ ೨೩೦ ॥

ರಾಜಾ ಚ ವನಿತೇಶ್ವರ್ಯಾ ಕಾಲೇ ಕೈವಲ್ಯಮಾಪ್ತವಾನ್ ।
ಇತಿ ತ್ರಿಷಷ್ಟಿಲೀಲೇಯಂ ವಿಷ್ಟಪತ್ರಯವಿಶ್ರುತಾ ॥ ೨೩೧ ॥

---

೨೨೬–೨೩೧. ಅವನು ಅಮೃತಘಟೇಶ್ವರ ಶ್ವೇತಾರಣ್ಯೇಶ್ವರ ಇವರುಗಳನ್ನು ಸೇವಿಸಿದನು. ಈಪ್ರಕಾರವಾಗಿ ಪ್ರಸಿದ್ಧವಾದ ಬಹಳ ಶಿವಕ್ಷೇತ್ರಗಳನ್ನು ಸೇವಿಸಿ ಬುದ್ಧಿವಂತರೂ ಪ್ರಸಿದ್ಧರೂ ಆಗಿರುವ ತನ್ನ ಶಿಷ್ಯರೊಡನೆ ತನ್ನ ವಾಸಸ್ಥಾನಕ್ಕೆ ಬಂದನು. ಯಾತ್ರೆಯಾದನಂತರ ಬ್ರಹ್ಮಪುರವಾದ ಚಿದಂಬರದಲ್ಲಿ ತನ್ನ ತಂದೆಯಾದ ಶಿವಪಾದಾಬ್ಜಹೃದಯನಿಗೆ ನಮಸ್ಕಾರಮಾಡಿ ಜಯಶೀಲನಾದ ಜ್ಞಾನಸಂಬಂಧಯೋಗಿಯು ಅಲ್ಲಿಯೇ ಸುಖವಾಗಿ ವಾಸಮಾಡುತ್ತಿದ್ದನು. ಪಾಂಡ್ಯರಾಜನೂ ಕೂಡ ತನ್ನ ಮಕ್ಕಳೂ, ಮೊಮ್ಮಕ್ಕಳೂ, ಹೆಂಡತಿಯೂ, ಮಂತ್ರಿಯೂ, ಇವರೊಡನೆ ಪುಣ್ಯಕರವಾದ ಜೀವನ್ಮುಕ್ತಿಪುರದಲ್ಲಿ ಜೀವನ್ಮುಕ್ತನಾಗಿ ಇದ್ದನು. ಅವನು ತನ್ನ ಮಗನಾದ ಮಧುರೇಶ್ವರ ಪಾಂಡ್ಯನಿಗೆ ರಾಜ್ಯಭಾರವನ್ನು ವಹಿಸಿ ಕೆಲವು ಕಾಲದನಂತರ ರಾಣಿಯಾದ ವನಿತೇಶ್ವರಿಯೊಡನೆ ಮುಕ್ತನಾದನು. ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಅರುವತ್ತು ಮೂರನೆಯ ಈ ಲೀಲೆಯನ್ನು ಹೇಳಿರುವೆನು.

ಶ್ರೀಮದ್ಧಾಲಾಸ್ಯನಾಥಸ್ಯ ಶ್ರವಣಾ ದ್ಭುಕ್ತಿಮುಕ್ತಿದಾ ।
ಶಿವಭಕ್ತಿಪ್ರದಾತ್ರೀ ಚ ಹಾಲಾಸ್ಯೇಶಪ್ರಸಾದತಃ ॥ ೨೩೨ ॥

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಶ್ರೀ ಜ್ಞಾನಸಂಬಂಧೇನ ನಗ್ನಾನಾಂ ತರುಶೂಲಾರೋಹಣಂ ನಾಮ ಏಕೋನಸಪ್ತತಿತಮೋಽಧ್ಯಾಯಃ**

---

೨೩೨. ಹಾಲಾಸ್ಯೇಶ್ವರನು ಆಚರಿಸಿದ ಈ ಲೀಲೆಯು ಕೇಳಿದ ಮಾತ್ರದಿಂದ ಭುಕ್ತಿ ಮುಕ್ತಿಗಳನ್ನು ಕೊಡುವುದಲ್ಲದೆ ಹಾಲಾಸ್ಯೇಶ್ವರನ ಅನುಗ್ರಹದಿಂದ ಶಿವನಲ್ಲಿ ಭಕ್ತಿಯನ್ನೂ ಉಂಟು ಮಾಡಿಕೊಡುವುದು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಆಗಸ್ತ್ಯ ಸಂಹಿತೆಯಲ್ಲಿ ಶ್ರೀ ಜ್ಞಾನ ಸಂಬಂಧೇನ ನಗ್ನಾನಾಂ ತರುಶೂಲಾಧಿರೋಹಣಂ ಎಂದು ಹೆಸರುಳ್ಳ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದಿರುವುದು

॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಸಪ್ತತಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಶಂಭುಲಿಂಗಶಮೀವೃಕ್ಷಕೂಪಾ ನೀಪಾಟವೀಶ್ವರಃ ।
ಸರ್ವಸಾಕ್ಷೀ ಸಾಕ್ಷಿಣಸ್ತಾನಾರಾದಾಹೂಯ ದೂರಗಾನ್ ॥ ೧ ॥

ಅಕರೋದ್ವೈಶ್ಯವಾಮಾಯಾಃ ಕೀರ್ತಿಂ ಪ್ರೀತಿಂ ಚ ಶಾಶ್ವತೀಂ ।
ಯಯಾ ಚ ಲೀಲಯಾ ತಾಂ ಚ ಶೃಣುಧ್ವಂ ಮುನಿಪುಂಗವಾಃ ॥ ೨ ॥

---

## ಎಪ್ಪತ್ತನೆಯ ಅಧ್ಯಾಯವು

೧-೨. ಅಗಸ್ತ್ಯಋಷಿಯು ಹೇಳಿದನು:- ಎಲ್ಲಕ್ಕೂ ಸಾಕ್ಷಿಯಾಗಿರುವ (ನೀಪಾಟವೀಶ್ವರನು) ಸುಂದರೇಶ್ವರನು ವೈಶ್ಯಸ್ತ್ರೀಯ ವಿವಾದದಲ್ಲಿ ಶಂಭುಲಿಂಗ ಶಮೀವೃಕ್ಷ, ಕೂಪ, ಇವುಗಳನ್ನು ಸಾಕ್ಷಿಗಳನ್ನಾಗಿ ಮಾಡಿಕೊಟ್ಟು ದೂರದಲ್ಲಿದ್ದಾಗ್ಯೂ ಅವರು ಬಂದು ಸಾಕ್ಷಿಹೇಳುವಂತೆ ಮಾಡಿ ಅವಳ ವಿವಾದವು ಗೆಲ್ಲುವಂತೆ ಮಾಡಿಸಿ ಸ್ಥಿರವಾದ ಕೀರ್ತಿಯನ್ನೂ ಪ್ರೀತಿಯನ್ನೂ ಸಂಪಾದಿಸಿದನು. ಈ ಲೀಲೆಯನ್ನು ನಿಮಗೆ ಹೇಳುವೆನು ಕೇಳಿರಿ.

ಕಶ್ಚಿದ್ವೈಶ್ಯವರಶ್ಶ್ರೀಮಾ್ ಕಾಂತಯಾ ಕಮನೀಯಯಾ ।
ಸಾರ್ಧಂ ಸಾಗರತೀರಸ್ಥೇ ಕಸ್ಮಿಂಶ್ಚಿತ್ಸುಮನೋಹರೇ　॥ ೩ ॥

ಕಾವೇರೀಪುಷ್ಪನಾಮಾಖ್ಯೇ ಚೋಲದೇಶೇ ದ್ವಿಜೋತ್ತಮಾಃ ।
ಸರ್ವಾಶ್ಚ ಸಂಪದಸ್ತಸ್ಯ ಪುತ್ರಾಖ್ಯಂ ಸಂಪದಂ ವಿನಾ　॥ ೪ ॥

ದಿನೇ ದಿನೇ ಸಮೇಧಂತೇ ತರುಣೇಂದೋಃ ಕಲಾ ಇವ ।
ಚಿರಕಾಲತಪೋಭಿಶ್ಚ ದಾನೈರ್ಹೋಮಾದಿಭಿ ಸ್ತಥಾ　॥ ೫ ॥

ಲಬ್ಧವಾ್ ಕನ್ಯಕಾ ಮೇಕಾಂ ಕಾಂತ್ಯಾ ನಾಗಾಂಗನಾಮಿವ ।
ಭಾಗಿನೇಯಃ ಕಶ್ಚಿದಸ್ತಿ ತಸ್ಯ ವೈಶ್ಯವರಸ್ಯ ಸಃ　॥ ೬ ॥

ನ್ಯವಸನ್ಮಧುರಾಪುರ್ಯಾಂ ಮಾನಿನಾಂ ಧನಿನಾಂ ವರಃ ।
ತಸ್ಮೈ ದಾತುಂ ಚ ತಾಂ ಕನ್ಯಾಂ ಸ್ವಸ್ರೀಯಾಯ ವರಾಯ ಚ　॥ ೭ ॥

---

೩-೬. ಚೋಳ ದೇಶದಲ್ಲಿ ಕಾವೇರೀಪುರನೆಂದು ಪ್ರಸಿದ್ಧವಾದ ಪ್ರದೇಶವು ಸಮುದ್ರ ತೀರದಲ್ಲಿ ಬಹಳ ಮನೋಹರವಾಗಿ ಇತ್ತು. ಅಲ್ಲಿ ಒಬ್ಬ ವೈಶ್ಯನು ಸುಂದರಿಯಾದ ತನ್ನ ಪತ್ನಿಯೊಡನೆ ಸುಖದಿಂದ ಇದ್ದನು. ಅವನಿಗೆ ಐಶ್ವರ್ಯವು ಬಹಳವಾಗಿ ಇತ್ತು. ಆದರೆ ಮಕ್ಕಳು ಮಾತ್ರ ಇರಲಿಲ್ಲ. ಐಶ್ವರ್ಯವು ಮಾತ್ರ ದಿನೇ ದಿನೇ ಚಂದ್ರನ ಕಳೆಯು ಹೆಚ್ಚುವಂತೆ ವೃದ್ಧಿಯಾಗುತ್ತಾ ಇತ್ತು. ಅವನು ಬಹಳ ಕಾಲದ ವರಿಗೂ ತಪಸ್ಸು, ದಾನ, ಹೋಮ, ಇವುಗಳಿಂದ ನಾಗ ಕನ್ಯೆಯಂತಿರುದ ಒಂದು ಹೆಣ್ಣು ಮಗುವನ್ನು ಹೊಂದಿದನು. ಮಧುರಾ ನಗರದಲ್ಲಿ ಅವನ ಸೋದರಳಿಯನೊಬ್ಬನು ಹಣಗಾರನಾಗಿದ್ದನು. ಮತ್ತು ಇವನು ಮರ್ಯಾದೆ ವಂತನಾಗಿಯೂ ಇದ್ದನು.

೭-೯. ಆ ವೈಶ್ಯನು ತನ್ನ ಸೋದರಳಿಯನಿಗೆ ತನ್ನ ಮಗಳನ್ನು ಕೊಟ್ಟು ವಿವಾಹವನ್ನು ಮಾಡಲು ನಿಶ್ಚಯಮಾಡಿಕೊಂಡು ತನ್ನ ಬಂಧುಗಳೆಲ್ಲರಿಗೂ ತಿಳಿಸಿ ಸುಖವಾಗಿದ್ದನು. ಕೆಲವುಕಾಲ ಕಳೆದನಂತರ ಅವನು ಮುದುಕನಾಗಿ ಸ್ವರ್ಗಕ್ಕೆ

ಬಂಧುಭಿಸ್ಸಹ ನಿಶ್ಚಿತ್ಯ ಸುಖೇನಾಸ್ತೇ ಶ್ರಿಯಾತುಲಃ ।
ಕಾಲೇನಾಥ ಸ ಜೀರ್ಣಸ್ಸ್ವದೇಹಂ ತ್ಯಕ್ತ್ವಾ ದಿವಂ ಗತಃ ॥ ೮ ॥

ತಮನ್ವಗಾಚ್ಚ ತದ್ಭಾರ್ಯಾ ದೇಹಂ ತ್ಯಕ್ತ್ವಾ ಹುತಾಶನೇ ।
ಸಗೋತ್ರಾಸ್ಸಕಲತ್ರಸ್ಯ ಸದಾಚಾರವತೋ ವಿಶಃ ॥ ೯ ॥

ಔರ್ಧ್ವದೇಹಿಕಕರ್ಮಾಣಿ ಸರ್ವಾಣಿ ನಿರವರ್ತಯನ್ ।
ಅಥ ತದ್ಭಾಗಿನೇಯಾಯ ಮಧುರಾಪುರವಾಸಿನೇ ॥ ೧೦ ॥

ಪತ್ರಿಕಾಂ ಪ್ರೇಷಯಾಮಾಸು ರೇವಂ ಸಂಲಿಖ್ಯ ಬಾಂಧವಾಃ ।
ಶ್ರೀಮದ್ಗುಣನಿಧೇ ವೈಶ್ಯವಂಶಮುಕ್ತಾಫಲಾಮಲ ॥ ೧೧ ॥

ತ್ವನ್ಮಾತುಲೋಽತುಲಃ ಕೀರ್ತ್ಯಾ ಸದ್ಗುಣೇನ ಚ ಸಂಪದಾ ।
ವ್ರತಾನಿ ಚಕ್ರೇಽಪತ್ಯಾರ್ಥಂ ಸಭಾರ್ಯೋ ವೃದ್ಧತತ್ಪರಃ ॥ ೧೨ ॥

---

ಹೊರಟುಹೋದನು. ಅವನ ಹೆಂಡತಿಯು ಅಗ್ನಿಪ್ರವೇಶ ಮಾಡಿ ತನ್ನ ಶರೀರವನ್ನು ತ್ಯಾಗಮಾಡಿದಳು. ಆಗ ಬಂಧುಗಳೆಲ್ಲರೂ ಸರಿಯಾದ ಆಚಾರವಂತನಾಗಿದ್ದ ಅವನಿಗೆ ತಕ್ಕ ಕರ್ಮಗಳೆಲ್ಲವನ್ನೂ ನೆರವೇರಿಸಿದರು. ಅನಂತರದಲ್ಲಿ ಮಧುರಾನಗರದಲ್ಲಿರುವ ಅವನ ಸೋದರಳಿಯನಿಗೆ ಕಾಗದವನ್ನು ಬರೆದು ಕಳುಹಿಸಿದರು.

೧೦. ಎಲೈ ಗುಣವಂತನಾದ, ವೈಶ್ಯವಂಶ ಮುಕ್ತಾಮಣಿಯೇ, ನಿನ್ನ ಸೋದರಮಾವನು ಬಹಳ ಯಶಸ್ವಿಯಾಗಿ, ಐಶ್ವರ್ಯವೂ ಒಳ್ಳೆಯಗುಣವೂ ಇವುಗಳಿಂದ ಪ್ರಸಿದ್ಧನಾಗಿದ್ದನು. ಅವನಿಗೆ ಸಮನಾದವರು ಯಾರೂ ಇರಲಿಲ್ಲ.

೧೧–೧೫. ಅವನು ಮಕ್ಕಳಾಗುವುದಕ್ಕಾಗಿ ಪತ್ನೀಸಹಿತನಾಗಿ ವ್ರತವೇ ಮೊದಲಾದದ್ದನ್ನು ಮಾಡಿದನು. ಬಹಳ ತಪಸ್ಸನ್ನು ಮಾಡಿದರೂ ಅವನಿಗೆ ಗಂಡು ಮಕ್ಕಳಾಗಲಿಲ್ಲ. ಬಹಳ ಸುಂದರಿಯಾದ ಪಾರ್ವತೀದೇವಿಯ ಹಾಗಿರುವ ಹೆಣ್ಣು ಮಗಳನ್ನು ಅವನು ಪಡೆದನು. ಅವಳು ಹುಟ್ಟಿದಾರಭ್ಯದಿಂದಲೂ ಅವಳನ್ನೂ

**ಪುತ್ರಂ ನ ಲೇಭೇ ಸಹಸಾ ಭೂಯಸಾ ತಪಸಾ ಪುನಃ ।**
**ಲಬ್ಧವಾನ್ ಕನ್ಯಕಾಂ ಕಾಂಚಿದುಮಾಮಿವ ಮನೋರಮಾಂ ॥ ೧೩ ॥**

**ತಸ್ಯಾಂ ತು ಜಾತಮಾತ್ರಾಯಾಂ ತಾಂ ಚ ಸರ್ವಧನಾನಿ ಚ ।**
**ದಾತುಂ ಸಮುದ್ಯತಃ ತುಭ್ಯಮಸ್ಮಾಸ್ವತ್ಯವದತ್ ಸದಾ ॥ ೧೪ ॥**

**ಸ ಜೀರ್ಣಃ ತ್ರಿದಿವಂ ಪ್ರಾಪ ತದ್ಭಾರ್ಯಾ ಚ ತಮನ್ವಗಾತ್ ।**
**ತತ್ತ್ವಯಾತ್ರ ಸಮಭ್ಯೇತ್ಯ ತತ್ಸುತಾಂ ತದ್ಧನಾನಿ ಚ ॥ ೧೫ ॥**

**ಪರಿಗೃಹ್ಯ ಸುಗಂತವ್ಯಂ ಮಧುರಾಂ ಮಧುರಾಪುರೀಂ ।**
**ಏವಂ ವಾಚಕಯುಕ್ತಾಂ ತಾಂ ಪ್ರಾಪ್ತಾಂ ದೂತೇನ ಪತ್ರಿಕಾಂ ॥ ೧೬ ॥**

**ಉನ್ಮುಚ್ಯ ವೈಶ್ಯವರ್ಯಸ್ಯ ಪುತ್ರಃ ಸ್ವಯಮವಾಚಯತ್ ।**
**ಸರ್ವೋದಂತಂ ಮಾತುಲಸ್ಯ ವಿಜ್ಞಾಯೈವಂವಿಧಂ ಸುಧೀಃ ॥ ೧೭ ॥**

---

ಅವನ ಸರ್ವಸ್ವವೆಲ್ಲವನ್ನೂ ನಿನಗೆ ಕೊಡುವಂತೆ ನಮ್ಮೆಲ್ಲರ ಸಂಗಡ ಹೇಳುತ್ತಿದ್ದನು. ಅವನು ಗತಿಸಿರುವ ಕಾರಣ ಅವನ ಪತ್ನಿಯು ಅವನನ್ನು ಅನುಸರಿಸಿದಳು. ಈಗ ನೀನು ಬಂದು ಅವನ ಮಗಳನ್ನು ಸ್ವೀಕರಿಸಿ ಅವನ ದ್ರವ್ಯವೆಲ್ಲವನ್ನೂ ತೆಗೆದುಕೊಂಡು ಮಧುರಾನಗರಕ್ಕೆ ಹೋಗಬೇಕು ಎಂದು ಬರೆದಿರುವ ಕಾಗದವನ್ನು ಆಳುಗಳಿಂದ ಅವನಿಗೆ ತಲಪಿಸಿದರು.

೧೬–೨೦. ಬುದ್ಧಿವಂತನಾದ ಅವನು ದೂತನು ತಂದುಕೊಟ್ಟ ಕಾಗದವನ್ನು ಓದಿನೋಡಿ, ತನ್ನ ಸೋದರಮಾವನ ವೃತ್ತಾಂತವೆಲ್ಲವನ್ನೂ ತಿಳಿದುಕೊಂಡು, ಐದು ಆರು ಜನಗಳನ್ನು ತನ್ನ ಸಂಗಡ ಕರೆದುಕೊಂಡು ಆ ದೇಶಕ್ಕೆ ಹೊರಟನು. ಕೆಲವು ದಿನಗಳಲ್ಲಿ ಅವನು ವಾಸವಾಗಿದ್ದ ಸಮುದ್ರತೀರವನ್ನು ತಲಪಿದನು. ಅವನ ಜ್ಞಾತಿಗಳೂ ಬಂಧುಗಳೂ ಇವನನ್ನು ನೋಡಿದರು. ಅವರೆಲ್ಲರೂ ಇವನಿಗೆ ಮರ್ಯಾದೆಯನ್ನು ಮಾಡಿದರು. ಇವನ ದುಃಖವನ್ನು ನೆಂಟರೆಲ್ಲರೂ ಸಮಾಧಾನ ಮಾಡಿದರು.

**ಪಂಚಷಟ್ಪುರುಷೈಸ್ಸಾರ್ಧಂ ತದ್ದೇಶಂ ಪ್ರತಿ ನಿರ್ಯಯೌ ।**
**ದಿನೈಃ ಕತಿಪಯೈಃ ಪ್ರಾಪ್ಯ ಸಿಂಧುತೀರಗತಂ ಪುರಂ ॥ ೧೮ ॥**

**ತದ್ಜ್ಞಾತಿಬಾಂಧವಾಂಶ್ಚೈವ ದೃಷ್ಟ್ವಾ ಸನ್ಮಾನಿತಶ್ಚ ತೈಃ ।**
**ಮನೋಹರಂ ಚಾಧ್ಯುವಾಸ ಮಾತುಲಸ್ಯ ತು ಮಂದಿರಂ ॥ ೧೯ ॥**

**ವಿಹಾಯ ಬಂಧುಂ ವಚನೈಶ್ಶೋಕಂ ಮಾತುಲನ್ಯತ್ಯಜಂ ।**
**ತತ್ರೈವ ದಿವಸಾನ್ ಕಾಂಶ್ಚಿನ್ನಿನಾಯ ನಯಕೋವಿದಃ ॥ ೨೦ ॥**

**ಪಾಣಿಗ್ರಹಂ ಕುರುಷ್ವೇತಿ ತ್ವೈರುಕ್ತೋಽಖಿಲಬಂಧುಭಿಃ ।**
**ಮಧುರಾನಗರೀ ಮಸ್ಮದ್ಬಂಧುಬೃಂದಸಮನ್ವಿತಾಂ ॥ ೨೧ ॥**

**ಪ್ರಾಪ್ಯೈವ ಪಾಣಿಗ್ರಹಣಂ ಕರಿಷ್ಯೇಽಸ್ಯಾ ವಿಧಾನತಃ ।**
**ಇತಿ ಬ್ರುವನ್ ಸಮಾಪೃಚ್ಛದ್ಬಂಧೂಂಸ್ತಾನ್ಬಂಧುವತ್ಸಲಃ ॥ ೨೨ ॥**

**ದಾಸೀ ದಾಸಗಣಂ ಸರ್ವಂ ಗೋಮಹಿಷ್ಯಾದಿವಸ್ತು ಚ ।**
**ಪುರತಃ ಪ್ರೇಷಯಿತ್ವಾಯಂ ಗಚ್ಛಧ್ವಂ ಯೂಯಮಾಶು ಚ ॥ ೨೩ ॥**

---

ಅವನು ಸೋದರಮಾವನ ಸುಂದರವಾದ ಮನೆಯಲ್ಲಿ ಸುಖವಾಗಿದ್ದನು. ಕೆಲವು ದಿನಗಳು ಕಳೆದನಂತರ ಅವರೆಲ್ಲರೂ ಅವನ ಮಗಳನ್ನು ವಿವಾಹ ಮಾಡಿಕೊಳ್ಳಲು ಬಲಾತ್ಕಾರಮಾಡಿದರು.

೨೧-೨೪. ಅವನು ನಾನು ಮಧುರಾನಗರಕ್ಕೆ ಹೋಗಿ ನನ್ನ ನೆಂಟರೆಲ್ಲರ ಮಧ್ಯದಲ್ಲಿ ಕ್ರಮವಾಗಿ ಮದುವೆಯನ್ನು ಮಾಡಿಕೊಳ್ಳುತ್ತೇನೆ, ಎಂದು ಅವರಿಗೆ ಉತ್ತರವನ್ನು ಹೇಳಿದನು. ಅನಂತರ ಬಂಧುಗಳಲ್ಲಿ ಪ್ರೀತಿಯುಳ್ಳವನಾದ ಅವನು ಅವರ ಸಮ್ಮತಿಯನ್ನು ಪಡೆದು, ತನ್ನ ಸೋದರ ಮಾವನ ದಾಸಿಯರು, ದಾಸರು, ಗೋವುಗಳು, ಇವೇ ಮೊದಲಾದವುಗಳೆಲ್ಲವನ್ನೂ ಮುಂದಾಗಿ ಮಧುರಾನಗರಕ್ಕೆ ಕಳುಹಿಸಿ, ಅನಂತರದಲ್ಲಿ ಹುಡುಗಿಯನ್ನೂ ಧನ, ಕನಕ, ಮುತ್ತು ರತ್ನ ಇವೆಲ್ಲವನ್ನೂ

ಪ್ರೇಷಯಿತ್ವಾ ಪುನಃ ಪಶ್ಚಾದಾಪ್ತೈರನ್ಯೈಸ್ಸಹೈವ ತು ।
ಕನ್ಯಾರತ್ನಂ ಚ ಕನಕರತ್ನಾದೀನಿ ವಸೂನಿ ಚ ॥ ೨೪ ॥

ಆದಾಯ ತಾದ್ಭಾಗಿನೇಯಃ ಪ್ರತಸ್ಥೇ ಮಧುರಾಪುರೀಂ ।
ಶೀಘ್ರಂ ಯಾತುಂ ನ ಶಕ್ತಾಹಂ ಮಂದಂ ಮಂದಂ ಮಯಾ ಸಹ ॥ ೨೫ ॥

ಗಂತುಮರ್ಹಸಿ ಮನ್ನಾಥೇತ್ಯಾಹ ಕನ್ಯಾ ವಿಶಾಂ ವರಂ ।
ಆಗತಾನಾತ್ಮನಾ ಸಾರ್ಧಂ ಬಾಂಧವಾನಪರಾನಪಿ ॥ ೨೬ ॥

ಸತ್ವರಂ ಪುರತೋ ಯೂಯಂ ಗಚ್ಛತೇತಿ ವ್ಯಸರ್ಜಯನ್ ।
ಪ್ರತ್ಯಹಂ ಯೋಜನಾಮಾತ್ರಂ ತಯಾ ಸಾರ್ಧಂ ಶನೈಃ ಶನೈಃ ॥ ೨೭ ॥

ಗಚ್ಛತಾ ವೈಶ್ಯವರ್ಯೇಣ ಮಾರ್ಗೇ ಪ್ರಾಪ್ತಶ್ಶಿವಾಲಯಃ ।
ತತ್ರ ಸೀಸಪುರೇ ಕ್ಷೇತ್ರೇ ಶಿವಸ್ಯಾತಿಮನೋಹರೇ ॥ ೨೮ ॥

---

ತನ್ನ ಸಂಗಡಲೇ ತೆಗದುಕೊಂಡು ಮಧುರಾ ನಗರಿಗೆ ಪ್ರಯಾಣ ಮಾಡಿದನು. ಆಗ ಆ ಹುಡುಗಿಯು ಬೇಗನೆ ಪ್ರಯಾಣ ಮಾಡುವುದಕ್ಕಾಗುವುದಿಲ್ಲವಾದ್ದರಿಂದ ನಿದಾನವಾಗಿ ಪ್ರಯಾಣ ಮಾಡಬೇಕೆಂದು ಹೇಳಿದಳು.

೨೬–೩೦. ಅವನು ತನ್ನ ಸಂಗಡ ಬಂದಿದ್ದ ಹೆಚ್ಚಾದ ಪರಿವಾರವೆಲ್ಲವನ್ನೂ ಬಂಧುಗಳನ್ನೂ, "ನೀವೆಲ್ಲರೂ ಮುಂದಾಗಿ ಪ್ರಯಾಣ ಮಾಡಿರಿ" ಎಂದು ಕಳುಹಿಸಿದನು. ಆ ಹುಡುಗಿಯನ್ನೂ ಕರೆದುಕೊಂಡು ಒಂದು ದಿನಕ್ಕೆ ಒಂದು ಯೋಜನದಂತೆ ಪ್ರಯಾಣ ಮಾಡಿಕೊಂಡು ಬರುತ್ತಿದ್ದನು. ಹೀಗೆ ಬರುತ್ತಿರುವಾಗ ದಾರಿಯಲ್ಲಿ ಒಂದು ಶಿವ ದೇವಸ್ಥಾನವು ಸಿಕ್ಕಿತು ಮನಸ್ಸಿಗೆ ಪರಿಶುದ್ಧವಾಗಿ ಕಂಡು ಬಂದ ಆ ಪ್ರದೇಶದಲ್ಲಿ ಅವನು ಕನ್ಯಾ ಪರಿಜನರೊಡನೆ ವಾಸಮಾಡಲು ನಿಂತನು. ಅಲ್ಲಿರುವ ಶಿವಲಿಂಗವನ್ನು ವಿಷ್ಣುವೇ ಮೊದಲಾದ ದೇವತೆಗಳೂ, ಶೇಷನೇ ಮೊದಲಾದ

ತಸ್ಮಿನ್ವಾಸಂ ಚ ಕೃತವಾ್ ಕನ್ಯಾಪರಿಜನೈರ್ವೃತಃ ।
ಲಕ್ಷ್ಮೀಶಾದ್ಯೈಃ ಸರ್ವದೇವೈಃ ಪೂಜಿತಂ ಲಿಂಗಮೈಶ್ವರಂ ॥ ೨೯ ॥

ಶೇಷಾದ್ಯೈಃ ಫಣಿಭಿಶ್ಚಾಪಿ ಸಂಸೇವ್ಯಾಯಂ ಸಸಾದರಂ ।
ತಲ್ಲಿಂಗಸನ್ನಿಧೌ ಕೂಪಶ್ಶಮೀವೃಕ್ಷಶ್ಚ ವಿದ್ಯತೇ ॥ ೩೦ ॥

ಸರ್ವ ದೇವಮಯೋ ವೃಕ್ಷ ಸ್ಸ ಕೂಪಸ್ಸರ್ವತೀರ್ಥಕಃ।
ತತಸ್ಸ್ಕೂಪಶಂಬರೇ ಸ್ನಾತ್ವಾ ತಚ್ಛಮೀವೃಕ್ಷಮೂಲತಃ ॥ ೩೧ ॥

ತಕ್ಷಕಾದೀನ್ನಮಸ್ಕೃತ್ಯ ನಾಗಾನನ್ಯಾನ್ಬಹೂನಪಿ ।
ಕಾರಯಿತ್ವಾ ಪರಿಜನೈಃ ಪಾಕಮನ್ನಾದಿವಸ್ತು ಚ ॥ ೩೨ ॥

ಭೋಜಯಿತ್ವಾ ಚ ತಾಂ ಕನ್ಯಾಂ ಸರ್ವೈಃ ಪರಿಜನೈರಯಂ ।
ಸ್ವಯಂ ಚ ಭುಕ್ತ್ವಾ ಸ್ವಜನೈರ್ವಾಯುಸೇವನತತ್ಪರಃ ॥ ೩೩ ॥

---

ನಾಗರೂ ಪೂಜಿಸುತ್ತಿದ್ದರು. ಈ ಪ್ರಕಾರದ ಮಹಿಮೆಯುಳ್ಳ ಶಿವಲಿಂಗವನ್ನು ತಾನೂ ಪೂಜಿಸಿ ಆದರದಿಂದ ಸೇವಿಸಿದನು. ಆ ಶಿವಲಿಂಗದ ಸನ್ನಿಧಿಯಲ್ಲಿ ಒಂದು ಭಾವಿಯೂ, ಬನ್ನಿಯ ಮರವೂ ಇತ್ತು.

೩೧–೩೪. ಆ ವೃಕ್ಷವು ಸರ್ವದೇವತಾರೂಪದಿಂದ ಇರುವುದು. ಆ ಭಾವಿಯು ಎಲ್ಲಾ ತೀರ್ಥಗಳ ರೂಪದಿಂದ ಇರುವುದು. ಆದ್ದರಿಂದ ಆ ವೈಶ್ಯನು ಆ ಭಾವಿಯ ನೀರಿನಲ್ಲಿ ಸ್ನಾನವನ್ನು ಮಾಡಿ ಬನ್ನಿಯ ಮರದ ಬುಡದಲ್ಲಿರುವ ನಾಗ ದೇವತೆಗಳೇ ಮೊದಲಾದವರೆಲ್ಲರಿಗೂ ನಮಸ್ಕರಿಸಿದನು. ಅನಂತರದಲ್ಲಿ ಪರಿಜನರಿಂದ ಪಾಕಾದಿಗಳನ್ನು ಮಾಡಿಸಿ ಆ ಹುಡುಗಿಯೂ ತಾನೂ ಭೋಜನವನ್ನು ನೆರವೇರಿಸಿದರು. ಅವನು ತನ್ನ ಪರಿಜನರೊಡನೆ ಅಲ್ಲಿ ವಾಯು ಸೇವನೆಯನ್ನು ಮಾಡುತ್ತಾ ವಿಶ್ರಾಂತಿಯನ್ನು ಹೊಂದುತ್ತಿದ್ದನು. ಅವನು ಹಾಗೆಯೇ ಇರುತ್ತಾ ದೈವಗತಿಗನುಸಾರವಾಗಿ

ಶಿರೋ ನಿಧಾಯ ದೇಹಲ್ಯಾಂ ಶಿಶ್ಯೇ ವೈಶ್ಯೈರ್ವಿಧೇರ್ವಶಾತ್ ।
ಶಿಶ್ಯೇ ಸಾ ವೈಶ್ಯಕನ್ಯಾತು ಮಂಟಪೇ ಸ್ವಜನೈಸ್ಸಹ ॥ ೩೪ ॥

ನಿಶೀಥೇ ಸರ್ಪದಷ್ಟಸ್ಸ ಮೃತ್ಯುಮಾಪ ಸ ವೈಶ್ಯಪಃ ।
ತದವಸ್ಥಾಂ ಗತಂ ದೃಷ್ಟ್ವಾ ಮನೋಹರವಪುರ್ಧರಂ ॥ ೩೫ ॥

ಹಾ ಹೇತಿ ರೋದನಂ ಚಕ್ರುಃ ಕನ್ಯಾಪರಿಜನಾ ಭೃಶಂ ।
ವಕ್ತ್ರೇಷು ವಕ್ಷಸ್ಸ್ವತಾಡ್ಯ ಶೋಕಾವೇಶವಶೇನ ತು ॥ ೩೬ ॥

ಮುಷ್ಟಿಭ್ಯಾಂ ಮೂರ್ಧ್ನಿ ಲುಂಠಂತೀ ತಾಡನಂ ಕೇಶಲುಂಠನೈಃ ।
ವ್ಯರುದದ್ದೂರಗಾ ಭೂತ್ವಾ ಶೋಕಾತಾರ್ ಸಾ ಚ ಕನ್ಯಕಾ ॥ ೩೭ ॥

ಪ್ರಾಣಭಿಕ್ಷಾಂ ಮೇ ದದಧ್ವಂ ಪತ್ಯುರ್ವಿಷಹರಾ ನರಾಃ ।
ಪಿತೃಮಾತೃವಿಹೀನಾಯಾ ಅಹೀನಾಯಾಃ ಕುಲಾದಿಭಿಃ ॥ ೩೮ ॥

---

ಹೊಸಲಿನ ಮೇಲುಗಡೆಯಲ್ಲಿ ತಲೆಯನ್ನಿರಿಸಿ ಕೊಂಡು ಮಲಗಿಕೊಂಡನು. ಆ ವೈಶ್ಯ ಕನ್ಯೆಯು ದೇವಾಲಯದ ಆ ಮಂಟಪದಲ್ಲಿ ತನ್ನ ಪರಿಜನರೊಡನೆ ಮಲಗಿಕೊಂಡಳು.

೩೫-೪೧. ಅರ್ಧರಾತ್ರಿಯ ಹೊತ್ತಿನಲ್ಲಿ ಒಂದು ಸರ್ಪವು ಬಂದು ಆ ವೈಶ್ಯನನ್ನು ಕಚ್ಚಿತು ಆಗರಿಂದ ಅವನು ಮೃತನಾದನು. ಕನ್ಯೆಯು ಬಂಧುಗಳು ಆ ಅವಸ್ಥೆಯನ್ನು ಹೊಂದಿರುವ ಅವನನ್ನು ನೋಡಿ ಬಹಳ ಮಟ್ಟಿಗೆ ವ್ಯಸನ ಪಟ್ಟರು. ಆಗ ಆ ಹುಡುಗಿಯು ದುಃಖ ವೇಗದಿಂದ ಆಚರಿಸಬೇಕಾದ ಕಾರ್ಯಗಳೆಲ್ಲವನ್ನೂ ಮಾಡುತ್ತಾ, ದೂರದಲ್ಲಿಯೇ ನಿಂತುಕೊಂಡು ಘಟ್ಟಿಯಾಗಿ ಅಳುತ್ತಿದ್ದಳು. “ನಾನು ಸತ್ಕುಲ ಪ್ರಸೂತಳು. ನನಗೆ ತಂದೆಯೂ ತಾಯಿಯೂ ಇಲ್ಲವು. ಪತಿಯೆಂದು ನಂಬಿಕೊಂಡಿದ್ದ ಇವನು ಮೃತನಾಗಿರುವನು. ಆದ್ದರಿಂದ ದಿಕ್ಕಿಲ್ಲದ ನನಗೆ ಪ್ರಾಣ ಭಿಕ್ಷೆಯನ್ನೂ ಮಾಂಗಲ್ಯ ಭಿಕ್ಷೆಯನ್ನೂ, ಪುಣ್ಯವಂತರು

ಮಾಂಗಲ್ಯಭಿಕ್ಷಾಂ ಕೃಪಯಾ ದದಧ್ವಂ ಮೇ ಮಹತ್ತಮಾಃ ।
ಇತಿ ವೀಥ್ಯಾಂ ರುರೋದೇಯಂ ಕನ್ಯಾ ಶ್ರೋತ್ರಸುದುಃಖದಾ ॥ ೩೯ ॥

ಅಥ ತಸ್ಯಾಂ ನಿಶಾಯಾಂ ಚ ತಥೈವಾಗತ್ಯ ತತ್ಸ್ಥಲೇ ।
ಸರ್ವಜ್ಞೋ ಜ್ಞಾನಪೂರ್ಣಾಖ್ಯ ಶ್ರೀವರ್ಮಾ ಬ್ರಹ್ಮಪುರೀಂ ಪ್ರತಿ ॥ ೪೦ ॥

ಗಂತುಕಾಮಸ್ಸಭಗವಾಂ ಸ್ತತ್ರ ಸೀಸಪುರ್ಯೇವಸತ್ ।
ಸ ತು ಶುಶ್ರಾವಾರ್ಧರಾತ್ರೌ ಕ್ರೋಶನಂ ರೋದನಂ ಭೃಶಂ ॥ ೪೧ ॥

ಕರ್ಣಶಲ್ಯ ಇವಾಕ್ರೋಶೋ ದುಃಖಕೃಚ್ಛೃಣ್ವತಾಮಪಿ ।
ಶಂಭುಭಕ್ತಾತುಲೋ ಬಾಲಃ ಪಾರ್ವತೀಸ್ತನ್ಯಪಾನತಃ ॥ ೪೨ ॥

ಸರ್ವಜ್ಞ ಶ್ಚರಜನ್ಮೇವ ಜ್ಞಾನಪೂರ್ಣೋ ಮಹತ್ತರಃ ।
ವೈಶ್ಯಕನ್ಯಾ ವೈಶ್ಯಪುತ್ರಭಾಗಧೇಯಪ್ರಚೋದಿತಃ ॥ ೪೩ ॥

---

ಯಾರಾದರೂ ದಯಪಾಲಿಸಿ." ಎಂದು ಅವಳು ಬೀದಿಯಲ್ಲಿ ಅಳುತ್ತಿರುವ ಧ್ವನಿಯನ್ನು ಜ್ಞಾನಪೂರ್ಣ ಯೋಗಿಯು ಕೇಳಿದನು. ಅವನು ಅದೇ ರಾತ್ರಿಯೇ ದೈವಗತಿಯಿಂದ ಬ್ರಹ್ಮಪುರಕ್ಕೆ ಹೋಗುವವನಾಗಿ ಆ ಸೀಸ ಪುರದಲ್ಲಿ ಇಳಿದುಕೊಂಡಿದ್ದನು. ಅವಳು ಅಳುವ ಧ್ವನಿಯು, ಕೇಳುವವರಿಗೆ ಬಹಳ ಸಂಕಟವನ್ನು ಉಂಟು ಮಾಡುವುದಾಗಿ ಇತ್ತು.

೪೨–೫೮. ಶಿವ ಭಕ್ತರಲ್ಲಿ ಮೊದಲನೆಯವನಾದ, ಪಾರ್ವತೀ ಸ್ತನ್ಯವನ್ನು ಪಾನಮಾಡಿ ಸರ್ವಜ್ಞನಾದ ಜ್ಞಾನಪೂರ್ಣಯೋಗಿಯು ಅವರಿಬ್ಬರ ಅದೃಷ್ಟದಿಂದ ಹಾಲಾಸ್ಯ ಕ್ಷೇತ್ರವೇ ಮೊದಲಾದ ಕ್ಷೇತ್ರದಲ್ಲಿ ತೀರ್ಥಯಾತ್ರೆ ಮಾಡಿದವನಾಗಿ ಸೀಸ ಪುರೇಶ್ವರನನ್ನು ದರ್ಶನ ಮಾಡಲು ಬಂದಿದ್ದನು. ಅವನು ಆ ಆರ್ತನಾದವನ್ನು ಕೇಳಿ ಆಶ್ಚರ್ಯದಿಂದ ಒಬ್ಬ ಶಿಷ್ಯನನ್ನು ಕಳುಹಿಸಿ, ಅಲ್ಲಿಯ ವರ್ತಮಾನವೆಲ್ಲವನ್ನೂ ತಿಳಿದು ಕೊಂಡನು. ಅವನಿಗೂ ಆಗ ದಯೆಯು ಉಂಟಾಯಿತು. ದುಃಖವುಳ್ಳವಳಾಗಿ ಕಷ್ಟಕ್ಕೆ ಸಿಕ್ಕಿರುವ ಆ ಹುಡುಗಿಗೆ ಅನುಗ್ರಹವನ್ನು ಮಾಡುವುದಕ್ಕೆ ಅವನಿಗೆ ಮನಸ್ಸು

ಶ್ರೀಹಾಲಾಸ್ಯಮುಖಾದೀನಿ ಶಿವಕ್ಷೇತ್ರಾಣಿ ಸೇವ್ಯ ಚ ।
ತತ್ರಾಗತಃ ಶಿವಂ ದ್ರಷ್ಟುಂ ಯತ್ರ ಸೀಸಪುರೇಶ್ವರಃ ॥ ೪೪ ॥

ಆರ್ತಸ್ವರಂ ರೋದನಂ ಚ ತಸ್ಯಾಃ ಶ್ರುತ್ವಾ ಸುವಿಸ್ಮಿತಃ ।
ಕಿಮೇತದಿತಿ ವಿಜ್ಞಾತುಂ ಕಂಚಿಚ್ಛಿಷ್ಯ ಮಚೋದಯತ್ ॥ ೪೫ ॥

ಸೋಽಪಿ ವಿಜ್ಞಾಪಯಾಮಾಸ ಜ್ಞಾತ್ವಾ ರೋದನಕಾರಣಂ ।
ಕಾರುಣ್ಯಪೂರ್ಣಹೃದಯೋ ಜ್ಞಾನಪೂರ್ಣೋ ಹ್ಯನುಗ್ರಹಂ ॥ ೪೬ ॥

ಶೋಕಾರ್ತಾಯಾಂ ಚ ಕನ್ಯಾಯಾಂ ಕರ್ತುಮುದ್ಯೋಗವಾನಭೂತ್ ।
ಅವಿಲಂಬಿತಮಭ್ಯೇತ್ಯ ಸ ಮೃತಂ ವೈಶ್ಯಪುಂಗವಂ ॥ ೪೭ ॥

ದೃಷ್ಟ್ವಾ ಚ ವಿಗತಪ್ರಾಣಂ ಕನ್ಯಕಾಯಾಭಯಂ ದದನ್ ।
ಸುಧಾರ್ದ್ರವಪುಷಂ ಸಾಂಬಂ ಶಂಭುಂ ಧ್ಯಾತ್ವಾ ಹೃದಂಬುಜೇ ॥ ೪೮ ॥

ಭಸ್ಮಾದಾಯ ಸ್ವಹಸ್ತೇನ ಮೃತ್ಯುಂಜಯಮನುಂ ಜಪನ್ ।
ಪಂಚಾಕ್ಷರಂ ಜಪಂ ಚಾಪಿ ನೀಲಕಂಠಂ ಮನುಂ ಸ್ಮರನ್ ॥ ೪೯ ॥

---

ಒಸ್ಮಿತು ಅವನು ಆಗ ಬೇಗನೆ ವೈಶ್ಯ ಕುಮಾರನ ಸಮೀಪಕ್ಕೆ ಬಂದನು. ಅವನ ಸ್ಥಿತಿಯನ್ನು ನೋಡಿದನು. ಕೂಡಲೇ ಆ ಹುಡುಗಿಗೆ ಹೆದರ ಬೇಡವೆಂದು ಅಭಯ ಪ್ರದಾನವನ್ನು ಮಾಡಿದನು. ಕೂಡಲೇ ಅವನು ಅಮೃತಮಯ ಶರೀರದಿಂದ ಜಗನ್ಮಾತೆಯೊಡಗೂಡಿ ಇರುವ ಪರಮೇಶ್ವರನನ್ನು ತನ್ನ ಹೃದಯದಲ್ಲಿ ಧ್ಯಾನ ಮಾಡಿದನು.

೪೯-೫೨. ಅವನು ಹಾಗೆಯೇ ಧ್ಯಾನ ಮಾಡುತ್ತಾ ಭಸ್ಮವನ್ನು ತೆಗೆದು ಕೊಂಡು ಮೃತ್ಯುಂಜಯ ಮಂತ್ರವನ್ನು ಜಪಿಸಿದನು. ಶಿವ ಪಂಚಾಕ್ಷರಿ ಮಂತ್ರ ವನ್ನು ಹೇಳುತ್ತಾ ನೀಲಕಂಠನಾದ ಶಿವನನ್ನು ಧ್ಯಾನಿಸಿ ಮೃತನಾದವನ ಶರೀರದಲ್ಲಿಯೂ, ಮುಖದಲ್ಲಿಯೂ, ಆ ಭಸ್ಮವನ್ನು ಹಾಕಿದನು. ಅಮೃತ

ಮಂತ್ರಿತಂ ಭಸ್ಮ ಚಿಕ್ಷೇಪ ಗತಪ್ರಾಣಮುಖೇಂಗಕೇ ।
ವ್ಯಲೋಕಯತ್ ಸುಧಾದೃಷ್ಟ್ಯಾ ಸ್ವಯಂ ಗುಹಮಯಸ್ತದಾ ॥ ೫೦ ॥

ವೈಶ್ಯೋಽಪಿ ಲಬ್ಧಪ್ರಾಣಸ್ಸ ಮಂತ್ರಶಕ್ತ್ಯಾ ತ್ವನೋಘಯಾ ।
ಯಥಾ ನಿದ್ರಾವಸಾನೇ ಚ ತಥೋತ್ತಸ್ಥೌ ಮುದಂ ವಹನ್ ॥ ೫೧ ॥

ಪ್ರಾಣಪ್ರದಂ ಪ್ರಶಂಸಂತೋ ಜನಾಃ ಸರ್ವೇ ಚ ಕನ್ಯಯಾ ।
ಪ್ರಣೇಮು ರ್ದಂಡವತ್ಪಾದಪಂಕಜದ್ವಯ ಮಾದರಾತ್ ॥ ೫೨ ॥

ಕನ್ಯಾ ಪರಿಜನಾ ಸ್ಸರ್ವೇ ಹರ್ಷೇಣ ಮಹತಾ ಯುತಾಃ ।
ಪುನಃ ಸಂಜಾತಜೀವಸ್ಯ ಚಕ್ರುರಾಲಿಂಗನಂ ವಿಶಃ ॥ ೫೩ ॥

ಊರುಜಾ ಸ್ವಾಭಿಜಾತಾ ತು ನಾಸ್ಪೃಶತ್ತ ವಿಧಾನತಃ ।
ದೃಷ್ಟ್ವಾ ತದ್ವಂಶಜಾಚಾರಂ ಜನಾಃ ಪ್ರಾಪುರ್ಮಹಾದ್ಭುತಂ ॥ ೫೪ ॥

---

ಮಯವಾದ ದೃಷ್ಟಿಯಿಂದ ಅವನನ್ನು ನೋಡಿದನು. ಈ ಜ್ಞಾನಪೂರ್ಣ ಯೋಗಿಯ ಕೆಲಸದಿಂದ ಆ ವೈಶ್ಯನಿಗೆ ಪ್ರಾಣವು ಬಂದಿತು ಪವಿತ್ರವಾದ ಮಂತ್ರಶಕ್ತಿಯಿಂದ ಪ್ರಾಣವನ್ನು ಹೊಂದಿದ ವೈಶ್ಯನು, ನಿದ್ದೆ ಮಾಡುವವನು ಎಚ್ಚರವಾಗಿ ಏಳುವಂತೆ ಸಂತೋಷದಿಂದಲೇ ಮೇಲಕ್ಕೆ ಎದ್ದನು. ಅಲ್ಲಿರುವ ಜನರೆಲ್ಲರೂ ಆ ಹುಡುಗಿಯೊಡನೆ ಪ್ರಾಣದಾನ ಮಾಡಿದ ಆ ಜ್ಞಾನಪೂರ್ಣಯೋಗಿಯ ಪಾದಕಮಲವನ್ನು ದಂಡಾಕಾರವಾಗಿ ನಮಸ್ಕರಿಸಿ ಆದರದಿಂದ ಅವನನ್ನು ಶ್ಲಾಘಿಸಿದರು. ಅವನು ತಾನು ಷಣ್ಮುಖನೆಂಬ ಭಾವನೆಯಿಂದ ಇದ್ದನು.

೫೩–೫೬. ಕನ್ನೆಯ ಪರಿಜನರು ಎಲ್ಲರೂ ಬದುಕಿದ ಆ ವೈಶ್ಯನನ್ನು ನೋಡಿ ಸಂತೋಷದಿಂದ ಆಲಿಂಗನೆಯನ್ನು ಮಾಡಿಕೊಂಡರು. ಸತ್ಕುಲ ಪ್ರಸೂತಳಾದ ಆ ವೈಶ್ಯ ಕನ್ಯೆಯು ಅವನನ್ನು ಮುಟ್ಟದೇ ಇದ್ದಳು. ಆ ಹುಡುಗಿಯ ಕುಲಾಚಾರವನ್ನು ನೋಡಿ ಬಹಳ ಆಶ್ಚರ್ಯ ಪಟ್ಟರು. ಬಹಳ ದಯೆಯಿಂದಲೂ, ಜ್ಞಾನದಿಂದಲೂ ಕೂಡಿರುವ ಆ ಜ್ಞಾನಪೂರ್ಣಯೋಗಿಯು ಆಗತಾನೆ ಬದುಕಿಕೊಂಡ

ಜ್ಞಾನೇನ ದಯಯಾ ಪೂರ್ಣೋ ಮಹಾವೈದಿಕವಾರಣಃ ।
ವೈಶ್ಯವರ್ಯಮಿತಿ ಪ್ರಾಹ ಸಂಜಾತಪ್ರಾಣಮಾತ್ಮನಾ ॥ ೫೫ ॥

ವೈಶ್ಯವಂಶಧ್ವಜಪಟ ವತ್ಸ ಮದ್ವಚನಂ ಶೃಣು ।
ಭಾಗ್ಯವದ್ಭಾಗಿನೇಯಸ್ತ್ವಂ ಭವಾನ್ಭಾಗ್ಯವತಾಂ ವರಃ ॥ ೫೬ ॥

ಶೋಭನೇ ವಾಶೋಭನೇ ವಾ ಸಂಪ್ರಾಪ್ತೇ ಸತಿ ಕರ್ಮಣಿ ।
ಸ್ಪ್ರಷ್ಟುಂ ಭವಾನ್ಯೋಗ್ಯ ಏವ ಧ್ರುವಂ ಮಾತುಲಕನ್ಯಯಾ ॥ ೫೭ ॥

ತಸ್ಮಾದತ್ರೈವ ತತ್ಪಾಣಿಂ ಗೃಹಾಣ ತ್ವಂ ವಿಧಾನತಃ ।
ವಚನಂ ಮಮ ವಿಶ್ವಸ್ಯ ಕಾರ್ಯಮೇವ ಗುರೋರ್ವಚಃ ॥ ೫೮ ॥

ಇತಿ ತದ್ಗಿರಮಾಕರ್ಣ್ಯ ಗುಣಿನಾಂ ಧನಿನಾಂ ವರಃ ।
ಪ್ರತ್ಯುತ್ತರ ಮುವಾಚೇದಮೇವಂ ವೈದಿಕವಾರಣಂ ॥ ೫೯ ॥

ನ ಸಂತಿ ಬಾಂಧವಾ ಹ್ಯತ್ರ ಪಾಣಿಗ್ರಹಣಕರ್ಮಣಿ ।
ಸಾಕ್ಷಿಣೋಽಪಿ ನ ಹಿ ಸ್ವಾಮಿನ್ ಕರ್ತವ್ಯಂ ಕರ್ಮ ತತ್ಕಥಂ ॥ ೬೦ ॥

---

ವೈಶ್ಯನ ಸಂಗಡ "ಎಲೈ ವೈಶ್ಯ ವಂಶಕ್ಕೆ ಧ್ವಜದಂತಿರುವ ಬಾಲಕನೇ ಕೇಳು. ನೀನು ಪುಣ್ಯವಂತರಲ್ಲಿ ಉತ್ತಮನಾಗಿರುತ್ತೀಯೆ. ಮತ್ತು ಅದೃಷ್ಟಶಾಲಿಯಾದ ವೈಶ್ಯನ ಸೋದರಳಿಯನಾಗಿರುತ್ತೀಯೆ.

೫೭–೬೦. ಶುಭಾಶುಭ ಕರ್ಮಗಳು ನಡೆಯುವ ಕಾಲಗಳಲ್ಲಿ ನಿನ್ನನ್ನು ನಿನ್ನ ಸೋದರಮಾವನ ಮಗಳು ಸ್ಪರ್ಶ ಮಾಡಬಹುದು. ಆದ್ದರಿಂದ ನೀನು ಇಲ್ಲಿಯೇ ಅವಳನ್ನು ವಿವಾಹ ಮಾಡಿಕೊಂಡು ಇರು ಶಾಸ್ತ್ರಕ್ರಮದಿಂದ ನೀನು ನನ್ನ ಮಾತಿನ ನಂಬಿಕೆಯಂತೆ ವಿವಾಹವನ್ನು ಮಾಡಿಕೋ. ಗುರುವಾದ ನನ್ನ ಮಾತನ್ನು ನೀನು ನಡೆಸಬೇಕಾದದ್ದು." ಎಂದು ಹೇಳಿದನು. ಗುಣವಂತರೂ, ಮತ್ತು ಧನವಂತರೂ, ಇಬ್ಬರಿಗೂ, ಶ್ರೇಷ್ಠನಾದ ವೈಶ್ಯನು ಹೀಗೆ ಹೇಳಿದ ಆ ಗುರುವಿನ ಮಾತನ್ನು ಕೇಳಿ "ಇಲ್ಲಿ ನನ್ನ ಬಂಧುಗಳು ಯಾರೂ ಇಲ್ಲ. ವಿವಾಹವನ್ನು ಮಾಡಿಕೊಳ್ಳುವಾಗ ಸಾಕ್ಷಿಗಳು ಇರಬೇಕು. ಸಾಕ್ಷಿಗಳು ಇಲ್ಲದಿರುವ ಕಾರ್ಯವನ್ನು ಹೇಗೆ ಆಚರಿಸುವುದು" ಎಂದು ಜ್ಞಾನಪೂರ್ಣ ಯೋಗಿಗೆ ಉತ್ತರವನ್ನು ಹೇಳಿದನು.

ಇತಿ ತಸ್ಯ ವಚಃ ಶ್ರುತ್ವಾ ಕೃತೀ ವೈದಿಕದೇಶಿಕಃ ।
ಯುಕ್ತ್ಯಯುಕ್ತೇನ ವಚಸಾ ಬೋಧಯಾಮಾಸ ತಂ ಪುನಃ ॥ ೬೧ ॥

ಜಾತಮಾತ್ರಾ ಚ ಸಾ ಕನ್ಯಾ ಮನಸಾ ಚ ಗಿರಾ ಪುರಾ ।
ಪಿತೃಭ್ಯಾಂ ಚ ಪ್ರದತ್ತೇತಿ ಸರ್ವೇ ಜಾನಂತಿ ಬಾಂಧವಾಃ ॥ ೬೨ ॥

ಅತ್ರ ಶತಂಭುಶಮೀವೃಕ್ಷಕೂಪಾ ಸ್ತಿಷ್ಠಂತಿ ಸಾಕ್ಷಿಣಃ ।
ಸರ್ವಸಾಕ್ಷೀ ಸುಂದರೇಶಸ್ಸರ್ವಜ್ಞಃ ಪರಿಪೂರ್ಣಕಃ ॥ ೬೩ ॥

ಅಸ್ತಿ ಚೇದತ್ರ ಸಾಕ್ಷೀ ತು ತವ ವೈವಾಹಕರ್ಮಣಿ ।
ಮಧುರಾಯಾಂ ಸಮಾಯಾಂತಿ ಜ್ಞಾಪನಾಯ ಚ ಸಾಕ್ಷಿಣಃ ॥ ೬೪ ॥

ಪಾತಿವ್ರತ್ಯಪ್ರಭಾವೇನ ಪ್ರೀತಾಸ್ಸರ್ವವಿಶಾಂ ವರ ।
ತ್ವಯಾ ನೋಲ್ಲಂಘನೀಯಾದ್ಯ ಮಮಾಜ್ಞಾ ತ್ವದ್ಧಿತೈಷಿಣಃ ॥ ೬೫ ॥

---

೬೧–೬೫. ಆಗ ಜ್ಞಾನಪೂರ್ಣ ಯೋಗಿಯು ಅವನ ಮಾತನ್ನು ಕೇಳಿ ಯುಕ್ತಿ ಯುಕ್ತವಾದ ಮಾತುಗಳಿಂದ ಅವನಿಗೆ ಬೋಧಿಸಿದನು. "ಈ ಹುಡುಗಿಯನ್ನು ಹುಟ್ಟಿದ ಕ್ಷಣದಿಂದಲೂ, ಮನಸ್ಸಿನಿಂದಲೂ, ಅವಳ ತಂದೆಯು ನಿನಗೆ ಕೊಟ್ಟಿರುವ ನೆಂದು ಬಂಧುಗಳೆಲ್ಲರೂ ಹೇಳುತ್ತಿರುವರು. ಇದನ್ನು ಕನ್ಯೆಯ ಬಂಧುಗಳೆಲ್ಲರೂ ತಿಳಿದಿರುವರು. ಮತ್ತು ಇವಳನ್ನು ವಿವಾಹ ಮಾಡಿಕೊಳ್ಳುವ ವಿಷಯದಲ್ಲಿ ಶಿವನೂ, ಬನ್ನಿಯ ಮರವೂ, ಭಾವಿಯೂ, ಸಾಕ್ಷಿಯಾಗಿರುವರು. ಎಲ್ಲರಿಗೂ ಎಲ್ಲಾ ಕೆಲಸ ಗಳಿಗೂ ಸುಂದರೇಶ್ವರನು ಸಾಕ್ಷಿಯಾಗಿರುವನು. ಅವನು ಪರಿಪೂರ್ಣನಾಗಿರುವನು. ಸರ್ವಜ್ಞನಾಗಿರುವನು. ನಿನ್ನ ವಿವಾಹದಲ್ಲಿ ಇವರು ಸಾಕ್ಷಿಗಳಾಗಿರುವುದಾದರೆ ಮಧುರಾ ನಗರಕ್ಕೂ ಬಂದು ಸಾಕ್ಷ್ಯವನ್ನು ಹೇಳುವರು. ಇವರುಗಳು ಈ ಕನ್ಯೆಯ ಪಾತಿವ್ರತ್ಯದ ಮಹಿಮೆಯಿಂದ ಸಂತೋಷವುಳ್ಳವರಾಗಿ ಸಾಕ್ಷಿಗಳಾಗಿ ಬರುವರು. ಈಗ ನೀನು ನಿನಗೆ ಹಿತವನ್ನು ಹೇಳುವ ನನ್ನ ಮಾತನ್ನು ಮೀರಬಾರದು.

ದೇಶೋಽಪಿ ಶಂಭೋಸ್ಸಾನ್ನಿಧ್ಯಾದ್ವಿಶೇಷತರ ಈರಿತಃ ।
ಕಾಲೋಽಪಿ ಲಗ್ನಪ್ರಾಬಲ್ಯಾತ್ ಸುತರಾಮುತ್ತಮೋತ್ತಮಃ ॥ ೬೬ ॥

ಸುದೇಶೇ ಚ ಸುಕಾಲೇ ಚ ಶುಭಕರ್ಮ ಕರೋತಿ ಯಃ
ಆಯುರಾರೋಗ್ಯಸಂಪದ್ಭಿಸ್ಸಾರ್ಧಂ ಸುಚಿರಮೇಧತೇ ॥ ೬೭ ॥

ತಸ್ಮಾತ್ಕುರುಷ್ವ ಸಹಸಾ ತತ್ಪಾಣಿಗ್ರಹಣಂ ಮುದಾ ।
ತವಾಪಿ ಸರ್ವಮೈಶ್ವರ್ಯಂ ಭವಿಷ್ಯತಿ ನ ಸಂಶಯಃ ॥ ೬೮ ॥

ಇತಿ ಲಬ್ಧ್ವಾ ಸ ತಸ್ಯಾಜ್ಞಾಂ ತಸ್ಯ ಸೀಸಪುರೇಶಿತುಃ ।
ಸನ್ನಿಧಾವಕರೋತ್ ಸದ್ಯಸ್ತತ್ಕನ್ಯಾಪಾಣಿಪೀಡನಂ ॥ ೬೯ ॥

ವೇದೋಕ್ತೇನ ಪ್ರಕಾರೇಣ ವಿಧಿನಾಽಖಿಲಸಜ್ಜನೈಃ ।
ವೈದಿಕಪ್ರವರೋ ವೈಶ್ಯಂ ಸ್ವಾಜ್ಞಾಕಾರಿಣಮಾಸ್ತಿಕಂ ॥ ೭೦ ॥

---

೬೬-೬೭. ಈ ಪ್ರದೇಶವು ಶಿವನ ಸಾನ್ನಿಧ್ಯದಿಂದ ಹೆಚ್ಚು ಮಹಿಮೆಯುಳ್ಳದ್ದಾಗಿರುವುದು. ಕಾಲವೂ ಕೂಡ ಸರಿಯಾದ ಲಗ್ನವು ಬಂದಿರುವುದರಿಂದ ಬಹಳ ಉತ್ತಮವಾಗಿರುವುದು. ಸರಿಯಾದ ಪ್ರದೇಶದಲ್ಲಿ ಉತ್ತಮವಾದ ಕಾಲದಲ್ಲಿ ಮಾಡಿದ ಶುಭಕಾರ್ಯವು ಆಯುರಾರೋಗ್ಯ ಐಶ್ವರ್ಯಾದಿಗಳ ಅಭಿವೃದ್ಧಿಯನ್ನು ಉಂಟು ಮಾಡುವುದು. ಆದ್ದರಿಂದ ಈಗ ನೀನು ಈ ಕನ್ಯೆಯ ವಿವಾಹವನ್ನು ನೆರವೇರಿಸು.

೬೮-೭೦ ಇದರಿಂದ ನಿನಗೆ ಐಶ್ವರ್ಯವೂ ವೃದ್ಧಿಯಾಗುವುದು. ಇದರಲ್ಲಿ ಸಂಶಯವು ಇಲ್ಲವು." ಎಂದು ಹೇಳಿದ ಜ್ಞಾನಪೂರ್ಣ ಯೋಗಿಯ, ಅನುಜ್ಞೆಯನ್ನು ಹೊಂದಿ ಸೀಸಪುರೇಶ್ವರನ ಸನ್ನಿಧಿಯಲ್ಲಿ ಆ ವೈಶ್ಯನು ಆ ಕನ್ಯೆಯನ್ನು ವಿವಾಹಮಾಡಿಕೊಂಡನು. ವೇದೋಕ್ತ ಪ್ರಕಾರದಿಂದ ಸತ್ಪುರುಷರಿಂದ ಕೂಡಿದವನಾದ ಆ ವೈಶ್ಯನು ತನ್ನ ಮಾತನ್ನು ನಡಸಿದ ಕಾರಣ ಜ್ಞಾನಪೂರ್ಣ ಯೋಗಿಗೆ ಸಂತೋಷವಾಯಿತು. ಆಗ ಅವನು ತಾನೇ ವಿವಾಹಸಂಬಂಧವಾದ ಕರ್ಮಗಳೆಲ್ಲವನ್ನೂ ಮಾಡಿಸಿ,

ಸ್ವಾಂ ಪುರೀಂ ಪ್ರೇಷಯಾಮಾಸ ಸ್ವಯಮೇವ ಸಮಾಪ್ಯ ಚ ।
ವೈವಾಹಿಕಂ ಕರ್ಮ ಸರ್ವ ಮಾಶೀರ್ಭಿರಭಿನಂದ್ಯ ತಂ ॥ ೭೧ ॥

ಸೋಽಪಿ ವೈಶ್ಯವರ ಶ್ರೀಮಾನ್ಕಾಂತಯಾ ಕಮನೀಯಯಾ ।
ಪ್ರಣಿಪತ್ಯ ಪ್ರತಸ್ಥೇ ಚ ತಂ ಗುರುಂ ವಯಸಾ ಗುರುಂ ॥ ೭೨ ॥

ದಾಸೀದಾಸಗಣೈಸ್ಸಾರ್ಧಂ ಸ್ವರ್ಣರತ್ನಾದಿಭಿರ್ಧನೈಃ ।
ಮಂದಂಮಂದಂ ಪಥಿ ಸ್ಥಿತ್ವಾ ಸಂಪ್ರಾಪ ಮಧುರಾಪುರೀಂ ॥ ೭೩ ॥

ತತ್ರ ಸ್ಥಿತಜನಾನಾಂ ಸ ಸ್ವಸ್ಯ ವೈವಾಹಿಕಕ್ರಿಯಾಂ ।
ಆಹ ಬಂಧುಜನೇಭ್ಯ ಸ್ಸ ತೇಽಪಿ ತುಷ್ಟಾಃ ಪ್ರತುಷ್ಟುವುಃ ॥ ೭೪ ॥

ತತ್ರ ಬಂಧುಜನೈಸ್ಸಾರ್ಧಂ ಪೂಜಿತಃ ಪ್ರೀತಿಸಂಯುತಃ ।
ಪ್ರಿಯಯಾ ಗುಣವತ್ಯಾ ಚ ರರಾಜಾತುಲಯಾ ಶ್ರಿಯಾ ॥ ೭೭ ॥

---

ಆಶೀರ್ವಾದವನ್ನು ಮಾಡಿ, ಅವರಿಬ್ಬರನ್ನೂ ಜ್ಞಾನಪೂರ್ಣ ಯೋಗಿಯು ಮಧುರ ನಗರಕ್ಕೆ ಕಳುಹಿಸಿಕೊಟ್ಟನು. ಹುಡುಗನಾಗಿದ್ದಾಗ್ಯೂ ಗುರುವಾಗಿರುವ ಅವನಿಗೆ ನಮಸ್ಕಾರವನ್ನು ಮಾಡಿ ಸುಂದರಳಾದ ಆ ಪತ್ನಿಯೊಡನೆ ವೈಶ್ಯನು ತನ್ನ ಊರಿಗೆ ಪ್ರಯಾಣ ಮಾಡಿದನು. ಅವನು ಹೊರಡುವಾಗ ದಾಸಿಯರಿಂದಲೂ, ಪರಿವಾರದವರಿಂದಲೂ, ಧನಕನಕರತ್ನವೇ ಮೊದಲಾದುವುಗಳನ್ನು ತೆಗೆಸಿಕೊಂಡು ಮೆಲ್ಲಮೆಲ್ಲಗೆ ಪ್ರಯಾಣ ಮಾಡುತ್ತಾ ದಾರಿಯಲ್ಲಿ ಅಲ್ಲಲ್ಲಿ ವಿಶ್ರಾಂತಿಯನ್ನು ಹೊಂದುತ್ತಾ ಅವನ ಮಧುರಾ ನಗರವನ್ನು ತಲಪಿದನು.

೭೪–೭೭. ಮಧುರಾ ನಗರದಲ್ಲಿರುವ ಬಂಧು ಜನರಿಗೆ ತಾನು ವಿವಾಹ ಮಾಡಿಕೊಂಡ ವಿಷಯವನ್ನು ಹೇಳಿದನು. ಅವರು ಅದನ್ನು ಕೇಳಿ ಸಂತೋಷಪಟ್ಟರು. ಮತ್ತು ಇವನನ್ನು ಶ್ಲಾಘನೆ ಮಾಡಿದರು. ಅವನು ನೆಂಟರೊಡನೆ ಕೂಡಿದವನಾಗಿ ಅವರಿಂದ ಮರ್ಯಾದೆಯನ್ನು ಹೊಂದುತ್ತಾ ಪ್ರೀತಿಯುಳ್ಳವನಾಗಿ ಗುಣವಂತೆಯಾದ ಹೆಂಡತಿ ಮತ್ತು ಹೋಲಿಕೆ ಇಲ್ಲದಿರುವ ಐಶ್ವರ್ಯ ಇವುಗಳಿಂದ

ಮಾತುಲಸ್ಯ ಧನೈಸ್ಸರ್ವೈಃ ಸ್ವಕೀಯೈಶ್ಚ ಧನೈರಪಿ ।
ವಾಣಿಜ್ಯವರ್ಧಿತೈರನ್ಯೈರ್ಧನದೇನ ಸಮೋऽಭವತ್ ॥ ೭೬ ॥

ಕಾಲೇನ ಲೇಭೇ ತನಯಂ ವಿನಯಾದಿಗುಣೈರ್ಯುತಂ ।
ವನಿತಾಯಾಂ ವರೇಣ್ಯಾಯಾಂ ಜನಿತಾಯಾಂ ಸ್ವಮಾತುಲಾತ್ ॥ ೭೭ ॥

ಪುರಾ ಯಾ ವನಿತಾ ತಸ್ಯ ವರ್ತತೇ ದುಗುಣೈರ್ಯುತಾ ।
ಸಾ ಸುತಾನ್ ಸದ್ಗುಣೈರ್ಹೀನಾನ್ ಸೂತೇ ದುಷ್ಟಶಿರೋಮಣೀನ್ ॥ ೭೮ ॥

ಪುತ್ರಾಸ್ತೇ ಜ್ಯಾಯಸೀಜಾತಾಃ ಕನೀಯಸ್ಯಾಸ್ಸುತೇನ ಚ ।
ಪಾಂಸುಕ್ರೀಡಾಂ ಚ ಕುರ್ವಾಣಾಃ ಕದಾಚಿನ್ಮಾತೃಲಾಲಿತಾಃ ॥ ೭೯ ॥

ಸಜ್ಜನಂ ತಂ ದುರ್ಜನಾಸ್ತೇ ಪ್ರಹೃತ್ಯಾ ಮರ್ಷತೋ ಭೃಶಂ ।
ಪ್ರಯಯುಃ ಪ್ರಜವೇನೈವ ಜನಯಿತ್ರೀಂ ನಿಜಾಂ ಪ್ರತಿ ॥ ೮೦ ॥

---

ಪ್ರಕಾಶಿಸುತ್ತಿದ್ದನು. ಸೋದರಮಾವನ ದ್ರವ್ಯ, ತನ್ನದ್ರವ್ಯ, ವ್ಯಾಪಾರದಿಂದ ಬಂದ ಲಾಭ, ಇನ್ನೂ ಇತರವಾದ ದ್ರವ್ಯಗಳಿಂದ ಅವನು ಕುಬೇರನಿಗೆ ಸಮನಾಗಿದ್ದನು. ಕೆಲವುಕಾಲ ಕಳೆದನಂತರ ಇವನಿಗೆ ವಿನಯವೇ ಮೊದಲಾದ ಗುಣಗಳುಳ್ಳ ಒಬ್ಬ ಮಗನು ಹುಟ್ಟಿದನು. ಈ ಮಗುವಿಗೆ ಹೊಸದಾಗಿ ಮದುವೆಯಾದ ಸೋದರ ಮಾವನ ಮಗಳೇ ತಾಯಿಯಾಗಿದ್ದಳು.

೭೭-೮೨. ಮೊದಲು ಮದುವೆಯಾಗಿದ್ದ ಹೆಂಡತಿಯೂ, ದುರ್ಗುಣ ಉಳ್ಳವಳಾದ ಕಾರಣ ಮಕ್ಕಳೂ ದುರ್ಗುಣಗಳುಳ್ಳವರಾಗಿದ್ದರು. ಹಿರಿಯ ಹೆಂಡತಿಯ ಮಕ್ಕಳು ಕಿರಿಯ ಹೆಂಡತಿಯ ಮಕ್ಕಳೊಡನೆ ಆಟವಾಡುತ್ತಿದ್ದರು. ಅವರವರ ಮಕ್ಕಳನ್ನು ಅವರ ತಾಯಿಯರು ಲಾಲನೆ ಮಾಡುತ್ತಿದ್ದರು. ದುಷ್ಟರಾದ ಆ ಹಿರಿಯ ಹೆಂಡತಿಯ ಮಕ್ಕಳು ಸಹಿಸುತ್ತಿರುವ ಕಿರಿಯ ಹೆಂಡತಿಯ ಮಕ್ಕಳನ್ನು ಹೊಡೆದು ತಮ್ಮ ತಾಯಿಯ ಹತ್ತಿರಕ್ಕೆ ಓಡಿ ಹೋದರು. ಚಿಕ್ಕ ಹೆಂಡತಿಯ ಮಕ್ಕಳು ತಮ್ಮ ತಾಯಿಯ ಹತ್ತಿರಕ್ಕೆ ಹೋಗಿ ತಮ್ಮ ಅಣ್ಣನು ಹೊಡೆದು ಇರುವುದರಿಂದ

ಕನೀಯಸೀಸುತಾಶ್ಚಾಪಿ ರುದನ್ಮಾತರಮಾಪ್ಯ ಚ ।
ಪ್ರಹಾರಮುಗ್ರಜಕೃತಂ ಹಾಹಾಕಾರಣಮಾತ್ಮನಃ ॥ ೮೧ ॥

ಸ್ಯಾಶಪತ್ತ್ವಾಂ ಪ್ರಹರ್ತಾರೋ ನಶ್ಯಂತ್ವಿತಿ ಗಿರಾ ರುಷಾ ।
ಜ್ಯಾಯಸೀ ತದ್ವಚಃ ಶ್ರುತ್ವಾ ಕ್ರುದ್ಧಾ ತಾಮಿತ್ಯಭರ್ತ್ಸಯತ್ ॥ ೮೦ ॥

ಕಾ ತ್ವಂ ತವ ತು ಕಾ ಜಾತಿಃ ಕಸ್ಯ ವಾ ಭವತೀ ಸುತಾ ।
ತ್ವಾಂ ತು ಕೋ ವಾತ್ರ ಜಾನಾತಿ ಭರ್ತ್ರಾ ಚ ಪ್ರಾರ್ಥಿತಾ ನ ಚ ॥ ೮೩ ॥

ವೇಶ್ಯಾವನ್ಮಮ ಭರ್ತಾರಂ ಪ್ರಾಪ್ತಾಸಿ ವಿಧಿನಾ ವಿನಾ ।
ಮದ್ಭರ್ತಾ ತಾವಕಂ ಪಾಣಿಂ ನಾಗ್ರಹೀದಗ್ನಿಸಾಕ್ಷಿಕಂ ॥ ೮೪ ॥

ತ್ವತ್ಪಾಣಿಗ್ರಹಣೇ ಕೋಽಪಿ ಸಾಕ್ಷೀ ಲೋಕೇ ನ ವಿದ್ಯತೇ ।
ಅಸ್ತಿ ಚೇದ್ವದ ವೇಶ್ಯಾವತ್ ಪ್ರಾರ್ಥಿತೋ ಮೇ ಪತಿಸ್ತ್ವಯಾ ॥ ೮೫ ॥

---

ನಮಗೆ ದುಃಖವು ವುಂಟಾಗುತ್ತಿದೆ. ಎಂದು ಹೇಳಿ ಅಳುತ್ತಿದ್ದರು. ಅವಳು ಅದನ್ನು ಕೇಳಿ ಕೋಪಗೊಂಡು ನನ್ನ ಮಕ್ಕಳನ್ನು ಹೊಡೆದವರು ಹಾಳಾಗಲಿ ಎಂದು ಬೈದಳು. ಆ ಮಾತು ಹಿರಿಯ ಹೆಂಡತಿಗೆ ಕೇಳಿಸಿತು. ಆಗ ಅವಳು ಕೋಪದಿಂದ ನಿಂದಿಸು ವುದಕ್ಕೆ ಪ್ರಾರಂಭಿಸಿದಳು,

೮೩–೮೭. "ನೀನು ಯಾರು? ನಿನ್ನ ಜಾತಿಯಾವುದು. ನೀನು ಯಾರ ಮಗಳು. ನಿನ್ನ ಗುರುತು ಇಲ್ಲಿ ಯಾರಿಗೆ ಇರುವುದು. ನನ್ನ ಗಂಡನು ನಿನ್ನನ್ನು ಪ್ರಾರ್ಥನೆ ಮಾಡಿ ಕರೆದುಕೊಂಡು ಬಂದಿಲ್ಲ. ನೀನಾಗಿಯೇ ಸೂಳೆಯ ಹಾಗೆ ಮದುವೆಯನ್ನೂ ಮಾಡಿಕೊಳ್ಳದೆ ನನ್ನ ಗಂಡನನ್ನು ಸೇರಿಕೊಂಡು ಇರುತ್ತೀಯೆ. ನನ್ನ ಗಂಡನು ನಿನ್ನನ್ನು ಅಗ್ನಿ ಸಾಕ್ಷಿಯಾಗಿ ಮದುವೆಯನ್ನು ಮಾಡಿಕೊಂಡಿಲ್ಲ. ನಿನಗೂ ನನ್ನ ಗಂಡನಿಗೂ ಮದುವೆಯಾದದ್ದಕ್ಕೆ ಈ ಲೋಕದಲ್ಲಿ ಸಾಕ್ಷಿಗಳು ಯಾರೂ ಇಲ್ಲ. ಸಾಕ್ಷಿಗಳು ಇದ್ದರೆ ಹೇಳು. ನೀನು ನನ್ನ ಗಂಡನನ್ನು ಸೂಳೆಯ

ತ್ವಂ ದಾಸೀ ಮದ್ಧನಂ ಸರ್ವಂ ಧನಂ ಚಾಪಿ ಗೃಹಂ ಮಮ ।
ಪ್ರಷ್ಟುಂ ಚ ಯೋಗ್ಯಾನ್ನೈವ ತ್ವಂ ಪುತ್ರಾಂ ಶಪಸಿ ಮೇ ವೃಥಾ ॥ ೮೬ ॥

ತ್ವಂ ಭರ್ತುರ್ಮಾತುಲಸುತಾ ಯದಿ ಭರ್ತಾ ಚ ತೇ ಕರಂ ।
ಗೃಹೀತಂ ಚಾಪಿ ವಿಧಿನಾ ಸಾಕ್ಷಿಣಂ ತ್ವಾನಯಾಶು ನಃ ॥ ೮೭ ॥

ಏವಮುಕ್ತಾ ಸಪತ್ನ್ಯಾ ಸಾ ಗಣಮುಖ್ಯಾ ಕನೀಯಸೀ ।
ಮಂದಂ ಮಂದಂ ಚ ತಾಮಾಹ ಲಜ್ಜಾವನತಕಂಧರಾ ॥ ೮೮ ॥

ಪ್ರಾಣಪ್ರದಾನದಕ್ಷಸ್ಯ ಜ್ಞಾನಪೂರ್ಣಸ್ಯ ಯೋಗಿನಃ ।
ಸನ್ನಿಧೌ ತೇನ ವಿಧಿವದ್ಗ್ರಾಹಿತೋ ಮತ್ಕರಗ್ರಹಃ ॥ ೮೯ ॥

ತತ್ರ ಸೀನಪುರೇ ರಮ್ಯೇ ಸಮಸ್ತದುರಿತಾಪಹೇ ।
ಅಸ್ತ್ಯಯಾಸ್ಸಾಕ್ಷಿಣಸ್ಸಂತಿಶ ಂಭುಕೂಪಶಮೀದ್ರುಮಾಃ ॥ ೯೦ ॥

---

ಹಾಗೆ ಬೇಡಿಕೊಂಡು ಬಂದಿದ್ದೀಯೆ. ನೀನು ಒಬ್ಬಳು ದಾಸಿಯು. ಧನವೆಲ್ಲವೂ ನನ್ನದು. ಈ ಮನೆಯೂ ಧನವೂ ಎಲ್ಲವೂ ನನ್ನದು. ಹೀಗಿರುವಾಗ ನನ್ನ ಮಕ್ಕಳನ್ನು ಕೇಳಲು ನಿನಗೆ ಯೋಗ್ಯತೆಯು ಇಲ್ಲ ನನ್ನ ಮಕ್ಕಳನ್ನು ಸುಮ್ಮನೆ ಬಯ್ಯಬೇಡ

೮೭-೯೧. ನೀನು ನನ್ನ ಗಂಡನ ಸೋದರ ಮಾವನ ಮಗಳಾಗಿದ್ದರೆ, ಅವನೂ ಶಾಸ್ತ್ರಕ್ರಮದಿಂದ ನಿನ್ನನ್ನು ಮದುವೆ ಮಾಡಿಕೊಂಡಿದ್ದರೆ, ಸಾಕ್ಷಿಗಳಾದವರನ್ನು ಹೇಳು. ಅವರನ್ನು ಕರೆದು ಅವರಿಂದ ಹೇಳಿಸು " ಎಂದು ನಿಂದಿಸಿದಳು. ಸವತಿಯ ಮಾತನ್ನು ಕೇಳಿದ ಚಿಕ್ಕ ಹೆಂಡತಿಯು ತಲೆಯನ್ನು ತಗ್ಗಿಸಿ ಕೊಂಡು "ಪ್ರಾಣದಾನ ಮಾಡಿದ ಜ್ಞಾನಪೂರ್ಣ ಯೋಗಿಯ ಸನ್ನಿಧಿಯಲ್ಲಿ ನನ್ನ ವಿವಾಹವು ನೆರವೇರಿರುವುದು. ಸರ್ವ ಪಾಪಗಳನ್ನೂ ನಾಶ ಮಾಡುವ ಶಕಿಯುಳ್ಳ

ಸಮಸ್ತದೇವರೂಪ ಸ್ಸ ಸಮೀ ಚಾಗ್ನಿಸ್ವರೂಪವಾನ್ ।
ಗಂಗಾದಿಸರ್ವತೀರ್ಥೈಕಸ್ವರೂಪಃ ಕೂಪ ಉತ್ತಮಃ ॥ ೯೧ ॥

ಸ ಏವ ಸುಂದರೇಶೋ ನಸ್ತತ್ರ ಲಿಂಗಸ್ವರೂಪವಾನ್ ।
ಇತಃಪರಂ ತು ವಕ್ತವ್ಯಂ ಮಮ ನಾಸ್ತಿ ತ್ವಯಾ ಸಹ ॥ ೯೨ ॥

ಸರ್ವಂ ಜಾನಾತಿ ಭರ್ತಾ ಮೇ ಕ್ರೂರಾ ತ್ವಂ ರಾಕ್ಷಸಾಧಮೇ ।
ಮತ್ಪಾಣಿಗ್ರಹಣೇ ಸಾಕ್ಷೀ ಕೋಽಪಿ ನಾಸ್ತೀತಿ ಕಥ್ಯಸೇ ॥ ೯೩ ॥

ಸುಬ್ರಹ್ಮಣ್ಯಾಂಶಸಂಭೂತ ಸ್ಸ ಚ ವೈದಿಕವಾರಣಃ ।
ಶಿಷ್ಯೈಷ್ಷೋಡಶಸಾಹಸ್ರೈರ್ಯುಕ್ತಃ ಕ್ಷಪಣಶಿಕ್ಷಕಃ ॥ ೬೪ ॥

ಶ್ರುತ್ವೇತಿಜ್ಯಾಯಸೀ ತಸ್ಯ ವಾಕ್ಯಂ ಪ್ರಾಹ ಪುನಃ ಸ್ವಯಂ ।
ಸಾಕ್ಷಿಭಿರ್ಮಮ ದೂರಸ್ಥೈಃ ಪ್ರಮಾಣಂ ಜಾಯತೇ ಕಥಂ ॥ ೯೫ ॥

---

ರಮ್ಯವಾದ ಸೀಸಪುರದಲ್ಲಿ ಶಂಭುವೂ, ಶಮೀ ವೃಕ್ಷವೂ, ಕೂಪವೂ ಸಾಕ್ಷಿಗಳಾಗಿರುವುವು. ಶಂಭುವು ಎಲ್ಲಾ ದೇವತಾ ರೂಪದಿಂದ ಇರುವನು ಶಮೀವೃಕ್ಷವು ಅಗ್ನಿಯ ರೂಪದಿಂದ ಇರುವುದು. ಗಂಗೆಯೇ ಮೊದಲಾದ ಎಲ್ಲಾ ತೀರ್ಥಗಳ ರೂಪದಿಂದ ಭಾವಿಯೂ ಸಾಕ್ಷಿಯಾಗಿರುವುದು.

೯೨–೯೬. ಶಿವನಾಗಿರುವ ಆ ಸುಂದರೇಶ್ವರನೇ ಅಲ್ಲಿ ಶಿವಲಿಂಗದ ರೂಪದಿಂದ ಇರುವನು. ಇದಕ್ಕಿಂತಲೂ ನಿನಗೆ ನಾನು ಹೆಚ್ಚಿಗೆ ಹೇಳಬೇಕಾದದ್ದು ಇಲ್ಲವು. ನನ್ನ ಪತಿಗೆ ಇದೆಲ್ಲವೂ ತಿಳಿದಿರುವುದು. ನೀನು ನೀಚಳಾದ ರಾಕ್ಷಸಿಯಾಗಿ ಕ್ರೂರಳಾಗಿ ಇದ್ದೀಯೆ. ನನ್ನ ಮದುವೆಯ ವಿಷಯದಲ್ಲಿ ಸಾಕ್ಷಿಗಳಿಲ್ಲವೆಂದು ಹೇಳುತ್ತೀಯೆ. ಸುಬ್ರಹ್ಮಣ್ಯಾಂಶದಿಂದ ಹುಟ್ಟಿದವನಾದ ನಾಸ್ತಿಕರ ಶಿಕ್ಷಕನಾದ ಜ್ಞಾನಪೂರ್ಣ ಯೋಗಿಯೂ ಅವನ ಹದಿನಾರು ಸಾವಿರ ಜನ ಶಿಷ್ಯರೂ ಸಾಕ್ಷಿಗಳಾಗಿರುತ್ತಾರೆ"

**ಸಾಕ್ಷಿಣಶ್ಚೇತ್ಸಮಾಗತ್ಯ ತೇ ಸರ್ವೇತ್ರ ವಿಶಾಂ ಪುರಃ ।**
**ಯದಿ ವ್ಯಕ್ತೀಕರಿಷ್ಯಂತಿ ಸಾಕ್ಷಿತ್ವಂ ಸರ್ವಸಮ್ಮತಂ ॥ ೯೭ ॥**

**ತದಾ ಭವಸಿ ಶುದ್ಧಾ ತ್ವಂ ಸತೀನಾಂ ಚ ಶಿರೋಮಣಿಃ ।**
**ಶಿವಲಿಂಗಂ ಶಮೀವೃಕ್ಷಂ ಕೂಪಂ ಸ್ತ್ವಾ ಯಾತು ತೇ ತ್ರಯಂ ॥ ೯೮ ॥**

**ಅನ್ಯಥಾ ತ್ವಂ ಚ ವೇಶ್ಯಾವನ್ಮಮ ಭರ್ತುರ್ನ ಸಂಶಯಃ ।**
**ತೇನೈವ ವಿಧಿನಾನೂಢಾ ಜಾನಂತಿ ಸಕಲಾ ಜನಾಃ ॥ ೯೮ ॥**

**ಶ್ರುತ್ವೇತಿ ಬಂಧುತಾಮಧ್ಯೇ ಸಪತ್ನೀ ವಚನಕ್ರಿಯಾಂ ।**
**ಕನೀಯಸೀ ವಿಶಃ ಪತ್ನೀ ದುಃಖೇನಾಪ್ಯಾನತಾನನಾ ॥ ೯೯ ॥**

**ಭುಕ್ತಿಂ ವಿಹಾಯ ನಿದ್ರಾಂ ಚ ನಿನಾಯ ಬಹು ಚಿಂತಯಾ ।**
**ತದ್ರಾತ್ರಿಂ ವತ್ಸರಮಿವ ಭರ್ತಾರಂ ಚಾಪಿ ಮೌನಿನಂ ॥ ೧೦೦ ॥**

---

ಎಂದು ಹೇಳಿದಳು. ಅವಳ ಮಾತನ್ನು ಕೇಳಿ ಹಿರಿಯ ಹೆಂಡತಿಯು "ಸಾಕ್ಷಿಗಳು ದೂರದಲ್ಲಿದ್ದರೆ ಅದರಿಂದ ನಂಬಿಕೆಯು ಹೇಗೆ ಹುಟ್ಟುವುದು. ಅವರೆಲ್ಲರೂ ಈಗ ಈ ವೈಶ್ಯರ ಮುಂದೆ ಸಾಕ್ಷಿಯನ್ನು ಹೇಳಿದರೆ ಆಗ ಇದು ಎಲ್ಲರಿಗೂ ಸಮ್ಮತವಾಗುವುದು.

೯೭-೧೦೦. ನಿನ್ನ ಸಾಕ್ಷಿಗಳೆಲ್ಲರೂ ಇಲ್ಲಿ ವೈಶ್ಯರ ಎದುರಿಗೆ ಬಂದು ನಿಂತು ಕೊಂಡು ನಿನ್ನ ವಿವಾಹವನ್ನು ಒಪ್ಪಿಕೊಂಡಾಗ ನೀನು ಪತಿವ್ರತಾಶಿರೋಮಣಿ ಯಾಗಿರುತ್ತೀಯೆ. ಇಲ್ಲದಿದ್ದರೆ ನನ್ನ ಗಂಡನಿಗೆ ನೀನು ಸೂಳೆಯಾಗಿ ಇರುತ್ತೀಯೆ. ಇದರಲ್ಲಿ ಸಂಶಯವಿಲ್ಲ. ಆದ್ದರಿಂದಲೇ ನಿನ್ನನ್ನು ಜನರೆಲ್ಲರೂ ಮದುವೆಯಾದವಳಲ್ಲ ವೆಂದು ತಿಳಿದಿರುವರು" ಎಂದು ಹೇಳಿದ ಸವತಿಯ ಮಾತನ್ನು ಕೇಳಿದಳು. ಆಗ ಅವಳು ದುಃಖದಿಂದ ಮುಖವನ್ನು ತಗ್ಗಿಸಿಕೊಂಡಳು. ಆ ದಿನ ರಾತ್ರಿಯೆಲ್ಲಾ ಅವಳಿಗೆ ನಿದ್ದೆಯು ಬರಲಿಲ್ಲ. ಆಹಾರವೂ ಸೇರಲಿಲ್ಲ. ಆ ರಾತ್ರಿಯೆಲ್ಲವನ್ನೂ ಒಂದು ವರ್ಷಕಳೆದಂತೆ ಕಳೆದಳು. ಅವಳ ಪತಿಯು ಯಾವ ಮಾತನ್ನೂ ಆಡದೆ ಸುಮ್ಮನಿದ್ದನು.

ಅಥ ಪ್ರಾತಸ್ಸಮುತ್ಥಾಯ ಭರ್ತೃಪಾದೌ ಪ್ರಣಮ್ಯ ಚ ।
ಸಾಕ್ಷಿಣೋ ಹ್ಯಾನಯಿಷ್ಯಾಮಿ ಸುಂದರೇಶಕೃಪಾಬಲಾತ್ ॥ ೧೦೧ ॥

ಕೀರ್ತಿಶ್ಚ ಶಾಶ್ವತೀ ಚಾಸ್ತು ಮಮ ತೇsಪಿ ಕುಲಸ್ಯ ಚ ।
ಭರ್ತುರಾಜ್ಞಾಂ ಪುರಸ್ಕೃತ್ಯ ಸರ್ವಂ ಕಾರ್ಯಂ ಸ್ತ್ರಿಯಾ ಯತಃ ॥೧೦೨॥

ಗಂತುಮೀಶಾಲಯಂ ಮೇsದ್ಯ ದೇಹಿ ಚಾನುಮತಿಂ ಪ್ರಿಯ ।
ಸೋsಪ್ಯಸ್ತ್ವಿತಿ ಸುದುಃಖಾರ್ತಃ ಪತ್ನ್ಯೈ ಚಾನುಮತಿಂ ದದೌ ॥ ೧೦೩ ॥

ಭರ್ತುರಾಜ್ಞಾ ಮವಾಪ್ಯಾಥ ವೈಶ್ಯಕನ್ಯಾ ಸುತೇನ ಚ ।
ಸಂಸ್ನಾಯ ಹೇಮಪದ್ಮಿನ್ಯಾಂ ಸುಮೀನಾಕ್ಷೀಂ ಪ್ರಣಮ್ಯ ಚ ॥ ೧೦೪ ॥

ಶ್ರೀಹಾಲಾಸ್ಯಪ್ರಭುಂ ಶಂಭುಂ ದಿವ್ಯಲಿಂಗಾಕೃತಿಂ ಶಿವಂ ।
ದಯಾಸಿಂಧುಂ ಚ ಭಕ್ತಾನಾಂ ಸರ್ವಾಪದ್ಭಯಹಾರಿಣಂ ॥ ೧೦೫ ॥

---

೧೦೧-೧೦೪. ಬೆಳಗಾದ ಕೂಡಲೇ ಎದ್ದು ಅವಳು ತನ್ನ ಗಂಡನ ಪಾದಗಳಿಗೆ ನಮಸ್ಕಾರ ಮಾಡಿದಳು. "ಸುಂದರೇಶ್ವರನ ದಯೆಯಿಂದ ಸಾಕ್ಷಿಗಳನ್ನು ನಾನು ಇಲ್ಲಿಗೆ ಕರೆಸುತ್ತೇನೆ. ಇದರಿಂದ ನಿನಗೂ ನಿನ್ನ ವಂಶಕ್ಕೂ ಶಾಶ್ವತವಾದ ಕೀರ್ತಿಯು ಉಂಟಾಗುವುದು ಸ್ತ್ರೀಯು ಪತಿಯ ಆಜ್ಞೆಯನ್ನು ಹೊಂದಿ ಕಾರ್ಯವನ್ನು ಮಾಡಬೇಕು ನನಗೆ ಸುಂದರೇಶ್ವರನ ದೇವಾಲಯಕ್ಕೆ ಹೋಗಲು ಅನುಜ್ಞೆಯನ್ನು ಕೊಡು." ಎಂದು ಗಂಡನನ್ನು ಬೇಡಿದಳು. ಅವನು ವ್ಯಸನಪಡುತ್ತಾ ಅವಳು ಆ ಕೆಲಸವನ್ನು ಮಾಡಲು ಸಮ್ಮತಿಯನ್ನು ಕೊಟ್ಟನು. ಆಗ ವೈಶ್ಯ ಪುತ್ರಿಯು ತನ್ನ ಮಗುವನ್ನು ಕರೆದುಕೊಂಡು ಹೇಮಪದ್ಮಿನೀ ತೀರ್ಥಕ್ಕೆ ಬಂದು ಅಲ್ಲಿ ಸ್ನಾನ ಮಾಡಿದಳು. ಮೀನಾಕ್ಷೀದೇವಿಗೆ ನಮಸ್ಕಾರ ಮಾಡಿದಳು.

೧೦೫-೧೦೭. ಅನಂತರದಲ್ಲಿ ಅವಳು ಹಾಲಾಸ್ಯಪ್ರಭುವಾದ ದಿವ್ಯಲಿಂಗದ ಆಕಾರದಲ್ಲಿ ಇರುವ ಶಿವನ ಹತ್ತಿರಕ್ಕೆ ಬಂದಳು. ಅವನು ಭಕ್ತರ ವಿಪತ್ತನ್ನೂ ಎಲ್ಲಾ ಭಯವನ್ನೂ, ನಾಶಮಾಡುವವನು, ದಯೆಯುಳ್ಳವನು. ಭಕ್ತರಿಗೆ

ಭಕ್ತ್ಯಾಯತ್ತಂ ಪಾರ್ವತೀಶಂ ಭುಕ್ತಿಮುಕ್ತಿಪ್ರದಂ ಹರಂ ।
ಅನಂತದುಃಖಸಿಂಧೂನಾಂ ಪ್ರಲಯಾನಲಸನ್ನಿಭಂ ॥ ೧೦೬ ॥

ಸತ್ಯಜ್ಞಾನಾನಂದಮಯಂ ಸರ್ವಸಾಕ್ಷಿಣಮೀಶ್ವರಂ ।
ಪ್ರಣಿಪತ್ಯ ರುದಂತೀ ಸಾ ಪ್ರಾರ್ಥಯಮಾಸ ಶಂಕರಂ ॥ ೧೦೭ ॥

ಶಂಭೋ ಮನ್ನಾಥ ಸರ್ವಜ್ಞ ಸಮಸ್ತಾಭೀಷ್ಟದಾಯಕ ।
ಕೃಪಾಲಯ ಮಹೇಶಾನ ಪಾಪತೂಲಾನಲೋ ಮಮ ॥ ೧೦೮ ॥

ಶ್ರೀಮತ್ಕದಂಬಕಾಂತಾರ ಪುರಂದರವಿಮಾನಗ ।
ತ್ವದನುಗ್ರಹತ ಸ್ವಾಮಿನ್ ಯದ್ಯಹಂ ಪತಿದೇವತಾ ॥ ೧೦೯ ॥

ಪರಿಪಾಲಯ ಮಾಂ ದೇವ ಮಮ ವಿಜ್ಞಾಪನಂ ಶೃಣು ।
ಸೀಸಗ್ರಾಮಸ್ಥಿತಾ ಅಸ್ಮತ್ಪಾಣಿಗ್ರಹಣಸಾಕ್ಷಿಣಃ ॥ ೧೧೦ ॥

---

ಅಧೀನನಾಗಿರುವನು ಪಾರ್ವತೀ ಪತಿಯಾದ ಅವನು ಭುಕ್ತಿಮುಕ್ತಿಗಳನ್ನು ಅನುಗ್ರಹಿಸುತ್ತಿರುವವನು. ಬಹಳ ಹೆಚ್ಚಾದ ದುಃಖವುಳ್ಳವರ ದುಃಖವೆಲ್ಲಕ್ಕೂ ಪ್ರಳಯಕಾಲದ ಅಗ್ನಿಗೆ ಸಮನಾಗಿರುವನು. ಸತ್ಯ ಜ್ಞಾನಾನಂದರೂಪನಾಗಿರುವವನು. ಎಲ್ಲಕ್ಕೂ ಸಾಕ್ಷಿಯಾಗಿ ಎಲ್ಲರಿಗೂ ಈಶ್ವರನಾಗಿರುವ ಸುಂದರೇಶ್ವರನ ಹತ್ತಿರಕ್ಕೆ ಬಂದು ನಮಸ್ಕರಿಸಿ ಅಳುತ್ತಾ ಬೇಡಿಕೊಂಡಳು.

೧೦೮-೧೧೨. "ಎಲೈ ಶಂಭುವೇ, ನನ್ನ ಸ್ವಾಮಿಯೇ, ಸರ್ವಜ್ಞನೇ, ಎಲ್ಲಾ ಇಷ್ಟವನ್ನೂ ಅನುಗ್ರಹಿಸುವ ದಯಾಮಯನೇ, ಮಹೇಶ್ವರನೇ, ನೀನು ನನ್ನ ಪಾಪಗಳೆಂಬ ಹತ್ತಿಗೆ ಬೆಂಕಿಯಾಗಿರುತ್ತೀಯೆ. ಕದಂಬಕಾಂತಾರದಲ್ಲಿರುವ ಇಂದ್ರನ ವಿಮಾನದ ಮಧ್ಯದಲ್ಲಿರುತ್ತೀಯೆ. ನಿನ್ನ ಅನುಗ್ರಹದಿಂದ ನನ್ನನ್ನು ರಕ್ಷಿಸು. ನಾನು ಪತಿದೇವತೆಯಾಗಿದ್ದಲ್ಲಿ, ನನ್ನ ವಿಜ್ಞಾಪನೆಯನ್ನು ಲಾಲಿಸು. ಸೀಸಗ್ರಾಮದಲ್ಲಿರುವ ನನ್ನ ವಿವಾಹದ ಸಾಕ್ಷಿಗಳಾದ ಶಂಭು, ಕೂಪ, ಶಮೀವೃಕ್ಷಗಳು, ಇಲ್ಲಿಗೆ ಬರುವಂತೆ

ಶಂಭುಕೋಪಶಮೀಽವೃಕ್ಷಾ ಅತ್ರಾಯಾಂತ್ವವಿಲಂಬಿತಂ ।
ಶ್ರೀಜ್ಞಾನಪೂರ್ಣ-ಯೋಗೀಂದ್ರಃ ತ್ವದ್ಭಕ್ತೋ ಯದಿ ಸತ್ಯತಃ ॥ ೨೧೧ ॥

ಪ್ರತ್ಯಕ್ಷೋ ಭವ ಮೇ ಸ್ವಾಮಿನ್ ವರದಸ್ಸರ್ವಸನ್ನಿಧೌ ।
ನಾಗತಂ ತ್ರಿತಯಂ ಚೈತತ್ತ್ಯಕ್ಷ್ಯಾಮ್ಯೇವ ಕಲೇಬರಂ ॥ ೧೧೨ ॥

ಇತಿ ಸಾಂಪ್ರಾರ್ಥಿತಃ ಶಂಭುಃ ಪತಿದೇವತಯಾ ತಯಾ ।
ವಿಜ್ಞಾಯ ತಸ್ಯಾಃ ವ್ರೀಳಾಂ ಚ ದುಃಖಂ ಚ ಕರುಣಾನಿಧಿಃ ॥ ೧೧೩ ॥

ಸ್ತುತ್ವಾಥ ಜ್ಞಾನಪೂರ್ಣಂ ಚ ತ್ವತ್ಕೃಪಾದೃಷ್ಟಿಪಾತತಃ ।
ತೇನೈವ ಸ್ವ ಸಮುದ್ವಾಹಂ ಕಾರಯಿತ್ವಾಸ್ಯ ವೈ ವಿಶಃ ॥ ೧೪೪ ॥

ಪ್ರೇಷಿತತ್ವಾಚ್ಚ ತಸ್ಯಾಪಿ ಸ್ವಸ್ಯಾಭೇದತ್ವತಃ ಪ್ರಭುಃ
ಸಂಪೂರ್ಣಜ್ಞಾನಸಂಬಂಧಯೋಗಿನಸ್ತ್ವಪಿ ಚಾತ್ಮನಃ ॥ ೧೧೫ ॥

---

ಮಾಡು. ಅವುಗಳು ಬೇಗ ಇಲ್ಲಿಗೆ ಬರಲಿ. ಜ್ಞಾನಪೂರ್ಣಯೋಗಿಯು ನಿಜವಾಗಿಯೂ ನಿನಗೆ ಭಕ್ತನಾಗಿರುವುದು. ನಿಜವಾಗಿದ್ದಲ್ಲಿ, ನೀನು ಎಲ್ಲರ ಎದುರಿಗೆ ಪ್ರತ್ಯಕ್ಷನಾಗು. ಸಾಕ್ಷಿಗಳು ಮೂರುಜನರೂ ಈಗ ಇಲ್ಲಿಗೆ ಬರದಿದ್ದರೆ ನಾನು ಈ ಶರೀರವನ್ನು ತ್ಯಾಗಮಾಡುವೆನು."

೧೧೩-೧೧೬. ಪತಿದೇವತೆಯಾದ ಅವಳು ಹೀಗೆ ಪ್ರಾರ್ಥನೆಮಾಡಿದಳು. ಅದನ್ನೂ, ಅವಳ ನಾಚಿಕೆಯ ಸ್ವಭಾವವನ್ನೂ, ದುಃಖವನ್ನೂ, ಕೂಡ ದಯಾಳುವಾದ ಸುಂದರೇಶ್ವರನು ತಿಳಿದುಕೊಂಡನು. ಆಗ ಅವನು ಜ್ಞಾನಪೂರ್ಣ ಯೋಗಿಯನ್ನು ಹೊಗಳಿದನು. ಅನಂತರದಲ್ಲಿ ಜ್ಞಾನಪೂರ್ಣಯೋಗಿಯನ್ನು ಶ್ಲಾಘಿಸಿ ಅವನ ದಯೆಗೆ ಪಾತ್ರಳಾಗಿ, ಅವನಿಂದಲೇ ಇವಳು ಆ ವೈಶ್ಯನನ್ನು ಮದುವೆ ಮಾಡಿಕೊಂಡಿರುವಳು. ಅವನೇ ಇವಳನ್ನು ಇಲ್ಲಿಗೆ ಕಳುಹಿಸಿರುವನು. ಜ್ಞಾನಸಂಬಂಧ ಯೋಗಿಗೂ ನನಗೂ ಭೇದವೇ ಇಲ್ಲವು. ಎಂದು ಪ್ರಭುವಾದ

ಕೃತಾರ್ಥಯೋಃ ಕನ್ಯಾಯಾ ವಿಶಃ ಪ್ರತ್ಯಕ್ಷಿತೋಽಭವತ್ ।
ಸಿದ್ಧರೂಪಂ ಸಮಾಸ್ಥಾಯ ಮೀನಾಕ್ಷೀಶಃ ಕೃಪಾನಿಧಿಃ ॥ ೧೧೬ ॥

ಸ್ವಯಂಭೂತಾನ್ಮಹಾಲಿಂಗಾತ್ ಕೃಪಾದೃಷ್ಟ್ಯಾ ವಿಲೋಕ್ಯ ತಾಂ ।
ದತ್ವಾ ಚಾಭಯಮಸ್ಯಾಸ್ಸ ಸಮಾಹೂಯ ಪುರಸ್ತಥಾ ॥ ೧೧೭ ॥

ಷಟ್ಸ್ತಂಭಮಂಟಪೇ ತಿಷ್ಠನ್ ಸ್ಮರ ತತ್ಸಾಕ್ಷಿಣೋ ಮುದಾ ।
ಆಹೂಯ ದರ್ಶಯಾಮಾಸ ಸ್ವಲಿಂಗೇಶಾನಕೋಣತಃ ॥ ೧೧೮ ॥

ದೃಷ್ಟ್ವಾ ತ್ರಿತಯಮೇತಚ್ಚ ಸೀಸಗ್ರಾಮಾತ್ಸಮಾಗತಾನ್ ।
ಸರ್ವೇ ಜನಾ ವಿಸ್ಮಿತಾಃ ಸ್ತ್ರೀ ತಯಾ ಸಾಕಂ ಸಮಾಗತಾಃ ॥ ೧೧೯ ॥

ಸೇವಾರ್ಥಮಾಗತಾಶ್ಚಾಪಿ ಪ್ರಶಶಂಸುಃ ಕನೀಯಸೀಂ ।
ದಯಾಪರಂ ಚ ಮೀನಾಕ್ಷೀರಮಣಂ ಚಾಪಿ ಶಂಕರಂ ॥ ೧೨೦ ॥

---

ಸುಂದರೇಶ್ವರನು ಆ ವೈಶ್ಯನ ಮತ್ತು ಆ ಸ್ತ್ರೀಯ ಕೃತಾರ್ಥತೆಯನ್ನು ತಿಳಿದುಕೊಂಡು ಅವಳಿಗೆ ಪ್ರತ್ಯಕ್ಷನಾದನು. ಆಗ ಮೀನಾಕ್ಷೀ ಪತಿಯಾದ ಅವನ ದಯಾಶಾಲಿಯಾದ ಸಿದ್ಧನ ರೂಪವನ್ನು ಧರಿಸಿದನು.

೧೧೭–೧೨೦ ಸ್ವಯ ಮುದ್ಭವವಾಗಿರುವ ಆ ಮಹಾ ಲಿಂಗದಿಂದಲೇ ದಯೆಯಿಂದ ಅವಳನ್ನು ನೋಡಿದನು. ಅವಳನ್ನು ಮುಂದಕ್ಕೆ ಕರೆದು, ಅವಳಿಗೆ ಅಭಯವನ್ನು ಕೊಟ್ಟನು. "ನೀನು ಆರು ಕಂಬಗಳ ಮಂಟಪದಲ್ಲಿದ್ದುಕೊಂಡು ನಿನ್ನ ಆ ಸಾಕ್ಷಿಗಳನ್ನು ಸ್ಮರಿಸು" ಎಂದು ಹೇಳಿದನು. ತಾನೂ ಸಂತೋಷದಿಂದ ಅವರನ್ನು ಸ್ಮರಿಸಿದನು. ಅವರು ತನ್ನ ಶಿವಲಿಂಗದ ಈಶಾನ್ಯ ಮೂಲೆಯಲ್ಲಿ ಬಂದು ನಿಂತರು. ಸೀಸ ಗ್ರಾಮದಿಂದ ಅಲ್ಲಿಗೆ ಬಂದಿರುವ ಅವರು ಮೂರು ಜನ ಸಾಕ್ಷಿಗಳನ್ನೂ ಜನರೆಲ್ಲರೂ ನೋಡಿದರು. ಅವರೆಲ್ಲರೂ ಆಶ್ಚರ್ಯವನ್ನು ಹೊಂದಿದರು. ಆ ಹಿರಿಯ ಹೆಂಡತಿಯು, ಸೇವೆಗಾಗಿ ಅವರ ಜೊತೆಯಲ್ಲಿ ಬಂದು, ಸಾಕ್ಷಿಗಳನ್ನು ನೋಡಿದಳು. ಆಗ ಅವರೆಲ್ಲರೂ ಕಿರಿಯ ಹೆಂಡತಿಯನ್ನು ಶ್ಲಾಘಿಸಿದರು. ದಯೆಯಿಂದ ಇರುವ ಮೀನಾಕ್ಷೀ ದೇವಿಯಿಂದ ಕೂಡಿದ ಸುಂದರೇಶ್ವರನನ್ನು ಹೊಗಳಿದರು

ತಸ್ಯಾ ಭರ್ತಾ ಜ್ಞಾತಯಶ್ಚ ನಿಂದಯಾಮಾಸತು ರ್ಭೃಶಂ ।
ಪತ್ನೀಂ ಜ್ಯೇಷ್ಠಾಂ ರಾಗಿಣೀಂ ಚ ಧಿಃಕಾರಂ ಚಾಪಿ ಚಕ್ರತುಃ ॥ ೧೨೧ ॥

ಶಮೀವೃಕ್ಷಸ್ಯ ಮೂಲೇ ಯೇ ನಾಗಾಸ್ತಕ್ಷಕಪೂರ್ವಕಾಃ ।
ತೇಪ್ಯಾಯಾತಾಸ್ಸುಂದರೇಶಸ್ಯಾಜ್ಞಯಾ ಭಕ್ತರಕ್ಷಿತುಃ ॥ ೧೨೨ ॥

ಸಿದ್ಧರೂಪೀ ಸುಂದರೇಶ ಕಾರುಣ್ಯಾದ್ರ್ರಕಟಾಕ್ಷತಃ ।
ವೀಕ್ಷಿತಾ ಕಾಂಕ್ಷಿತಾರ್ಥಾಂಶ್ಚ ಸಾ ಲಬ್ಧ್ವಾ ತ್ವಂತದುರ್ಲಭಾನ್ ॥ ೧೨೩ ॥

ಪುತ್ರೇಣ ಸಕಲತ್ರೇಣ ಭರ್ತ್ರಾ ಚ ಶ್ರೀಮತಾ ಸಹ ।
ಉವಾಸ ಮುದಿತಾ ಭೂತ್ವಾ ಕಾಂತ್ಯಾ ಚ ಯಶಸಾ ಶ್ರಿಯಾ ॥ ೧೨೪ ॥

ಅಂತೇ ಭರ್ತ್ರಾ ಚ ಸಹಿತಾ ಶಿವಲೋಕಮವಾಪ ಸಾ ।
ಕನೀಯಸೀ ಪುಣ್ಯವತೀ ಜ್ಞಾನಸಂಬಂಧವೀಕ್ಷಣಾತ್ ॥ ೧೨೫ ॥

---

೧೨೧-೧೨೫. ಅನಂತರದಲ್ಲಿ ಹಿರಿಯ ಹೆಂಡತಿಯನ್ನು ಅವಳ ಗಂಡನೂ ಬಂಧುಗಳೂ, ಎಲ್ಲರೂ, ಬಹಳ ನಿಂದಿಸಿ ಧಿಕ್ಕಾರ ಮಾಡಿದರು. ಶಮೀ ವೃಕ್ಷದ ಬುಡದಲ್ಲಿದ್ದ ಆ ತಕ್ಷಕನೇ ಮೊದಲಾದ ನಾಗರು ಮೊದಲಾದವರು ಎಲ್ಲರೂ ಸುಂದರೇಶ್ವರನ ಆಜ್ಞೆಯಿಂದ ಭಕ್ತರನ್ನು ರಕ್ಷಿಸುವುದಕ್ಕಾಗಿ ಆಗ ಅಲ್ಲಿಗೆ ಬಂದಿದ್ದರು. ಸಿದ್ಧರೂಪದಿಂದ ಇರುವ ಸುಂದರೇಶ್ವರನ ದಯಾಪೂರ್ಣವಾದ ಕಟಾಕ್ಷಕ್ಕೆ ಪಾತ್ರಳಾದ ಆ ವೈಶ್ಯ ಪುತ್ರಿಯು, ತನಗೆ ಹೊಂದಲಶಕ್ಯವಾದದ್ದಾಗಿರುವ ಇಷ್ಟಾರ್ಥಗಳನ್ನು ಹೊಂದಿದಳು. ಪುತ್ರ ಮಿತ್ರ ಕಳತ್ರರೊಡನೆ ಸಂತೋಷದಿಂದಿರುವ ತನ್ನ ಪತಿಯೊಡನೆ ಸಂತೋಷವಾಗಿದ್ದಳು. ಜ್ಞಾನಸಂಬಂಧ ಯೋಗಿಯ ಕಟಾಕ್ಷ ವೀಕ್ಷಣದ ಬಲದಿಂದ, ಅವಳು ಕೀರ್ತಿ ಮತ್ತು ಐಶ್ವರ್ಯಗಳಿಂದ ಕೂಡಿದವಳಾಗಿ ಬಹಳ ಕಾಲ ಸುಖವಾಗಿದ್ದಳು. ಅನಂತರ ಅವಳು ಪತಿಯೊಡನೆ ಶಿವ ಲೋಕವನ್ನು ಹೊಂದಿದಳು.

|| ಅಗಸ್ತ್ಯ ಉವಾಚ ||

ಚತುಃಷಷ್ಟಿತಮಾಲೀಲಾ ಚತುಷ್ಕೂಟಪುರೇಶಿತುಃ ।
ಚತುರ್ದಶಸು ಲೋಕೇಷು ಪ್ರಥಿತಾ ಗದಿತಾ ಮಯಾ || ೧೨೬ ||

ಇತಿ ಲೀಲಾಂ ಚತುಷ್ಷಷ್ಟೀಂ ಭಕ್ತಿಯುಕ್ತ ಶ್ಶೃಣೋತಿ ಯಃ ।
ತಸ್ಯ ಪಾಪಾಃ ಪ್ರಣಶ್ಯಂತಿ ವಹ್ನಿನಾ ತೂಲರಾಶಿವತ್ || ೧೨೭ ||

ಆಯುರಾರೋಗ್ಯಸೌಭಾಗ್ಯಪುತ್ರಮಿತ್ರಾದಿಸಂಯುತಃ ।
ಭುಕ್ತ್ವಾತ್ರ ವಿಪುಲಾನ್ಭೋಗಾನಂತೇ ಸಾಯುಜ್ಯಮಾಪ್ನುಯಾತ್ || ೧೨೮ ||

ಮೀನಾಕ್ಷೀರಮಣಸ್ಯಾಪಿ ಸುಂದರೇಶಸ್ಯ ಸತ್ಕೃಪಾಂ ।
ಲಬ್ಧ್ವಾ ಭಕ್ತಿಂ ಶಾಂಭವೀಂ ಚ ಜನ್ಮಹೀನಃ ಶಿವಂ ವ್ರಜೇತ್ || ೧೨೯ ||

ಬಹುನಾತ್ರ ಕಿಮುಕ್ತೇನ ಮೀನಾಕ್ಷೀಶಕೃಪಾಂ ಪರಾಂ ।
ಪ್ರಾಪ್ಯ ಶಂಭೋಃ ಪಾದಯೋಶ್ಚ ನಿಶ್ಚಲಾಂ ಭಕ್ತಿಮಾಪ್ನುಯಾತ್|| ೧೩೦ ||

---

೧೨೬. ಅಗಸ್ತ್ಯಋಷಿಯು ಹೇಳಿದನು :---ಚತುಷ್ಕೂಟ ಪುರಕ್ಕೆ ಅಧಿಪನಾದ ಸುಂದರೇಶ್ವರನ ಅರವತ್ತನಾಲ್ಕನೆಯ ಲೀಲೆಯನ್ನು ಹೇಳಿರುವೆನು. ಇವೆಲ್ಲವೂ ಹದಿನಾಲ್ಕು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುವು.

೧೨೭–೧೨೮. ಭಕ್ತಿಯುಳ್ಳವನಾಗಿ ಅರವತ್ತನಾಲ್ಕನೆಯ ಈ ಲೀಲೆಯನ್ನು ಕೇಳಿದವನು, ಹತ್ತಿಯ ರಾಶಿಯು ಅಗ್ನಿಯಿಂದ ನಾಶವಾಗುವಂತೆ, ಪಾಪಗಳೆಲ್ಲವನ್ನೂ ಕಳೆದು ಕೊಳ್ಳುವನು ಆಯುಸ್ಸು, ಆರೋಗ್ಯ, ಸೌಭಾಗ್ಯ, ಪುತ್ರ, ಮಿತ್ರ, ಇವೆಲ್ಲದರಿಂದಲೂ ಕೂಡಿದವನಾಗಿ, ಬಹಳ ಮಟ್ಟಿನ ಭೋಗಗಳನ್ನು ಅನುಭವಿಸಿ, ಕೊನೆಯಲ್ಲಿ ಶಿವನ ಸಾಯುಜ್ಯವನ್ನು ಹೊಂದುವನು.

೧೨೯–೧೩೦. ಶ್ರೀ ಮೀನಾಕ್ಷೀ ದೇವಿಯ ಪತಿಯಾದ ಸುಂದರೇಶ್ವರನ ಉತ್ತಮವಾದ ದಯೆಗೆ ಪಾತ್ರನಾಗಿ, ಶಿವನ ಭಕ್ತಿಯನ್ನು ಹೊಂದಿ, ಮುಂದೆ ಜನ್ಮಗಳಿಲ್ಲದವನಾಗಿ, ಶಿವನಲ್ಲಿ ಐಕ್ಯನಾಗುವನು. ಬಹಳವಾಗಿ ಹೇಳಿದ್ದರಿಂದ ನಿಶ್ಚಯವಾಗಿ ತಿಳಿಯ ಬೇಕಾದದ್ದನ್ನು ಹೇಳುವೆನು. ಶ್ರೀ ಮೀನಾಕ್ಷೀ ದೇವಿಯ ಪತಿಯಾದ ಸುಂದರೇಶ್ವರನ ಉತ್ತಮವಾದ ದಯೆಗೆ ಪಾತ್ರನಾದವನಾಗಿ ಶಿವನ ಪಾದಕಮಲದಲ್ಲಿ ದೃಢವಾದ ಭಕ್ತಿಯನ್ನು ಹೊಂದುವುದು ಸತ್ಯವಾದದ್ದು.

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಶಂಭುಕೂಪಶಮೀವೃಕ್ಷಾನಯನಂ ನಾಮ ಸಪ್ತತಿತಮೋಽಧ್ಯಾಯಃ**

---

ಸ್ಕಾಂದಪುರಾಣದ ಆಗಸ್ತ್ಯಸಂಹಿತೆಯ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಶಂಭು, ಕೂಪ, ಶಮೀ ವೃಕ್ಷಾನಯನವೆಂದು ಹೆಸರುಳ್ಳ ಎಪ್ಪತ್ತನೆಯ ಅಧ್ಯಾಯವು ಮುಗಿದಿರುವುದು.



॥ ಶ್ರೀ ॥

॥ ಶ್ರೀ ಶಿವಾಯ ನಮಃ ॥

# ಹಾ ಲಾ ಸ್ಯ ಮಾ ಹಾ ತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯಮಾಹಾತ್ಮ್ಯೇ ಏಕಸಪ್ತತಿತಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಇತಿ ಹಾಲಾಸ್ಯನಾಥಸ್ಯ ಲೀಲಾಸ್ಸರ್ವಾ ಅನುಕ್ರಮಾತ್ ।
ಪ್ರೋವಾಚ ಕುಂಭಸಂಭೂತೋ ವಸಿಷ್ಠಾದಿಮಹಾತ್ಮನಾಂ ॥ ೧ ॥

ತೇ ಶ್ರುತ್ವಾ ಋಷಯಸ್ಸರ್ವೇ ಮುಕ್ತಿಮಂಟಪಸಂಸ್ಥಿತಾಃ ।
ಹಾಲಾಸ್ಯೇಶಸ್ಯ ಕೃಪಯಾ ನಿತರಾಂ ಭಕ್ತಿಮವಾಪ್ನುವನ್ ॥ ೨ ॥

ಜೀವನ್ಮುಕ್ತಾ ಭವೇಯುಶ್ಚ ಗುರುಂ ತಂ ಕುಂಭಸಂಭವಂ ।
ಮತ್ವಾ ಕೃತಾರ್ಥಾ ಋಷಯೋ ಲೋಪಾಮುದ್ರಾಸಮನ್ವಿತಂ ॥ ೩ ॥

---

### ಎಪ್ಪತ್ತೊಂದನೆಯ ಅಧ್ಯಾಯವು

೧–೪. ಅಗಸ್ತ್ಯಋಷಿಯು ಹೇಳಿದನು :—ಕುಂಭದಿಂದ ಜನ್ಮವನ್ನು ತಾಳಿದ ಅಗಸ್ತ್ಯಋಷಿಯು, ವಸಿಷ್ಠನೇ ಮೊದಲಾದ ಋಷಿಗಳಿಗೆ ಹಾಲಾಸ್ಯೇಶ್ವರನು ಆಚರಿಸಿದ ಲೀಲೆಗಳೆಲ್ಲವನ್ನೂ ಕ್ರಮವಾಗಿ ಹೇಳಿದನು. ಮುಕ್ತಿ ಮಂಟಪದಲ್ಲಿ ಆ ಋಷಿಗಳೆಲ್ಲರೂ ಕೇಳಿದರು. ಹಾಲಾಸ್ಯೇಶ್ವರನ ದಯೆಯಿಂದ ಅವರೆಲ್ಲರೂ ಬಹಳ ಭಕ್ತಿಯುಳ್ಳವರಾದರು. ಅವರು ಜೀವನ್ಮುಕ್ತರಾದರು. ಅವರು ಅಗಸ್ತ್ಯಋಷಿಯನ್ನು ಗುರುವೆಂದು ತಿಳಿದು ಕೊಂಡರು. ಕೃತಾರ್ಥರಾದ ಅವರು ಲೋಪಾಮುದ್ರೆಯೊಡನೆ

ಗಂಧೈಃ ಪುಷ್ಪೈಸ್ಸುಮೇಧ್ಯೈಶ್ಚ ಅರ್ಚಯಾಮಾಸತು ಶ್ಶಿವಂ ।
ಜಾಂಬೂನದಮಯೈಃ ಪುಷ್ಪೈಃ ಕಹ್ಲಾರಕಮಲಾದಿಭಿಃ ॥ ೪ ॥

ತ್ರಿದಿವಸ್ತ್ರೀರನೇಕೈಶ್ಚ ದಿವ್ಯೈ ರತ್ನೈಶ್ಚ ಕಾಂಚನೈಃ ।
ಪತಿವ್ರತಾ ಶಿರೋರತ್ನಂ ತತ್ಕಲತ್ರಂ ಚ ಪೂಜಿತಂ ॥ ೫ ॥

ಪ್ರಾಜ್ಞೈರ್ಮುನಿವರೈರ್ದಿವ್ಯೈರಂಬರಾಭರಣಾದಿಭಿಃ ।
ತತಸ್ಸಕುಂಭಸಂಭೂತೋ ವಸಿಷ್ಠಾದಿಮಹಾತ್ಮನಾಂ ॥ ೬ ॥

ಆಶೀರ್ವಾಗ್ಭಿರನಂತಾಭಿ ರತ್ಯಂತಪ್ರೀತಿಮಾತನೋತ್ ।
ಅನುಗ್ರಹಕೃಪಾದೃಷ್ಟ್ಯಾ ತೇನಾಂಚೈಫ್ರೇತ್ಪೂಜನಾನಪಿ ॥ ೭ ॥

ತೇಭ್ಯಃ ಕಾಮಾನಪಿ ದದಾವಿಹಾಮುತ್ರ ಸುದುರ್ಲಭಂ ।
ಅಥಾತ್ಮನೋ ದ್ವಾದಶಾಂತೇ ನಿಷ್ಕಲೇತ್ಯಂತನಿರ್ಮಲೇ ।
ಶ್ರೀಹಾಲಾಸ್ಯೇ ಶಿವಪದೇ ಶಿವಪ್ರಾಪ್ತ್ಯೈಕಸಾಧನೇ ॥ ೮ ॥

---

ಇರುವ ಅಗಸ್ತ್ಯಋಷಿಯನ್ನು ಗಂಧ, ಪವಿತ್ರವಾದ ಹೂವುಗಳು. ಚಿನ್ನದ ಹೂವುಗಳು, ಕಲ್ಹಾರ ಪುಷ್ಪ, ಕಮಲ ಪುಷ್ಪ, ಇವೇ ಮೊದಲಾದ ಹೂವುಗಳಿಂದಲೂ ಪೂಜಿಸಿದರು.

೫–೭. ಬಹಳ ಮಂದಿ ದೇವತಾ ಸ್ತ್ರೀಯರು, ಪತಿವ್ರತಾ ಶಿರೋಮಣಿಯಾದ ಅಗಸ್ತ್ಯಋಷಿಯ ಪತ್ನಿಯನ್ನು ಶ್ರೇಷ್ಠವಾದ ರತ್ನಗಳು ಮತ್ತು ಚಿನ್ನ ಇವುಗಳಿಂದ ಪೂಜಿಸಿದರು. ಶ್ರೇಷ್ಠರಾದ ಋಷಿಗಳು ಉತ್ತಮವಾದ ವಸ್ತ್ರಾಭರಣಗಳಿಂದ ಲೋಪಾಮುದ್ರಾ ದೇವಿಯನ್ನು ಪೂಜಿಸಿದರು. ಅನಂತರದಲ್ಲಿ ಅಗಸ್ತ್ಯಋಷಿಯು ವಸಿಷ್ಠನೇ ಮೊದಲಾದ ಮಹಾ ಮಹಿಮರೆಲ್ಲರಿಗೂ ಬಹಳ ಆಶೀರ್ವಾದಗಳನ್ನು ಮಾಡಿ ಸಂತೋಷವನ್ನು ಉಂಟುಮಾಡಿದನು. ಅಗಸ್ತ್ಯಋಷಿಯು ಬೇರೆಯ ಇತಿ ಹಾಸವನ್ನು ಕೇಳಲು ಇಚ್ಛೆಯುಳ್ಳವರಿಗೂ, ಅನುಗ್ರಹ ಮಾಡುವ ದಯಾ ದೃಷ್ಟಿ, ಯಿಂದ, ಇಹ ಪರಗಳಲ್ಲಿ ಹೊಂದಲಶಕ್ಯವಾದ ಇಷ್ಟಗಳು ಸಿದ್ಧವಾಗುವಂತೆ ಅನುಗ್ರಹಿಸಿದನು.

೮–೧೧. ಅನಂತರದಲ್ಲಿ ಅಗಸ್ತ್ಯಋಷಿಯು ಶಿವನ ವಾಸಸ್ಥಾನವಾಗಿ ಬಹಳ ಪವಿತ್ರವಾದ, ಬ್ರಹ್ಮನ ದ್ವಾದಶಾಂತವೆಂದು ಹೆಸರಿನಿಂದ ಪ್ರಸಿದ್ಧವಾದ, ಶಿವ

**ಶ್ರೀಹಾಲಾಸ್ಯಪತಿಂ ಶಂಭುಂ ಶಿವಂ ಪರಮಕಾರಣಂ ।**
**ಸರ್ವವೇದಾಂತಸಂಸ್ತುತ್ಯ ಮಶೇಷಪುರುಷಾರ್ಥದಂ　　॥ ೯ ॥**

**ಸಮಸ್ತಜಗದಾಧಾರಂ ಲಿಂಗಮೂರ್ತಿಧರಂ ಹರಂ ।**
**ಆದಿಮಧ್ಯಾಂತರಹಿತಂ ವಿಭುಂ ಸೋಮಂ ಪರಾತ್ಪರಂ　　॥ ೧೦ ॥**

**ನಿಶ್ಚಲೇನ ಚ ಚಿತ್ತೇನ ನಿರ್ಮಲೇನ ವಿಭಾವ್ಯ ಚ ।**
**ಅನಭೂಯ ಶಿವಾನಂದಂ ತನ್ಮಯೋಽಭೂತ್ಸ ಕುಂಭಜಃ　　॥ ೧೧ ॥**

**ವಸಿಷ್ಠಾದ್ಯಾ ಮುನಿಶ್ರೇಷ್ಠಾ ಮಹಿಮಾಂ ಸುಂದರೇಶಿತುಃ ।**
**ಶ್ರುತ್ವಾ ತಮೀಶ್ವರಂ ದ್ರಷ್ಟುಮೌತ್ಸುಕ್ಯಂ ಸುತರಾಂ ದಧುಃ　　॥ ೧೨ ॥**

---

ಭಾವವನ್ನು ಹೊಂದಲು ಮುಖ್ಯ ಸಾಧನವಾದ ಹಾಲಾಸ್ಯ ಕ್ಷೇತ್ರದಲ್ಲಿ ಶಿವನನ್ನು ಧ್ಯಾನ ಮಾಡಲು ಪ್ರಾರಂಭಿಸಿದನು. ಆಗ ಅವನು— " ಶಿವನನ್ನು ಹಾಲಾಸ್ಯ ಪತಿಯೆಂದು ಭಾವಿಸಿದನು. ಶಿವನು ಎಲ್ಲಕ್ಕೂ ಕಾರಣನಾಗಿರುವನು. ವೇದಾಂತ ಗಳೆಲ್ಲವೂ ಶಿವನನ್ನು ಸ್ತೋತ್ರ ಮಾಡುತ್ತಿರುವವು. ಶಿವನು ನಾಲ್ಕು ವಿಧವಾದ ಪುರುಷಾರ್ಥಗಳನ್ನೂ ಅನುಗ್ರಹಿಸುವನು. ಅವನು ಎಲ್ಲಾ ಲೋಕಗಳಿಗೂ ಆಧಾರ ವಾಗಿರುವವನು. ಶಿವಲಿಂಗದ ಆಕಾರದಿಂದ ಇರುವವನು. ಎಲ್ಲವನ್ನೂ ಲಯ ಮಾಡುವವನು. ಆದಿ, ಮಧ್ಯ, ಕೊನೆಗಳು ಇಲ್ಲದೆ ಯಾವಾಗಲೂ ಇರತಕ್ಕವನು. ಮಹಿಮೆಯಿಂದ ಎಲ್ಲಾ ಕಾಲಗಳು, ಮತ್ತು ಪ್ರದೇಶಗಳಲ್ಲಿ ವ್ಯಾಪಿಸಿರುವನು ಪಾರ್ವತಿಯೊಡನೆ ಇರುವವನು. ಎಂದು ದೃಢವಾದ ಮನಸ್ಸಿನಿಂದ ತಿಳಿದು ಪರಿ ಶುದ್ಧವಾದ ರೀತಿಯಿಂದ ಶಿವನನ್ನು ಧ್ಯಾನ ಮಾಡುತ್ತಿದ್ದನು. ಈ ಬಗೆಯಾದ ಧ್ಯಾನವು ತಾನೇ ತಾನಾಗಿ ಅವನ ಮನಸ್ಸಿನಲ್ಲಿ ನೆಲೆಯಾಗಿ, ಅದರಿಂದ ಆನಂದ ಉಂಟಾಯಿತು. ಈ ಆನಂದಾನುಭವವನ್ನು ಅನುಭವಿಸುವಾಗ ಅಗಸ್ತ್ಯಋಷಿಯು ಶಿವಭಾವದಿಂದ ಇರುತ್ತಾ, ಶಿವನಾಗಿಯೇ ಇದ್ದನು.

೧೨–೧೪. ವಸಿಷ್ಠನೇ ಮೊದಲಾದ ಋಷಿಗಳು ಸುಂದರೇಶ್ವರನ ಮಹಿಮೆ ಯನ್ನು ಕೇಳಿ, ಸುಂದರೇಶ್ವರನನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು, ತಮಗೆ ಉಂಟಾಗಿರುವ ಅತಿಶಯವಾದ ಕುತೂಹಲವನ್ನು ವ್ಯಕ್ತಗೊಳಿಸುತ್ತಿದ್ದರು.

ಅಥಾಗಸ್ತ್ಯೇ ಸಮಾಧಿಂ ಚ ವಿಸೃಜ್ಯೋನ್ಮೀಲಿತೇ ಸತಿ ।
ಪುನಸ್ತಂ ಪ್ರಾರ್ಥಯಂತಿ ಸ್ಮ ನಿಖಿಲಾ ಮುನಿಪುಂಗವಾಃ ॥ ೧೩ ॥

ಭಗವನ್ ಕುಂಭಸಂಭೂತ ಗುರುಭೂತ ಸ್ತ್ವಮೇವ ನಃ ।
ತ್ವದ್ಗುರುಂ ಸುಂದರೇಶಾನಂ ದರ್ಶಯಸ್ವ ಜಗದ್ಗುರುಂ ॥ ೧೪ ॥

ವಾರಾಣಸೀಮಹಾಕ್ಷೇತ್ರೇ ಮಣಿಕರ್ಣ್ಯಾಸ್ತಟೇ ಶುಭೇ ।
ಹರಃ ಪ್ರತ್ಯಕ್ಷತಾಮೇತ್ಯ ಚಿತ್ತಶುದ್ಧಿಂ ವಿಧಾಯ ನಃ ॥ ೧೫ ॥

ದಯಾವತಸ್ತವ ಮುಖರಾಕಾಚಂದ್ರ ವಿನಿಸ್ಸೃತಂ ।
ಜೀವನ್ಮುಕ್ತಿಪುರೇಶಸ್ಯ ಪಾದಾಬ್ಜಾಮೃತ ಮದ್ಭುತಂ ॥ ೧೬ ॥

ಪೀತ್ವಾ ತರಾಂ ಸುಸಂತುಷ್ಟಾಃ ಕೃಪಯಾ ತವ ಸದ್ಗುರೋ ।
ಶೃಣ್ವತಾಂ ಪಠತಾಂ ಭಕ್ತ್ಯಾ ಜೀವತಾಮಪಿ ಮುಕ್ತಿದಂ ॥ ೧೭ ॥

---

ಆ ಸಮಯಕ್ಕೆ ಸರಿಯಾಗಿ ಅಗಸ್ತ್ಯಋಷಿಯು ತನ್ನ ಶಿವ ಧ್ಯಾನದ ಅತಿಶಯವಾದ ಸ್ಥಿತಿಯಿಂದ ಸಮಾಧಿಯನ್ನು ಮುಗಿಸಿಕೊಂಡು, ಎಲ್ಲರನ್ನೂ ನೋಡಿದನು ಋಷಿಶ್ರೇಷ್ಠರಾದ ಅವರೆಲ್ಲರೂ ಬದಲಾಗಿ ಪ್ರಾರ್ಥನೆ ಮಾಡಿದರು.

೧೪–೧೫. ಎಲೈ ಪೂಜ್ಯನಾದ ಅಗಸ್ತ್ಯಋಷಿಯೇ—ನೀನು ನಮಗೆಲ್ಲರಿಗೂ. ಗುರುವಾಗಿರುತ್ತೀಯೆ. ಜಗತ್ತಿಗೆ ಎಲ್ಲಕ್ಕೂ ಗುರುವಾಗಿರುವ ನಿನ್ನ ಗುರುವಾದ ಸುಂದರೇಶ್ವರನನ್ನು ನಮಗೆ ತೋರಿಸು. ನಿನ್ನ ದಯೆಯಿಂದ ದೊಡ್ಡ ಕ್ಷೇತ್ರವಾದ ಮಣಿಕರ್ಣಿಕಾ ತೀರದಲ್ಲಿ ಶಿವನು ಪ್ರತ್ಯಕ್ಷನಾಗಿ ನಮಗೆ ಚಿತ್ತ ಶುದ್ಧಿಯು ಉಂಟಾಗು ವಂತೆ ಅನುಗ್ರಹಿಸಿರುವನು.

೧೬–೧೮. ಎಲೈ ಸದ್ಗುರುವೇ- ದಯಾವಂತನಾದ ನಿನ್ನ ಚಂದ್ರನಂತಿರುವ ಮುಖದಿಂದ ಜೀವನ್ಮುಕ್ತಿ ಪುರೇಶ್ವರನ ಪಾದ ಕಮಲದ (ಮಕರಂದವನ್ನು) ಅಮೃತ ಪಾನಮಾಡಿದ ನಾವೆಲ್ಲರೂ ಬಹಳ ಸಂತೋಷವನ್ನು ಅನುಭವಿಸುತ್ತಾ ಇರುವೆವು. ಅದು ಭಕ್ತಿಯಿಂದ ಓದಿದವರಿಗೂ, ಕೇಳಿದವರಿಗೂ ಮುಕ್ತಿಯನ್ನು ಉಂಟು ಮಾಡುವುದು. ಶಿವನ ಪಾದ ಕಮಲವನ್ನು ಸೇವಿಸಬೇಕೆಂಬ ಭಕ್ತಿಯು, ಪ್ರಾಣಿಗಳ

ಜಂತೂನಾಂ ಸುಮಹಾಜ್ಞಾನಪಾಶಮೂಲಹರಂ ಪರಂ ।
ಪರಮಾಮ್ಮತಸಂಪ್ರಾಪ್ತ್ಯೈ ಪೂರ್ವೈಸ್ಸದ್ಭಿ ರುಪಾಸಿತಂ ॥ ೧೮ ॥

ಶ್ರೀಹಾಲಾಸ್ಯಶಿವಕ್ಷೇತ್ರಂ ಶ್ರವಣಾದಪಿ ಸಿದ್ಧಿದಂ ।
ಪ್ರವೇಶಮಾತ್ರಾಜ್ಜಂತೂನಾಂ ಜೀವನ್ಮುಕ್ತಿಪ್ರದಾಯಕಂ ॥ ೧೯ ॥

ಜೀವನ್ಮುಕ್ತಿಪುರಾಖ್ಯಾಂ ಚ ಬಿಭ್ರಾಣಂ ಸುರದುರ್ಲಭಂ ।
ಸದ್ಯೋ ಗಂತವ್ಯಮಸ್ಮಾಭಿರ್ಜೀವನ್ಮುಕ್ತಿಮಹಾಪುರೀಂ ॥ ೨೦ ॥

ಕೃಪಾಲೋ ರಕ್ಷ ರಕ್ಷಾಸ್ಮಾನ್ದರ್ಶಯಿತ್ವಾ ತು ತತ್ಸ್ಥಲಂ ।
ತತ್ತೀರ್ಥಂ ಚ ಶಿವಾಖ್ಯಂ ಚ ಲಿಂಗಾನಾಮಾದಿಮಂ ಚ ತತ್ ॥ ೨೧ ॥

ತಾಪತ್ರಯಹರಂ ಪುಣ್ಯಂ ವಸತಾಂ ಮನುಜಾದಿನಾಂ ।
ಇತಿ ಸಂಪ್ರಾರ್ಥಿತಸ್ಸರ್ವೈರ್ವಸಿಷ್ಠಾದಿಮುನೀಶ್ವರೈಃ ॥ ೨೨ ॥

---

ಪ್ರತಿ ಕ್ಷಣದಲ್ಲಿಯೂ ಹೆಚ್ಚುತ್ತಿರುವ, ಪಾಶ ರೂಪವಾದ, ಮೂಲ ಕಾರಣವಾದ ಅಜ್ಞಾನವನ್ನು ನಾಶ ಗೊಳಿಸುವುದು. ಉತ್ತಮವಾದ ಗತಿಯನ್ನು ಹೊಂದುವುದಕ್ಕಾಗಿ ಪೂರ್ವಿಕರಾದ ಸತ್ಪುರುಷರು ಈ ಭಕ್ತಿಯನ್ನು ಆಶ್ರಯಿಸಿ ಇರುವರು.

೧೯-೨೨. ಸಂಪದ್ಯುಕ್ತವಾದ, ಹಾಲಾಸ್ಯವೆಂದು ಹೆಸರಿನಿಂದ ಪ್ರಸಿದ್ಧವಾದ ಶಿವ ಕ್ಷೇತ್ರವು ಕೇಳಿದ ಮಾತ್ರದಿಂದ ಸಿದ್ಧಿಯನ್ನು ಉಂಟು ಮಾಡುವುದು. ಈ ಕ್ಷೇತ್ರಕ್ಕೆ ಪ್ರವೇಶ ಮಾಡಿದ ಮಾತ್ರದಿಂದಲೇ ಪ್ರಾಣಿಗಳಿಗೆ ಇದು ಜೀವನ್ಮುಕ್ತಿಯನ್ನು ಉಂಟು ಮಾಡುವುದು. ಜೀವನ್ಮುಕ್ತಿ ಪುರವೆಂದು ಹೆಸರನ್ನು ಹೊಂದಿರುವ, ದೇವತೆಗಳೂ ಹೊಂದಲಶಕ್ಯವಾದ, ಈ ಮಹಾ ನಗರಕ್ಕೆ ನಾವು ಈಗ ಹೋಗಬೇಕೆಂದು ಇರುವೆವು. ಎಲೈ ದಯಾಶಾಲಿಯಾದ ಗುರುವೆ, ನಮಗೆ ಆ ಪ್ರದೇಶವನ್ನು ತೋರಿಸು. ಪವಿತ್ರಕರವಾದ ಆ ತೀರ್ಥವನ್ನೂ, ಶಿವ ಲಿಂಗಗಳಿಗೆ ಎಲ್ಲಕ್ಕೂ ಆದಿಯಾದ, ಅಲ್ಲಿ ವಾಸ ಮಾಡುವವರ ತಾಪತ್ರಯವನ್ನು ನಾಶ ಮಾಡುವ, ಪುಣ್ಯಕರವಾದ, ಶಿವಲಿಂಗವನ್ನು ನಮಗೆ ತೋರಿಸು. ಕಾಪಾಡು, ಕಾಪಾಡು ಎಂದು ಹೇಳುತ್ತಾ, ವಸಿಷ್ಠನೇ ಮೊದಲಾದ ಋಷಿಗಳೆಲ್ಲರೂ ಅಗಸ್ತ್ಯಋಷಿಯನ್ನು ಪ್ರಾರ್ಥನೆ ಮಾಡಿದರು.

ಭಗವಾನ್ ಕುಂಭಸಂಭೂತೋ ಹಾಲಾಸ್ಯೇಶೇತಿಭಕ್ತಿಮಾನ್ ।
ಆನಂದಾತಿಶಯೇನಾಶು ಸಾನಂದಾಶ್ರುವಿಲೋಚನಃ ॥ ೨೩ ॥

ತಥಾ ಕರಿಷ್ಯ ಇತ್ಯುಕ್ತ್ವಾ ಹರ್ಷಗದ್ಗದಯಾ ಗಿರಾ ।
ಅನ್ಯೇದ್ಯುಃ ಪ್ರಾತರುತ್ಥಾಯ ನಿತ್ಯಕೃತ್ಯಂ ವಿಧಾಯ ಚ ॥ ೨೪ ॥

ಮಣಿಕರ್ಣ್ಯಾಂ ಮಹಾತೀರ್ಥೇ ವಿಶ್ವನಾಥಂ ಪ್ರಣಮ್ಯ ಚ ।
ವಿಶಾಲಾಕ್ಷೀಂ ವಿಶ್ವನಾಥಂ ನತ್ವಾ ಧುಂಡಿವಿನಾಯಕಂ ॥ ೨೫

ದಂಡಪಾಣಿಂ ಚ ನತ್ವಾಥ ಪುರೀಂ ಸರ್ವಾಂ ವಿಲೋಕ್ಯ ಚ ।
ನತ್ವಾ ಪ್ರದಕ್ಷಿಣೀಕೃತ್ಯ ನಾನಾಮುನಿಗಣಾವೃತಃ ॥ ೨೬ ॥

ಅಕರೋದ್ಗಂತುಮುದ್ಯೋಗಂ ಶಿವಲೋಕಂ ಭುವಿ ಸ್ಥಿತಂ ।
ಪತಿವ್ರತಾ-ಶಿರೋರತ್ನಕಲತ್ರೇಣ ಚ ಸಂಯುತಃ ॥ ೨೭ ॥

---

೨೩. ಪೂಜ್ಯನಾದ ಅಗಸ್ತ್ಯ ಋಷಿಯು ಹಾಲಾಸ್ಯೇಶ್ವರನಲ್ಲಿ ಬಹಳ ಭಕ್ತಿಯುಳ್ಳವನಾಗಿ, ಬಹಳ ಸಂತೋಷದಿಂದ ಆನಂದ ಬಾಷ್ಪಗಳನ್ನು ಸುರಿಸುತ್ತಿದ್ದನು. ಇವನಿಗೆ ಋಷಿಗಳ ಮಾತನ್ನು ಕೇಳಿ ಸಂತೋಷದಿಂದ ವಿಕಾರವಾದ ಧ್ವನಿಯಿಂದ " ಹಾಗೆಯೇ ಮಾಡುತ್ತೇನೆ "ಎಂದು ಉತ್ತರವನ್ನು ಹೇಳಿದನು.

೨೪-೨೭. ಅಗಸ್ತ್ಯಋಷಿಯು ಮಾರನೆಯದಿನ ಬೆಳಗಾದ ಕೂಡಲೇ ಎದ್ದು, ಉತ್ತಮ ತೀರ್ಥವಾದ ಮಣಿಕರ್ಣಿಕೆಯಲ್ಲಿ ತನ್ನ ಸ್ನಾನವೇ ಮೊದಲಾದ ನಿತ್ಯ ಕರ್ಮಗಳನ್ನು ಮಾಡಿಕೊಂಡು, ವಿಶ್ವೇಶ್ವರನಿಗೂ, ವಿಶಾಲಾಕ್ಷಿ ದೇವಿಗೂ, ಧುಂಡಿ ವಿನಾಯಕನಿಗೂ, ದಂಡಪಾಣಿಗೂ, ನಮಸ್ಕರಿಸಿ, ನಗರವೆಲ್ಲವನ್ನೂ ನೋಡಿ, ನಗರಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದನು ಅನಂತರದಲ್ಲಿ ಅವನು ಅನೇಕ ಋಷಿ ಸಮೂಹದಿಂದ ಕೂಡಿದವನಾಗಿ, ಭೂಮಿಯಲ್ಲಿರುವ ಶಿವಲೋಕಕ್ಕೆ (ಹಾಲಾಸ್ಯ ಕ್ಷೇತ್ರಕ್ಕೆ) ಹೊರಡುವ ಪ್ರಯತ್ನವನ್ನು ಮಾಡಿದನು. ಅವನು ಪತಿವ್ರತಾ ಶಿರೋ ಮಣಿಯಾದ ತನ್ನ ಪತ್ನಿಯೊಡನೆಯೂ, ಶಿಷ್ಯರೊಡನೆಯೂ, ತನ್ನ ತಪಸ್ಸಿನಿಂದ ತಾನು ಸಂಪಾದಿಸಿದ ವಿಮಾನವನ್ನು ಹತ್ತಿಕೊಂಡು ಅಂತರಿಕ್ಷಮಾರ್ಗದಿಂದ ಹೊರಟನು.

ತಪೋವಿಮಾನಮಾರುಹ್ಯ ಸಶಿಷ್ಯ ಸ್ಸ ನಭೋಗತಃ ।
ವಸಿಷ್ಠಾದಿಮುನೀಂದ್ರಾಶ್ಚ ಸ್ವತಪೋಭಿಃ ಕೃತಾನಿ ಚ ॥ ೨೮ ॥

ವಿಮಾನಾನ್ಯಧಿರುಹ್ಯ ದ್ರಾಗನುಜಗ್ಮು ರ್ಘಟೋದ್ಭವಂ ।
ಅಭಾತಿ ಕುಂಭಸಂಭೂತ ಸ್ತ್ಯೈಃ ಸಮಸ್ತೈರ್ಮುನೀಶ್ವರೈ ॥ ೨೯ ॥

ತಾರಹಾರಾಪರಿವೃತೋ ರಾಕಾಚಂದ್ರ ಇವಾಂಬರೇ ।
ಶಿಷ್ಯೈರನೇಕೈ ಸ್ತೇಜಿಷ್ಠೈ ರ್ಭೂಷಿತೈಃ ಕುಂಭಜನ್ಮ ಸಃ ॥ ೩೦ ॥

ವ್ಯೋಮಯಾನಂ ವಾಲಖಿಲ್ಯೈರ್ಭಾತಿ ಭಾನೋರ್ವಿಮಾನವತ್ ।
ಪುಷ್ಪಿತಾನ್ಪುಣ್ಯವೃಕ್ಷಾಂಶ್ಚ ಸ್ವಪಕ್ವಫಲಸಂಯುತಾನ್ ॥ ೩೧ ॥

ಪುಣ್ಯಾ ನದೀಶ್ಚ ಗಂಗಾದ್ಯಾ ಸ್ಸರಾಂಸಿ ವಿವಿಧಾನಿ ಚ ।
ತಪೋವನಾನಿ ಪುಣ್ಯಾನಿ ಪವಿತ್ರಾಶ್ಚ ವನಸ್ಥಲೀಃ ॥ ೩೨ ॥

---

೨೮-೩೨. ವಸಿಷ್ಠನೇ ಮೊದಲಾದ ಋಷಿಗಳು, ತಮ್ಮ ತಪಸ್ಸುಗಳಿಂದ ಸಂಪಾದಿಸಿದ ವಿಮಾನಗಳನ್ನು ಹತ್ತಿಕೊಂಡು, ಅಗಸ್ತ್ಯಋಷಿಯನ್ನು ಅನುಸರಿಸಿ ಪ್ರಯಾಣ ಮಾಡಿದರು. ಆಗ ಅಗಸ್ತ್ಯಋಷಿಯು ಆ ಮುನೀಂದ್ರರೊಡನೆ ಕೂಡಿದವನಾಗಿ ಅಂತರಿಕ್ಷದಲ್ಲಿ ದಷ್ಟವಾದ ನಕ್ಷತ್ರಗಳಿಂದ ಕೂಡಿರುವ ಪೂರ್ಣಿಮೆಯ ಚಂದ್ರನಂತೆ ಪ್ರಕಾಶಿಸುತ್ತಿದ್ದನು. ಬಹಳ ತೇಜಶ್ಶಾಲಿಗಳಾದ ಅಗಸ್ತ್ಯ ಋಷಿಯ ಶಿಷ್ಯರಿಂದ ಕೂಡಿದ ವಿಮಾನವು, ವಾಲಖಿಲ್ಯರಿಂದ ಕೂಡಿದ ಸೂರ್ಯನ ವಿಮಾನದಂತೆ ಪ್ರಕಾಶಿಸುತ್ತಿತ್ತು. ಹೂವುಗಳಿಂದಲೂ ಚೆನ್ನಾಗಿ ಹಣ್ಣಾಗಿರುವ ಫಲಗಳಿಂದಲೂ, ಕೂಡಿರುವ ಪವಿತ್ರವಾದ ಮರಗಳು, ಪವಿತ್ರವಾದ ಗಂಗೆಯೇ ಮೊದಲಾದ ನದಿಗಳು, ಅನೇಕ ವಿಧವಾದ ಸರೋವರಗಳು, ಪುಣ್ಯಕರವಾದ ತಪೋವನಗಳು, ಪರಿಶುದ್ಧವಾದ ಕಾಡಿನ ಪ್ರದೇಶಗಳು, ಶ್ರೀಶೈಲವೇ ಮೊದಲಾದ ಶಿವಕ್ಷೇತ್ರಗಳು, ಇವುಗಳನ್ನು ಅಗಸ್ತ್ಯಋಷಿಯು ನೋಡುತ್ತಾ ಪ್ರಯಾಣ ಮಾಡುತ್ತಿದ್ದನು.

ಶ್ರೀ ಶೈಲಪ್ರಮುಖಾನ್ ಶೈಲಾನ್ ಶಿವೇನಾಧಿಷ್ಠಿತಾನ್ ವರಾನ್ ।
ಪ್ರಾಸಾದೈರ್ಗೋಪುರೈರುಚ್ಚೈಃ ಪ್ರಾಕಾರೈಶ್ಚೋಪಶೋಭಿತಾನಿ ಚ ॥ ೩೩ ॥

ಶಿವಕ್ಷೇತ್ರಾಣ್ಯನಂತಾನಿ ಶ್ರೀಮತ್ಕಾಂಚ್ಯಾದಿಕಾನಿ ಚ ।
ವಿಲೋಕ್ಯ ವಿಸ್ಮಿತೋ ಭಕ್ತ್ಯಾ ಮುದಾ ಚ ಪರಯಾ ಯುತಃ ॥ ೩೪ ॥

ತೇಷಾಂ ಮಾಹಾತ್ಮ್ಯಮಖಿಲಂ ವದಂಸ್ತೇಷಾಂ ಮಹಾಮುನಿಃ ।
ಶ್ರೀಹಾಲಾಸ್ಯಶಿವಕ್ಷೇತ್ರೇ ಸೀಮಾಂತೇಷು ಪ್ರಕಲ್ಪಿತಂ ॥ ೩೫ ॥

ಹಾಲಾಸ್ಯಾಖ್ಯಂ ಮಹಾಸಾಲಂ ಗೋಪುರೈರತಿರಂಜಿತಂ ।
ದದರ್ಶ ಕುಂಭಸಂಭೂತಶ್ಚಕ್ರವಾಲಾದ್ರಿಸನ್ನಿಭಂ ॥ ೩೬ ॥

ವಿಮಾನಾದವರುಹ್ಯಾಶು ವಸಿಷ್ಠಾದ್ಯೈರ್ಮುನೀಶ್ವರೈಃ ।
ಸಾರ್ಧಂ ಪ್ರಣಾಮಮಕರೋತ್ತಸ್ಮೈ ಸಾಲವರಾಯ ಚ ॥ ೩೭ ॥

ಗೋಪುರಾಣಿ ನಮಸ್ಕೃತ್ಯ ವಿಮಾನಂ ಚ ಮಹಾದ್ಭುತಂ ।
ತತಃ ಕದಂಬವಿಪಿನಂ ಶಿವಸ್ಯ ಮುನಿಭಿಸ್ಸಹ ॥ ೩೮ ॥

---

೩೩-೩೮. ಎತ್ತರವಾದ ಗೋಪುರಗಳಿಂದಲೂ, ಪ್ರಾಕಾರದಿಂದಲೂ ಮೆರೆಯುತ್ತಿರುವ, ಅನೇಕವಾದ ಶಿವಕ್ಷೇತ್ರಗಳನ್ನು ಅವನು ನೋಡಿದನು. ಇದರಿಂದ ಅವನಿಗೆ ಬಹಳ ಆಶ್ಚರ್ಯವು ಉಂಟಾಯಿತು. ಭಕ್ತಿ ಸಂತೋಷಗಳಿಂದ ಕೂಡಿದ ಅಗಸ್ತ್ಯ ಋಷಿಯು, ಆಯಾಯ ಕ್ಷೇತ್ರಗಳ ಮಹಿಮೆಯನ್ನು ಆ ಋಷಿಗಳಿಗೆ ಎಲ್ಲರಿಗೂ ಹೇಳುತ್ತಿದ್ದನು. ಅನಂತರದಲ್ಲಿ ಅಗಸ್ತ್ಯಋಷಿಯು ಹಾಲಾಸ್ಯ ಕ್ಷೇತ್ರದ ಎಲ್ಲೆಯನ್ನು ತೋರಿಸುವ ಗೋಪುರಗಳಿಂದ ಕೂಡಿದ, ಚಕ್ರವಾಳ ಪರ್ವತಕ್ಕೆ ಸಮನಾದ, ಕೋಟೆಯನ್ನು ನೋಡಿದನು· ಆಗ ಅವನು ಕೂಡಲೇ ವಸಿಷ್ಠನೇ ಮೊದಲಾದ ಋಷಿಗಳೊಡನೆ ವಿಮಾನದಿಂದ ಇಳಿದು ಆ ಕೋಟೆಗೆ ನಮಸ್ಕಾರವನ್ನು ಮಾಡಿದನು. ಅವನು ಗೋಪುರಗಳು, ಅತ್ಯಾಶ್ಚರ್ಯವಾದ ಶಿವನ ವಿಮಾನ, ಕದಂಬ ವಿಪಿನ, ಇವುಗಳಿಗೆ ನಮಸ್ಕರಿಸಿದನು.

ತತಃ ಪ್ರವೇಶಯಾಮಾಸ ಜೀವನ್ಮುಕ್ತಿಪ್ರದಾಂ ಪುರೀಂ ।
ಜೀವನ್ಮುಕ್ತಾ ಭವಾಮೋದ್ಯೇತ್ಯತಿಪ್ರೀತಾ ಮುನೀಶ್ವರಾಃ ॥ ೩೯ ॥

ತತೋ ವೇಗವತೀಂ ಪ್ರಾಪ್ಯ ಸಾಕ್ಷಾದ್ಗಂಗಾಂ ಸಮಾಗತಾಂ ।
ಪುರಾ ಶಿರಸಿ ಶಂಭೋಶ್ಚ ಸ್ಥಿತಾಂ ಪಶ್ಚಾಚ್ಛಿವಾಜ್ಞಯಾ ॥ ೪೦ ॥

ಸಮಾಗತಾಂ ನದೀರೂಪಾಂ ಭೋಗಮೋಕ್ಷಪ್ರದಾಯಿನೀಂ ।
ಸಮಂತ್ರಂ ವಿಧಿನಾ ಸ್ನಾತ್ವಾ ತತ್ರ ಚಕ್ರುರ್ಮುನೀಶ್ವರಾಃ ॥ ೪೧ ॥

ತರ್ಪಣಾದೀನಿ ವಿಧಿವದ್ದೇವರ್ಷಿಪಿತೃತೃಪ್ತಯೇ ।
ಅಥೋತ್ತರ ಶ್ರೀಹಾಲಾಸ್ಯ ಲಿಂಗಂ ಸಂಸೇವ್ಯ ಚೇಶ್ವರೀಂ ॥ ೪೨ ॥

ನತ್ವಾ ಪುನಃ ಪುನಃ ಶಂಭುಂ ಪ್ರಾದಕ್ಷಿಣ್ಯಂ ವಿಧಾಯ ಚ ।
ಸಪ್ತಸಾಗರತೀರ್ಥೇ ಚ ಸಂಸ್ನಾಯ ಕೃತತರ್ಪಣಾಃ ॥ ೪೩ ॥

---

೩೯-೪೨. ಅನಂತರದಲ್ಲಿ ಅವನು ಜೀವನ್ಮುಕ್ತಿಯನ್ನು ಕೊಡುವ ಜೀವನ್ಮುಕ್ತಿ ನಗರಕ್ಕೆ ಪ್ರವೇಶ ಮಾಡಿದನು. ಆಗ ಋಷಿಗಳೆಲ್ಲರೂ ನಾವೆಲ್ಲರೂ ಜೀವನ್ಮುಕ್ತರಾಗೋಣವೆಂದು ಬಹಳ ಸಂತೋಷದಿಂದ ಆ ನಗರವನ್ನು ಪ್ರವೇಶಿಸಿದರು. ಶಿವನ ಶಿರಸ್ಸಿನಲ್ಲಿರುತ್ತಾ, ಅನಂತರ ಗಂಗಾನದೀ ರೂಪದಿಂದ ಇರುವ, ಶಿವನ ಆಜ್ಞಾನುಸಾರವಾಗಿ ಭುಕ್ತಿ ಮುಕ್ತಿ ಪ್ರದಳಾದ ವೇಗವತೀ ನದಿಯಾಗಿ ಹರಿಯುವ ತೀರ್ಥದಲ್ಲಿ ಶಾಸ್ತ್ರಕ್ಕನುಸಾರವಾಗಿ ಮಂತ್ರ ಪೂರ್ವಕವಾದ ಸ್ನಾನವನ್ನು ಮಾಡಿದರು. ಅವರೆಲ್ಲರೂ ದೇವತೆಗಳು, ಋಷಿಗಳು. ಪಿತೃಗಳು, ಇವರ ತೃಪ್ತಿಗಾಗಿ ಶಾಸ್ತ್ರಕ್ರಮಕ್ಕನುಸಾರವಾಗಿ ತರ್ಪಣವನ್ನು ಮಾಡಿದರು. ಕೂಡಲೇ ಉತ್ತರ ಹಾಲಾಸ್ಯ ಕ್ಷೇತ್ರದಲ್ಲಿರುವ ಶಿವಲಿಂಗವನ್ನೂ, ದೇವಿಯನ್ನೂ, ಸೇವಿಸಿದರು. ಪ್ರದಕ್ಷಿಣೆಮಾಡಿ ಅನೇಕಸಾರಿ ನಮಸ್ಕಾರ ಮಾಡಿದರು.

೪೩-೪೭. ಅವರು ಸಪ್ತಸಾಗರ ತೀರ್ಥದಲ್ಲಿ ಸ್ನಾನಮಾಡಿ, ತರ್ಪಣಾದಿಗಳನ್ನು ಮಾಡಿ, ದೇವತೆಗಳೇ ಮೊದಲಾದವರಿಗೆ ತೃಪ್ತಿಯನ್ನುಂಟು ಮಾಡಿದರು. ಸಪ್ತಸಾಗರ ತೀರ್ಥವೆಂಬುವುದು, ಶಿವನು ನಿರ್ಮಿಸಿರುವ ಶಿವತೀರ್ಥಕ್ಕೆ ಸೇರಿದ ಹಾಗೆಯೇ

ದೇವಾದೀನಾಮತಿಪ್ರೀತಿಮಕುರ್ವನ್ ಮುನಿಪುಂಗವಾಃ ।
ಸಪ್ತಸಾಗರತೀರ್ಥಂ ಚ ಸಾಗರೈಶ್ಚ ಪ್ರತಿಷ್ಠಿತಂ ॥ ೪೪ ॥

ಶಿವತೀರ್ಥಸಮಾಯುಕ್ತೇ ಮಹಾಶಂಭುವಿನಿರ್ಮಿತೇ ।
ಕಲೇರಗ್ರೇ ಹ್ಯಾದಿಕಾಲೇ ಪೂರ್ವಸ್ಯಾಂ ದಿಶಿ ಚಾಗ್ರತಃ ॥ ೪೫ ॥

ಸ್ವಸ್ವ ನಾಮಯುತಂ ಸಪ್ತ ದಿಕ್ಷು ಮುಕ್ತಿದಮಾತ್ಮನಾ ।
ಸಂಪೂಜ್ಯ ಪ್ರಣತಿಂ ಕೃತ್ವಾ ತೀರ್ಥಂ ಚೈವ ಪ್ರದಕ್ಷಿಣಂ ॥ ೪೬ ॥

ದೇವಾದೀನಾಮತಿಪ್ರೀತಿಂ ಕುರ್ವಂತೋ ಮುನಿಸತ್ತಮಾಃ ।
ತತ್ರ ದತ್ವಾ ಚ ದಾನಾನಿ ಭೋಜಯಿತ್ವಾ ದ್ವಿಜಾನಪಿ ॥ ೪೭ ॥

ಅಥ ಹೇಮಾರ್ಜನೀತೀರ್ಥಂ ಪ್ರಾಪ್ಯ ಕುಂಭಭಿದೇನಲೇ ।
ಸಂಕಲ್ಪ್ಯಾಘಹರೈರ್ಮಂತ್ರೈಃ ಸ್ನಾತಾಸ್ತೇ ಸುಭಸ್ಮನಾ ॥ ೪೮ ॥

---

ಸಪ್ತ ಸಾಗರಗಳೂ ನಿರ್ಮಿಸಿದ್ದಾಗಿರುವುದು. ಕಲಿಯುಗಕ್ಕಿಂತಲೂ ಮುಂಚಿತವಾಗಿ ಪ್ರತಿಷ್ಠಿತವಾಗಿ ಇರುವುದು. ಎಲ್ಲರಿಗೂ ಮುಕ್ತಿಯನ್ನು ಉಂಟುಮಾಡುವ ಈ ತೀರ್ಥಕ್ಕೆ ಏಳು ದಿಕ್ಕುಗಳಲ್ಲಿಯೂ ಭಕ್ತಿಯಿಂದ ಪೂಜಾಪ್ರದಕ್ಷಿಣೆ ನಮಸ್ಕಾರ ಇವುಗಳನ್ನು ಮಾಡಿದರು. ಆ ಋಷಿಗಳು ದಾನಮಾಡಿ, ದೇವತೆಗಳ ತೃಪ್ತಿಯನ್ನು ಉಂಟುಮಾಡಿ ಬ್ರಾಹ್ಮಣರಿಗೆ ಅನ್ನದಾನಗಳನ್ನು ಮಾಡಿದರು.

೪೮-೫೧. ಅನಂತರದಲ್ಲಿ ಅವರೆಲ್ಲರೂ ಅಗಸ್ತ್ಯ ಋಷಿಯ ಅನುಜ್ಞೆಯಂತೆ ಹೇಮಾಬ್ಜಿನೀ ತೀರ್ಥಕ್ಕೆ ಬಂದರು. ಅಲ್ಲಿ ಪಾಪನಾಶಕವಾದ ಮಂತ್ರಗಳಿಂದ ಸ್ನಾನವನ್ನು ಮಾಡಿದರು. ಭಸ್ಮೋದ್ಧೂಳನೆಯನ್ನು ಮಾಡಿಕೊಂಡರು. ಶ್ರೀಭಸ್ಮದಿಂದ ತ್ರಿಪುಂಡ್ರ ಧಾರಣೆಯನ್ನು ಮಾಡಿದರು. ಸರ್ವ ಪಾಪನಾಶಕಗಳಾದ ರುದ್ರಾಕ್ಷ ಮಾಲೆಗಳನ್ನು ಶಿರಸ್ಸು, ಕಂಠ, ಬಾಹು ಇವುಗಳಲ್ಲಿ ಧರಿಸಿದರು. ಅವರು ಇಷ್ಟಸಿದ್ಧಿಯನ್ನು ಕೊಡುವ ಸಿದ್ಧಿವಿನಾಯಕನನ್ನು ಸೇವಿಸಿದರು. ಮಯೂರ ವಾಹನ

ಆಲಿಪ್ಯಾಂಗಾನ್ಯಶೇಷಾಣಿ ಧೃತ್ವಾ ಚೈವ ತ್ರಿಪುಂಡ್ರಕಂ ।
ತಥಾ ರುದ್ರಾಕ್ಷಮಾಲಾಶ್ಚ ಸಮಸ್ತಾಘಹರಾಃ ಪರಾಃ ॥ ೪೯ ॥

ಮೂರ್ಧ್ನಾ ಕಂಠೇನ ಬಾಹುಭ್ಯಾಂ ಧೃತ್ವಾ ಸರ್ವಮುನೀಶ್ವರಾಃ ।
ಅಭೀಷ್ಟಸಿದ್ಧಿದಂ ಸಿದ್ಧಿವಿನಾಯಕಮುಪಾಸ್ಯ ಚ ॥ ೫೦ ॥

ಷಡಾನನಂ ಬರ್ಹಿವಾಹಂ ನಮಸ್ಕೃತ್ಯ ಪ್ರಣಮ್ಯ ಚ ।
ಸುಮೀನಾಕ್ಷೀಂ ಮಹಾದೇವೀಂ ದೃಷ್ಟ್ವಾ ನತ್ವಾ ಪ್ರಣಮ್ಯ ಚ ॥ ೫೧ ॥

ಪ್ರದಕ್ಷಿಣಕ್ರಮೇಣೈವ ಚಂಡೀಶಂ ಸಂಪ್ರಣಮ್ಯ ಚ ।
ಪುನಃ ಪುನ ರ್ನಮಸ್ಕೃತ್ವಾ ಸ್ತವೈಃ ಸ್ತುತ್ವಾ ಸ್ತವಪ್ರಿಯಾಂ ॥ ೫೨ ॥

ಸುತರಾಂ ಪ್ರೀಣಯಾಮಾಸು ರ್ಮೀನಾಕ್ಷೀಂ ಮುನಿಪುಂಗವಾಃ ।
ಸಾಪಿ ದೇವೀ ದದೌ ತೇಭ್ಯಃ ಪ್ರತ್ಯಕ್ಷೀಕೃತ್ಯ ಶಂಕರಂ ॥ ೫೩ ॥

---

ನಾದ ಕುಮಾರ ಸ್ವಾಮಿಯನ್ನು ಪ್ರದಕ್ಷಿಣ ನಮಸ್ಕಾರಗಳಿಂದ ಪೂಜಿಸಿದರು. ಮೀನಾಕ್ಷೀ ಮಹಾದೇವಿಯ ದರ್ಶನವನ್ನು ಮಾಡಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿದರು.

೫೨-೫೩. ಅವರು ಪ್ರದಕ್ಷಿಣೆಯ ಕ್ರಮದಿಂದ ಚಂಡೀಶ್ವರನಿಗೆ ಪ್ರಣಾಮಗಳನ್ನು ಮಾಡಿದರು. ಅನಂತರ ಬದಲಾಗಿ ಸ್ತೋತ್ರ ಪ್ರಿಯಳಾದ ಮೀನಾಕ್ಷೀ ದೇವಿಯನ್ನು ದರ್ಶನ ಮಾಡಿ, ನಮಸ್ಕರಿಸಿ, ಸ್ತೋತ್ರಗಳನ್ನೂ ಹೇಳಿ, ಬಹಳ ಮಟ್ಟಿಗೆ ಸಂತೋಷ ಉಂಟಾಗುವ ಹಾಗೆ ಮಾಡಿರುವುದರಿಂದ ಆ ದೇವಿಯು ಪ್ರತ್ಯಕ್ಷಳಾಗಿ, ಶಿವನನ್ನು ಪ್ರತ್ಯಕ್ಷ ಮಾಡಿಕೊಡುವ ಭಕ್ತಿಯನ್ನೂ, ಅಣಿಮಾದ್ಯಷ್ಟ ಸಿದ್ಧಿಗಳನ್ನೂ ಅನುಗ್ರಹಿಸಿದಳು. ಮತ್ತು ತನ್ನ ಪಾದಗಳಲ್ಲಿ ಆ ಋಷಿಗಳಿಗೆ ದೃಢವಾದ ಭಕ್ತಿಯು ಉಂಟಾಗುವಂತೆಯೂ ಅನುಗ್ರಹವನ್ನು ಮಾಡಿದಳು.

ಭಕ್ತ್ಯಾಂ ಸ್ವಪಾದಯುಗ್ಮೇ ಚ ಐಶ್ವರ್ಯಮಣಿಮಾದಿಕಂ ।
ಅಥ ಪ್ರದಕ್ಷಿಣೀಕೃತ್ಯ ಸುಂದರೇಶಾಲಯಂ ದ್ವಿಜಾಃ ॥ ೫೪ ॥

ವೃಷಭಾಗ್ರೇ ಸಂಪ್ರಣಮ್ಯ ದ್ವಾರಪಾಲ್ರಾ ಪ್ರಣಮ್ಯ ಚ ।
ನಂದಿಕೇಶಂ ಚ ಸುಯಶಾ ನಮಸ್ಕೃತ್ಯ ಪ್ರಣಮ್ಯ ಚ ॥ ೫೫ ॥

ಅಥ ದಿವ್ಯವಿಮಾನಸ್ಥಂ ಲಿಂಗಾನಾಂ ಚ ಸಮಷ್ಟಿಕಂ ।
ಆದಿಲಿಂಗಂ ಮಹೇಶಸ್ಯ ಕೈವಲ್ಯಾದ್ಭುತರೂಪಿಣಂ ॥ ೫೬ ॥

ದೃಷ್ಟ್ವಾ ಭಕ್ತ್ಯಾ ಪರವಶಾ ಅಭವನ್ ಮುನಿಪುಂಗವಾಃ ।
ಅಥ ಪ್ರಣಮ್ಯ ಪ್ರಸ್ತುತ್ಯ ಸ್ತುತ್ಯಂ ತಂ ಸೋಮಸುಂದರಂ ॥ ೫೭ ॥

ವಿಧಿನಾ ಪೂಜಯಾಮಾಸು ಷೋಡಶೈರುಪಚಾರಕೈಃ ।
ಪೂಜಾಂ ಸಮಾಪ್ಯ ಸರ್ವೇಽಪಿ ಹ್ಯಗಸ್ತ್ಯಮುನಿನಾ ದ್ವಿಜಾಃ ॥ ೫೮ ॥

---

೫೪-೫೮. ಆ ಋಷಿಗಳೆಲ್ಲರೂ ಸುಂದರೇಶ್ವರನ ದೇವಾಲಯವನ್ನು ಪ್ರದಕ್ಷಿಣೆ ಮಾಡಿದರು. ವೃಷಭದ ಎದುರಿನಲ್ಲಿ ನಮಸ್ಕಾರ ಮಾಡಿದರು. ದ್ವಾರಪಾಲಕರನ್ನು ಸೇವಿಸಿದರು. ಬಹಳ ( ಹೆಸರು ವಾಸಿಯಾದ ) ಕೀರ್ತಿವಂತನಾದ ನಂದಿಕೇಶ್ವರನಿಗೆ ನಮಸ್ಕಾರ ಮಾಡಿದರು. ಇವರೆಲ್ಲರನ್ನೂ ಸೇವಿಸಿದ ನಂತರ ಸರ್ವ ಶಿವಲಿಂಗಗಳಿಗೂ ಸಮಷ್ಟಿಯಾಗಿರುವ, ದೇವನಿರ್ಮಿತವಾದ ವಿಮಾನಗಲ್ಲಿರುವ, ಬಹಳ ಆಶ್ಚರ್ಯಕರವಾದ ಆದಿಲಿಂಗರೂಪದಿಂದ ಇರುವ, ಪರಮೇಶ್ವರನನ್ನು ನೋಡಿದರು. ಆಗ ಅವರಿಗೆ ಉಂಟಾದ ಭಕ್ತಿಯು (ಬಹಳವಾಗಿತ್ತು) ತಾನೇ ತಾನಾಗಿ ಮೆರೆಯುತ್ತಿತ್ತು. ಆಗ ಆ ಋಷಿಗಳು ಸ್ತುತಿಮಾಡಲು ಅರ್ಹನಾದ ಸೋಮಸುಂದರೇಶ್ವರನಿಗೆ ನಮಸ್ಕರಿಸಿ, ಸ್ತೋತ್ರಗಳನ್ನು ಹೇಳಿ ಶಾಸ್ತ್ರಕ್ಕನುಸಾರವಾಗಿ ಷೋಡಶೋಪಚಾರ ಪೂಜೆಯನ್ನು ಮಾಡಿದರು. ಅವರು ಅಗಸ್ತ್ಯ ಋಷಿಯೊಡನೆ ಪೂಜೆಯನ್ನು ನೆರವೇರಿಸಿದನಂತರ ಪ್ರಾಕಾರವೆಲ್ಲಕ್ಕೂ ಪ್ರದಕ್ಷಿಣೆಮಾಡಿ ನಮಸ್ಕಾರ ಮಾಡಿದರು.

ಪರಿವೃತ್ಯಾತಿಪ್ರಾಕಾರಂ ನಮಸ್ಕೃತ್ವಾ ಮುನೀಶ್ವರಾಃ ।
ಶ್ರೀರುದ್ರೈಸ್ಸಂಪ್ರಣಮ್ಯೇಶಂ ಸ್ತುತ್ಯಂ ತಂ ಸುಂದರೇಶ್ವರಂ ॥ ೫೯ ॥

ಸ್ತೋತ್ರೈರ್ಬಹುವಿಧೈಸ್ಸ್ತುತ್ವಾ ಧ್ಯಾತ್ವಾ ಲಿಂಗಂ ಚ ವಿಸ್ಮಯಂ ।
ಪೂಜಾಂ ಸಮಾಪ್ಯ ಸರ್ವೇಽಪಿ ಹ್ಯಗಸ್ತ್ಯೇನ ಮುನೀಶ್ವರಾಃ ॥ ೬೦ ॥

ಈಶಸ್ಯಾಗ್ರೇ ವೃಷೇಶಂ ಚ ನಮಸ್ಕೃತ್ವಾ ಮಹೇಶಿತುಃ ।
ಸರ್ವತೀರ್ಥಾಶ್ರಯಂ ಚಾಂಡಂ ದ್ರಷ್ಟುಂ ತಂ ನಂದಿನಂ ಶುಭಂ ॥ ೬೧ ॥

ಮಧ್ಯೇ ವಿಷಾಣಯೋರ್ದೃಷ್ಟ್ವಾ ಲಿಂಗಂ ವಿಶ್ವೇಶ್ವರಂ ಶಿವಂ ।
ಹಾಲಾಸ್ಯಲಿಂಗಂ ಮಾಲಾಭಿರ್ವೇಷ್ಟಿತಂ ಚೋತ್ಪಲಾದಿಭಿಃ ॥ ೬೨ ॥

ಸತಾರಂ ಸರ್ವಮಂತ್ರಾದ್ಯಂ ಪಂಚಾಕ್ಷರಮಘಾಪಹಂ ।
ಹರಶಬ್ದಂ ಪುರಸ್ಕೃತ್ಯ ದ್ವಿವಾರಂ ಚ ತ್ರಿವಾರಕಂ ॥ ೬೩ ॥

---

೫೯-೬೨. ಆಶ್ಚರ್ಯಕರವಾದ ಹಾಲಾಸ್ಯೇಶ್ವರ ಲಿಂಗವನ್ನು ಬಹಳ ವಿಧವಾದ ಸ್ತೋತ್ರಗಳಿಂದ ಸ್ತುತಿ ಮಾಡಿ ಧ್ಯಾನ ಮಾಡಿದರು. ಆ ಋಷಿಗಳೆಲ್ಲರೂ ಪೂಜೆಯನ್ನು ಮುಗಿಸಿದರು. ಅಗಸ್ತ್ಯಋಷಿಯೊಡನೆ ಶಿವನ ಮುಂದುಗಡೆಯಲ್ಲಿರುವ ವೃಷಭೇಶ್ವರನಿಗೆ ನಮಸ್ಕಾರವನ್ನು ಮಾಡಿದರು. ನೈದಿಲೆಯಹೂವಿನ ಹಾರಗಳೇ ಮೊದಲಾದ ಹಾರಗಳಿಂದ ಅಲಂಕಾರವಾಗಿರುವ, ಪ್ರಪಂಚಕ್ಕೆ ಅಧಿಪತಿಯೂ, ಮಂಗಳಕರನಾಗಿಯೂ ಇರುವ ಹಾಲಾಸ್ಯೇಶ್ವರ ಲಿಂಗವನ್ನು, ವೃಷಭದ ಶೃಂಗಗಳ ಮಧ್ಯದಲ್ಲಿ ದರ್ಶನ ಮಾಡಿದರು. ತೀರ್ಥಗಳೆಲ್ಲಕ್ಕೂ ಆಶ್ರಯನಾಗಿರುವ ನಂದಿಯನ್ನು ದರ್ಶನ ಮಾಡಿದರು.

೬೩-೬೮. ಮಂತ್ರಗಳೆಲ್ಲಕ್ಕೂ ಆದಿಯಾಗಿರುವ ಬೀಜಮಂತ್ರವನ್ನು ಸೇರಿಸಿ ಪಾಪನಾಶಕವಾದ ಪಂಚಾಕ್ಷರ ಮಂತ್ರವನ್ನು ಹರ ಶಬ್ದವು ಮೊದಲು ಬರುವಂತೆ ಎರಡು ಮೂರು ಸಾರಿ ಘಟ್ಟಿಯಾಗಿ ಅವರು ಶಿವನನ್ನು ಧ್ಯಾನಮಾಡುತ್ತಾ ಹೇಳಿದರು. ಆಗ ಋಷಿಗಳ ಭಕ್ತಿಯೂ, ಮತ್ತು ಪೂಜೆಯೂ ಅವುಗಳಿಂದ ಸುಂದರೇಶ್ವರನು

ಉಚ್ಯೈ ಸರ್ವೇ ಪಠಂತಿಸ್ಮ ಧೃತ್ವಾ ಹೃದಿ ಷಡಕ್ಷರಂ ।
ಶೇಷಾಂ ತುಷ್ಟ ಸ್ಸುಂದರೇಶೋ ಮುನೀನಾಂ ಭಕ್ತಿಪೂಜನೈಃ ॥ ೬೪ ॥

ಸ್ತುತೋ ಮಯಾ ಸ್ವಯಂಭೂತಮಹಾಲಿಂಗಾಚ್ಚಿರಂತನಾತ್ ।
ಶ್ರೀಹಾಲಾಸ್ಯಪತಿಃ ಶಂಭುರಾವಿರಾಸೀತ್ ಪರಶ್ಶಿವಃ ॥ ೬೫ ॥

ಕೋಟಿಸೂರ್ಯಪ್ರತೀಕಾಶ ಸ್ಸಚ್ಚಿದಾನಂಗವಿಗ್ರಹಃ ।
ವರದಾಭಯಹಸ್ತಾಭ್ಯಾಂ ವಿರಾಜಿತತನುಶ್ಶಿವಃ ॥ ೬೬ ॥

ಪರಶ್ಶಥೇನ ಹಸ್ತಾಭ್ಯಾಂ ದಿವ್ಯವಸ್ತ್ರಧರೋ ಯುವಾ ।
ಮೀನಾಕ್ಷ್ಯಾ ಸಹಿತಶ್ಶಂಭುಃ ವೃಷಭೋಪರಿಸಂಸ್ಥಿತಃ ॥ ೬೭ ॥

ವರದೋಽಸ್ಮಿ ಪ್ರಸನ್ನೋಽಹಂ ಯುಷ್ಮಾಕಂ ಮುನಿಪುಂಗವಾಃ ।
ವೃಣೀಧ್ವಮಿಷ್ಟಾನ್ ದಾಸ್ಯಾಮಿ ವರಾನ್ಸ್ತೇವಸುದುರ್ಲಭಾನ್ ॥ ೬೮ ॥

ಇತಿ ಶ್ರುತ್ವಾ ಶಿವೇನೋಕ್ತಂ ವಚನಂ ಮುನಿಪುಂಗವಾಃ ।
ಹರ್ಷಾಶ್ರುಪೂರ್ಣನಯನೈ ರ್ಮುನಿಭಿರ್ಭಕ್ತಿತಃ ಕೃತೈಃ ॥ ೬೯ ॥

---

ಪ್ರತ್ಯಕ್ಷನಾದನು. ಹಾಲಾಸ್ಯಪತಿಯಾದ, ಪರಶಿವನಾದ ಸುಂದರೇಶನು, ಅವರ ಎದುರಿನಲ್ಲಿ ಪುರಾತನವಾದ ಶಿವಲಿಂಗದಿಂದ ಕೋಟಿ ಸೂರ್ಯರಕಾಂತಿಯನ್ನು ಧರಿಸಿ, ವರದ ಅಭಯ ಹಸ್ತಗಳುಳ್ಳವನಾಗಿ ಸಚ್ಚಿದಾನಂದ ರೂಪದಿಂದ ಕಾಣಿಸಿಕೊಂಡನು. ಅವನು ಮೀನಾಕ್ಷಿದೇವಿಯೊಡನೆ ಇದ್ದನು. ಯೌವನ ವಯಸ್ಸಿನ ಆಕಾರವನ್ನು ಹೊಂದಿದ್ದನು. ಅವನು "ವೃಷಭ ವಾಹನನಾಗಿರುವ ಆ ದೇವನೇ ನಾನು. ವರವನ್ನು ನಿಮಗೆ ಕೊಡುವೆನು. ನಿಮ್ಮ ವಿಷಯದಲ್ಲಿ ಪ್ರಸನ್ನನಾಗಿರುವೆನು. ವರವನ್ನು ಕೇಳಿರಿ, ನೀವು ಕೇಳುವ ವರವು ಹೊಂದಲಶಕ್ಯವಾಗಿದ್ದರೂ ಅದನ್ನು ನಾನು ಕೊಡುವೆನು" ಎಂದು ಋಷಿಗಳಿಗೆ ಹೇಳಿದನು.

I "ಓಂ ಹರಹರ ನಮಶ್ಶಿವಾಯ II ಓಂ ನಮಶ್ಶಿವಾಯ" (ಎಂದು ಮಂತ್ರವು)

೬೯–೭೩. ಆ ಋಷಿಗಳೆಲ್ಲರೂ ಶಿವನು ಹೇಳಿದ ಮಾತನ್ನು ಕೇಳಿದರು. ಆನಂದಬಾಷ್ಪಗಳಿಂದ ಕೂಡಿದ ಋಷಿಗಳು ಭಕ್ತಿಯಿಂದ ಹೇಳಿದ ಸ್ತೋತ್ರಗಳಿಗೆ

ಸ್ತುವೈರತ್ಯಂತಸಂತುಷ್ಟೋ ವಾಚಾ ಪ್ರಾಹ ಮುನೀಶ್ವರಾನ್ ।
ಯುಷ್ಮದ್ಭಕ್ತಿಪ್ರಭಾವೇನ ಭುಕ್ತೇರ್ಮುಕ್ತೇಶ್ಚ ಹೇತುನಾ ॥ ೭೦ ॥

ಮಯಾ ಪ್ರೀತೇನ ಯುಷ್ಮಾಕಮಿಹ ಭುಕ್ತಿಃ ಪರತ್ರ ಚ ।
ದತ್ತಾ ಮುಕ್ತಿಸ್ಚ ಸಾಯುಜ್ಯರೂಪಿಣೀ ಪರಮಾಮೃತಾ ॥ ೭೧ ॥

ಸರ್ವಲೋಕಹಿತಾರ್ಥಾಯ ರಹಸ್ಯಂ ಪ್ರಬ್ರವೀಮಿ ವಃ ।
ಭೂಲೋಕಶಿವಲೋಕೇಷು ಮದೀಯಾ ಮಹತೀ ಪುರೀ ॥ ೭೨ ॥

ನಾಮತಶ್ಚಾರ್ಥತಶ್ಚಾಪಿ ಜೀವನ್ಮುಕ್ತಿಪುರೀತಿ ಚ ।
ಭುಕ್ತಿಂ ಮುಕ್ತಿಂ ಚ ಯುಗಪದ್ಯೇ ವಾಂಛಂತಿ ಮಹೀತಲೇ ॥ ೭೩ ॥

ನಿವಸಂತು ಚ ತೇ ಸರ್ವೇ ಶ್ರೀಹಾಲಾಸ್ಯೇತಿಪಾವನೇ ।
ಶ್ರೀಹಾಲಾಸ್ಯಮಿದಂ ಪ್ರಾಪ್ಯ ತೂಲಜಾತಾನಲೋಪಮಂ ॥ ೭೪ ॥

---

ಸಂತೋಷಪಟ್ಟಿರುವ ಶಿವನು ನಿಮಗೆ ಉಂಟಾಗಿರುವ ಭಕ್ತಿಯ ಮಹಿಮೆಯಿಂದ ಭುಕ್ತಿ ಮುಕ್ತಿಗಳನ್ನು ಅನುಗ್ರಹಿಸುವುದರಲ್ಲಿ ಕಾರಣನಾದ ನಾನು ಸಂತೋಷಪಟ್ಟು ನಿಮಗೆ ಈ ಲೋಕದಲ್ಲಿ ಭೋಗವನ್ನೂ ಪರಲೋಕದಲ್ಲಿ ನನ್ನ ಸಾಯುಜ್ಯರೂಪವಾದ ಮುಕ್ತಿಯನ್ನೂ ಅನುಗ್ರಹಮಾಡಿ ಕೊಟ್ಟಿರುವೆನು. ಎಲ್ಲಾ ಲೋಕಗಳ ಹಿತಕ್ಕಾಗಿ ನಿಮಗೆ ರಹಸ್ಯವನ್ನೂ ಉಪದೇಶ ಮಾಡುವೆನು. ನಾನು ಈಗ ನೆಲಸಿರುವ ಈ ದೊಡ್ಡದಾದ ನಗರವು ಭೂಲೋಕ, ಶಿವಲೋಕವೆಂದು, ಹೆಸರನ್ನು ಹೊಂದಿರುವುದು. ಈ ಹೆಸರು ಈ ನಗರಕ್ಕೆ ಸಾರ್ಥಕವಾಗಿರುವುದು. ಇದಕ್ಕಾಗಿ ಇದನ್ನು ಜೀವನ್ಮುಕ್ತಿಪುರಿ ಎಂದು ಕರೆಯುವರು. ಭೂಮಿಯಲ್ಲಿ ಭುಕ್ತಿ ಮುಕ್ತಿಗಳನ್ನು ಒಂದೇಕಾಲದಲ್ಲಿಹೊಂದಲು ಅಪೇಕ್ಷಿಸುವವರು ಬಹಳ ಪವಿತ್ರವಾದ ಈ ಹಾಲಾಸ್ಯ ಕ್ಷೇತ್ರದಲ್ಲಿ ವಾಸಮಾಡಲಿ.

೭೪–೭೮. ಪಾಪಿಗಳಾದವರೂ ಕೂಡ ಪಾಪರಾಶಿಯೆಂಬ ಹತ್ತಿಗೆ ಬೆಂಕಿಯಂತೆ ಇರುವ ಈ ಹಾಲಾಸ್ಯ ಕ್ಷೇತ್ರವನ್ನು ಹೊಂದಿ, ಪಾಪಗಳನ್ನು ಕಳೆದುಕೊಂಡು ಜೀವನ್ಮುಕ್ತರಾಗುವರು. ಕಲ್ಲಿನಂತೆ ಸ್ಥಿರವಾಗಿರುವವರೂ, ಚರಪ್ರಾಣಿಗಳೂ

ಪಾಪಿನೋಽಪಿ ಪ್ರವಿಶ್ಯಾಶು ಜೀವನ್ಮುಕ್ತಾ ನಿರೈನಸಃ ।
ಜಂಗಮತ್ವಂ ಗತಾ ಯೇ ಚ ಸ್ಥಾವರತ್ವಂ ಚ ಯೇ ಗತಾಃ ॥ ೭೫ ॥

ಜೀವನ್ಮುಕ್ತಾಶ್ಚ ತೇ ಸರ್ವೇ ಜೀವನ್ಮುಕ್ತಿಪುರೀಂ ಗತಾಃ ।
ಕಾಶ್ಯಾದಿಪುಣ್ಯಕ್ಷೇತ್ರೇಷು ದೇಹಾಂತೇ ಮುಕ್ತಿರೀರಿತಾ ॥ ೭೬ ॥

ಮುಕ್ತಾ ಜೀವಂತ ಏವಾತ್ರ ಶ್ರೀಹಾಲಾಸ್ಯಪುರೇ ಜನಾಃ ।
ಜೀವಂತಶ್ಚ ಭವಂತೋಽದ್ಯ ಮುಕ್ತಾ ಏವ ಮುನೀಶ್ವರಾಃ ॥ ೭೭ ॥

ಮತ್ಸಮೋಽಗಸ್ತ್ಯ ಏವಾಯಂ ತತ್ಪತ್ನೀ ಮತ್ಪ್ರಿಯಾಸಮಾ ।
ತಯೋಃ ಕೃಪಾದೃಗ್ವಿಷಯಃ ಕೋ ವಾ ಸಂಸಾರದುಃಖಭಾಕ್ ॥ ೭೮ ॥

ಶಾಸ್ತ್ರೇ ಸಮಾಧೌ ನಿಯಮೇ ಸರ್ವಜ್ಞೋಽಗಸ್ತ್ಯ ಏವ ಸಃ ।
ತತ್ಸಮೋ ನ ಹಿ ಲೋಕೇಷು ಮತ್ಸ್ವರೂಪವಿದಶ್ಚ ಸಃ ॥ ೭೯ ॥

---

ಇವರೆಲ್ಲರೂ ಜೀವನ್ಮುಕ್ತಿಯನ್ನು ಹೊಂದಿ ಜೀವನ್ಮುಕ್ತರಾಗಿಯೇ ಇರುವರು. ಕಾಶಿಯೇ ಮೊದಲಾದ ಪುಣ್ಯಕ್ಷೇತ್ರಗಳಲ್ಲಿ ಈ ದೇಹವು ನಾಶವಾದ ನಂತರ ಮುಕ್ತಿಯು ಉಂಟಾಗುವುದು. ಈ ನಗರದಲ್ಲಿ ಬದುಕಿರುವಾಗಲೇ ಮುಕ್ತಿಯು ಉಂಟಾಗಿರುವುದು. ಆದ್ದರಿಂದ ನೀವೆಲ್ಲರೂ ನಿಮ್ಮ ಜೀವಿತಕಾಲದಲ್ಲಿಯೇ ಈಗಲೇ ಮುಕ್ತಿಯನ್ನು ಹೊಂದಿರುವಿರಿ. ಈ ಅಗಸ್ತ್ಯಋಷಿಯು ನನಗೆ ಸಮಾನನಾಗಿರುವನು. ಆ ಋಷಿಯ ಪತ್ನಿಯಾದ ಲೋಪಾಮುದ್ರಾ ದೇವಿಯು ನನ್ನ ಪತ್ನಿಯಾದ ಪಾರ್ವತಿಗೆ ಸಮನಾದ ಮಹಿಮೆಯುಳ್ಳವಳು. ಆ ನಮ್ಮಿಬ್ಬರ ದಯಾಪೂರಿತವಾದ ದೃಷ್ಟಿಗೆ ಪಾತ್ರರಾದವರು ಯಾರಾದರೂ, ಸಂಸಾರ ದುಃಖವನ್ನು ಪುನಃ ಹೊಂದುವುದಿಲ್ಲ.

೭೯–೮೨. ಶಾಸ್ತ್ರದ ತಿಳುವಳಿಕೆಯಲ್ಲಿಯೂ, ಧ್ಯಾನಮಾಡುವುದರಲ್ಲಿಯೂ ನಿಯಮದಿಂದ ಇರುವುದರಲ್ಲಿಯೂ, ಅಗಸ್ತ್ಯಋಷಿಯು ತಿಳುವಳಿಕೆಯುಳ್ಳವನು. ನನ್ನ ಸ್ವರೂಪವನ್ನು ತಿಳಿದವರು ಅಗಸ್ತ್ಯಋಷಿಗಿಂತ ಬೇರೆಯಾದವರು ಲೋಕಗಳಲ್ಲಿ

ತಸ್ಮಾತ್ಸರ್ವಜ್ಞತಾ ತಸ್ಯ ಸರ್ವಾನುಗ್ರಹಕಾರಿಣೇ ।
ತತ್ಸರ್ವಜ್ಞತಯಾ ಯೂಯಂ ಕೃತಾರ್ಥಾ ಏವ ಸತ್ವತಃ ॥ ೮೦ ॥

ಮುನೀಶ್ವರಾನುದೀರ್ಯ್ಯೈಶಃ ಕೃಪಾಲು ಸ್ಸುಂದರೇಶ್ವರಃ ।
ವರದಾಭಯಪಾಣಿಭ್ಯಾ ಮಸ್ಪೃಶತ್ಕುಂಭಸಂಭವಂ ॥ ೮೧ ॥

ಮದ್ಭಕ್ತಾನಾಮಗ್ರಗಣ್ಯೋ ಮಹಾತ್ಮಾ ಕುಂಭಜನ್ಮದಃ ।
ಶ್ರೀಹಾಲಾಸ್ಯೇ ಸರ್ವಸಿದ್ಧ್ಯೈ ತಿಷ್ಠ ಸರ್ವಮುನೀಶ್ವರೈಃ ॥ ೮೨ ॥

ಭುಕ್ತಿಂ ಮುಕ್ತಿಂ ಚ ಲಭತಾಂ ತ್ರಿದಶೈರಪಿ ದುರ್ಲಭಾಂ ।
ನಿವಸಂ ಶ್ಚ ಮಹಾಕ್ಷೇತ್ರೇ ಹಾಲಾಸ್ಯೇ ನೃತ್ತಭೂತಲೇ ॥ ೮೩ ॥

ಆದಿಕ್ಷೇತ್ರೇ ಮತ್ಸ್ವರೂಪೇ ಪರಾಶಕ್ತಿಮಯೇ ಮಮ ।
ಇತ್ಯುಕ್ತ್ವಾ ಮೀನನೇತ್ರೇಶಃ ಕೃಪಾದೃಷ್ಟ್ಯಾ ವಿಲೋಕ್ಯ ತಾನ್ ॥ ೮೪ ॥

---

ಯಾರೂ ಇಲ್ಲವು. ಆದ್ದರಿಂದ ಅವನು ಸರ್ವಜ್ಞನಾಗಿರುವನು. ಎಲ್ಲರಿಗೂ ಅನುಗ್ರಹವನ್ನು ಮಾಡುವುದಕ್ಕೆ ತಕ್ಕಷ್ಟು ಶಕ್ತಿಯುಳ್ಳವನಾಗಿರುವನು. ನೀವು ಅವನ ಸರ್ವಜ್ಞತೆಯಿಂದ ಕೃತಾರ್ಥರಾದಿರಿ. " ಎಂದು ದಯಾಶಾಲಿಯಾದ ಸುಂದರೇಶ್ವರನು ಹೇಳಿ, ತನ್ನ ವರದಾಭಯ ಹಸ್ತಗಳಿಂದ ಅಗಸ್ತ್ಯಋಷಿಯನ್ನು ಸ್ಪರ್ಶ ಮಾಡಿದನು. ಮಹಾ ಮಹಿಮನಾದ ಅಗಸ್ತ್ಯಋಷಿಯು ನನ್ನ ಭಕ್ತರಲ್ಲಿ ಮೊದಲನೆಯವನು. ಇವನು ಋಷಿಗಳೆಲ್ಲರೊಡನೆ ಎಲ್ಲಾ ವಿಧವಾದ ಸಿದ್ಧಿಯನ್ನು ಹೊಂದುವುದಕ್ಕಾಗಿ ಈ ಹಾಲಾಸ್ಯ ಕ್ಷೇತ್ರದಲ್ಲಿ ವಾಸ ಮಾಡುತ್ತಾ, ದೇವತೆಗಳೂ ಹೊಂದಲಶಕ್ಯವಾದ ಭುಕ್ತಿ ಮುಕ್ತಿಗಳನ್ನು ಹೊಂದಲಿ.

೮೩-೮೪. ಅಗಸ್ತ್ಯಋಷಿಯು ಪರಾಶಕ್ತಿ ಮಯವಾಗಿರುವ ನನ್ನ ರೂಪಾಂತರವಾದ ಈ ಹಾಲಾಸ್ಯವೆಂಬ ಆದಿ ಕ್ಷೇತ್ರದಲ್ಲಿ ವಾಸ ಮಾಡುತ್ತಿರಲಿ ಎಂದು ಹೇಳಿ ಮೀನಾಕ್ಷೀ ಪತಿಯಾದ ಸುಂದರೇಶ್ವರನು ದಯಾ ದೃಷ್ಟಿಯಿಂದ ಅವರನ್ನು ಅನುಗ್ರಹಿಸಿ ತನ್ನ ಸ್ವಯಂಭೂಲಿಂಗದಲ್ಲಿ ಅದೃಶ್ಯನಾದನು. ಆ ಋಷಿಗಳೆಲ್ಲರೂ

ಸ್ವಾಯಂಭುವೇ ಸುಂದರೇಶಲಿಂಗೇಂತರ್ಧಿಮಶಿಶ್ರಿಯತ್ ।
ಮುನೀಶ್ವರಾಶ್ಚ ತೇ ಸರ್ವೇ ಕುಂಭಜೇನ ಮುದಂ ಪರಾಂ ॥ ೮೫ ॥

ಪ್ರಾಪುರ್ದೃಷ್ಟ್ವಾ ಬ್ರಹ್ಮಮಯಂ ಸತ್ಯಜ್ಞಾನಸುಖಾತ್ಮಕಂ ।
ಶಿವಪುಣ್ಯೇಷು ಸರ್ವೇಷು ಶಿವಪ್ರೀತಿಕರೇಷು ತೇ ॥ ೮೬ ॥

ಲಿಂಗಪ್ರತಿಷ್ಠಾ ಪುಣ್ಯಂ ಹಿ ಪರಮಂ ಮುನಿಪುಂಗವಾಃ ।
ತತ್ಕುರುಧ್ವಂ ಮಮ ಸ್ಥಾನೇ ಶಿವೇನೋಕ್ತಂ ಪರಂ ವಚಃ ॥ ೮೭ ॥

ಸ್ಮೃತ್ವಾ ಸಂಸ್ಥಾಪಯಾಮಾಸು ಶ್ಶಂಭೋ ರ್ಲಿಂಗಾನಿ ತತ್ಸ್ಥಲೇ ।
ಯೇಷಾಂ ದರ್ಶನಮಾತ್ರೇಣ ಭುಕ್ತಿಮುಕ್ತೀ ಕರಸ್ಥಿತೇ ॥ ೮೮ ॥

ಋಷಿಸಂಸ್ಥಾಪಿತೈರ್ಲಿಂಗೈಃ ಕದಂಬವನಮೈಶ್ವರಂ ।
ಆನಂದಕಾನನಮಿವ ಭಾತಿ ಶೈವಪುರಂ ತ್ವಿಹ ॥ ೮೯ ॥

---

ಅಗಸ್ತ್ಯಋಷಿಯಿಂದ, ಸತ್ಯ ಜ್ಞಾನಾನಂದ ರೂಪದಿಂದ ಇರುವ, ಬ್ರಹ್ಮಮಯನಾದ ಶಿವನ ಸಾಕ್ಷಾತ್ಕಾರವನ್ನು ಹೊಂದಿ ಬಹಳ ಸಂತೋಷಪಟ್ಟರು. ಶಿವನ ಪ್ರೀತಿಗೆ ಆಸ್ಪದವಾಗಿರುವ ಶಿವ ಕ್ಷೇತ್ರಗಳಲ್ಲಿ ಶಿವಲಿಂಗವನ್ನು ಪ್ರತಿಷ್ಠೆ ಮಾಡುವುದು ಬಹಳ ಪುಣ್ಯಕರವಾದದ್ದು, ಎಂದು ಶಿವನ ಉತ್ತಮವಾದ ಮಾತನ್ನು ಸ್ಮರಿಸಿಕೊಂಡು, ಅಲ್ಲಿ ಅವರೆಲ್ಲರೂ ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಿದರು. ಇವರುಗಳನ್ನು ದರ್ಶನ ಮಾಡಿದ ಮಾತ್ರದಿಂದಲೂ ಭುಕ್ತಿ ಮುಕ್ತಿಗಳು ಉಂಟಾಗುವುವು .

೮೯-೯೩. ಈಶ್ವರನ ಕದಂಬ ವನವು, ಋಷಿಗಳು ಪ್ರತಿಷ್ಠೆ ಮಾಡಿರುವ ಲಿಂಗಗಳಿಂದ ಶಿವಪುರವಾಗಿ, ಆನಂದ ಕಾನನದ ಹಾಗೆ ಪ್ರಕಾಶಿಸುತ್ತಿರುವುದು. ಪೂಜ್ಯನಾದ ಅಗಸ್ತ್ಯಋಷಿಯು ಕದಂಬವನ ಮಧ್ಯದಲ್ಲಿ ಸುಂದರೇಶ್ವರನ ಲಿಂಗದ ನೈರುತ್ಯದಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಪೂಜಿಸಿದನು. ವಷಿಷ್ಠನೇ ಮೊದಲಾದ ಎಂಟು ಸಾವಿರ ಋಷಿಗಳು ತಮ್ಮ ತಮ್ಮ ಹೆಸರಿನಿಂದ ಪ್ರತಿಷ್ಠೆಮಾಡಿದ ಶಿವ

ಭಗವಾನ್ಕುಂಭಸಂಭೂತಃ ಕದಂಬವನಮಧ್ಯಮೇ ।
ಸುಂದರೇಶಸ್ಯ ನೈಋತ್ಯಾಂ ಲಿಂಗಂ ಸಂಸ್ಥಾಪ್ಯ ಚಾರ್ಚಯತ್ ॥ ೯೦ ॥

ಅಪರೇ ಚ ವಸಿಷ್ಠಾದ್ಯಾ ಸ್ಸಂಖ್ಯಯಾಷ್ಟಸಹಸ್ರಕಾಃ ।
ಸ್ವ ಸ್ವ ನಾಮ್ನಾ ಸ್ಥಾಪಿತಾನಿ ಲಿಂಗಾನ್ಯಭ್ಯರ್ಚ್ಯ ಸಂತತಂ ॥ ೯೧ ॥

ಸುಂದರೇಶಂ ಮಹಾಲಿಂಗಂ ಸೇವಯಿತ್ವಾ ತ್ರಿಕಾಲತಃ ।
ದ್ವಾದಶಾಂತಸ್ಥಾನಗತಂ ನಟೇಶಂ ಚಾಪಿ ಪೂಜ್ಯ ಚ ॥ ೯೨ ॥

ಮೀನಾಕ್ಷೀಮಪಿ ಸಂಸೇವ್ಯ ಮುಕ್ತಾಶ್ಚಾಂತೇ ಮುನೀಶ್ವರಾಃ ।
ನಿತ್ಯತ್ವಪದಮಾಪ್ತಾ ಯೇ ಶೇದ್ಯಾಪಿ ಮುನಿಸತ್ತಮಾಃ ॥ ೯೩ ॥

ವಸಂತೇದ್ಯಾಪಿ ಸಂಪೂಜ್ಯ ಮೀನಾಕ್ಷ್ಯಾ ಸುಂದರೇಶ್ವರಂ ।

॥ ಅಗಸ್ತ್ಯ ಉವಾಚ ॥

ಏವಂ ಹಾಲಾಸ್ಯಮಾಹಾತ್ಮ್ಯಂ ಶ್ರುತ್ವಾ ಭಕ್ತ್ಯಾ ಮುನೀಶ್ವರಾಃ ॥ ೯೪ ॥

---

ಲಿಂಗಗಳನ್ನು ಪೂಜಿಸಿದರು. ಮತ್ತು ಸುಂದರೇಶ್ವರನನ್ನು ಮೂರು ಕಾಲದಲ್ಲಿಯೂ ಯಾವಾಗಲೂ ಸೇವಿಸಿದರು. ದ್ವಾದಶಾಂತಗತನಾದ ನಟೇಶ್ವರನನ್ನು ಕೂಡ ಪೂಜಿಸಿ.ಮೀನಾಕ್ಷೀದೇವಿಯ ಸೇವೆಯನ್ನು ಮಾಡಿದರು. ಕೊನೆಯಲ್ಲಿ ಮುಕ್ತಿಯನ್ನು ಹೊಂದಿದರು. ಅದರಿಂದ ಆ ಋಷಿಶ್ರೇಷ್ಠರು ಮೀನಾಕ್ಷೀ ಸುಂದರೇಶ್ವರನನ್ನು ಪೂಜಿಸಿರುವ ಕಾರಣ ಈಗಲೂ ಚ್ಯುತಿ ಇಲ್ಲದಿರುವ ಸ್ಥಾನವನ್ನು ಹೊಂದಿ ವಾಸ ಮಾಡುತ್ತಿರುವರು.

೯೪. ಅಗಸ್ತ್ಯನು ಹೇಳಿದನು:- ಈ ಹಾಲಾಸ್ಯ ಮಾಹಾತ್ಮ್ಯವನ್ನು ಭಕ್ತಿಯಿಂದ ಕೇಳಿದ ಋಷಿಶ್ರೇಷ್ಠರೆಲ್ಲರೂ ಹಾಲಾಸ್ಯ ಕ್ಷೇತ್ರಕ್ಕೆ ಹೋಗಿ, ಕೃತಾರ್ಥರಾಗಿ ಶಾಶ್ವತವಾದ ಆನಂದವನ್ನು ಹೊಂದಿದರು.

ತತ್ರ ಗತ್ವಾ ಕೃತಾರ್ಥಾಶ್ಚ ನಿತ್ಯಾನಂದಯುಜೋಽಭವನ್ ।

॥ ಶ್ರೀಸೂತ ಉವಾಚ ॥

ಭವಂತೋಽಪಿ ಮುನಿಶ್ರೇಷ್ಠಾಸ್ತತ್ರ ಗತ್ವಾ ಮಯಾ ಸಹ ॥ ೯೫ ॥

ಶ್ರೀಹಾಲಾಸ್ಯೇಶ್ವರಂ ದೃಷ್ಟ್ವಾ ಕೃತಕೃತ್ಯಾ ಭವಿಷ್ಯಥ ।
ಶ್ರೀಹಾಲಾಸ್ಯೇ ಶಿವಕ್ಷೇತ್ರೇ ಕೈಲಾಸೇ ಚಾಂಬಯಾ ಸಹ ॥ ೯೬ ॥

ಮಹಾಕಾರುಣಿಕೋ ಭೂತ್ವಾ ಸರ್ವಾನನುಗ್ರಹಕೃತ್ಸದಾ ।
ಚತುಃಷಷ್ಟಿವಿಧಾ ಲೀಲಾಃ ಕೃತ್ವಾನೇಕವಿಧಾಸ್ತಥಾ ॥ ೯೭ ॥

ತಥಾ ಚಿದಂಬರೇಸಾದಮೂರ್ತಿಭಿಶ್ಶಕ್ತಿಭಿಸ್ಸಹ ।
ದಕ್ಷಿಣಾಮೂರ್ತಿರೂಪೇಣ ಸಿದ್ಧಭಿಕ್ಷಾಟನಾದಿಭಿಃ ॥ ೯೮ ॥

ತೀರ್ಥಾನಾಂ ಮಹತಾಂ ಮಧ್ಯೇ ಬ್ರಹ್ಮಾಂಡಾಂತರವರ್ತಿನಾಂ ।
ಹೇಮಪದ್ಮಾಕರಂ ತೀರ್ಥಂ ಮಹತ್ತರಮಿತೀರಿತಂ ॥ ೯೯ ॥

ಮಧ್ಯೇ ಮಹೇಶಕ್ಷೇತ್ರಾಣಾಂ ತದ್ಧಾಲಾಸ್ಯಂ ಮಹತ್ತರಂ ।
ಮಹಾಪಾಪಹರತ್ವಾಚ್ಚ ಮಹಾಪುಣ್ಯಪ್ರದಾನತಃ ॥ ೧೦೦ ॥

---

೯೫–೧೦೦. ಸೂತಪುರಾಣಿಕನು ಹೇಳಿದನು, ಎಲೈ ಋಷಿಗಳಿರಾ ನೀವೆಲ್ಲರೂ ನನ್ನೊಡನೆ ಹಾಲಾಸ್ಯೇಶ್ವರ ಕ್ಷೇತ್ರಕ್ಕೆ ಹೋಗಿ, ಹಾಲಾಸ್ಯೇಶ್ವರನನ್ನು ನೋಡಿ ಕೃತಕೃತ್ಯರಾಗಿರಿ. ಹಾಲಾಸ್ಯವೆಂಬ ಶಿವಕ್ಷೇತ್ರದಲ್ಲಿಯೂ, ಕೈಲಾಸ ಪರ್ವತದಲ್ಲಿಯೂ ಪಾರ್ವತೀಸಮೇತನಾದ ಪರಮೇಶ್ವರನು ಬಹಳ ದಯಾಶಾಲಿಯಾಗಿ ಎಲ್ಲರನ್ನೂ ಯಾವಾಗಲೂ ಅನುಗ್ರಹಿಸುತ್ತಿರುವನು. ಅರವತ್ತನಾಲ್ಕು ವಿಧವಾದ ಲೀಲೆಗಳನ್ನೂ, ಇನ್ನೂ ಬೇರೆ ವಿಧವಾದ ಲೀಲೆಗಳನ್ನೂ ಅವನು ಮಾಡಿರುವನು. ಪ್ರಸಿದ್ಧವಾದ ಬ್ರಹ್ಮಾಂಡ ಮಧ್ಯದಲ್ಲಿರುವ ತೀರ್ಥಗಳಲ್ಲಿ ಹೇಮ ಪದ್ಮಾಕರವೆಂಬ ತೀರ್ಥವು ಶ್ರೇಷ್ಠವಾಗಿರುವುದು. ಇದರಂತೆ ಶಿವಕ್ಷೇತ್ರಗಳಲ್ಲಿ ಹಾಲಾಸ್ಯ ಕ್ಷೇತ್ರವು ಪಾಪನಾಶ ಮಾಡುವುದರಿಂದಲೂ, ಬಹಳ ಪುಣ್ಯವನ್ನು ಕೊಡುವುದರಿಂದಲೂ ಉತ್ತಮವಾಗಿರುವುದು.

ಮೇರ್ವಾದಿಕ್ಷೇತ್ರಜಾತಾನಾಂ ಲಿಂಗಾನಾಂ ಮಹತಾಮಪಿ ।
ಶ್ರೀಹಾಲಾಸ್ಯೇಶ್ವರಾಖ್ಯಂ ಚ ಮೂಲಲಿಂಗಂ ಮಹತ್ತರಂ　　॥ ೧೦೧ ॥

ಪರಾತ್ಪರತರಂ ಕ್ಷೇತ್ರಂ ತೀರ್ಥಂ ಲಿಂಗಂ ಚ ಪಾವನಂ ।
ಏತತ್ತ್ರಿತಯಮೇಕತ್ರಸ್ಥಲೇ ಸಂಭೂಯ ವರ್ತತೇ　　॥ ೧೦೨ ॥

ಕ್ಷೇತ್ರಂ ಲಿಂಗಂ ಚ ತೀರ್ಥಂ ವಾ ಸತ್ಯಂ ಸತ್ಯಂ ಋತಂ ಪುನಃ ।
ವಿಶಿಷ್ಟತರಮಾಖ್ಯಾತಂ ತ್ರಿತಯಂ ಸರ್ವಭೂತಲೇ　　॥ ೧೦೩ ॥

ತಸ್ಮಾತ್ಸ್ವಾತ್ಮಹಿತಾಪೇಕ್ಷೀ ತಾನಿ ಸಮ್ಯಕ್ಸದಾ ಶೃಣೋತ್ ।
ಯುಷ್ಮತ್ಕೃತಸ್ಯ ಪ್ರಶ್ನಸ್ಯ ಮಯೋಕ್ತಂ ಸಮ್ಯಗುತ್ತರಂ　　॥ ೧೦೪ ॥

ವಿಶಿಷ್ಟತರಮಾಖ್ಯಾತಂ ಸ್ಥಲಂ ಲಿಂಗಂ ಚ ಶಾಶ್ವತಂ ।
ತೀರ್ಥಂ ಚ ಸರ್ವಪಾಪಘ್ನಂ ಮೇಕೈಕಂ ಕಿಂ ಪುನಸ್ತ್ರಯಂ　　॥ ೧೦೫ ॥

---

೧೦೧-೧೦೨. ಮೇರು ಪರ್ವತವೇ ಮೊದಲಾದ ಕ್ಷೇತ್ರಗಳಲ್ಲಿ ಉದ್ಭವಿಸಿದ ಉತ್ತಮವಾದ ಶಿವಲಿಂಗಗಳಿಗಿಂತಲೂ, ಹಾಲಾಸ್ಯೇಶ್ವರನೆಂಬ ಮೂಲಲಿಂಗವು ಉತ್ತಮೋತ್ತಮವಾಗಿರುವುದು. ಉತ್ತಮವಾದ ಕ್ಷೇತ್ರವೂ, ತೀರ್ಥವೂ, ಪರಿಶುದ್ಧವಾದ ಲಿಂಗವೂ, ಈ ಮೂರು ಒಟ್ಟಾಗಿ ಒಂದುಕಡೆಯಲ್ಲಿ ಇರುವುದು.

೧೦೩-೧೦೫. ಕ್ಷೇತ್ರವೂ, ಶಿವಲಿಂಗವೂ ತೀರ್ಥವೂ, ಕೂಡ ಈ ಮೂರೂ ಭೂಮಿಯಲ್ಲಿ ಎಲ್ಲಕ್ಕಿಂತಲೂ ಹೆಚ್ಚಾದ್ದಾಗಿರುವುದು. ಇದು ಸತ್ಯವಾದದ್ದು. ಆದ್ದರಿಂದ ತನ್ನ ಹಿತವನ್ನು ಅಪೇಕ್ಷೆ ಮಾಡುವವನು. ಅವುಗಳ ಮಹಿಮೆಯನ್ನು ಯಾವಾಗಲೂ ಕೇಳಿ ತಿಳಿಯಬೇಕು. ನೀವು ಕೇಳಿದ ಪ್ರಶ್ನೆಗೆ ಉತ್ತರವನ್ನು ನಾನು ವಿವರವಾಗಿ ಹೇಳಿರುವೆನು. ಉತ್ತಮವಾದ ಕ್ಷೇತ್ರದ ವಿಷಯವನ್ನು ಹೇಳಿರುವೆನು. ನಿತ್ಯವಾಗಿರುವ ಶಿವಲಿಂಗದ ಮಹಿಮೆಯನ್ನು ಹೇಳಿರುವೆನು. ಎಲ್ಲಾ ಪಾಪಗಳನ್ನೂ ನಾಶ ಮಾಡುವ ತೀರ್ಥದ ವಿಷಯವನ್ನೂ ಹೇಳಿರುವೆನು. ಮೂರರಲ್ಲಿ ಒಂದೊಂದೇ ಬಹಳ ಮಹಿಮೆಯುಳ್ಳದ್ದಾಗಿರುವಾಗ ಮೂರೂ ಸೇರಿ-ಇರುವ ವಿಷಯದಲ್ಲಿ ಹೇಳುವುದೇನು.

॥ ಅಗಸ್ತ್ಯ ಉವಾಚ ॥

ಏತದ್ಧಾಲಾಸ್ಯಮಾಹಾತ್ಮ್ಯಂ ಯೇ ಶೃಣ್ವಂತಿ ಪಠಂತಿ ಚ ।
ಪತ್ರೈಃ ಪುಷ್ಪೈಸ್ಸಮಭ್ಯರ್ಚ್ಯ ಧೂಪನೈವೇದ್ಯಪೂಜನೈಃ ॥ ೧೦೬ ॥

ಪುಸ್ತಕಂ ನಿತ್ಯಮಭ್ಯರ್ಚ್ಯ ಮೀನಾಕ್ಷೀಂ ಸುಂದರೇಶ್ವರಂ ।
ಪೂಜಯಿತ್ವಾ ಬ್ರಾಹ್ಮಣಾಂಶ್ಚ ಮೀನಾಕ್ಷೀಶಃ ಪ್ರಸೀದತಿ ॥ ೧೦೭ ॥

ಇತಿ ಬುಧ್ವಾ ಸುಂದರೇಶಂ ಮೀನಾಕ್ಷೀಂ ಚ ಪ್ರಪೂಜ್ಯ ಚ ।
ಶೃಣುಯಾನ್ನಿಯಮಾನ್ನಿತ್ಯಂ ಮಾಹಾತ್ಮ್ಯಂ ಸುಂದರೇಶಿತುಃ ॥ ೧೦೮ ॥

ತೇಷಾಂ ಪಾಪಾಃ ಪ್ರಣಶ್ಯಂತಿ ವಹ್ನಿನಾ ತೂಲರಾಶಿವತ್ ।
ಶಿವಃ ಪ್ರೀತೋ ಭವೇದ್ದೇವ್ಯಾ ಮೀನಾಕ್ಷ್ಯಾ ಸುಂದರೇಶ್ವರಃ ॥ ೧೦೯ ॥

ಇಹ ಲೋಕೇ ಮಹಾಭೋಗಾನ್ಭುಕ್ತ್ವಾ ಪುತ್ರಾದಿಸಂಯುತಃ ।
ಜೀವೇದ್ವರ್ಷಶತಂ ಸಾಗ್ರಮಾಧಿವ್ಯಾಧಿವಿವರ್ಜಿತಃ ॥ ೧೧೦ ॥

---

೧೦೬–೧೦೮. ಅಗಸ್ತ್ಯಋಷಿಯು ಹೇಳಿದನು ಈ ಹಾಲಾಸ್ಯ ಮಾಹಾತ್ಮ್ಯೆಯನ್ನು ಓದುವವರು, ಓದಿಸಿ ಕೇಳುವವರು, ಪುಸ್ತಕಕ್ಕೆ ಪತ್ರ ಪುಷ್ಪಗಳಿಂದಲೂ ಧೂಪ ದೀಪ ನೈವೇದ್ಯಗಳಿಂದಲೂ ಪೂಜಿಸಿ ಮೀನಾಕ್ಷೀ ಸಮೇತನಾದ ಸುಂದರೇಶ್ವರನನ್ನೂ ಬ್ರಾಹ್ಮಣನನ್ನೂ ಪೂಜಿಸಿದಲ್ಲಿ ಸುಂದರೇಶ್ವರನು ಪ್ರಸನ್ನನಾಗುವನೆಂದು ನಿಶ್ಚಯ ಮಾಡಿಕೊಂಡು ನಿಯಮದಿಂದ ಸುಂದರೇಶ್ವರನ ಮಾಹಾತ್ಮ್ಯವನ್ನು ನಿತ್ಯವೂ ಕೇಳುತ್ತಾ ಅವರಿಬ್ಬರನ್ನೂ ಪೂಜಿಸಬೇಕು.

೧೦೯–೧೧೧. ಹೀಗೆ ಮಾಡಿದವರ ಪಾಪಗಳು ಬೆಂಕಿಯಲ್ಲಿ ಬಿದ್ದ ಹತ್ತಿಯಂತೆ ನಾಶವಾಗುವುವು. ಮೀನಾಕ್ಷೀ ದೇವಿಯೊಡನೆ ಸುಂದರೇಶ್ವರನಾಗಿರುವ ಶಿವನು ಸಂತೋಷ ಪಡುವನು. ಈ ಲೋಕದಲ್ಲಿ ಅವನು ಬಹಳ ಸುಖಗಳನ್ನು ಅನುಭವಿಸುತ್ತಾ ಪುತ್ರ ಪೌತ್ರರೇ ಮೊದಲಾದವರೊಡನೆ ನೂರು ವರ್ಷಗಳ ವರಿವಿಗೂ

ಅಂತೇ ವಿಮಾನಮಾರುಹ್ಯ ದಿವ್ಯಭೋಗಸಮನ್ವಿತಃ ।
ನಂದತೇ ಪ್ರಿಯಮೋದಾದ್ಯೈಃ ಕೈಲಾಸೇಷು ಶಿವಪ್ರಿಯಃ ॥ ೧೧೧ ॥

ಸಾರೂಪ್ಯಾದಿಪದಂ ಲಬ್ಧ್ವಾ ಸಾಯುಜ್ಯಂ ಪ್ರಾಪ್ನುವಂತಿ ಚ ।
ಯಸ್ಮಿನ್ದೇಶೇ ಚ ಶೃಣುಯಾನ್ಮಾಹಾತ್ಮ್ಯಂ ಸುಂದರೇಶಿತುಃ ॥ ೧೧೨ ॥

ತತ್ರ ಸಾನ್ನಿಧ್ಯಮಕರೋನ್ಮೀನಾಕ್ಷ್ಯಾ ಸುಂದರೇಶ್ವರಃ ।
ತದ್ದೇಶಂ ಸಮಲಂಕೃತ್ಯ ವಿತಾನಾದ್ಯೈಸ್ಸತೋರಣೈಃ ॥ ೧೧೩ ॥

ಪುಷ್ಪೈಶ್ಚ ಧೂಪದೀಪಾದ್ಯೈಸ್ತತ್ರ ಸಂಶೃಣುಯಾದಿದಂ ।
ದೇವಾಲಯೇ ನದೀತೀರೇ ಮಠೇ ವಾ ಶುದ್ಧಭೂತಲೇ ॥ ೧೧೪ ॥

ಏಕದ್ವಿತ್ರಿಚತುರ್ವಾರಂ ಶೃಣುಯಾದ್ಯದಿ ಮಾನವಃ ।
ಜೀವನ್ವರ್ಷಶತಂ ಸಾಗ್ರಂ ಭೋಗಾನ್ಭುಕ್ತ್ವೈವ ಬಾಂಧವೈಃ ॥ ೧೧೫ ॥

---

ಆಧಿ ವ್ಯಾಧಿಗಳಿಲ್ಲದವನಾಗಿ ಸುಖವಾಗಿರುವನು. ಕೊನೆಯಲ್ಲಿ ವಿಮಾನವನ್ನು ಹತ್ತಿ ಉತ್ತಮವಾದ ಭೋಗದಿಂದ ಕೂಡಿದವನಾಗಿ, ಪ್ರಿಯ, ಮೋದ, ಇವೇ ಮೊದಲಾದವುಗಳನ್ನು ಹೊಂದಿ ಶಿವನ ಪ್ರೀತಿಗೆ ಪಾತ್ರನಾಗಿ ಕೈಲಾಸ ಪರ್ವತದಲ್ಲಿ ವಿಹರಿಸುತ್ತಿರುವನು.

೧೧೨-೧೧೫. ಸಾರೂಪ್ಯ ಸಾಯುಜ್ಯ ಇವೇ ಮೊದಲಾದವುಗಳನ್ನು ಪಾರಾಯಣ ಮಾಡುವವರು ಹೊಂದುವರು. ಸುಂದರೇಶ್ವರನ ಮಾಹಾತ್ಮ್ಯವನ್ನು ಯಾವ ಸ್ಥಳದಲ್ಲಿ ಕೇಳುವರೋ, ಸುಂದರೇಶ್ವರನು ಮೀನಾಕ್ಷೀ ಸಹಿತನಾಗಿ ಅಲ್ಲಿ ಪ್ರತ್ಯಕ್ಷನಾಗುವನು. ಆ ಪ್ರದೇಶದಲ್ಲಿ ತೋರಣಗಳಿಂದ ಅಲಂಕಾರ ಮಾಡಿ ಹೂವು ಧೂಪ, ದೀಪಗಳು ಇವುಗಳನ್ನು ಇರಿಸಿ, ಈ ಮಾಹಾತ್ಮ್ಯವನ್ನು ಕೇಳಬೇಕು. ದೇವಾಲಯ, ನದೀತೀರ, ಮಠ, ಪರಿಶುದ್ಧವಾದ ಭೂಮಿ, ಇವುಗಳಲ್ಲಿ ಈ ಮಾಹಾತ್ಮ್ಯವನ್ನು ಕೇಳತಕ್ಕದ್ದು. ಒಂದು ಸಾರಿ, ಎರಡು, ಮೂರು, ನಾಲ್ಕು ಸಾರಿ ಯಾದರೂ ಈ ಮಾಹಾತ್ಮ್ಯವನ್ನು ಕೇಳಿದವನು ನೂರು ವರ್ಷಗಳು ಪೂರ್ತಿಯಾಗಿ ತನ್ನ ಬಂಧುಗಳೊಡನೆ ಭೋಗಗಳನ್ನು ಅನುಭವಿಸುತ್ತಾ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಹೊಂದುವುದಲ್ಲದೆ ಮುಕ್ತಿಯನ್ನೂ ಹೊಂದುವನು. ಇದು ಸತ್ಯವಾದದ್ದು.

ಚತುರ್ವಿಧಾರ್ಥಾಂ ಪ್ರಾಪ್ನುಯುಶ್ಚ ಮುಕ್ತಿಂ ಸತ್ಯಂ ಪುನಃ ಪುನಃ ।
ಹಾಲಾಸ್ಯೇಶ್ವರಮಾಹಾತ್ಮ್ಯ ವಕ್ತಾರಂ ಶಿವರೂಪಿಣಂ ॥ ೧೧೬ ॥

ಭಾವಯಿತ್ವಾರ್ಚ್ಯ ಪುಷ್ಪಾದ್ಯೈಃ ಭೋಜಯಿತ್ವಾ ಚ ಷಡ್ರಸೈಃ ।
ಶೃಣುಯಾದೇಕಮಧ್ಯಾಯಂ ದ್ವಿತ್ರಿರ್ವಾ ನಿಯಮೇನ ತು ॥ ೧೧೭ ॥

ಅಧ್ಯಾಯಾರ್ಧಂ ಪಾದಮಪಿ ಶೃಣುಯಾನ್ನಿತ್ಯಶಃ ಪುಮಾನ್ ।
ಜೀವನ್ಮುಕ್ತೋ ಭವೇತ್ಸದ್ಯಶ್ರಾವಕಃ ಪಠತೋಽಪಿ ಚ ॥ ೧೧೮ ॥

ಧ್ಯಾತ್ವಾ ತಸ್ಯೈ ಮಹಾನೃತ್ತಂ ಸುಂದರೇಶಂ ಶಿವಂ ಪುನಃ ।
ತುಲಾಪುರುಷದಾನಾದ್ಯೈಃ ಸ್ತೋಷಯೇದ್ಭೂಮಿಪೋ ಯದಿ ॥ ೧೧೯ ॥

ಧನಿನೋ ವಿತ್ತಶಾಠ್ಯಂ ಚ ತ್ಯಕ್ತ್ವಾ ಶಕ್ತ್ಯಾ ಪ್ರಪೂಜಯೇತ್ ।
ಸದ್ಭೂಹಿರಣ್ಯವಸ್ತ್ರಾದಿಧನಧಾನ್ಯಾಖ್ಯವಸ್ತುಭಿಃ ॥ ೧೨೦ ॥

---

೧೧೬-೧೧೮. ಈ ಮಾಹಾತ್ಮ್ಯವನ್ನು ಓದುವವನೂ ಕೇಳುವವನೂ ಮೀನಾಕ್ಷೀದೇವಿ ಸಮೇತನಾದ-ಸುಂದರೇಶ್ವರನನ್ನು ಧ್ಯಾನ ಮಾಡಿ, ಪೂಜಿಸಿ, ಷಡ್ರಸ ಗಳಿಂದಲೂ ಊಟ ಮಾಡಿಸಿ, ಇದನ್ನು ಕೇಳ ಬೇಕು. ಒಂದು ಅಧ್ಯಾಯವನ್ನಾಗಲಿ ಎರಡು ಮೂರು ಸರ್ತಿಯಾದರೂ ನಿಯಮದಿಂದ ಕೇಳ ತಕ್ಕದ್ದು. ಅಧ್ಯಾಯದ ಅರ್ಧವನ್ನಾಗಲಿ ಅಥವಾ ಕಾಲುಭಾಗವನ್ನಾಗಲಿ ಪ್ರತಿ ನಿತ್ಯದಲ್ಲಿಯೂ ಓದುವವನೂ, ಮತ್ತು ಕೇಳುವವನೂ ಜೀವನ್ಮುಕ್ತಿಗೆ ಅಧಿಕಾರಿಯಾಗುವನು.

೧೧೯-೧೨೨. ಸುಂದರೇಶ್ವರನಾದ ಶಿವನು ಮಾಡಿರುವ ಲೀಲೆಯ ಮಹಾನೃತ್ತ ವನ್ನು ರಾಜನು ಧ್ಯಾನಮಾಡಿ ತುಲಾ ಪುರುಷ ದಾನವನ್ನು ಮಾಡಬೇಕು. ಹಣ ಗಾರನು ದುಂದುಗಾರಿಕೆಯನ್ನು ಬಿಟ್ಟು ಶಕ್ತ್ಯಾನುಸಾರವಾಗಿ ಪೂಜಿಸ ಬೇಕು. ಭೂಮಿ ಚಿನ್ನ ವಸ್ತ್ರ, ಧನ, ಧಾನ್ಯ, ಇವೇ ಮೊದಲಾದ ವಸ್ತುಗಳಿಂದಲೂ, ಅನೇಕ ವಿಧವಾದ ಕಿವಿಯ ಒಡವೆ, ಉಂಗುರಗಳು, ಚಿನ್ನದ ಹೂಗಳು, ಪೀತಾಂಬರಗಳು, ರೇಷ್ಮೆ

ವಿಚಿತ್ರೈಕರ್ಣಾಭರಣೈ ರಂಗುಲೀಯೋಶ್ಚ ಕಾಂಚನೈಃ ।
ಪೀತಾಂಬರೈಃ ಪಟ್ಟವಸ್ತ್ರೈ ರ್ದುಕೂಲೈರ್ನೂತನಾಂಶುಕೈಃ ॥ ೧೨೧ ॥

ಪೂಜಯೇತ್ತಂ ಶಂಭುಬುಧ್ಯಾ ಸುಂದರೇಶಾರ್ಪಣಂ ತ್ವಿದಂ ।
ಇತಿ ತಾಂಬೂಲಸಹಿತಂ ಧಾರಾಪೂರ್ವಂ ಪ್ರದಾಪಯೇತ್ ॥ ೧೨೨ ॥

ತಸ್ಮೈ ದತ್ತಂ ಧನಂ ಸರ್ವಂ ಸುಂದರೇಶಾರ್ಪಿತಂ ಭವೇತ್ ।
ತಂ ಗುರುಂ ಭಾವಯಿತ್ವೈವಂ ದದ್ಯಾನ್ಮಾಹಾತ್ಮ್ಯಪಾಠಕಂ ॥ ೧೨೩ ॥

ಶಿವಸ್ತಸ್ಮಿನ್ಸನ್ನಿಧಾನಂ ಕರಿಷ್ಯತ್ಯಂಬಯಾ ಸಹ ।
ಪ್ರೀತೋ ಭವತಿ ತತ್ಸತ್ಯಂ ವಕ್ತಾರಂ ಪೂಜಯೇತ್ತತಃ ॥ ೧೨೪ ॥

ಸುಂದರೇಶಸ್ತಸ್ಯ ವಾಚಿ ಮೀನಾಕ್ಷ್ಯಾ ನೃತ್ಯತಿ ಸ್ವಯಂ ।
ತಸ್ಮಾನ್ಮಾಹಾತ್ಮ್ಯವಕ್ತಾರಂ ಧನಾದ್ಯೈಸ್ತೋಷಯೇತ್ ಬುಧಃ ॥ ೧೨೫ ॥

---

ವಸ್ತ್ರ, ಜರತಾರಿ ಬಟ್ಟೆ ಇವುಗಳಿಂದಲೂ ಪುರಾಣ ಹೇಳುವವನನ್ನು ಪೂಜಿಸಬೇಕು. ಅವನನ್ನು ಪೂಜಿಸುವಾಗ ಶಿವನನ್ನು ಪೂಜಿಸುತ್ತೇನೆ ಎಂದು ತಿಳಿಯಬೇಕು. ದಾನ ಮಾಡುವಾಗ ಸುಂದರೇಶ್ವರನಿಗೆ ಈ ದಾನವು ಸಂತೋಷವನ್ನುಂಟು ಮಾಡಲೆಂದು ಭಾವಿಸಿ ತಾಂಬೂಲ ಸಹಿತವಾಗಿ ಕೊಡಬೇಕು.

೧೨೩-೧೨೪. ಅವನಿಗೆ ಕೊಟ್ಟ ಪದಾರ್ಥವೆಲ್ಲವೂ ಸುಂದರೇಶ್ವರನಿಗೆ ಒಪ್ಪಿಸಿದ್ದಾಗುವುದು. ಹಾಲಾಸ್ಯ ಮಾಹಾತ್ಮ್ಯವನ್ನು ಓದುವವನು ಗುರುವಿನಿಂದ ತಿಳಿದು ಅವನಲ್ಲಿ ಶಿವನು ಪಾರ್ವತಿಯೊಡನೆ ತನ್ನ ಸನ್ನಿಧಾನವನ್ನು ಅನುಗ್ರಹಿಸುವನೆಂದು ತಿಳಿದುಕೊಳ್ಳಬೇಕು. ಮತ್ತು ಅವನಿಗೆ ದಾನ ಮಾಡಿದ್ದರಿಂದ ಶಿವನ ಪ್ರೀತಿಯಾಗುವುದೆಂದು ನಿಶ್ಚಯಮಾಡಿಕೊಂಡು ಪುರಾಣ ಹೇಳುವವನಿಗೆ ದಾನಮಾಡಿ ಪೂಜಿಸಬೇಕು.

೧೨೫-೧೩೧. ಪುರಾಣ ಹೇಳತಕ್ಕವನ ಮಾತಿನಲ್ಲಿ ಸುಂದರೇಶ್ವರನು ಮೀನಾಕ್ಷೀದೇವಿಯ ಜೊತೆಯಲ್ಲಿರುವನು.ದ್ದರಿಂದಲೇ ಅವನಲ್ಲಿ ಅಷ್ಟು ಮಹಿಮೆಯು

ಮೀನಾಕ್ಷೀಶಂ ಸಮುದ್ದಿಶ್ಯ ಸಮಾಪ್ತೇ ಭೋಜಯೇದ್ದ್ವಿಜಾನ್ ।
ಶಿವಭಕ್ತ್ಯಾ ಸಹಸ್ರಂ ವಾ ಸಂಖ್ಯಯಾ ಶ್ರಾವಕಃ ಕೃತೀ ॥ ೧೨೬ ॥

ಅಷ್ಟೋತ್ತರಶತಂ ವಾಪಿ ಸಂಖ್ಯಯಾ ಪೂಜಯೇದ್ವಿಜಾನ್
ಸಹಸ್ರನಾಮಭಿಶ್ಚಾರ್ಚ್ಯ ಶತಾಷ್ಟೋತ್ತರನಾಮಭಿಃ ॥ ೧೨೭ ॥

ಚತುಃಷಷ್ಟಿಸುನಾಮ್ನಾ ವಾ ತಲ್ಲಿಂಗಂ ವಾಚಕೇನ ತು ।
ದ್ವಾದಶಾಷ್ಟಸು ಸಂಖ್ಯಾತನಾಮಭಿರ್ವಾರ್ಚ್ಯ ಸದ್ವಿಜಾನ್ ॥ ೧೨೮ ॥

ಭೋಜಯೇಚ್ಛಿವಭಕ್ತಾಂಶ್ಚ ಸುಂದರೇಶಃ ಪ್ರಸೀದತಿ ।
ಅನ್ನಸಂಖ್ಯಾಕವರ್ಷಾಣಿ ಶಿವಲೋಕೇ ವಸೇದ್ಗಣಾಃ ॥ ೧೨೯ ॥

ಭಕ್ತ್ಯಾ ಶ್ರೋತಾ ಚ ವಕ್ತಾ ಚ ಶ್ರಾವಕಃ ಪೂಜಕಸ್ತಥಾ ।
ವ್ಯಂಜನಾನಿ ವಿಹಾಯಾಸೌ ಶಿವಭಕ್ತಿಮವಾಪ್ಯ ಚ ॥ ೧೩೦ ॥

ಅನುಭೂಯಾತುಲಂ ಸೌಖ್ಯಂ ಇಹಲೋಕೇ ಪರತ್ರ ಚ ।
ಅಂತೇ ಸಾಯುಜ್ಯರೂಪಾಂ ಚ ಮುಕ್ತಿಂ ಸಂಪ್ರಾಪ್ನುಯಾದ್ಧ್ರುವಂ॥೧೩೧

---

ಉಂಟಾಗಿರುವುದು. ಧನಾದಿಗಳಿಂದ ಅವನನ್ನು ಸಂತೋಷಪಡಿಸಬೇಕಾದದ್ದು ಕರ್ತವ್ಯವಾಗಿರುವುದು ಪುರಾಣವು ಮುಗಿದನಂತರ ಸುಂದರೇಶ್ವರನನ್ನು ಉದ್ದೇಶ ಮಾಡಿಕೊಂಡು ದ್ವಿಜರನ್ನು ಭೋಜನಮಾಡಿಸಬೇಕು. ಪುರಾಣವನ್ನು ಕೇಳಿದವನು ನಿಯಮವಂತನಾಗಿ ಶಿವಭಕ್ತಿಯಿಂದ ಕೂಡಿ, ಸಾವಿರಸಂಖ್ಯೆಯಾಗಲಿ, ನೂರು ಸಂಖ್ಯೆಯಾಗಲಿ, ದ್ವಿಜರನ್ನು ಪೂಜಿಸಬೇಕು. ಶಿವನ ಸಹಸ್ರನಾಮದಿಂದಾಗಲಿ, ಅಷ್ಟೋತ್ತರದಿಂದಾಗಲಿ ಆವಾಹನೆ ಮಾಡಿ ಪೂಜಿಸಬೇಕು. ಅರವತ್ತನಾಲ್ಕು ನಾಮಗಳಿಂದಾದರೂ, ಹನ್ನೆರಡು ಅಥವಾ ಎಂಟು ನಾಮಗಳಿಂದಾದರೂ, ದ್ವಿಜರನ್ನು ಪೂಜಿಸಿ, ಶಿವಭಕ್ತರಾದ ಅವರಿಗೆ ಭೋಜನಮಾಡಿಸಿದಲ್ಲಿ ಸುಂದರೇಶ್ವರನು ಪ್ರಸನ್ನನಾಗುವನು. ಅನ್ನದ ಸಂಖ್ಯೆಯಷ್ಟು ವರ್ಷಗಳವರೆಗೆ ಶಿವಲೋಕದಲ್ಲಿ ಗಣಗಳ ರೂಪದಲ್ಲಿ ಇರುವನು. ಭಕ್ತಿಯಿಂದ ಕೇಳತಕ್ಕವನೂ, ಹೇಳತಕ್ಕವನೂ, ಕೇಳುವಂತೆ ಮಾಡತಕ್ಕವನೂ, ಓದಿಸುವವನೂ, ಪೂಜಿಸುವವನೂ, ಇವರೆಲ್ಲರೂ ತಮ್ಮ ಚಿನ್ಹೆಗಳನ್ನು ಬಿಟ್ಟು, ಶಿವಭಕ್ತಿಯನ್ನು ಹೊಂದಿ, ಇಹ ಪರಗಳಲ್ಲಿ ಬಹಳವಾದ ಭೋಗವನ್ನು ಹೊಂದಿ, ಕೊನೆಯಲ್ಲಿ ಸಾಯುಜ್ಯ ಮುಕ್ತಿಯನ್ನು ಹೊಂದುವರು.

ಪುನಃ ಪುನಃ ಫಲಂ ಪ್ರೋಕ್ತಂ ಶ್ರದ್ಧಾವದ್ಭಿರ್ದ್ವಿಜೋತ್ತಮಾಃ ।
ಯಸ್ಮಿನ್ದಿನೇ ಸಮಾರಬ್ಧಂ ಹಾಲಾಸ್ಯೇಶ್ವರವೈಭವಂ ॥ ೧೩೨ ॥

ತದ್ದಿನಂ ಚ ಸಮಾರಭ್ಯ ತತ್ಸಮಾಪ್ತಿದಿನಾವಧಿ ।
ಏಕೈಕಂ ವಾ ದ್ವಿಜಂ ಭಕ್ತ್ಯಾ ಪಾಠಕೇನ ಶಿವಪ್ರಿಯಂ ॥ ೧೩೩ ॥

ಭೋಜಯಿತ್ವಾ ಚ ಶೃಣುಯಾಚ್ಛ್ರೋತಾ ತದ್ಭಕ್ತಿಸಂಯುತಃ ।
ವ್ಯಾಖ್ಯಾನಪೀಠೇ ಸಂಸ್ತೀರ್ಯ ಕ್ಷೌಮಾದ್ಯಂ ನವವಸ್ತ್ರಕಂ ॥ ೧೩೪ ॥

ಸುಂದರೇಶ್ವರಮಾಹಾತ್ಮ್ಯಂ ಪುಸ್ತಕಂ ತಸ್ಯ ಚಾಲಯೇ ।
ಶ್ರೀಮೀನಾಕ್ಷ್ಯಾಶ್ಚ ನಿಲಯಂ ಪಟವಸ್ತ್ರಾದ್ಯಲಂಕೃತಂ ॥ ೧೩೫ ॥

ಗಂಧೈಃ ಪುಷ್ಪೈರರ್ಚಯಿತ್ವಾ ಧೂಪದೀಪಾದಿಭಿಸ್ತಥಾ ।
ಪರಮಾನ್ನಾದಿನೈವೇದ್ಯೈಃ ಫಲಪುಷ್ಪಾದಿಸಂಯುತೈಃ ॥ ೧೩೬ ॥

ನಿವೇದ್ಯ ಸುಂದರೇಶಸ್ಯ ಸಾಂಬಂ ಧ್ಯಾತ್ವಾ ಫಲಪ್ರದಂ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಚ ನಿವೇದ್ಯ ಚ ॥ ೧೩೭ ॥

---

೧೩೨–೧೩೭. ಫಲವನ್ನು ಅನೇಕಸಾರಿ ಹೇಳಿದ್ದಾಯಿತು. ಹಾಲಾಸ್ಯೇಶ್ವರನ ಮಹಿಮೆಯನ್ನು ಕೇಳಲು ಪ್ರಾರಂಭಮಾಡಿದ ದಿನ ಮೊದಲುಗೊಂಡು ಮುಗಿಯುವ ದಿನದ ಕೊನೆಯವರಿಗೂ ಪುರಾಣವನ್ನು ಹೇಳುವವನೊಡನೆ ಶಿವಭಕ್ತನಾದ ಒಬ್ಬ ಬ್ರಾಹ್ಮಣನನ್ನು ಪೂಜೆ ಮಾಡಿ, ಭೋಜನವನ್ನು ಮಾಡಿಸಿ, ಭಕ್ತಿಯಿಂದ ಕೇಳಬೇಕು. ಪುರಾಣ ಹೇಳುವವರ ಮುಂದೆ ಇರುವ ವ್ಯಾಖ್ಯಾನಪೀಠದ ಮೇಲೆ ರೇಷ್ಮೆಯ ವಸ್ತ್ರವೇ ಮೊದಲಾದ ಹೊಸ ಬಟ್ಟೆಯನ್ನು ಹಾಸಿ, ಸುಂದರೇಶ್ವರನ ಮಾಹಾತ್ಮ್ಯ ಪುಸ್ತಕವನ್ನು ಇರಿಸಬೇಕು. ದೇವಸ್ಥಾನದಲ್ಲಿ ಪಟ್ಟೆವಸ್ತ್ರಾದಿಗಳಿಂದ ಅಲಂಕೃತವಾದ ಮೀನಾಕ್ಷೀ ದೇವಾಲಯವನ್ನೂ, ಗಂಧ ಪುಷ್ಪಾದಿಗಳಿಂದಲೂ, ಧೂಪ ದೀಪಾದಿಗಳಿಂದಲೂ, ಪರಮಾನ್ನವೇ ಮೊದಲಾದ ನೈವೇದ್ಯಗಳು, ಹಣ್ಣು ಭಕ್ಷ್ಯ ಭೋಜ್ಯಗಳು ಇವುಗಳಿಂದಲೂ ಪೂಜಿಸಬೇಕು. ಫಲಪ್ರದನಾದ ಪಾರ್ವತೀಸಹಿತನಾದ ಪರಮೇಶ್ವರನಿಗೆ ಸುವಾಸನೆಯುಳ್ಳ ತಾಂಬೂಲವನ್ನು ಒಪ್ಪಿಸಬೇಕು. ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಬೇಕು.

ಕೃತ್ವಾ ಪ್ರದಕ್ಷಿಣಂ ಚಾಪಿ ನಮಸ್ಕಾರಾದಿ ಚೈವ ಚ ।
ಶ್ರೀಮಾಹಾತ್ಮ್ಯಂ ಮಮ ಗುರೋರ್ಮುಖವಿನ್ಯಸ್ತಲೋಚನಃ ॥ ೧೩೮ ॥

ಅವ್ಯಗ್ರಶ್ಶೃಣುಯಾದಿತ್ಥಮನ್ಯಾಲಾಪವಿವರ್ಜಿತಃ ।
ಏವಂ ಸಂಶೃಣ್ವತಃ ಶ್ರೋತ್ರೈಃನೃತ್ಯತೀಶಸ್ಸ ಚಾಂಬಯಾ ॥ ೧೩೯ ॥

ಏವಂ ಸಂಶೃಣ್ವತೋ ವಿಘ್ನಂ ಮಾಹಾತ್ಮ್ಯಸ್ಯ ಕರೋತಿ ಯಃ ।
ಮುಧ್ಯೇ ಸ ಸರ್ವಪಾಪೈಶ್ಚ ಯುಕ್ತೋ ನಿರಯಮೇಷ್ಯತಿ ॥ ೧೪೦ ॥

ಸುಂದರೇಶಸ್ಯ ಮಾಹಾತ್ಮ್ಯ ಶ್ರವಣೇ ಚೋದಕಶ್ಚ ಯಃ ।
ಶೃಣ್ವಂತಮನುಮೋದಂತೇ ತೇ ಸರ್ವೇ ಮುಕ್ತಿಭಾಗಿನಃ ॥ ೧೪೧ ॥

ಏವಂ ಸಂಶೃಣ್ವತಾಂ ಪುಂಸಾಂ ಮಹದರ್ಥಂ ಭವಿಷ್ಯತಿ ।
ಉಚ್ಚಾಸನೇ ಗುರುಂ ಸ್ಥಾಪ್ಯ ತಚ್ಛ್ರೋತಾ ತತ್ಕನೀಯಸಿ ॥ ೧೪೨ ॥

ಸುಸ್ಥಿತಃ ಶೃಣುಯಾನ್ನಿತ್ಯಂ ಸ್ವಸಿದ್ಧಾಸನಸಂಸ್ಥಿತಃ ।
ಏವಂ ನಿಯಮಯುಕ್ತೇನ ಮಾಹಾತ್ಮ್ಯಂ ಶೃಣುಯಾದ್ಯದಿ ॥ ೧೪೩ ॥

---

೧೩೮-೧೪೦. ಗುರುವಿನ ಮುಖದಲ್ಲಿ ದೃಷ್ಟಿಯನ್ನೂ, ಏಕಾಗ್ರತೆಯನ್ನೂ ಇರಿಸಿ, ಬೇರೆಯ ಮಾತನ್ನಾಡದೆ ಸುಂದರೇಶ್ವರನ ಮಾಹಾತ್ಮ್ಯವನ್ನು ಕೇಳಬೇಕು. ಹೀಗೆ ಕೇಳತಕ್ಕವನ ವಿಷಯದಲ್ಲಿ ಪಾರ್ವತೀ ಪತಿಯಾದ ಪರಮೇಶ್ವರನು ಸಂತೋಷದಿಂದ ಇರುವನು ಹೀಗೆ ಕೇಳತಕ್ಕವನಿಗೆ ವಿಘ್ನ ಮಾಡುವವನು, ಸರ್ವ ಪಾಪಗಳಿಂದಲೂ ಕೂಡಿದವನಾಗಿ ನರಕವನ್ನು ಹೊಂದುವನು.

೧೪೧-೧೪೪. ಸುಂದರೇಶ್ವರನ ಮಾಹಾತ್ಮ್ಯವನ್ನು ಕೇಳುವುದರಲ್ಲಿ ಪ್ರೇರಿಸುವವನೂ, ಸಮ್ಮತಿಯನ್ನು ಕೊಡುವವನೂ, ಇವರೆಲ್ಲರೂ ಮುಕ್ತಿಯನ್ನು ಹೊಂದುವರು. ಹೀಗೆ ಕೇಳತಕ್ಕವರಿಗೆ ಬಹಳ ಶ್ರೇಯಸ್ಸುಂಟಾಗುವುದು. ಗುರುವನ್ನು ಎತ್ತರವಾದಪೀಠದಲ್ಲಿ ಕೂರಿಸಬೇಕು. ಕೇಳತಕ್ಕವನು, ಅದಕ್ಕಿಂಲೂ ಕಡಿಮೆಯಾಗಿ

**ಸುಂದರೇಶ್ವರಭಕ್ತಸ್ಸರ್ವಾನ್ ಕಾಮಾನವಾಪ್ನುಯಾತ್ ।**
**ಸಮಷ್ಟಿವಿದ್ಯಾನಗರೀನಾಥಮಾಹಾತ್ಮ್ಯಸಂಶ್ರುತೇ ॥ ೧೪೪ ॥**

**ಸರ್ವಕ್ಷೇತ್ರಸ್ಯ ಮಾಹಾತ್ಮ್ಯಂ ಶ್ರುತಂ ಭವತಿ ತತ್ಫಲಂ ।**
**ಏಕಾ ಧ್ಯಾಯಶ್ರುತಸ್ಯಾಪಿ ಹ್ಯಶ್ವಮೇಧಾದಿಕಂ ಫಲಂ ॥ ೧೪೫ ॥**

**ಭವಿಷ್ಯತಿ ನ ಸಂದೇಹಃ ಶಿವಲೋಕಂ ಚ ಶಾಶ್ವತಂ ।**
**ಶ್ಲೋಕೈಕಶ್ರವಣಾಚ್ಚಾಪಿ ಹ್ಯಗ್ನಿಷ್ಟೋಮಫಲಂ ಲಭೇತ್ ॥ ೧೪೬ ॥**

**ಹಾಲಾಸ್ಯೇಶ್ವರಮಾಹಾತ್ಮ್ಯಶ್ರವಣಂ ಕುರುತೇ ಚ ಯಃ ।**
**ಪುತ್ರಕಾಮೋ ಲಭೇತ್ಪುತ್ರಂ ಧನಕಾಮೋ ಲಭೇದ್ಧನಂ ॥ ೧೪೭ ॥**

**ರಾಜ್ಯಕಾಮೋ ಲಭೇದ್ರಾಜ್ಯಂ ಸರ್ವಶತ್ರುವಿವರ್ಜಿತಂ ।**
**ಭೂಮ್ಯಾಂ ಸಕಲತೀರ್ಥೇಷು ಸ್ನಾತಸ್ಯ ಸಕಲಂ ಫಲಂ ॥ ೧೪೮ ॥**

---

ಇರುವ ಪೀಠದಲ್ಲಿ ಸಿದ್ಧಾಸನದಲ್ಲಿ ಸುಖವಾಗಿ ಕುಳಿತುಕೊಂಡು ನಿಯಮದಿಂದ ಸುಂದರೇಶ್ವರನ ಮಾಹಾತ್ಮ್ಯೆಯನ್ನು ಕೇಳುವವನಾದರೆ ಆ ಭಕ್ತನು ಎಲ್ಲಾ ಇಷ್ಟಾರ್ಥಗಳನ್ನು ಹೊಂದುವನು.

೧೪೫–೧೪೮. ಸಮಷ್ಟಿ ವಿದ್ಯಾನಗರೀ ಅಧಿಪನಾದ ಸುಂದರೇಶ್ವರನ ಮಾಹಾತ್ಮ್ಯವನ್ನು ಕೇಳಿದ್ದರಿಂದ ಎಲ್ಲಾ ಕ್ಷೇತ್ರಗಳ ಮಹಿಮೆಯನ್ನೂ ಕೇಳಿದ ಫಲವು ಬರುವುದು. ಧ್ಯಾನಮಾಡಿದವನಿಗೂ, ಕೇಳಿದವನಿಗೂ, ಅಶ್ವಮೇಧಾದಿ ಯಜ್ಞದ ಫಲವು ಉಂಟಾಗುವುದು. ಇದರಲ್ಲಿ ಸಂಶಯವಿಲ್ಲವು ನಿತ್ಯವಾಗಿರುವ ಶಿವಲೋಕವನ್ನು ಅವನು ಹೊಂದುವನು. ಹಾಲಾಸ್ಯ ಮಾಹಾತ್ಮ್ಯದ ಒಂದು ಶ್ಲೋಕವನ್ನು ಕೇಳಿದ ಮಾತ್ರದಿಂದ ಅಗ್ನಿಷ್ಟೋಮ ಯಜ್ಞದ ಫಲವು ಬರುವುದು. ಪುತ್ರನನ್ನು ಅಪೇಕ್ಷಿಸುವವನಿಗೆ ಪುತ್ರನು ಉಂಟಾಗುವನು. ಧನಾಪೇಕ್ಷೆಯುಳ್ಳವನಿಗೆ ಧನವು ದೊರಕುವುದು. ರಾಜ್ಯಾಪೇಕ್ಷೆಯುಳ್ಳವನಿಗೆ ಶತ್ರುಗಳ ಹಿಂಸೆಯಿಲ್ಲದಿರುವ ರಾಜ್ಯವು ಸಿಕ್ಕುವುದು. ಒಂದುಸಾರಿ ಕೇಳಿದ ಮಾತ್ರದಿಂದಲೇ ಭೂಮಿಯಲ್ಲಿರುವ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವು ಬರುವುದು. ಇದು ಸತ್ಯವಾದದ್ದು.

ಏಕವಾರಶ್ರುತೇನೈವ ಸತ್ಯಮೇವ ಭವಿಷ್ಯತಿ ।
ಮಹಾರೋಗಯುತಶ್ಚಾಪಿ ರೋಗಾತ್ಸದ್ಯಃ ಪ್ರಮುಚ್ಯತೇ ॥ ೧೪೯ ॥

ಶತ್ರೂಣಾಂ ವಿಜಯಾರ್ಥಾಯ ಮಾಹಾತ್ಮ್ಯಂ ಸುಂದರೇಶಿತುಃ ।
ಶೃಣುಯಾದ್ಯದಿ ಸರ್ವಾಂಶ್ಚ ಶತ್ರೂನ್ ಜೇಷ್ಯತಿ ಸೋನೃಪಃ ॥ ೧೫೦ ॥

ಬಹುನಾತ್ರ ಕಿಮುಕ್ತೇನ ಯಂ ಯಂ ಕಾಮಂ ಸ ಇಚ್ಛತಿ ।
ತಂ ತಂ ಕಾಮಮವಾಪ್ನೋತಿ ಕೃಪಯಾ ಸುಂದರೇಶಿತುಃ ॥ ೧೫೧ ॥

ಹಾಲಾಸ್ಯೇಶ್ವರಮಾಹಾತ್ಮ್ಯವಕ್ತಾರಂ ತಂ ಗುರುಂ ಬುಧಃ ।
ಸರ್ವಾಭರಣವಸ್ತ್ರಾದ್ಯೈರಲಂಕೃತ್ಯ ಶಿವಂ ಸ್ಮರನ್ ॥ ೧೫೨ ॥

ಶಿಬಿಕಾಯಾ ಮಥಾರೋಪ್ಯ ಗಂಧಮಾಲ್ಯಾದಿಭೂಷಿತಂ ।
ಪುರಪ್ರದಕ್ಷಿಣಂ ಕೃತ್ವಾ ಸರ್ವವಾದ್ಯೈಸ್ಸುಘೋಷಿತಂ ॥ ೧೫೩ ॥

ಗೃಹಂ ಪ್ರವೇಶಯೇಚ್ಛ್ರೋತಾ ತಸ್ಯ ಚಾಶಿಷಮಾಪ್ಯ ಚ ।
ಸುಂದರೇಶಸ್ಯ ಯಜನೇ ಯತ್ಫಲಂ ತದವಾಪ್ನುಯಾತ್ ॥ ೧೫೪ ॥

---

೧೪೯-೧೫೧. ಮಹಾ ರೋಗದಿಂದ ಕೂಡಿರತಕ್ಕವನೂ ಆ ಕ್ಷಣದಲ್ಲಿಯೇ ಆರೋಗ್ಯವನ್ನು ಹೊಂದುವನು.ಶತ್ರುಗಳನ್ನು ಜಯಿಸುವುದಕ್ಕಾಗಿ ರಾಜನು ಸುಂದರೇಶ್ವರನ ಮಾಹಾತ್ಮ್ಯೆಯನ್ನು ಕೇಳಿದ್ದರಿಂದ ಶತ್ರುಗಳನ್ನು ಜಯಿಸುವನು. ಬಹಳ ಹೇಳಿದ್ದರಿಂದೇನು. ಅಪೇಕ್ಷೆಯುಳ್ಳವನು ಈ ಮಾಹಾತ್ಮ್ಯಶ್ರವಣದಿಂದ ಆಯಾಯ ಅಪೇಕ್ಷೆಗಳನ್ನು ಹೊಂದುವನು.

೧೫೨-೧೫೪. ಹಾಲಾಸ್ಯೇಶ್ವರ ಮಾಹಾತ್ಮ್ಯೆಯನ್ನು ಹೇಳುವ ಗುರುವನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ, ಪಲ್ಲಕ್ಕಿಯಲ್ಲಿ ಕೂರಿಸಿ, ವಾದ್ಯ ಸಮೇತವಾಗಿ ಮೆರವಣಿಗೆ ಮಾಡಿಸಿ, ಅವನನ್ನು ಅವನ ಮನೆಗೆ ಕರದು ತಂದುಬಿಟ್ಟನೆ, ಪುರಾಣ ಕೇಳಿದವನಿಗೆ ಸುಂದರೇಶ್ವರನನ್ನು ಪೂಜೆ ಮಾಡಿದಷ್ಟು ಫಲವು ಉಂಟಾಗುವುದು.

॥ ಶ್ರೀ ಶೂತ ಉವಾಚ ॥

ಶೃಣ್ವತಾಂ ಚೈವ ಯುಷ್ಮಾಕಂ ಭಕ್ತಿಃ ಶ್ರೀಸುಂದರೇಶ್ವರೇ ।
ಶ್ರೀಮೀನಾಕ್ಷ್ಯಾಃ ಪಾದಯೋಶ್ಚ ನಿಶ್ಚಲಾಸ್ತು ದ್ವಿಜೋತ್ತಮಾಃ ॥ ೧೫೫ ॥

ಸರ್ವತ್ರ ವಿಜಯಂ ಚಾಸ್ತು ಯುಷ್ಮಾಕಂ ಸರ್ವಮಂಗಳಂ ।
ಸರ್ವಸ್ತ್ವಾಧ್ಯತು ದುರ್ಗಾಣಿ ಸರ್ವಃ ಪುತ್ರಾಣಿ ಪಶ್ಯತು ॥ ೧೫೬ ॥

ಸರ್ವೇ ಸದ್ಗುರುಮೋಪ್ಸ್ಯಂತು ಸರ್ವೇಷಾಂ ಚ ನೃಣಾಂ ಶುಭಂ ।

ಇತಿ ಶ್ರೀ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ವಸಿಷ್ಠಾದಿಮುನೀಶ್ವರಾಣಾಂ ಕಾಶ್ಯಾಂ ಮುಕ್ತಿಮಂಟಪೇ ಅಗಸ್ತ್ಯೇನ ಪ್ರೋಕ್ತಶ್ರೀಹಾಲಾಸೇಶ್ವರ ಚತುಃಷಷ್ಟಿಲೀಲಾನು ಕಥನಂ ನಾಮ ಏಕಸಪ್ತತಿತಮೋಽಧ್ಯಾಯಃ

---

೧೫೫-೧೫೬. ಸೂತ ಪುರಾಣೀಕನು ಹೇಳಿದನು-ಎಲೈ ಋಷಿಗಳಿರಾ, ಕೇಳತಕ್ಕ ನಿಮಗೆ ಶಿವನಲ್ಲಿ ಭಕ್ತಿ ಉಂಟಾಗಲಿ. ಮೀನಾಕ್ಷೀದೇವಿಯ ಪಾದಗಳಲ್ಲಿ ದೃಢವಾದ ಭಕ್ತಿಯು ಉಂಟಾಗಲಿ. ನೀವು ಎಲ್ಲಾ ಕಡೆಯಲ್ಲಿಯೂ ಜಯಶೀಲರಾಗಿರಿ. ನಿಮಗೆ ಎಲ್ಲಾ ವಿಧವಾದ ಮಂಗಳವು ಉಂಟಾಗಲಿ. ವಿಪತ್ತುಗಳನ್ನು ಎಲ್ಲರೂ ಕಳದು ಕೊಂಡು ಸುಖವಾಗಿರಲಿ ಎಲ್ಲರೂ ಪುತ್ರ ಪೌತ್ರಾದಿಗಳನ್ನು ಹೊಂದಲಿ. ಎಲ್ಲರಿಗೂ ಸದ್ಗುರುವು ಸಿಕ್ಕಲಿ. ಎಲ್ಲರಿಗೂ ಶುಭವು ಉಂಟಾಗಲಿ.

ಸಂಪದ್ಯುಕ್ತವಾದ ಅಗಸ್ತ್ಯ ಸಂಹಿತೆಯ ಹಾಲಾಸ್ಯಮಾಹಾತ್ಮ್ಯೆಯಲ್ಲಿ ವಸಿಷ್ಠಾದಿ ಋಷಿಗಳನ್ನು ಕುರಿತು ಕಾಶಿಯಲ್ಲಿ ಅಗಸ್ತ್ಯಋಷಿಯು ಮುಕ್ತಿ ಮಂಟಪದಲ್ಲಿ ಉಪದೇಶಮಾಡಿದ, ಹಾಲಾಸ್ಯೇಶ್ವರನ ಅರವತ್ತು ನಾಲ್ಕು ಲೀಲಾವರ್ಣನೆಗಳೆಂಬ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



# ಪ್ರಕ್ಷಿಪ್ತಮ್

ಶ್ರೋತೄಣಾಂ ಪಠತಾಂ ಪುಂಸಾಂ ಮಾಹಾತ್ಮ್ಯಂ ಮಧುರಾಪತೇಃ ॥
ಶಿವಂ ಭೂಯಾಚ್ಛಿವಂ ಭೂಯಾಚ್ಛಿವಂ ಭೂಯಾಚ್ಛಿವಾಜ್ಞಯಾ ।
ನಮಸ್ಸುಂದರನಾಥಾಯ ತಸ್ಮೈ ಹಾಲಾಸ್ಯವಾಸಿನೇ ।
ಚತುಃಷ್ಷಷ್ಟಿವಿಧಾ ಲೀಲಾ ಯೇನಾಕಾರಿ ಭುವಸ್ಸ್ಥಲೇ ।

ಧವಲವಪುಷಮಿಂದೋರ್ಮಂಡಲೇ ಸನ್ನಿಷಣ್ಣಂ-
ಭುಜಗವಲಯಹಾರಂ ಭಸ್ಮದಿಗ್ಧಾನುಲೇಪಂ ।
ಹರಿಣಪರಶುಪಾಣಿಂ ಚಾರು ಚಂದ್ರಾರ್ಧಮೌಲಿಂ-
ಹೃದಯಕಮಲಮಧ್ಯೇ ಸಂತತಂ ಚಿಂತಯಾಮಿ ।

ಅಜ್ಞಾನಯೋಗಾದಪಚಾರಕರ್ಮ-
ಯತ್ಪೂರ್ವಮಸ್ಮಾಭಿರನುಷ್ಠಿತಂ ತೇ ।

---

ಮಧುರಾ ನಗರಕ್ಕೆ ಅಧಿಪತಿಯ ಮಹಿಮೆಯನ್ನು ಓದುವವರು ಮತ್ತು ಕೇಳತಕ್ಕವರಿಗೆ ಶಿವನ ಅನುಜ್ಞೆಯಿಂದ ಮಂಗಳವು ಉಂಟಾಗಲಿ. ಭೂಮಿಯಲ್ಲಿ ಅರವತ್ತು ನಾಲ್ಕು ಲೀಲೆಗಳನ್ನು ಮಾಡಿರುವ, ಹಾಲಾಸ್ಯ ನಗರದಲ್ಲಿ ವಾಸವಾಗಿರುವ ಸುಂದರೇಶ್ವರನಿಗೆ ನಮಸ್ಕಾರವು.

ಚಂದ್ರನ ಮಂಡಲದಲ್ಲಿ ಶುಭ್ರವಾದ ಶರೀರವನ್ನು ಧರಿಸಿ ಕುಳಿತಿರುವವನೂ, ನಾಗ ಭೂಷಣನೂ, ಭಸ್ಮ ಲಿಪ್ತಾಂಗನೂ ಆಗಿ, ಜಿಂಕೆ, ಪರಶು, ಇವುಗಳನ್ನು ಹಸ್ತದಲ್ಲಿ ಧರಿಸಿ, ಅರ್ಧ ಚಂದ್ರನನ್ನು ಶಿರಸ್ಸಿನ ಆಭರಣವಾಗಿ ಧರಿಸಿರುವವನನ್ನು ಹೃದಯ ಕಮಲದ ಮಧ್ಯದಲ್ಲಿ ಯಾವಾಗಲೂ ಧ್ಯಾನ ಮಾಡುತ್ತೇನೆ.

ದಯಾಳುವಾದ ಪರಮೇಶ್ವರನೇ! ಅಜ್ಞಾನದ ಸಂಬಂಧದಿಂದ ನಾವು ಪ್ರತಿದಿನವೂ ನಿನಗೆ ವಿರುದ್ಧವಾದ ಕರ್ಮಗಳನ್ನು ಹಿಂದಿನಿಂದ ಮಾಡುತ್ತಿದ್ದೇವೆ.

ಹಾಲಾಸ್ಯಮಾಹಾತ್ಮ್ಯಂ

**ತದ್ದೇವ ಸೋಢ್ವಾ ಸಕಲಂ ದಯಾಲೋ-**
**ಪಿತೇವ ಪುತ್ರಾನ್ಪ್ರತಿ ನೋ ಜುಷಸ್ವ ॥**

---

ಎಲೈ ದೇವದೇವನೆ! ಅದೆಲ್ಲವನ್ನೂ ನೀನು ಮಗನ ತಪ್ಪುಗಳನ್ನು ತಂದೆಯು ಕ್ಷಮಿಸುವಂತೆ ಕ್ಷಮಿಸು. ಎಲೈ ದೇವನೇ, ಅಕ್ಷರ, ಪದ, ಮಾತು ಇವುಗಳಿಂದ ನ್ಯೂನವಾಗಿರತಕ್ಕದ್ದೆಲ್ಲವನ್ನೂ ದೇವನೇ ನೀನು ಕ್ಷಮಿಸು. ನಿನಗೆ ನಮಸ್ಕಾರವು.



# ಮಂಗಳಮ್

ಮಂಗಲಂ ಮಹಾದಾನಂದದಾಯಿನೇ ಮುದಿತಾತ್ಮನೇಃ ।
ಪಾಷಂಡಷಂಡತಿಮಿರಮಿಹಿರಾಯಾಸ್ತು ಮಂಗಲಂ ॥ ೧ ॥

ತಟಾತಕಾ ವಿವಾಹಾಯ ಸ್ವಯಂ ಪಾಂಡ್ಯಮಹೀಪತೇಃ ।
ಕಾಷ್ಠಭಾರಧರಾಯಾಸ್ತು ಗಾನರೂಪಾಯ ಮಂಗಲಂ ॥ ೨ ॥

ತ್ರ್ಯೈ ವರ್ಣಿಕಾಂಗನಾಬೃಂದವಲಯಾವಲಿದಾಯಿನೇ ।
ಕುಲಶೇಖರಭೂಪಾಲಭಾವುಕಾಯಾಸ್ತು ಮಂಗಲಂ ॥ ೩ ॥

ಅರಿಮರ್ದನರಾಜೇಂದ್ರವೇತ್ರಮುದ್ರಾಂಕಿತಾಯ ತೇ ।
ಮಾಣಿಕ್ಯವಾಚಕಸ್ವಾಂತಮಂದಿರಾಯಾಸ್ತು ಮಂಗಲಂ ॥ ೪ ॥

---

೧. ಬಹಳ ಆನಂದವನ್ನು ಅನುಗ್ರಹಿಸುತ್ತಿರುವ ಆನಂದ ಮೂರ್ತಿಗೆ ಮಂಗಳವು. ಪಾಷಂಡರೆಂಬ ಕತ್ತಲೆಯನ್ನು ತೊಲಗಿಸಿ ಜ್ಞಾನ ದೀಪವಾಗಿ ಬೆಳಗುವ ಸೂರ್ಯನಾದ ದೇವನಿಗೆ ಮಂಗಳವು.

೨. ತಟಾತಕಾದೇವಿಯ ವಿವಾಹಕ್ಕಾಗಿ ತಾನಾಗಿ ಪ್ರಯತ್ನ ಮಾಡಿದ ಪಾಂಡ್ಯರಾಜನಿಗೆ ಮಂಗಳವು. ಗಾನ ( ಸಂಗೀತ ) ವಿದ್ಯಾರೂಪದಿಂದ ಇದ್ದರೂ ಕಟ್ಟಿಗೆಯ ಹೊರೆಯನ್ನು ಹೊತ್ತ ದೇವನಿಗೆ ಮಂಗಳವು.

೩. ಮೂರನೆಯ ವರ್ಣದವರಾದ ವೈಶ್ಯಕನ್ಯಕೆಯರಿಗೆ ಬಳೆಗಳನ್ನು ಅನುಗ್ರಹಿಸಿದ ದೇವನಿಗೆ ಮಂಗಳವು, ಕುಲಶೇಖರರಾಜನ ಭಾವ ಮೈದುನನಾದ ದೇವನಿಗೆ ಮಂಗಳವು.

೪. ಅರಿಮರ್ದನ ಪಾಂಡ್ಯರಾಜನ ಬೆತ್ತದ ಗುರುತುಗಳನ್ನು ಧರಿಸಿದ ದೇವನಿಗೆ ಮಂಗಳವು. ಮಾಣಿಕ್ಯ ವಾಚಕನೆಂಬ ಭಕ್ತನ ಮನಸ್ಸಿನಲ್ಲಿ ವಾಸ ಮಾಡಿದ ದೇವನಿಗೆ ಮಂಗಳವು.

ನರಕೇಂಶೀರವಿಧ್ವಂಸಸನ್ನದ್ಧಶರಭಾಯ ತೇ ।
ಸಾರಸಾಕ್ಷಸಮುಜ್ಜೃಂಭಸಾಯಕಾಯಾಸ್ತು ಮಂಗಲಂ ॥ ೫ ॥

ಕಲ್ಯಾಣಾಚಲಕೋದಂಡಕನತ್ಕರತಲಾಯ ತೇ ।
ಪದ್ಮಿನೀಪತಿದಂತಾಲಿದಮನಾಯಾಸ್ತು ಮಂಗಲಂ ॥ ೬ ॥

ಮಂಗಲಂ ಶಾಶ್ವತಃ ಶಂಭುರ್ಮಂಗಲಂ ಮೃತ್ಯುಸೂದನಃ ।
ಮಂಗಲಂ ಮೇ ಲಲಾಟಾಕ್ಷೋ ಮಂಗಲಂ ಸೋಮಸುಂದರಃ ॥ ೭ ॥

ಮಂಗಲಂ ಪಾರ್ವತೀ ಗೌರೀ ಮಂಗಲಂ ಪರಮೇಶ್ವರೀ ।
ಮಂಗಲಂ ಲಲಿತಾ ದೇವೀ ಮಂಗಲಂ ಮೀನಲೋಚನಾ ॥ ೮ ॥

॥ ಸಂಪೂರ್ಣಂ ॥

॥ ಶ್ರೀಮೀನಾಕ್ಷೀಸೋಮಸುಂದರೇಶ್ವರಾರ್ಪಣ ಮಸ್ತು ॥

---

೫. ಶ್ರೇಷ್ಠನಾದ ನರಸಿಹ್ಮನನ್ನು ನಿಗ್ರಹಿಸಲು ಶರಭಾಕೃತಿಯನ್ನು ಧರಿಸಿದ ದೇವನಿಗೆ ಮಂಗಳವು. ವಿಷ್ಣುವನ್ನು ಬಾಣವನ್ನಾಗಿ ಮಾಡಿಕೊಂಡು ತ್ರಿಪುರವನ್ನು ನಿಗ್ರಹಿಸಿದ ದೇವನಿಗೆ ಮಂಗಳವು.

೬. ಮೇರುಪರ್ವತವನ್ನು ಧನುಸ್ಸಾಗಿ ಧರಿಸಿರುವ ಹಸ್ತದಿಂದ ಪ್ರಕಾಶಿಸುತ್ತಿರುವ ದೇವನಿಗೆ ಮಂಗಳವು. ಭಗನೆಂಬ ಸೂರ್ಯದೇವನ ದಂತಗಳನ್ನು ಉದುರಿಸಿದ ದೇವನಿಗೆ ಮಂಗಳವು.

೭ ಪ್ರತಿದಿನವೂ ಶಿವನು ನನಗೆ ಮಂಗಳವನ್ನು ಅನುಗ್ರಹಿಸಲಿ. ಮೃತ್ಯುವನ್ನು ನಿಗ್ರಹಿಸಿದ, ಲಲಾಟ ನೇತ್ರವನ್ನು ಹೊಂದಿರುವ, ಸೋಮ ಸುಂದರ ದೇವನು ನನಗೆ ಮಂಗಳವನ್ನು ಅನುಗ್ರಹಿಸಲಿ.

೮. ಪಾರ್ವತೀ, ಗೌರೀ, ಪರಮೇಶ್ವರೀ, ಲಲಿತಾದೇವೀ, ಮೀನಾಕ್ಷೀದೇವೀ ಎಂಬ ಹೆಸರಿನಿಂದ ಭಕ್ತರನ್ನು ರಕ್ಷಿಸುತ್ತಿರುವ ಪರದೇವತೆಯು ನನಗೆ ಎಲ್ಲಾ ವಿಧವಾದ ಮಂಗಳವನ್ನು ಉಂಟು ಮಾಡಲಿ.



ಇತಿ ಶ್ರೀ ರಸ್ತು ಸರ್ವೇಷಾಂ ಜಗತಾಂ ನಿತ್ಯಮಂಗಳಂ।

ಶ್ರೀ ಹಾಲಾಸ್ಯೇಶ ಕೃಪಯಾ ಕೃತಃ ಕರ್ಣಾಟಭಾಷಯಾ।
ಅನುವಾದಶ್ಚಿರಂ ಜೀಯಾದಯ ಮಾ ಚಂದ್ರತಾರಕಂ ॥

ಹಾಲಾಸ್ಯನಾಥೋ ಭಗವಾನ್ ಮೀನಾಕ್ಷೀಸಹಿತಃ ಪ್ರಭುಃ।
ಜಯಚಾಮರಾಜನೃಪತೇರ್ದದಾತು ಶುಭಮಂಗಳಂ ॥

ಇತಿ ಶಿವಂ